ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೧೫

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣಂ

(ಕನ್ನಡ ಅನುವಾದ ಸಹಿತ)

ತೃತೀಯಖಂಡೇ

ಭಾಗ ೨



ಅನುವಾದಕ :

**ಆಸ್ಥಾನ ಮಹಾವಿದ್ವಾನ್ ಸಂಕೀಘಟ್ಟಂ ವೆಂಕಟಾಚಾರ್ಯಃ**

ವಿಶ್ರಾಂತ ಸಾಹಿತ್ಯ ಪ್ರಾಧ್ಯಾಪಕ, ಮೈ. ಸಂ. ಕಾಲೇಜು.



ಶ್ರೀ ಶಾರದಾ ಪ್ರೆಸ್, ಮೈಸೂರು.

೧೯೫೩

# ಅವತರಣಿಕೆ.

ಈ ವಿಷ್ಣುಧರ್ಮೋತ್ತರ ಮಹಾಪುರಾಣದ ತೃತೀಯಖಂಡದಲ್ಲಿ ಇದು ಎರಡನೆಯ ಸಂಪುಟ. ಗ್ರಂಥಕಾರರು ತಮ್ಮ ಉದ್ದೇಶಕ್ಕೆ ತಕ್ಕಂತೆ ಸರ್ವದೇವ ಶರೀರಿಯಾದ ವಾಸುದೇವನ ವಿಗ್ರಹಾದಿಗಳ ನಿರ್ಮಾಣವನ್ನು ಹಿಂದಿನ ಸಂಚಿಕೆಯಲ್ಲಿ ನಿರೂಪಿಸಿರುವಂತೆ ವಿಸ್ತಾರವಾಗಿ ಉಪದೇಶಿಸಿ ಈ ಸಂಪುಟದಲ್ಲಿ ಅಂತಹ ವಿಗ್ರಹಾದಿಗಳ ಪ್ರತಿಷ್ಠಾಕ್ರಮವನ್ನು ಪ್ರಾರಂಭಿಸಿ ತಕ್ಕಮಟ್ಟಿಗೆ ವಿಸ್ತಾರವಾಗಿಯೇ ನಿರೂಪಿಸಿದ್ದಾರೆ. ಋತ್ವಿಕ್ಕುಗಳ ವರಣ, ದೀಕ್ಷಾಬಂಧ, ಅಧಿವಾಸನ, ಪ್ರತಿಷ್ಠೆ, ಯಾತ್ರೋತ್ಸವ, ಇಜ್ಯಾ, ಸಾತ್ವತೇಜ್ಯಾ, ಬೃಹತ್‌ಸ್ನಪನ, ಮೊದಲಾದ ಎಲ್ಲಾ ವಿಧಾನಗಳನ್ನೂ ಆಯಾಯ ದೇವತೆಗಳ ಆವಾಹನ ವಿಬೋಧಕ ಮಂತ್ರಗಳೊಡನೆ ಸಮಗ್ರವಾಗಿ ನಿರೂಪಿಸಲಾಗಿದೆ. ಮತ್ತು ನಿಷ್ಕಾಮನಾದವನು ನಡೆಸಬಹುದಾದ ಪೂಜಾವಿಧಾನವನ್ನು ನಿರೂಪಿಸಿ ಐಹಿಕ ಫಲರೂಪವಾದ ಕಾಮನಾ ದೃಷ್ಟಿಯಿಂದ ಆಯಾಯ ಫಲಕ್ಕೆ ತಕ್ಕಂತೆ ದೇವತೆಗಳ ಕಾಮ್ಯಪೂಜಾವಿಧಾನವನ್ನು ತಿಥಿವಾರನಕ್ಷತ್ರಾದಿ ಕಾಲವ್ಯವಸ್ಥೆಯಿಂದಲೂ ವಿಸ್ತಾರವಾಗಿ ನಿರೂಪಿಸಿ ಅಂತಹ ಫಲಪ್ರಾಪ್ತಿಗೆ ತಕ್ಕ ಅನೇಕಾನೇಕ ವ್ರತಗಳನ್ನೂ ಪ್ರಕಾಶಗೊಳಿಸಲಾಗಿದೆ. ಪಶು, ಪುತ್ರ, ಸ್ವರ್ಗ, ಸ್ವಾರಾಜ್ಯ, ಧನ, ಕನಕವೇ ಮೊದಲಾದ ಇಹಲೋಕದ ಫಲಪ್ರಾಪ್ತಿ ದೃಷ್ಟಿಯಿಂದ, ಆಯಾಯ ದೇವತಾ ವಿಶೇಷದ ಪ್ರೀತಿಸಾಧನೆಗಾಗಿ ಆಚರಿಸಬಹುದಾದ ಈ ಕಾಮ್ಯವ್ರತಪ್ರಕರಣವೆಲ್ಲವೂ—

**ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ ।**
**ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿಧಧಾಮ್ಯಹಂ ॥**
**ಸ ತಯಾ ಶ್ರದ್ಧಯಾ ಯುಕ್ತಃ ತಸ್ಯಾರಾಧನಮೀಹತೇ ।**
**ಲಭತೇ ಚ ತತಃ ಕಾಮಾನ್ ಮಯೈವ ವಿಹಿತಾನ್ ಹಿ ತಾನ್ ॥**
**ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಂ ।**

ಇತ್ಯಾದಿ ಭಗವದ್ಗೀತಾ ವಚನಗಳ ವ್ಯಾಖ್ಯಾನ ರೂಪವೇ ಆಗಿದೆ.

ಮತ್ತು ಆಧುನಿಕರಾದ ಕೆಲವು ಯುಕ್ತಿವಾದಿಗಳು ಪುರುಷರಂತೆ ಸ್ತ್ರೀಯರಿಗೂ ಸಮಾಜದಲ್ಲಿ ಸ್ಥಾನವಿದೆ. ಅಂತಹ ಸ್ತ್ರೀಯರನ್ನು ಕೇವಲ ಮನೆಗೆಲಸಕ್ಕೆ ಉಪಯೋಗಿಸಿಕೊಂಡು ಅವರಿಗೆ ಯುಕ್ತಿಲಭ್ಯವಾದ ಸ್ವಾತಂತ್ರ್ಯವನ್ನು ಭಾರತೀಯ ಸಂಸ್ಕೃತಿಯು ಕೇವಲ ಸಂಕೇತದಿಂದ ಅಪಹರಿಸಿದೆ. ಎಂದು ವಾದಿಸುತ್ತಾರಷ್ಟೆ. ಇದಕ್ಕೆ ಉತ್ತರವಾಗಿ ಸ್ತ್ರೀಯರನ್ನು ಮನೆಗೆಲಸದಲ್ಲಿಯೇ ನಿಯೋಜಿಸಿ ಅವರು ಪತಿವ್ರತೆಯರಾಗಿಯೂ ಪತಿಸೇವಾತತ್ಪರರಾಗಿಯೂ ಇದ್ದು ವಂಶಾಭಿವೃದ್ಧಿಯನ್ನುಂಟುಮಾಡಿ ಕೃತಕೃತ್ಯರಾಗುವಂತೆ ಅವರನ್ನು ತಿದ್ದಬೇಕೆಂದು ಅಷ್ಟಾವಕ್ರ

ಮುಸಿಗೆ ದಿಗ್ದೇವತೆಯು ಮಾಡಿರುವ ಉಪದೇಶವು ಈ ಸಂಪುಟದ 124 ನೆಯ ಅಧ್ಯಾಯದಲ್ಲಿ ಕಂಡುಬರುತ್ತಿದೆ. ಯುಕ್ತಿವಾದಿಗಳು ಇದನ್ನು ಪ್ರಮಾಣವೆಂದು ಒಪ್ಪಲಿ ಅಥವಾ ಒಪ್ಪದಿರಲಿ, ಪರಂಪರೆಯಿಂದ ನಡೆದು ಬರುತ್ತಿರುವ ಭಾರತೀಯ ಸಂಸ್ಕೃತಿಗೆ ಇಂತಹ ಉಪಾಖ್ಯಾನಗಳೇ ಮೂಲಕಾರಣವೆಂಬುದನ್ನು ಮಾತ್ರ ಅಪಲಾಪಮಾಡಲು ಸಾಧ್ಯವಿಲ್ಲ. ಹೀಗೆಯೇ ಭಾರತೀಯ ಸಂಸ್ಕೃತಿಗೆ ಮೂಲವಾದ ಅನೇಕ ತತ್ತ್ವಗಳನ್ನು ಈ ಉಪಾಖ್ಯಾನದ ಅನೇಕ ಕಡೆಗಳಲ್ಲಿ ಪರಿಶೀಲಿಸಬಹುದು. ವಿಗ್ರಹಾರಾಧನೆಯನ್ನೂ ಒಪ್ಪದಿರುವ ಯುಕ್ತಿವಾದಿಗಳು ನಮ್ಮಲ್ಲಿ ಅನೇಕರಿರುವರು. ಕಲ್ಲು, ಮಣ್ಣು, ಲೋಹಗಳಿಂದ ರಚಿತವಾಗಿರುವ ಪ್ರತಿಮೆಯಲ್ಲಿ ದೇವತಾ ಬುದ್ಧಿಯು ಹೇಗೆ ಬರಬಹುದೆಂದೂ, ಸರ್ವವ್ಯಾಪಕವೂ, ನಿರಾಕಾರವೂ ಆದ ಪರತತ್ತ್ವವನ್ನು ಪರಿಮಿತವೂ, ಸಾಕಾರವೂ ಆಗಿರುವ ವಿಗ್ರಹದಲ್ಲಿ ಭಾವಿಸುವುದು ಅಪರಾಧವಲ್ಲವೇ ಎಂದೂ, ಎಲ್ಲಾ ದೇವತೆಗಳೂ ಒಂದೇ ವಸ್ತುವಿನ ರೂಪಾಂತರವಾಗಿರುವುದರಿಂದ ಸಾಮ್ಯಭಾವನೆಯನ್ನು ಬಿಟ್ಟು ಪರಾಪರ ತತ್ತ್ವನಿರ್ಣಯವು ಹೇಗೆ ಹೊಂದಬಹುದೆಂದೂ ಬಹುವಿಧವಾದ ವಿಕಲ್ಪಗಳಿಂದ ಈ ಸಂಪ್ರದಾಯವನ್ನೇ ನಿರಾಕರಿಸುವವರೂ ಇದ್ದಾರೆ. ಇಂತಹ ಸಂಶಯಗಳಿಗೆಲ್ಲಾ ಪ್ರತಿಷ್ಠಾಪ್ರಕರಣದ 108ನೆಯ ಅಧ್ಯಾಯದಲ್ಲಿ ಯುಕ್ತಿಯುಕ್ತವಾದ ಸಮಾಧಾನವನ್ನು ಗ್ರಂಥಕಾರರೇ ಮಾರ್ಕಂಡೇಯರ ಉಪದೇಶದಿಂದ ಪ್ರಕಾಶಗೊಳಿಸಿದ್ದಾರೆ. ಮುಖ್ಯವಾಗಿ ಈ ಪ್ರಕರಣವೆಲ್ಲಾ ಆಸ್ತಿಕ್ಯವೆಂಬ ಭೂಮಿಕೆಯ ಮೇಲೆ ನಿಂತಿದೆ. ನಾಸ್ತಿಕರಿಗೆ ಇವು ರುಚಿಸುವುದು ಸುಲಭಸಾಧ್ಯವಲ್ಲ. ಪ್ರತ್ಯಕ್ಷವಿಷಯದಲ್ಲಿ ಯುಕ್ತಿವಾದಕ್ಕೆ ಅವಕಾಶವಿದೆ. ಅತೀಂದ್ರಿಯವಾದ ವಸ್ತುವಿನ ವಿಷಯದಲ್ಲಿ ಶಾಸ್ತ್ರವೇ ಪ್ರಮಾಣವೇ ಹೊರತು ಮತ್ತೊಂದು ಪ್ರಮಾಣವನ್ನು ಪುರಸ್ಕರಿಸಲು ಸಾಧ್ಯವೇ ಇಲ್ಲ. ಮುಖ್ಯವಾಗಿ ಭಾರತೀಯ ಸಂಸ್ಕೃತಿಯಲ್ಲಿ ಆಶೆಹೊಂದಿರುವ ಪ್ರಜ್ಞಾಶಾಲಿಗಳಾದ ವಿವೇಕಿಗಳು ಗಮನಿಸಬಹುದಾದ ಅನೇಕಾನೇಕ ವಿಷಯಗಳು ಈ ಗ್ರಂಥದಲ್ಲಿ ಅಡಗಿವೆ.

ಇಂತಹ ಗ್ರಂಥರತ್ನಗಳನ್ನು ಅನುವಾದದೊಡನೆ ಪ್ರಕಾಶಪಡಿಸಿ ಪುರಾತನವಾದ ಭಾರತೀಯ ಜ್ಞಾನಭಂಡಾರವನ್ನು ವಿಸ್ತರಿಸುತ್ತಾ ಸ್ವಾನುಷ್ಠಾನದಿಂದ ಸಫಲಗೊಳಿಸುತ್ತಿರುವ ಪ್ರಭುವರ್ಯರಾದ **ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ.,** ರವರಿಗೆ ಜಗತ್ಪ್ರಭುವಾದ ವಾಸುದೇವನು ಅಸದೃಶವಾದ ಆಸ್ತಿಕ್ಯವನ್ನೂ, ಆಯುರಾರೋಗ್ಯ ಐಶ್ವರ್ಯಸತ್ಸಂತಾನಗಳನ್ನೂ ಅನುಗ್ರಹಿಸಿ ಕಾಪಾಡುತ್ತಿರಲೆಂದು ಅನನ್ಯಮನಸ್ಕತೆಯಿಂದ ಶ್ರೀ ವಾಸುದೇವನನ್ನು ಪ್ರಾರ್ಥಿಸುತ್ತೇನೆ.

ಅನುವಾದಕ :
ಆಸ್ಥಾನಮಹಾವಿದ್ವಾನ್
ಸಂಕೀಘಟ್ಟಂ, **ವೆಂಕಟಾಚಾರ್ಯರು.**

ಮೈಸೂರು
ತಾ॥ 16-12-53

# ವಿಷಯಾನುಕ್ರಮಣಿಕೆ

## ಮೂರನೆಯ ಖಂಡ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಷಣ್ಣವತಿತಮೋಽಧ್ಯಾಯಃ ||

|| ವಜ್ರ ಉವಾಚ ||

ಕಸ್ಮಿನ್ ಕಾಲೇ ತು ಕರ್ತವ್ಯಾ ಪ್ರತಿಷ್ಠಾ ಭೃಗುನಂದನ ।
ಕಸ್ಮಿನ್ಕಸ್ಮಿನ್ ಕೃತಾ ಕಾಲೇ ತಥಾ ಭವತಿ ಕೀದೃಶೀ ॥ ೧ ॥

|| ಮಾರ್ಕಂಡೇಯ ಉವಾಚ ||

ಶೃಣು ಕಾಲಂ ಪ್ರವಕ್ಷ್ಯಾಮಿ ಪ್ರತಿಷ್ಠಾಕರಣೇ ತವ ।
ಯಸ್ಮಿನ್ ಯಸ್ಮಿನ್ ಕೃತಾ ಕಾಲೇ ಯಥಾ ಭವತಿ ಯಾದವ ॥ ೨ ॥

ನಿತ್ಯಂ ಸನ್ನಿಹಿತಾ ಲೋಕೇ ವೈಷ್ಣವೇ ತು ಯುಗೇ ಕೃತಾ ।
ಧನಧಾನ್ಯವತೀ ಸ್ಫೀತಾ ವರದಾ ಚ ತಥಾ ಭವೇತ್ ॥ ೩ ॥

---

### ತೊಂಭತ್ತಾರನೆಯ ಅಧ್ಯಾಯ.

೧-೪. ವಜ್ರನು ಪ್ರಶ್ನೆ ಮಾಡುತ್ತಾನೆ:—ಎಲೈ ಭೃಗುಪುತ್ರನೇ, ಪ್ರತಿಷ್ಠೆಯನ್ನು ಯಾವ ಕಾಲದಲ್ಲಿ ಮಾಡಬೇಕು. ಯಾವ ಯಾವ ಕಾಲದಲ್ಲಿ ಮಾಡಿದ ಪ್ರತಿಷ್ಠೆಯು ಎಂತೆಂತಹ ಫಲಕ್ಕೆ ಕಾರಣವಾಗುತ್ತದೆ. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ:-ಪ್ರತಿಷ್ಠೆಗೆ ಉಚಿತವಾದ ಕಾಲವನ್ನೂ ಆಯಾಯ ಕಾಲಕ್ಕೆ ತಕ್ಕಂತೆ ಫಲವಿಶೇಷವನ್ನೂ ಹೇಳುತ್ತೇನೆ ಕೇಳು. ವೈಷ್ಣವಯುಗದಲ್ಲಿ ಮಾಡಿದ ಪ್ರತಿಷ್ಠೆಯು, ಸರ್ವದಾ ದೇವತೆಯ ಸಾನ್ನಿಧ್ಯಕ್ಕೆ ಸಾಧಕವಾಗಿಯೂ, ಧನಧಾನ್ಯಸಮೃದ್ಧಿಗೂ ಕಾರಣವಾಗಿ ಆ ಮೂಲಕ ಬಹುವಿಧವಾದ ಇಷ್ಟಾರ್ಥಪ್ರದವೂ ಆಗುತ್ತದೆ. ಬಾರ್ಹಸ್ಪತ್ಯಯುಗದಲ್ಲಿ ಮಾಡಿದ ಪ್ರತಿಷ್ಠೆಯು ಬಹು

ದೃಷ್ಟ್ವಾ ಭವತಿ ವಿಖ್ಯಾತಾ ತ್ರಿದಶೇಶಗುರೋರ್ಯುಗೇ ।
ಐಂದ್ರೇ ತೇಜೋವತೀ ಸ್ಥಿತಾ ಭೂತನಿಗ್ರಹಕಾರಿಣೀ ॥ ೪ ॥

ತಥಾವಿಧಾ ತಥಾಗ್ನೇಯೇ ಭೂತದಾಹಮವಾಪ್ನುಯಾತ್ ।
ನಿತ್ಯಾಶ್ಚರ್ಯಯುತಾ ತ್ವಾಷ್ಟ್ರೇ ಗಮ್ಯಾ ಲೋಕೈಸ್ತಥೈವ ಚ ॥ ೫ ॥

ಆಹಿರ್ಬುಧ್ನ್ಯೇ ದೃಢಾ ನಿತ್ಯಂ ಲೋಕಾನುಗ್ರಹಕಾರಿಣೀ ।
ಪೈತ್ರ್ಯೇ ವಿನಾಶಮಾಪ್ನೋತಿ ಕರ್ತುಶ್ಚ ಮರಣಾವಹಾ ॥ ೬ ॥

ವೈಶ್ವೇ ಲೋಕಹಿತಾ ಕರ್ತುರ್ಲೋಕಗಮ್ಯಾ ಕೃತಾ ಭವೇತ್ ।
ಸೌಮ್ಯಾ ಸೌಮ್ಯೇ ತಥಾ ಕಾನ್ತಾ ವರದಾ ಚ ತಥಾ ಭವೇತ್ ॥ ೭ ॥

ಐನ್ದ್ರಾಗ್ನೇ ನಾಶಮಾಪ್ನೋತಿ ಕರ್ತುಃ ಕೃತ್ವಾ ವಿನಾಶನಂ ।
ಆಶ್ವಿನೇ ಶ್ರೀಮತೀ ಭೂತ್ವಾ ಶೀಘ್ರಂ ನಾಶಮವಾಪ್ನುಯಾತ್ ॥ ೮ ॥

---

ಪ್ರಖ್ಯಾತಿ ಹೊಂದುತ್ತದೆ. ಐಂದ್ರಯುಗದಲ್ಲಿ ಮಾಡಿದ ಪ್ರತಿಷ್ಠೆಯು ಬಹುಮಟ್ಟಿಗೂ ತೇಜಸ್ವಿನಿಯಾಗಿದ್ದು, ಭೂತಗ್ರಹಾದಿನಾಶಕವಾಗಿಯೂ, ಅಭ್ಯುದಯಶಾಲಿನಿಯಾಗಿಯೂ ಆಗುತ್ತದೆ.

೫-೧೧ ಅದೇ ರೀತಿಯಾಗಿ ಆಗ್ನೇಯ ಯುಗದ ಪ್ರತಿಷ್ಠೆಯೂ ಸಹ ಭೂತದಾಹಕ್ಕೆ ಕಾರಣವಾಗುತ್ತದೆ. ತ್ವಾಷ್ಟ್ರಯುಗದ ಪ್ರತಿಷ್ಠೆಯೂ ಪ್ರಜೆಗಳಿಗೆ ಆಶ್ಚರ್ಯಾವೇಶಕ್ಕೆ ಕಾರಣವಾಗಿ ಅಂತಹ ಪ್ರಜೆಗಳ ಆಭಿಮುಖ್ಯಕ್ಕೆ ಪಾತ್ರವಾಗುತ್ತದೆ. ಅಹಿರ್ಬುಧ್ನ್ಯಯುಗದ ಪ್ರತಿಷ್ಠೆಯೂ ಶಾಶ್ವತವಾಗಿದ್ದು ಲೋಕಾನುಗ್ರಹಕ್ಕೆ ಕಾರಣವಾಗುತ್ತದೆ. ಪಿತ್ರ್ಯಯುಗದ ಪ್ರತಿಷ್ಠೆಯು ವಿನಾಶಕ್ಕೂ, ಕರ್ತೃವಿನ ಮರಣಕ್ಕೂ ಕಾರಣವಾಗುತ್ತದೆ. ವೈಶ್ವಯುಗದ ಪ್ರತಿಷ್ಠೆಯು ಲೋಕಹಿತಕರವಾಗಿಯೂ, ಕರ್ತೃವಿಗೆ ಲೋಕಾಭಿಮುಖ್ಯಕಾರಕವೂ ಆಗುತ್ತದೆ. ಸೌಮ್ಯಯುಗದ ಪ್ರತಿಷ್ಠೆಯು ರಮ್ಯವಾಗಿದ್ದು ಸೌಮ್ಯಾವಸ್ಥೆಯಲ್ಲಿಯೇ ವರಪ್ರದವಾಗುತ್ತದೆ. ಐನ್ದ್ರಾಗ್ನಯುಗದ ಪ್ರತಿಷ್ಠೆಯು ಕರ್ತೃವಿಗೆ ಮರಣವನ್ನುಂಟುಮಾಡಿ ತಾನೂ ನಾಶಹೊಂದುತ್ತದೆ. ಅಶ್ವಿನಿಯ ಪ್ರತಿಷ್ಠೆಯು ಇರುವವರೆಗೂ ಸಂಪತ್ತಿನಿಂದ ಕೂಡಿದ್ದು ನಾಶಹೊಂದುತ್ತದೆ. ಭಾಗ್ಯಯುಗದ ಪ್ರತಿಷ್ಠೆಯು ಕರ್ತೃವಿಗೆ ದೋಷಕರವಾದರೂ ಲೋಕದ

ಲೋಕಾಭಿಗಮ್ಯಾ ಭಾಗ್ಯೇಸ್ಯಾತ್ಕರ್ತುರ್ದೋಷವತೀ ಭವೇತ್ ।
ಅಶುಭೇಽಪಿ ಯುಗೇ ಕಾರ್ಯಾ ಪ್ರತಿಷ್ಠಾ ಮನುಜೋತ್ತಮ ॥ ೯ ॥

ಯಸ್ಮಿನ್ ಯಸ್ಮಿನ್ ಯುಗೇ ನಾಥೋ ಯೋ ಯೋ ದೇವಃ ಪ್ರಕೀರ್ತಿತಃ।
ಧನಧಾನ್ಯವತೀ ಸ್ಫೀತಾ ಕರ್ತುಃ ಶ್ರೇಯೋವಹಾ ತಥಾ ॥ ೧೦ ॥

ಸಂವತ್ಸರಾಖ್ಯೇ ವರ್ಷೇ ತು ನಿತ್ಯಮಾಜ್ಞಾಯುತಾ ಭವೇತ್ ।
ಪರಿಪೂರ್ವೇ ತು ಭೂತಘ್ನೀ ಲೋಕಖ್ಯಾತಾ ತಥೈವ ಚ ॥ ೧೧ ॥

ಇಡಾಪೂರ್ವೇ ತಥಾ ಸೌಮ್ಯಾ ವರದಾ ಲೋಕಸುಂದರೀ ।
ಅನುಪೂರ್ವೇ ತು ವರದಾ ಧನಧಾನ್ಯವತೀ ಭವೇತ್ ॥ ೧೨ ॥

ತತ್ಪೂರ್ವೇ ನಾಶಮಾಪ್ನೋತಿ ಕರ್ತುರ್ನಾಶಾವಹಾ ಭವೇತ್ ।
ತತ್ರಾಪಿ ಶಂಭೋರ್ಮೃತ್ಯೋಶ್ಚ ಯಮಸ್ಯ ಚ ಹಿತಾ ಭವೇತ್ ॥ ೧೩ ॥

---

ಅಭಿಮುಖ್ಯಕ್ಕೆ ಪಾತ್ರವಾಗುತ್ತದೆ. ಯಾವ ಯಾವ ಯುಗದಲ್ಲಿ ಯಾವ ಯಾವ ದೇವತೆಗೆ ಆಧಿಪತ್ಯವಿರುತ್ತದೋ, ಅಂತಹ ದೇವತೆಯ ಪ್ರತಿಷ್ಠೆಯನ್ನು ಅಶುಭಕರವಾದ ಯುಗದಲ್ಲಿ ಮಾಡಿದರೂ, ಆ ದೇವತೆಯ ಅನುಗ್ರಹದಿಂದ ಆ ಪ್ರತಿಷ್ಠೆಯು ಕರ್ತೃವಿಗೆ ಶ್ರೇಯಸ್ಕರವಾಗಿಯೂ, ಲೋಕದಲ್ಲಿ ಧನಧಾನ್ಯಸಮೃದ್ಧಿಯಿಂದ ಅಭ್ಯುದಯ ಸಾಧನವೂ ಆಗುತ್ತದೆ.

೧೧-೧೩. ಸಂವತ್ಸರವೆಂಬ ವರ್ಷದಲ್ಲಿ ಮಾತ್ರ ಈ ಪ್ರತಿಷ್ಠೆಯು ಬಹುಮಟ್ಟಿಗೂ ಲೋಕಕ್ಕೆ ಆಜ್ಞಾಕಾರಿಣಿಯಾಗುತ್ತದೆ. ಪರಿಸಂವತ್ಸರದಲ್ಲಿ ಭೂತನಾಶಕವಾದರೂ ಲೋಕದಲ್ಲಿ ಪ್ರಖ್ಯಾತಿಹೊಂದುತ್ತದೆ. ಇಡಾವತ್ಸರದಲ್ಲಿ ಸೌಮ್ಯವಾಗಿಯೂ ಲೋಕಸುಂದರಿಯಾಗಿಯೂ, ವರಪ್ರದವಾಗಿಯೂ ಆಗುತ್ತದೆ. ಅನುವತ್ಸರದಲ್ಲಿ ವರಪ್ರದವಾಗಿಯೂ, ಧನದಾನ್ಯಸಮುದ್ಧಿಯುಳ್ಳದ್ದಾಗಿಯೂ ಆಗುತ್ತದೆ. ತತ್ಪೂರ್ವಸಂವತ್ಸರದಲ್ಲಿ ಕರ್ತೃವಿಗೂ, ತನಗೂ ನಾಶಕವಾಗುತ್ತದೆ. ಅದರಲ್ಲಿಯೂ ರುದ್ರನಿಗೂ, ಮೃತ್ಯುವಿಗೂ, ಯಮನಿಗೂ ಹಿತಕರವಾಗುತ್ತವೆ. ಉತ್ತರಾಯಣದ

ಉತ್ತರೇ ಹ್ಯಯನೇ ಸೌಮ್ಯಾ ಧನವೃದ್ಧಿಕರೀ ಭವೇತ್ ।
ಧನಧಾನ್ಯಯುತಾ ಸ್ಥಿತಾ ಲೋಕಾನನ್ದಕರೀ ಭವೇತ್ ॥ ೧೪ ॥

ದಕ್ಷಿಣೇ ತ್ವಯನೇ ಕರ್ತುಃ ಪಾಪವೃದ್ಧಿಕರೀ ಭವೇತ್ ।
ತತ್ರಾಪಿ ಸುಪ್ತೇ ದೇವೇಶೆ ಸರ್ವಾನರ್ಥವಿವರ್ಧಿನೀ ॥ ೧೫ ॥

ಶಿಶಿರೇ ಲೋಕಕಾನ್ತಾ ಸ್ಯಾತ್ ದೃಢಾ ಚ ವಸುಧಾಧಿಪ ।
ಸ್ಥಿತಾ ವಸನ್ತೇ ಸೌಮ್ಯಾ ಚ ವರದಾ ಚ ತಥಾ ಭವೇತ್ ॥ ೧೬ ॥

ಗ್ರೀಷ್ಮೇ ತೇಜಸ್ವಿನೀ ಕಾನ್ತಾ ಭೂತನಿಗ್ರಹಕಾರಿಣೀ ।
ಪ್ರಾವೃಟ್ಕಾಲೇ ಕೃತಾ ನಾಶಂ ಕರ್ತ್ರಾ ಸಹ ಸಮಾಪ್ನುಯಾತ್ ॥ ೧೭ ॥

ಶರತ್ಕಾಲೇ ಕೃತಾ ನಾಶಂ ಶೀಘ್ರಮೇವ ಪ್ರಪದ್ಯತೇ ।
ಹೇಮನ್ತೇ ವರದಾ ಸೌಮ್ಯಾ ಧರ್ಮವೃದ್ಧಿಕರೀ ಭವೇತ್ ॥ ೧೮ ॥

---

ಪ್ರತಿಷ್ಠೆಯು ಸೌಮ್ಯವಾಗಿಯೂ, ಧನವೃದ್ಧಿಪ್ರದವಾಗಿಯೂ ಆಗುತ್ತದೆ. ಇದು ಬಹುಮಟ್ಟಿಗೂ ಧನಾಭಿವೃದ್ಧಿಗೂ, ಲೋಕಾನಂದಕ್ಕೂ, ಅಭ್ಯುದಯಕ್ಕೂ ಸಾಧಕವಾಗುತ್ತದೆ. ದಕ್ಷಿಣಾಯನದಲ್ಲಿ ಮಾತ್ರ ಪಾಪವೃದ್ಧಿಗೆ ಕಾರಣವಾಗುತ್ತದೆ. ಅದರಲ್ಲಿಯೂ ವಾಸುದೇವನು ಶಯನದಲ್ಲಿರುವಾಗ ಹೆಚ್ಚಾದ ಅನರ್ಥಗಳಿಗೆ ಕಾರಣವಾಗುತ್ತದೆ.

೧೬-೨೧. ಶಿಶಿರ ಋತುವಿನಲ್ಲಿ ದೃಢವಾಗಿಯೂ ಜನಾದರಣೀಯವಾಗಿಯೂ ಆಗುತ್ತದೆ. ವಸಂತಋತುವಿನಲ್ಲಿ ಸೌಮ್ಯವಾಗಿಯೂ ಅಭ್ಯುದಯ ಶಾಲಿನಿಯಾಗಿಯೂ, ವರಪ್ರದವಾಗಿಯೂ, ಆಗುತ್ತದೆ. ಗ್ರೀಷ್ಮಕಾಲದಲ್ಲಿ ತೇಜಶ್ಶಾಲಿನಿಯಾಗಿಯೂ, ರಮ್ಯವಾಗಿಯೂ, ಭೂತನಾಶಕವಾಗಿಯೂ, ಆಗುತ್ತದೆ. ವರ್ಷಾಕಾಲದಲ್ಲಿ ಮಾಡಿದ ಪ್ರತಿಷ್ಠೆಯು ಕರ್ತೃವಿನೊಡನೆ ತಾನೂ ನಾಶಹೊಂದುತ್ತದೆ. ಶರತ್ಕಾಲದಲ್ಲಿಯೂ, ಪ್ರತಿಷ್ಠೆಯು ಜಾಗ್ರತೆಯಾಗಿ ನಾಶಹೊಂದುತ್ತದೆ. ಹೇಮಂತ ಋತುವಿನಲ್ಲಿ ವರಪ್ರದವಾಗಿಯೂ, ಸೌಮ್ಯವಾಗಿಯೂ, ಧರ್ಮಾಭಿವೃದ್ಧಿಗೆ ಕಾರಣ

**ಮಾಘೇ ಕರ್ತುರ್ವಿನಾಶಾಯ ಫಾಲ್ಗುನೇ ಸುಭಗಾ ಭವೇತ್ ।**
**ಲೋಕಾನನ್ದಕರೀ ಚೈತ್ರೇ ವೈಶಾಖೇ ಧನಸಂಯುತಾ ॥ ೧೯ ॥**

**ಅಜ್ಞಾಯುತಾ ತಥಾ ಜ್ಯೇಷ್ಠೇ ಆಷಾಢೇ ಕರ್ತೃವೃದ್ಧಿದಾ ।**
**ಶ್ರಾವಣೇ ಧನಹೀನಾ ಸ್ಯಾತ್ ಪ್ರೋಷ್ಠಪಾದೇ ವಿನಶ್ಯತಿ ॥ ೨೦ ॥**

**ಆಶ್ವಿನೇ ನಾಶಮಾಪ್ನೋತಿ ವಹ್ನಿನಾ ಕಾರ್ತಿಕೇ ತಥಾ ।**
**ಸೌಮ್ಯೇ ಸೌಭಾಗ್ಯಮತ್ಯುಲ್ಯಂ ಪೌಷೇ ಪುಷ್ಟಿರನುತ್ತಮಾ ॥ ೨೧ ॥**

**ದೋಷಾವಹಾಧಿಮಾಸೇ ಸ್ಯಾತ್ಕರ್ತುರಾತ್ಮನ ಏವ ಚ ।**
**ಕೃಷ್ಣಪಕ್ಷತ್ರಿಭಾಗೇ ತು ಪ್ರಥಮೇ ಸ್ಯಾಚ್ಛುಭಾವಹಾ ॥ ೨೨ ॥**

**ಮಧ್ಯಾ ದ್ವಿತೀಯೇ ಭವತಿ ತೃತೀಯೇ ಕರ್ತೃನಾಶಿನೀ ।**
**ಶುಕ್ಲೇ ತ್ರಿಭಾಗೇ ಪ್ರಥಮೇ ದೇಶನಾಶಾಯ ಕೀರ್ತಿತಾ ॥ ೨೩ ॥**

---

ವಾಗಿಯೂ ಆಗುತ್ತದೆ. ಮಾಘಮಾಸದಲ್ಲಿ ಮಾಡಿದ ಪ್ರತಿಷ್ಠೆಯು ಕರ್ತೃವಿಗೆ ನಾಶಕವಾಗುತ್ತದೆ. ಫಾಲ್ಗುಣದಲ್ಲಿ ಸುಖಪ್ರದವಾಗುತ್ತದೆ. ಚೈತ್ರಮಾಸದಲ್ಲಿ ಲೋಕಕ್ಕೆಲ್ಲಾ ಆನಂದಕರವಾಗಿಯೂ, ವೈಶಾಖದಲ್ಲಿ ಧನಸಮೃದ್ಧಿಯುಳ್ಳದ್ದಾಗಿಯೂ ಆಗುತ್ತದೆ. ಜ್ಯೇಷ್ಠಮಾಸದಲ್ಲಿ ಆಜ್ಞಾಶಕ್ತಿಯಿಂದ ಕೂಡಿಯೂ, ಆಷಾಢದಲ್ಲಿ ಕರ್ತೃವಿಗೆ ವೃದ್ಧಿಕಾರಿಣಿಯಾಗಿಯೂ, ಆಗುತ್ತದೆ. ಶ್ರಾವಣದಲ್ಲಿ ಧನಹೀನ ವಾಗಿಯೂ, ಭಾದ್ರಪದದಲ್ಲಿ ನಶ್ವರವಾಗಿಯೂ ಆಗುತ್ತದೆ. ಆಶ್ವಯುಜಮಾಸದಲ್ಲಿ ನಾಶಹೊಂದತಕ್ಕದ್ದಾಗಿಯೂ, ಕಾರ್ತಿಕದಲ್ಲಿ ಅಗ್ನಿಯಿಂದ ನಾಶಹೊಂದತಕ್ಕ ದಾಗಿಯೂ, ಆಗುತ್ತದೆ. ಮಾರ್ಗಶಿರದಲ್ಲಿ ಬಹಳ ಸೌಭಾಗ್ಯಪ್ರದವಾಗಿಯೂ, ಪುಷ್ಯಮಾಸದಲ್ಲಿ ಬಹಳಮಟ್ಟಿಗೆ ಪೂರ್ಣತೆಯುಳ್ಳದ್ದಾಗಿಯೂ, ಆಗುತ್ತದೆ.

೨೨-೨೬ ಅಧಿಕಮಾಸದಲ್ಲಿ ಮಾಡುವ ಪ್ರತಿಷ್ಠೆಯು ಕರ್ತೃವಿಗೂ, ತನಗೂ, ಹಾನಿಕರವಾಗುತ್ತದೆ ಕೃಷ್ಣಪಕ್ಷವನ್ನು ಮೂರು ಭಾಗ ಮಾಡಿದಲ್ಲಿ ಮೊದಲನೆಯ ಭಾಗವು ಪ್ರತಿಷ್ಠೆಗೆ ಶುಭಕರ, ಎರಡನೆಯ ಭಾಗವು ಮಧ್ಯಮಫಲ, ಮೂರನೆಯ ಭಾಗವು ಕರ್ತೃವಿಗೆ ಹಾನಿಕರವಾಗುತ್ತದೆ. ಶುಕ್ಲಪಕ್ಷದಲ್ಲಿಯೂ, ಮೊದಲನೆಯ

ದ್ವಿತೀಯೋ ಮಧ್ಯಫಲದಾ ತೃತೀಯೋ ಚ ಶುಭಾವಹಾ ।
ಧನಧಾನ್ಯವತೀ ಸ್ಫೀತಾ ವರದಾ ಚ ತಥಾ ಭವೇತ್ ॥ ೨೪ ॥

ಯಸ್ಯ ಪಕ್ಷಸ್ಯ ವೃದ್ಧಿಃ ಸ್ಯಾತ್ತಸ್ಮಿನ್ ಶುಭವಹಾ ಭವೇತ್ ।
ತೇಜಸ್ವಿನೀ ಸೂರ್ಯದೇವೇ ಚಾನ್ದ್ರೇ ಕ್ಷಮಾವಹಾ ಭವೇತ್ ॥ ೨೫ ॥

ಭೌಮೇಽಗ್ನಿನಾ ಪ್ರದಹ್ಯೇತ ಬುಧೇನ ಧನದಾ ಭವೇತ್ ।
ಗುರುಣಾ ಚ ದೃಢಾ ನಿತ್ಯಂ ಲೋಕಾನನ್ದಕರೀ ಸಿತೇ ॥ ೨೬ ॥

ಆಚನ್ದ್ರಾರ್ಕಸ್ಥಿರಾ ಸೌರೇ ಪ್ರತಿಷ್ಠಾ ಸಮುದಾಹೃತಾ ।
ತೇಜಸ್ವಿನೀ ಕೃತ್ತಿಕಾಸು ಭೂತನಿಗ್ರಹಕಾರಿಣೀ ॥ ೨೭ ॥

ಕಿಂಚಿದ್ಭೂತಾ ತತಃ ಕಾಲೇ ಪುನರ್ದಹ್ಯತಿ ವಹ್ನಿನಾ ।
ವಹ್ನೇಃ ಸೂರ್ಯಸ್ಯ ಭೌಮಸ್ಯ ಕುಮಾರಸ್ಯ ಚ ಮಾನದ ॥ ೨೮ ॥

---

ಮೂರನೆಯ ಒಂದು ಭಾಗವು ದೇಶನಾಶಕ್ಕೆ ಕಾರಣವಾಗುತ್ತದೆ. ಎರಡನೆಯ ಭಾಗವು ಮಧ್ಯಮಫಲ. ಮೂರನೆಯ ಭಾಗವು ಶುಭಫಲಪ್ರದವಾಗುತ್ತದೆ. ಧನಧಾನ್ಯ ಸಮೃದ್ಧಿಯಿಂದಲೂ ಅಭ್ಯುದಯದಿಂದಲೂ, ಕೂಡಿ ವರಪ್ರದವಾಗಿಯೂ, ಆಗುತ್ತದೆ. ಯಾವ ಪಕ್ಷದಲ್ಲಿ ದಿನವೃದ್ಧಿಯುಂಟಾಗುತ್ತದೆಯೋ, ಆ ಪಕ್ಷದಲ್ಲಿ ಪ್ರತಿಷ್ಠೆಯು ಶುಭಕರವಾಗುತ್ತದೆ. ಭಾನುವಾರದಲ್ಲಿ ಪ್ರತಿಷ್ಠೆಯು ತೇಜಶ್ಶಾಲಿನಿಯಾಗಿಯೂ ಚಂದ್ರವಾರದಲ್ಲಿ ಕ್ಷಾಂತಿಪ್ರದವಾಗಿಯೂ, ಭೌಮವಾರದಲ್ಲಿ ಅಗ್ನಿಯಿಂದ ನಾಶ ಹೊಂದತಕ್ಕದ್ದಾಗಿಯೂ, ಬುಧವಾರದಲ್ಲಿ ಧನಪ್ರದವಾಗಿಯೂ, ಗುರುವಾರದಲ್ಲಿ ದೃಢವಾಗಿಯೂ, ಶುಕ್ರವಾರದಲ್ಲಿ ಲೋಕಕ್ಕೆ ಆನಂದಕರವಾಗಿಯೂ, ಶನಿವಾರದಲ್ಲಿ ಆಚಂದ್ರಾರ್ಕಸ್ಥಾಯಿಯಾಗಿಯೂ, ಆಗುತ್ತದೆ.

೨೭–೩೧. ಕೃತ್ತಿಕಾನಕ್ಷತ್ರದಲ್ಲಿ ಮಾಡಿದ ಪ್ರತಿಷ್ಠೆಯೂ ತೇಜಸ್ವಿನಿಯಾಗಿರುತ್ತದೆ. ಭೂತನಿಗ್ರಹಕಾರಕವೂ ಆಗುತ್ತದೆ. ಆದರೆ ಸ್ವಲ್ಪ ದಿನವಿದ್ದು, ನಂತರ ಅಗ್ನಿಯಿಂದಲೇ ದಾಹಹೊಂದುತ್ತದೆ. ಅಗ್ನಿ, ಸೂರ್ಯ, ಅಂಗಾರಕ, ಷಣ್ಮುಖ

**ಗಂಗಾಯಾಂ ಚ ಕೃತಾ ತತ್ರ ನ ದಹ್ಯತಿ ಚ ವಹ್ನಿನಾ ।**
**ಪ್ರಾಜಾಪತ್ಯೇ ದೃಢಾ ನಿತ್ಯಂ ಲೋಕಾನುಗ್ರಹಕಾರಿಣೀ ॥ ೨೯ ॥**

**ಸೌಮ್ಯೇ ತು ವರದಾ ಪ್ರೋಕ್ತಾ ಮೂಷಕೈಸ್ತು ವಿನಾಶ್ಯತೇ ।**
**ಆರ್ದ್ರಾಯಾಂ ಕರ್ತೃಮರಣಂ ಕ್ಷಿಪ್ರಮೇವ ಪ್ರಯಚ್ಛತಿ ॥ ೩೦ ॥**

**ಪುನರ್ವಸೌ ವಿನಾಶಶ್ಚ ಸಂಸ್ಕಾರಂ ಚಾಪ್ನುಯಾತ್ಪುನಃ ।**
**ಪುಷ್ಟಿಂ ಪುಷ್ಯೇ ಸಮಾಪ್ನೋತಿ ಧನೇನ ಯಶಸಾ ತಥಾ ॥ ೩೧ ॥**

**ಸಾರ್ಪೇ ಕರ್ತೃವಿನಾಶಃ ಸ್ಯಾನ್ನಾಗಾನಾಂ ಚ ಹಿತಾ ಭವೇತ್ ।**
**ಪಿತ್ರ್ಯೇ ಮರಣದಾ ಕರ್ತುಃ ತಥಾ ನಾಶಂ ಚ ಗಚ್ಛತಿ ॥ ೩೨ ॥**

**ಲೋಕಗಮ್ಯಾ ಭವೇದ್ಭಾಗ್ಯೇ ಕರ್ತುರ್ನಾಶಾವಹಾ ತಥಾ ।**
**ತತ್ರಾಪಿ ಕಾಮದೇವಸ್ಯ ಕರ್ತುಃ ಸೌಖ್ಯಾವಹಾ ಭವೇತ್ ॥ ೩೩ ॥**

---

ಇವರ ಪ್ರತಿಷ್ಠೆಯನ್ನು ಗಂಗಾ ತೀರದಲ್ಲಿ ನಡೆಸಿದಲ್ಲಿ ಕೃತ್ತಿಕಾ ನಕ್ಷತ್ರದಲ್ಲಿಯೂ ಅಗ್ನಿಯ ಭಯವಿರುವುದಿಲ್ಲ. ರೋಹಿಣೀನಕ್ಷತ್ರದಲ್ಲಿ ಪ್ರತಿಷ್ಠೆಯು ದೃಢವಾಗಿ ನಿಂತು ಲೋಕಾನುಗ್ರಹಕ್ಕೂ ಕಾರಣವಾಗುತ್ತದೆ. ಮೃಗಶಿರಾನಕ್ಷತ್ರದಲ್ಲಿ ವರಪ್ರದವಾಗುತ್ತದೆ. ಆದರೆ, ಆ ಪ್ರತಿಷ್ಠೆಗೆ ಇಲಿಗಳಿಂದ ಹಾನಿಯುಂಟು. ಆರ್ದ್ರೆಯಲ್ಲಿ ಕರ್ತೃವಿಗೆ ಕ್ಷಿಪ್ರದಲ್ಲಿಯೇ ಹಾನಿಯುಂಟಾಗುತ್ತದೆ. ಪುನರ್ವಸೂನಕ್ಷತ್ರದಲ್ಲಿ ಪ್ರತಿಷ್ಠೆಯು ನಾಶಹೊಂದುತ್ತದೆ. ಆದರೆ ಪುನಃ ಸಂಸ್ಕರಿಸಲ್ಪಟ್ಟು ನಿಲ್ಲುತ್ತದೆ. ಪುಷ್ಯನಕ್ಷತ್ರದಲ್ಲಿ ಧನ, ಯಶಸ್ಸು ಮುಂತಾದುವುಗಳಿಂದ ಪುಷ್ಟಿಹೊಂದುತ್ತದೆ.

೩೨–೩೩. ಆಶ್ಲೇಷಾನಕ್ಷತ್ರದಲ್ಲಿ ಮಾಡಿದ ಪ್ರತಿಷ್ಠೆಯು ಕರ್ತೃ ಹಾನಿಗೆ ಕಾರಣವಾಗಿಯೂ. ಸರ್ಪಗಳಿಗೆ ಆಶ್ರಯವಾಗಿಯೂ ಆಗುತ್ತದೆ. ಮಖಾ ನಕ್ಷತ್ರದಲ್ಲಿ ಕರ್ತೃವಿಗೆ ಹಾನಿಯುಂಟುಮಾಡಿ ತಾನೂ ನಾಶಹೊಂದುತ್ತದೆ. ಪೂರ್ವಫಲ್ಗುನಿಯಲ್ಲಿ ಮಾಡಿದ ಪ್ರತಿಷ್ಠೆಯು ಜನರ ಮೆಚ್ಚಿಗೆಗೆ ಪಾತ್ರವಾಗುತ್ತದೆ. ಆದರೂ, ಕರ್ತೃವಿಗೆ ಹಾನಿಕರವೇ ಆಗುತ್ತದೆ. ಆದರೆ ಮನ್ಮಥನ ಪ್ರತಿಷ್ಠೆಯು ಮಾತ್ರ ಕರ್ತೃವಿಗೆ ಸುಖಕರವಾಗುತ್ತದೆ. ಉತ್ತರಾನಕ್ಷತ್ರದ ಪ್ರತಿಷ್ಠೆಯು ಬಹಳ

ಆರ್ಯಮ್ಣಿ ಸುದೃಢಾ ಸ್ಥಿತಾ ಲೋಕಾನುಗ್ರಹಕಾರಿಣೀ ।
ಆಜ್ಞಾಯುತಾ ಕೃತಾ ಹಸ್ತೇ ಚಿರಾನ್ನಾಶಮವಾಪ್ನುಯಾತ್ ॥ ೩೪ ॥

ನಿತ್ಯಾಶ್ಚರ್ಯಯುತಾ ಲೋಕೇ ಚಿತ್ರಾಯಾಂ ಚ ಹಿತಪ್ರದಾ ।
ಸ್ವಾತೌ ತು ವರದಾ ಸೌಮ್ಯಾ ಲೋಕಾನುಗ್ರಹಕಾರಿಣೀ ॥ ೩೫ ॥

ಐನ್ದ್ರಾಗ್ನೇ ಕರ್ತುರ್ನಾಶಾಯ ಮೈತ್ರೇ ಮಿತ್ರಾಭಿವೃದ್ಧಯೇ ।
ಜ್ಯೇಷ್ಠಾಯಾಂ ತೇಜಸಾ ಯುಕ್ತಾ ಧನಧಾನ್ಯವತೀ ಭವೇತ್ ॥ ೩೬ ॥

ತಥಾವಿಧಾ ತಥಾ ಮೂಲೇ ಕಿಂತು ಭೂತಸಮಾಶ್ರಯಾ ।
ಆಪ್ಯೇ ಕ್ಲೇಶಮವಾಪ್ನೋತಿ ವೈಶ್ವದೇವೇ ಸುಖಪ್ರದಾ ॥ ೩೭ ॥

ಶ್ರವಣೇ ಧನಧಾನ್ಯಾಢ್ಯಾ ವಾಸವೇ ವಸುಸಂಯುತಾ ।
ವಾರುಣೇ ಶೀಘ್ರನಾಶಾಯ ತಥಾಜೇ ಮನುಜೋತ್ತಮ ॥ ೩೮ ॥

---

ಸಮೃದ್ಧವಾಗಿಯೂ, ದೃಢವಾಗಿಯೂ, ಲೋಕದ ಅನುಗ್ರಹಕ್ಕೆ ಕಾರಣವಾಗಿಯೂ ಆಗುತ್ತದೆ. ಹಸ್ತನಕ್ಷತ್ರದಲ್ಲಿ ಆಜ್ಞಾಶಕ್ತಿಯಿಂದ ಕೂಡಿದ್ದು, ಬಹುಕಾಲದ ಮೇಲೆ ನಾಶಹೊಂದುತ್ತದೆ. ಚಿತ್ರಾನಕ್ಷತ್ರದಲ್ಲಿ ಲೋಕಕ್ಕೆ ಆಶ್ಚರ್ಯಕರವಾದ ರೀತಿಯಲ್ಲಿದ್ದು, ಹಿತಕರವಾಗಿಯೂ ಇರುತ್ತದೆ. ಸ್ವಾತೀನಕ್ಷತ್ರದಲ್ಲಿ ವರಪ್ರದಾನ ಸಮರ್ಥವಾಗಿಯೂ, ಸೌಮ್ಯವಾಗಿಯೂ ಇದ್ದು, ಲೋಕಕ್ಕೆ ಅನುಗ್ರಹಪ್ರದವಾಗುತ್ತದೆ.

೩೬–೩೮ ವಿಶಾಖಾನಕ್ಷತ್ರದ ಪ್ರತಿಷ್ಠೆಯು ಕರ್ತೃವಿನ ಹಾನಿಗೂ, ಅನುರಾಧಾನಕ್ಷತ್ರದ ಪ್ರತಿಷ್ಠೆಯು ಮಿತ್ರರನೇಕರ ಅಭಿವೃದ್ಧಿಗೂ ಕಾರಣವಾಗುತ್ತದೆ. ಜ್ಯೇಷ್ಠಾನಕ್ಷತ್ರದಲ್ಲಿ ತೇಜಶ್ಶಾಲಿನಿಯಾಗಿಯೂ, ಧನಧಾನ್ಯ ಸಮೃದ್ಧಿಯಿಂದಲೂ ಕೂಡಿರುತ್ತದೆ. ಮೂಲಾನಕ್ಷತ್ರದಲ್ಲಿಯೂ ಅದೇ ರೀತಿಯಾಗಿರುತ್ತದೆ. ಆದರೆ ಭೂತಗಳಿಗೆ ಆಶ್ರಯವಾಗುತ್ತದೆ ಪೂರ್ವಾಷಾಢಾನಕ್ಷತ್ರದಲ್ಲಿ ಕ್ಲೇಶಕ್ಕೆ ಈಡಾಗುತ್ತದೆ. ಉತ್ತರಾಷಾಢಾನಕ್ಷತ್ರದಲ್ಲಿ ಸುಖಪ್ರದವಾಗುತ್ತದೆ. ಶ್ರವಣನಕ್ಷತ್ರದಲ್ಲಿ ಧನಧಾನ್ಯಾದಿಗಳಿಂದ ಕೂಡಿರುತ್ತದೆ. ಧನಿಷ್ಠೆಯಲ್ಲಿ ಅರ್ಥಸಮೃದ್ಧಿಯನ್ನು

ಅಹಿರ್ಬುಧ್ನ್ಯೇ ದೃಢಾ ಸ್ನಿಗ್ಧಾ ಕರ್ತುಃ ಸೌಖ್ಯಪ್ರದಾ ತಥಾ ।
ಧನಧಾನ್ಯಯುತಾ ಪೌಷ್ಣೇ ಅಶ್ವಿನೇ ರೋಗನಾಶಿನೀ ॥ ೩೯ ॥

ಯಾಮ್ಯೇ ಮರಣದಾ ಕರ್ತುರ್ಯಮಸ್ಯ ತು ಹಿತಪ್ರದಾ ।
ನಕ್ಷತ್ರೇ ಸವ್ಯತೀಪಾತೇ ತಥೈವ ಚ ಸ ವೈಧೃತೇ ॥ ೪೦ ॥

ಜ್ಞೇಯಾ ಮರಣದಾ ಕರ್ತುರಾತ್ಮನಾಶಕರೀ ತಥಾ ।
ಸಾರ್ಕೇ ಸ್ಯಾಚ್ಛೋಕಜನನೀ ಸಸೌರೇ ಮೃತ್ಯುದಾಯಿನೀ ॥ ೪೧ ॥

ಸಭೌಮೇ ವಹ್ನಿಭಯದಾ ಸತಮಸ್ಕೇ ಸ್ಥಿರಾ ನ ತು ।
ಕೇತುನಾ ಭೂಷಿತೇ ಋಕ್ಷೇ ವಹ್ನಿದಾಹಮವಾಪ್ನುಯಾತ್ ॥ ೪೨ ॥

ಕೇತೂದಯೋ ಭವೇದ್ಯೇನ ತೇನ ದುರ್ಭಿಕ್ಷಮಾಪ್ನುಯಾತ್ ।
ಭೌಮೋದಯೋ ಭವೇದ್ಯೇನ ತೇನ ದಹ್ಯತಿ ವಹ್ನಿನಾ ॥ ೪೩ ॥

---

ಹೊಂದಿರುತ್ತದೆ. ಶತಭಿಷ ನಕ್ಷತ್ರದಲ್ಲಿ ಶೀಘ್ರವಾಗಿ ನಾಶಹೊಂದುತ್ತದೆ. ಪೂರ್ವಾಭಾದ್ರಾನಕ್ಷತ್ರದಲ್ಲಿಯೂ ಹಾಗೆಯೇ ನಾಶಹೊಂದುತ್ತದೆ. ಉತ್ತರಾಭಾದ್ರಾ ನಕ್ಷತ್ರದಲ್ಲಿ ದೃಢವಾಗಿಯೂ, ಕರ್ತೃವಿಗೆ ಸುಖಪ್ರದವಾಗಿಯೂ, ಅಭ್ಯುದಯಶಾಲಿಯಾಗಿಯೂ ಆಗುತ್ತದೆ. ರೇವತಿಯಲ್ಲಿ ಧನಧಾನ್ಯಸಮೃದ್ಧಿಯಿಂದ ಕೂಡಿಯೂ ಅಶ್ವಿನಿಯಲ್ಲಿ ರೋಗನಾಶಕವಾಗಿಯೂ, ಭರಣಿಯಲ್ಲಿ ಕರ್ತೃಹಾನಿಗೂ, ಯಮನ ಹಿತಕ್ಕೂ ಕಾರಣವಾಗುತ್ತದೆ.

೪೦–೪೪. ಪ್ರತಿಷ್ಠಾನಕ್ಷತ್ರವು ವ್ಯತೀಪಾತದಿಂದಲೂ, ವೈಧೃತಿಯಿಂದಲೂ ಕೂಡಿದ್ದಲ್ಲಿ ಆ ಪ್ರತಿಷ್ಠೆಯು ಕರ್ತೃವಿನ ಹಾನಿಗೂ, ಆತ್ಮನಾಶಕ್ಕೂ ಕಾರಣವಾಗುತ್ತದೆ ಎಂದು ತಿಳಿಯಬೇಕು. ಸೂರ್ಯನಿಂದ ಕೂಡಿದ್ದಲ್ಲಿ ದುಃಖಜನಕವಾಗಿಯೂ, ಶನಿಯಿಂದ ಕೂಡಿದ್ದಲ್ಲಿ ಮೃತ್ಯುಪ್ರದವಾಗಿಯೂ, ಅಂಗಾರಕನಿಂದ ಕೂಡಿದ್ದಲ್ಲಿ ಅಗ್ನಿಭಯಹೇತುವೂ, ರಾಹುವಿನಿಂದ ಕೂಡಿದ್ದಲ್ಲಿ ಅಸ್ಥಿರವಾಗಿಯೂ ಆಗುತ್ತದೆ. ನಕ್ಷತ್ರವು ಕೇತುವಿನಿಂದ ಕೂಡಿದ್ದಲ್ಲಿ ಅಗ್ನಿದಾಹಕ್ಕೆ ಕಾರಣವಾಗುತ್ತದೆ ಯಾವ ನಕ್ಷತ್ರದಲ್ಲಿ ಕೇತುವಿನ ಉದಯವಾಗುವುದೋ ಅಂತಹ ನಕ್ಷತ್ರದ ಪ್ರತಿಷ್ಠೆಯು ರಾಷ್ಟ್ರದ ದುರ್ಭಿಕ್ಷಕ್ಕೆ ಕಾರಣವಾಗುತ್ತದೆ. ಹಾಗೆಯೇ ಅಂಗಾರಕನ ಉದಯದಿಂದ

ಸೌರೋದಯೋ ಭವೇದ್ಯೇನ ತೇನ ಕಲ್ಪಂ ವಿನಶ್ಯತಿ ।
ನಕ್ಷತ್ರೇ ಸಪರೀವೇಷೇ ಪರಚಕ್ರಭಯಂ ವದೇತ್ ॥ ೪೪ ॥

ಉಲ್ಕಾಹತೇ ವಿನಾಶಾಯ ಸಭೂಕಂಪೇ ಭಯಪ್ರದಾ ।
ಉಲ್ಕಾಪಾತೋ ಭವೇದ್ಯತ್ರ ತತ್ರ ವ್ಯಾಧಿಕರೀ ಭವೇತ್ ॥ ೪೫ ॥

ತ್ರಿವಿಧೋತ್ಪಾತಯುಕ್ತೇ ಭೇ ನ ಶುಭಾ ತು ಪ್ರಕೀರ್ತಿತಾ ।
ದಿವ್ಯೇ ಕರ್ತೃವಿನಾಶಾಯ ಭೌಮೇ ಚಾತ್ಮವಿನಾಶಿನೀ ॥ ೪೬ ॥

ಆಂತರಿಕ್ಷೇ ಚ ವಿಜ್ಞೇಯಾ ಲೋಕನಾಶಕರೀ ತಥಾ ।
ವೈಧೃತವ್ಯತೀಪಾತವ್ಯೃಕ್ಷಮೇಕಂ ವಿವರ್ಜಯೇತ್ ॥ ೪೭ ॥

---

ಕೂಡಿದ ನಕ್ಷತ್ರವು ಅಗ್ನಿದಾಹಕ್ಕೆ ಕಾರಣವಾಗುತ್ತದೆ. ಶನಿಯ ಉದಯವಾಗುವ ನಕ್ಷತ್ರವೂ ಸಹ ಪ್ರತಿಷ್ಠೆಯನ್ನು ನಾಶಗೊಳಿಸುತ್ತದೆ. ಪ್ರತಿಷ್ಠಾನಕ್ಷತ್ರವು ಪರಿವೇಷದಿಂದ ಕೂಡಿದ್ದಲ್ಲಿ ಶತ್ರುಸೈನ್ಯದಿಂದ ಭಯವುಂಟು ಎಂದೂ ತಿಳಿಯಬೇಕು

೪೫-೪೭. ಕೊಳ್ಳಿಗಳು ಬಿದ್ದ ಪ್ರದೇಶದಲ್ಲಿ ಮಾಡುವ ಪ್ರತಿಷ್ಠೆಯು ಹಾನಿಕರವಾಗುತ್ತದೆ. ಭೂಕಂಪವಾದಾಗ ಭಯಪ್ರದವಾಗುತ್ತದೆ ಕೊಳ್ಳಿಗಳು ಬಿದ್ದ ಅಪಶಕುನಕಾಲದಲ್ಲಿ ಮಾಡುವ ಪ್ರತಿಷ್ಠೆಯು ರಾಷ್ಟ್ರಕ್ಕೆ ವ್ಯಾದಿಪೀಡೆಯನ್ನುಂಟು ಮಾಡುತ್ತದೆ. ಉತ್ಪಾತದಿಂದ ಕೂಡಿರುವ ನಕ್ಷತ್ರದಲ್ಲಿ ಪ್ರತಿಷ್ಠೆಯು ಅಶುಭಫಲಕ್ಕೆ ಕಾರಣವಾಗುತ್ತದೆ. ದಿವ್ಯೋತ್ಪಾತವು ಕರ್ತೃವಿಗೆ ಹಾನಿಕರ, ಭೌಮೋತ್ಪಾತವು ಪ್ರತಿಷ್ಠೆಗೆ ನಾಶಕ. ಆಂತರಿಕ್ಷೋತ್ಪಾತವು ಲೋಕನಾಶಕ್ಕೆ ಕಾರಣ. ಈ ರೀತಿಯಾದ ಉತ್ಪಾತದಿಂದ ಕೂಡಿದ ನಕ್ಷತ್ರವು ತ್ಯಾಜ್ಯವಾದುದು. ಒಂದೇ ನಕ್ಷತ್ರದಲ್ಲಿ ವೈಧೃತೀ, ವ್ಯತೀಪಾತಗಳೆರಡೂ ಸೇರಿದ್ದಲ್ಲಿ ಅದೂ ತ್ಯಾಜ್ಯವಾಗುತ್ತದೆ. ಇತರ ದೋಷಗಳಿಂದ ಕೂಡಿದ ನಕ್ಷತ್ರಗಳು ಸೂರ್ಯೋದಯಪರ್ಯಂತವೇ ತ್ಯಾಜ್ಯವಾಗುತ್ತವೆ.

ಶೇಷೈರ್ದೋಷೈಃ ತಥಾ ಯುಕ್ತಂ ಯಾವದಾಗಮನಾದ್ರವೇಃ ।
ಜನ್ಮನಕ್ಷತ್ರನಿಹಿತಾ ಕರ್ತುಃ ಶ್ರೇಯಸ್ಕರೀ ಭವೇತ್ ॥ ೪೮ ॥

ಸಂಪತ್ಕರೀ ದ್ವಿತೀಯೇ ಸ್ಯಾತ್ತ್ರಿತೀಯೇಽರಿಭಯಪ್ರದಾ ।
ಕ್ಷೇಮ್ಯಾ ಚತುರ್ಥೇ ಭವತಿ ಪಂಚಮೇ ವ್ಯಾಧಿವರ್ಧಿನೀ ॥ ೪೯ ॥

ಕಾರ್ಯವೃದ್ಧಿಕರೀ ಷಷ್ಠೇ ಸಪ್ತಮೇ ನಿಧನಪ್ರದಾ ।
ಅಷ್ಟಮೇ ವರದಾ ಸೌಮ್ಯಾ ನವಮೇ ಶ್ರೀವಿವರ್ಧಿನೀ ॥ ೫೦ ॥

ಕರ್ಮಣಾಂ ಸಾಧಿಕಾ ಪ್ರೋಕ್ತಾ ಜನ್ಮಭಾದ್ದಶಮೇ ತು ಭೇ ।
ಏಕಾದಶೇ ಭೂತಿಕರೀ ದ್ವಾದಶೇಽರಿಭಯಪ್ರದಾ ॥ ೫೧ ॥

ಜ್ಞೇಯಾ ತ್ರಯೋದಶೇ ಕ್ಷೇಮ್ಯಾ ರೋಗದಾ ತು ಚತುರ್ದಶೇ ।
ವೃದ್ಧಿದಾ ಪಂಚದಶಕೇ ಷೋಡಶೇ ನಿಧನಪ್ರದಾ ॥ ೫೨ ॥

---

೪೮-೫೨. ಜನ್ಮನಕ್ಷತ್ರದಲ್ಲಿ ಮಾಡುವ ಪ್ರತಿಷ್ಠೆಯು ಕರ್ತೃವಿಗೆ ಶ್ರೇಯಸ್ಕರವಾಗುತ್ತದೆ. ಜನ್ಮನಕ್ಷತ್ರದಿಂದ ಎರಡನೆಯ ನಕ್ಷತ್ರದಲ್ಲಿ ಸಂಪತ್ಕರವಾಗಿಯೂ, ಮೂರನೆಯ ನಕ್ಷತ್ರದಲ್ಲಿ ಶತ್ರುಭಯಕ್ಕೆ ಕಾರಣವಾಗಿಯೂ, ನಾಲ್ಕನೆಯ ನಕ್ಷತ್ರವು ಕ್ಷೇಮಕರವಾಗಿಯೂ, ಐದನೆಯ ನಕ್ಷತ್ರವು ವ್ಯಾದಿವರ್ಧಕವಾಗಿಯೂ, ಆರನೆಯ ನಕ್ಷತ್ರವು ಕಾರ್ಯವೃದ್ಧಿಪ್ರದವಾಗಿಯೂ, ಏಳನೆಯ ನಕ್ಷತ್ರವು ಮರಣಪ್ರದವಾಗಿಯೂ, ಎಂಟನೆಯ ನಕ್ಷತ್ರವು ವರಪ್ರದವಾಗಿ ಸೌಮ್ಯವಾಗಿಯೂ, ಒಂಭತ್ತನೆಯ ನಕ್ಷತ್ರವು ಸಂಪದಭಿವೃದ್ಧಿಗೆ ಕಾರಣವಾಗಿಯೂ ಆಗುತ್ತವೆ. ಹೀಗೆಯೇ ಜನ್ಮನಕ್ಷತ್ರದಿಂದ ಹತ್ತನೆಯ ನಕ್ಷತ್ರವು ಸರ್ವಕರ್ಮಸಾಧಕವಾಗಿಯೂ, ಹನ್ನೊಂದನೆಯ ನಕ್ಷತ್ರವು ಐಶ್ವರ್ಯಕರವಾಗಿಯೂ, ಹನ್ನೆರಡನೆಯ ನಕ್ಷತ್ರವು ಶತ್ರುಭಯಪ್ರದವೂ, ಹದಿಮೂರನೆಯ ನಕ್ಷತ್ರದಲ್ಲಿ ಕ್ಷೇಮಕರವಾಗಿಯೂ, ಹದಿನಾಲ್ಕನೆಯ ನಕ್ಷತ್ರದಲ್ಲಿ ರೋಗಪ್ರದವಾಗಿಯೂ, ಹದಿನೈದನೆಯ ನಕ್ಷತ್ರದಲ್ಲಿ ವೃದ್ಧಿಪ್ರದವಾಗಿಯೂ, ಹದಿನಾರನೆಯ ನಕ್ಷತ್ರದಲ್ಲಿ ಮರಣಪ್ರದವೂ ಆಗುತ್ತದೆ.

ಸಪ್ತದಶೇ ಭೂತಿಕರೀ ಶ್ರೀದಾಚಾಷ್ಟಾದಶೇ ಭವೇತ್ ।
ಏಕೋನವಿಂಶತಿತಮೇ ಕರ್ತುರ್ಮರಣದಾಯಿನೀ ॥ ೫೩ ॥

ತತೋ ದ್ವಿತೀಯೇ ಧನದಾ ತೃತೀಯೇಽರಿಭಯಪ್ರದಾ ।
ಚತುರ್ಥೇ ಕ್ಷೇಮಜನನೀ ಪಂಚಮೇ ರೋಗವರ್ಧಿನೀ ॥ ೫೪ ॥

ಷಷ್ಠೇ ಲಕ್ಷ್ಮೀಕರೀ ಜ್ಞೇಯಾ ಧನಧಾನ್ಯವಿವರ್ಧಿನೀ ।
ದ್ವಿತೀಯೇ ಚ ಚತುರ್ಥೇ ಚ ಪಂಚಮೇ ಚ ತಥಾಷ್ಟಮೇ ॥ ೫೫ ॥

ದ್ವಾದಶೇ ನವಮೇ ಚಂದ್ರೇ ಕರ್ತುರ್ದೋಷಕರೀ ಭವೇತ್ ।
ಜನ್ಮಸ್ಥಶ್ಚ ತೃತೀಯಶ್ಚ ಷಷ್ಠಶ್ಚೈಕಾದಶಸ್ತಥಾ ॥ ೫೬ ॥

ದಶಮಃ ಸಪ್ತಮಶ್ಚೈವ ಯದಾ ವಿದ್ಧೋ ಭವೇದ್ಗ್ರಹೈಃ ।
ಪಂಚಮ್ಯೈರ್ನವಮ್ಯೈಶ್ಚೈವ ದ್ವಾದಶೈಶ್ಚ ತಥಾಷ್ಟಮ್ಯೈಃ ॥ ೫೭ ॥

---

೫೩-೫೪. ಹದಿನೇಳನೆಯ ನಕ್ಷತ್ರದಲ್ಲಿ ಮಾಡಿದ ಪ್ರತಿಷ್ಠೆಯು ಸಂಪತ್ಪ್ರದವಾಗಿಯೂ, ಹದಿನೆಂಟನೆಯ ನಕ್ಷತ್ರದಲ್ಲಿಯೂ, ಧನಪ್ರದವಾಗಿಯೂ, ಹತ್ತೊಂಭತ್ತನೆಯ ನಕ್ಷತ್ರದಲ್ಲಿ ಕರ್ತೃವಿಗೆ ಮರಣಪ್ರದವಾಗಿಯೂ, ಆಗುತ್ತದೆ. ಆದರಿಂದ ಮುಂದೆ ಎರಡನೆಯ ನಕ್ಷತ್ರವು ಧನಪ್ರದವಾಗಿಯೂ, ಮೂರನೆಯ ನಕ್ಷತ್ರವು ಶತ್ರುಭಯಪ್ರದವಾಗಿಯೂ, ನಾಲ್ಕನೆಯ ನಕ್ಷತ್ರವು ಕ್ಷೇಮಕರವಾಗಿಯೂ, ಐದನೆಯ ನಕ್ಷತ್ರವು ರೋಗವೃದ್ಧಿಕರವಾಗಿಯೂ, ಆರನೆಯದು ಸಂಪತ್ಪ್ರದವಾಗಿಯೂ, ಧನಧಾನ್ಯವೃದ್ಧಿಕರವಾಗಿಯೂ ಆಗುತ್ತದೆ.

೫೫-೫೭. ಪ್ರತಿಷ್ಠಾಲಗ್ನಕ್ಕಿಂತ ದ್ವಿತೀಯ, ಚತುರ್ಥ, ಪಂಚಮ, ಅಷ್ಟಮ, ದ್ವಾದಶ, ನವಮ, ಸ್ಥಾನಗಳಲ್ಲಿ ಎಲ್ಲಿಯಾದರೂ ಚಂದ್ರನಿದ್ದಲ್ಲಿ ಕರ್ತೃವಿಗೆ ಆ ಪ್ರತಿಷ್ಠೆಯಿಂದ ಹಾನಿಯುಂಟಾಗುತ್ತದೆ. ಮತ್ತು ಜನ್ಮರಾಶಿಯಲ್ಲಿ ಮತ್ತು ಅದಕ್ಕಿಂತ, ಮೂರನೆ, ಆರನೇ, ಹನ್ನೊಂದನೇ, ಹತ್ತನೇ, ಏಳನೇ ರಾಶಿಗಳಲ್ಲಿ ಯಾವುದಾದರೊಂದು ರಾಶಿಯಲ್ಲಿರುವ ಚಂದ್ರನು, ಐದನೇ, ಒಂಭತ್ತನೇ, ಹನ್ನೆರಡನೇ, ಎಂಟನೇ ರಾಶಿಯಲ್ಲಿರುವ ಇತರ ಗ್ರಹಗಳಿಂದ ವಿದ್ಧನಾಗಿದ್ದಲ್ಲಿಯೂ, ಹಾನಿಯುಂಟಾಗುತ್ತದೆ.

**ಚತುರ್ಥೇ ವಾ ದ್ವಿತೀಯೇ ವಾ ಕ್ರಮಶಾತ್ಪಾದಫಲೋ ಭವೇತ್ ।**
**ವಿಪರ್ಯಯೇಣ ವೇಧಸ್ಥೋ ಪಾಪೋಽಪಿ ಶುಭಕೃತ್ಸ್ಮೃತಃ ॥ ೫೮ ॥**

**ಚನ್ದ್ರಾದ್ದ್ವಾದಶಗಃ ಸೂರ್ಯಃ ದ್ವಿತೀಯೋ ವಾ ಭಯಪ್ರದಃ ।**
**ದ್ವಾದಶೇಽಥ ದ್ವಿತೀಯೇ ಚ ಭೌಮೇ ದಾಹಮವಾಪ್ನುಯಾತ್ ॥ ೫೯ ॥**

**ದ್ವಾದಶೇ ವಾ ದ್ವಿತೀಯೇ ವಾ ಸೌರೇ ಮರಣದಾ ಭವೇತ್ ।**
**ಪಾಪಮಧ್ಯಗತೇ ಚನ್ದ್ರೇ ಧ್ರುವಂ ಮರಣದಾ ಭವೇತ್ ॥ ೬೦ ॥**

**ಏಕಸ್ಮಿಂಸ್ತು ಯದಾ ಕೇನ್ದ್ರೇ ಚಂದ್ರಃ ಸಮ್ಯಗ್ವ್ಯವಸ್ಥಿತಃ ।**
**ಕೇನ್ದ್ರತ್ರಯಮಥಾನ್ಯತ್ಸ್ಯಾದ್ಯುಕ್ತಂ ಸೂರ್ಯಾರಸೂರ್ಯಜೈಃ ॥ ೬೧ ॥**

**ತದಾ ಕರ್ತುರ್ವಿನಾಶಾಯ ಪ್ರತಿಷ್ಠಾ ಸ್ಯಾನ್ನರಾಧಿಪ ।**
**ಚಂದ್ರೇ ಸಾರ್ಕೇ ವಿನಾಶಾಯ ಭೌಮೇ ದಾಹಮವಾಪ್ನುಯಾತ್ ॥ ೬೨ ॥**

---

ಜನ್ಮರಾಶಿಗಿಂತ ನಾಲ್ಕನೆಯ ಮತ್ತು ಎರಡನೆಯ ರಾಶಿಯಲ್ಲಿರುವ ಚಂದ್ರನಿಗೆ ಆ ರೀತಿಯಾದ ವೇಧವುಂಟಾದಲ್ಲಿ ಅದರ ಫಲವು ನಾಲ್ಕನೇ ಒಂದು ಭಾಗವಾಗುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ವೇಧಹೊಂದಿರುವ ಪಾಪಗ್ರಹವೂ ಶುಭಫಲಕ್ಕೆ ಕಾರಣವಾಗುತ್ತದೆ.

೫೯-೬೨. ಪ್ರತಿಷ್ಠಾಕಾಲದಲ್ಲಿ ಚಂದ್ರನಿಗಿಂತ ಹನ್ನೆರಡನೆ ಸ್ಥಾನದಲ್ಲಿಯಾಗಲಿ, ಎರಡನೆಯಸ್ಥಾನದಲ್ಲಿಯಾಗಲಿ, ಸೂರ್ಯನಿದ್ದಲ್ಲಿ ಅಂತಹ ಪ್ರತಿಷ್ಠೆಯು ಭಯಪ್ರದವೇ ಆಗುತ್ತದೆ ಅಂಗಾರಕನು ಚಂದ್ರನಿಗಿಂತಲೂ, ಹನ್ನೆರಡು, ಎರಡು, ಈ ಸ್ಥಾನಗಳಲ್ಲಿ ಯಾವುದಾದರೊಂದು ಸ್ಥಾನದಲ್ಲಿದ್ದರೂ ಅಗ್ನಿಭಯವುಂಟಾಗುತ್ತದೆ. ಶನಿಯು ಹನ್ನೆರಡನೆ ಅಥವಾ ಎರಡನೆಯ ಸ್ಥಾನದಲ್ಲಿದ್ದರೂ ಕರ್ತೃವಿಗೆ ಮರಣವುಂಟಾಗುತ್ತದೆ. ಚಂದ್ರನು ಪಾಪಗ್ರಹಗಳ ಮಧ್ಯದಲ್ಲಿದ್ದರೂ, ಕರ್ತೃವಿಗೆ ಮರಣವುಂಟಾಗುವುದು ನಿಶ್ಚಿತ. ಯಾವುದಾದರೊಂದು ಕೇಂದ್ರದಲ್ಲಿ ಚಂದ್ರನು ಸುವ್ಯವಸ್ಥಿತನಾಗಿರುವಾಗ ಇತರ ಮೂರು ಕೇಂದ್ರಗಳಲ್ಲಿಯೂ, ಸೂರ್ಯ, ಅಂಗಾರಕ, ಶನಿ ಇವರುಗಳಿದ್ದಲ್ಲಿ ಅಂತಹ ಪ್ರತಿಷ್ಠೆಯೂ ಕರ್ತೃವಿನ ನಾಶಕ್ಕೇ ಕಾರಣವಾಗುತ್ತದೆ. ಚಂದ್ರನು ಸೂರ್ಯನೊಡನೆ ಕೂಡಿದ್ದರೂ ಪ್ರತಿಷ್ಠೆಯು ನಾಶಹೊಂದುತ್ತದೆ. ಅಂಗಾರಕನು ಸೂರ್ಯನಿಂದ ಕೂಡಿದ್ದಲ್ಲಿ ಅಗ್ನಿಯಿಂದ ದಾಹವುಂಟಾಗುತ್ತದೆ

ಸಸೌರೇ ಮೃತ್ಯುದಾ ಜ್ಞೇಯಾ ಸರಾಹೌ ನಿಧನಪ್ರದಾ ।
ನಕ್ಷತ್ರೇ ಸೋಪರಾಗೇತು ಕರ್ತುರ್ಮರಣದಾಯಿನೀ ॥ ೬೩ ॥

ಪರಿವೇಷ್ಟೇ ತಥಾ ಚಂದ್ರೇ ಮರಣಂ ತು ಪ್ರಯಚ್ಛತಿ ।
ಸಾರ್ಪಾಂತ್ಯಪಾದಗೇ ಚಂದ್ರೇ ತಥಾ ಜ್ಯೇಷ್ಠಾಂತ್ಯಪಾದಗೇ ॥ ೬೪ ॥

ಪೌಷ್ಣಾಂತ್ಯಪಾದಗೇ ಚೈವ ಕರ್ತುರ್ನಿಧನಕಾರಿಣೀ ।
ಯಸ್ಮಿನ್ ಋಕ್ಷೇ ಯದೇವೋಕ್ತಂ ಫಲಂ ಭೂಪತಿಸತ್ತಮ ॥ ೬೫ ॥

ತದೇವೇಹ ಫಲಂ ಪ್ರೋಕ್ತಂ ತನ್ಮುಹೂರ್ತೇಽಪಿ ಯಾದವ ।
ದಿನಮಧ್ಯಗತೇ ಸೂರ್ಯೇ ಮುಹೂರ್ತೇಽಭಿಜಿತೇಽಷ್ಟಮೇ ॥ ೬೬ ॥

ಸರ್ವಕಾಮಸಮೃದ್ಧಾ ಸ್ಯಾತ್ಸರ್ವೋಪದ್ರವವರ್ಜಿತಾ ।
ಗುರಾವಸ್ತಮಯಂ ಪ್ರಾಪ್ತೇ ನೀಚಸ್ಥೇ ಕರ್ತೃಘಾತಿನೀ ॥ ೬೭ ॥

---

೬೩–೬೬ ಅಂಗಾರಕನು ಶನಿಯೊಡನೆ ಕೂಡಿದ್ದರೂ, ರಾಹುವಿನೊಡನೆ ಕೂಡಿದ್ದರೂ ಅಂತಹ ಪ್ರತಿಷ್ಠೆಯು ಕರ್ತೃವಿಗೆ ಅಪಮೃತ್ಯು ಹಾಗೂ ಮರಣವನ್ನೂ ಉಂಟುಮಾಡುತ್ತದೆ. ನಕ್ಷತ್ರವು ಗ್ರಹಣದಲ್ಲಿ ಸೇರಿದ್ದಲ್ಲಿಯೂ ಕರ್ತೃವಿಗೆ ಹಾನಿಕರವಾಗುತ್ತದೆ. ಚಂದ್ರನು ಪರಿವೇಷದಿಂದ ಕೂಡಿದ್ದಲ್ಲಿಯೂ, ಕರ್ತೃವಿಗೆ ಮರಣ ಉಂಟಾಗುತ್ತದೆ. ಚಂದ್ರನು ಆಶ್ಲೇಷಾನಕ್ಷತ್ರದ ಅಂತ್ಯಪಾದದಲ್ಲಿ ಅಥವಾ ಜ್ಯೇಷ್ಠಾ ನಕ್ಷತ್ರದ ಅಂತ್ಯಪಾದದಲ್ಲಿ ಅಥವಾ ರೇವತಿಯ ಅಂತ್ಯಪಾದದಲ್ಲಿ ಇದ್ದಲ್ಲಿ ಕರ್ತೃವಿಗೆ ನಾಶವುಂಟಾಗುತ್ತದೆ. ಹಿಂದೆ ಯಾವ ಯಾವ ನಕ್ಷತ್ರಕ್ಕೆ ಯಾವ ಯಾವ ಫಲವನ್ನು ಹೇಳಿರುವೆವೋ ಆಯಾಯ ಫಲವೇ ಅಂತಹ ನಕ್ಷತ್ರದಿಂದ ಕೂಡಿದ ಮುಹೂರ್ತಗಳಿಗೂ ಉಂಟಾಗುತ್ತದೆ ಎಂದು ತಿಳಿಯಬೇಕು. ಸೂರ್ಯನು ದಿನಮಧ್ಯವನ್ನು ಹೊಂದಿರುವಾಗ, ಅಭಿಜಿತ್ತೆಂಬ ಎಂಟನೇ ಮುಹೂರ್ತದಲ್ಲಿ ಕೂಡಿದ ಪ್ರತಿಷ್ಠೆಯು ಸಕಲ ವಿಧವಾದ ಇಷ್ಟಾರ್ಥಗಳಿಗೂ ಸಾಧಕವಾಗುತ್ತದೆ ಆ ಕಾಲದ ಪ್ರತಿಷ್ಠೆಗೆ ಯಾವ ವಿಧವಾದ ಉಪದ್ರವವೂ ಇರುವುದಿಲ್ಲ.

೬೭–೭೧ ನೀಚಸ್ಥಾನದಲ್ಲಿರುವ ಗುರುವು ಅಸ್ತಂಗತನಾಗಿದ್ದಲ್ಲಿ ಆ ಕಾಲದ ಪ್ರತಿಷ್ಠೆಯೂ ಕರ್ತೃವಿಗೆ ಹಾನಿಕರವಾಗುತ್ತದೆ. ಆದುದರಿಂದ ಗುರುವು ಬಲಿಷ್ಠ

ತಸ್ಮಾದ್ಬಲಸ್ಥೇ ಜೀವೇ ತು ಧನಧಾನ್ಯಕರೀ ಭವೇತ್ ।
ಬ್ರಾಹ್ಮೇ ರಾಶ್ಯೇ ದೃಢಾ ಜ್ಞೇಯಾ ಪ್ರಾಜಾಪತ್ಯೇ ಸುಖಾವಹಾ ॥ ೭೮ ॥

ಸ್ವರ್ಗಲೋಕಪ್ರದಾ ಸ್ವರ್ಗ್ಯೇ ಚಕ್ರೇ ಚಕ್ರಪ್ರವರ್ತಿನೀ ।
ವಾನಸ್ಪತ್ಯೇ ತು ವರದಾ ಹ್ಯಾನ್ನೇ ಚಾನ್ನವಿವರ್ಧಿನೀ ॥ ೭೯ ॥

ವಾಮೇ ಭವತಿ ವಸ್ತ್ರಾಢ್ಯಾ ಕಾಲೇ ಮೃತ್ಯುಪ್ರದಾಯಿನೀ ।
ಆಗ್ನೇಯೇ ದಾಹಮಾಪ್ನೋತಿ ಕ್ಲೇದಮಬ್ದೈವತೇ ತಥಾ ॥ ೨೦ ॥

ಸೌರೇ ಭವತಿ ಸುಸ್ಥಿತಾ ಚಾನ್ದ್ರೇ ಚ ವರದಾ ತಥಾ ।
ನಶ್ಯತೇ ಶಂಭುದೈವತ್ಯೇ ಗೋದೇವೇ ವೃದ್ಧಿಮಾಪ್ನುಯಾತ್ ॥ ೨೧ ॥

ವೈಷ್ಣವೇ ಪುಷ್ಟಿದಾ ಪ್ರೋಕ್ತಾ ತಥಾ ಭವತಿ ಪೂಜಿತಾ ।
ಕೌಮಾರೇ ವೃದ್ಧಿಮಾಪ್ನೋತಿ ಪಿತ್ರ್ಯೇ ನಾಶಂ ತಥೈವ ಚ ॥ ೨೨ ॥

ವಾರುಣೇ ರೋಗದಾ ಪ್ರೋಕ್ತಾ ಶುಭಾ ಚಾನನ್ತದೈವತೇ ।
ಚಲಾ ಪವನದೈವತ್ಯೇ ಯಾಮ್ಯೇ ಮೃತ್ಯುಪ್ರದಾ ಭವೇತ್ ॥ ೨೩ ॥

---

ನಾಗಿರುವಾಗಲೇ ಪ್ರತಿಷ್ಠೆಯು ಧನಧಾನ್ಯಾಸಮೃದ್ಧಿಕರವಾಗುತ್ತದೆ. ಬ್ರಾಹ್ಮ ರಾಶಿಯಲ್ಲಿ ಮಾಡಿದ ಪ್ರತಿಷ್ಠೆಯು ದೃಢವಾಗಿ ನಿಲ್ಲುತ್ತದೆ. ಪ್ರಾಜಾಪತ್ಯದಲ್ಲಿ ಸುಖಕರವಾಗುತ್ತದೆ. ಸ್ವರ್ಗದಲ್ಲಿ ಸ್ವರ್ಗಸುಖಕ್ಕೆ ಸಾಧಕವಾಗುತ್ತದೆ ಚಕ್ರದಲ್ಲಿ ಚಕ್ರದಂತೆ ಚಲನಶೀಲವಾಗಿರುತ್ತದೆ ವಾನಸ್ಪತ್ಯದಲ್ಲಿ ವರಪ್ರದವಾಗಿರುತ್ತದೆ. ಅನ್ನದಲ್ಲಿ ಅನ್ನವೃದ್ಧಿಪ್ರದವಾಗಿರುತ್ತದೆ. ವಾಮದಲ್ಲಿ ವಸ್ತ್ರಸಮೃದ್ಧಿಗೆ ಕಾರಣವಾಗಿರುತ್ತದೆ. ಕಾಲದಲ್ಲಿ ಮೃತ್ಯುಪ್ರದವಾಗುತ್ತದೆ. ಆಗ್ನೇಯದಲ್ಲಿ ದಾಹಹೊಂದುತ್ತದೆ. ಅಬ್ದೈವತದಲ್ಲಿ ನೀರಿನಿಂದ ತೋಯ್ದುಹೋಗುತ್ತದೆ. ಸೌರದಲ್ಲಿ ಸಮೃದ್ಧಿ ಹೊಂದುತ್ತದೆ. ಚಾಂದ್ರದಲ್ಲಿ ವರಪ್ರದವಾಗುತ್ತದೆ. ಶಂಭುದೈವತ್ಯದಲ್ಲಿ ನಾಶ ಹೊಂದುತ್ತದೆ ಗೋದೇವದಲ್ಲಿ ವೃದ್ಧಿಹೊಂದುತ್ತದೆ.

೭೨–೭೬. ವೈಷ್ಣವದಲ್ಲಿ ಪ್ರತಿಷ್ಠೆಯು ಪುಷ್ಟಿಪ್ರದವಾಗುತ್ತದೆ. ಲೋಕಪೂಜ್ಯವೂ ಆಗುತ್ತದೆ. ಕೌಮಾರದಲ್ಲಿ ವೃದ್ಧಿಹೊಂದುತ್ತದೆ. ಪಿತ್ರ್ಯದಲ್ಲಿ ನಾಶ ಹೊಂದುತ್ತದೆ. ವಾರುಣದಲ್ಲಿ ರೋಗಪ್ರದವಾಗುತ್ತದೆ ಅನಂತದೈವತದಲ್ಲಿ ಶುಭಕರವಾಗುತ್ತದೆ. ಪವನದೈವತ್ಯದಲ್ಲಿ ಚಂಚಲವಾಗುತ್ತದೆ. ಯಾಮ್ಯದಲ್ಲಿ ಮೃತ್ಯುಪ್ರದವಾಗುತ್ತದೆ ವಾಗ್ದೈವತದಲ್ಲಿ ಯಾವಾಗಲೂ ರಮ್ಯವಾಗಿರುತ್ತದೆ.

ವಾಗ್ದೈವತೇ ಸದಾ ಕಾನ್ತಾ ಶ್ರೀರೋಧೇ ಶ್ರೀಯುತಾ ಭವೇತ್ ।
ಧನದೇ ಧನಸಂಯುಕ್ತಾ ಸುದೃಢಾ ಶೈಲದೈವತೇ ॥ ೭೪ ॥

ಪೃಥ್ವೀ ದೇವೀ ದೃಢಾ ಸೌಮ್ಯಾ ಶುಭಾ ಸ್ಯಾದ್ವೇದದೈವತೇ ।
ಪೌರುಷೇ ತು ತಥಾ ಶೌಚೇ ಬಹುಧರ್ಮವಿವರ್ಧಿನೀ ॥ ೭೫ ॥

ಕರ್ತುಃ ಸುಖಾವಹಾ ಚೈವ ತಥಾ ಚಾಜ್ಞಾಯುತಾ ಭವೇತ್ ।
ದೃಢಾ ಧನಯುತಾ ಸ್ಫೀತಾ ತಥಾ ಪ್ರತಿಪದಿ ಸ್ಮೃತಾ ॥ ೭೬ ॥

ದ್ವಿತೀಯಾಯಾಂ ಧನೋಪೇತಾ ತೃತೀಯಾಯಾಂ ವರಪ್ರದಾ ।
ಚತುರ್ಥ್ಯಾಂ ನಾಶಮಾಪ್ನೋತಿ ಯಮಸ್ಯ ಸ್ಯಾತ್ಸುಖಾವಹಾ ॥ ೭೭ ॥

ವಿನಾಯಕಸ್ಯ ದೇವಸ್ಯ ತಥಾ ತತ್ರ ಹಿತಪ್ರದಾ ।
ಪಂಚಮ್ಯಾಂ ಶ್ರೀಯುತಾ ಕಾನ್ತಾ ವರದಾ ಚ ತಥಾ ಭವೇತ್ ॥ ೭೮ ॥

ಷಷ್ಠ್ಯಾಂ ಲಕ್ಷ್ಮೀಯುತಾ ನಿತ್ಯಂ ಸಪ್ತಮ್ಯಾಂ ರೋಗನಾಶಿನೀ ।
ಅಷ್ಟಮ್ಯಾಂ ಧಾನ್ಯಬಹುಳಾ ನವಮ್ಯಾಂ ತು ವಿನಶ್ಯತಿ ॥ ೭೯ ॥

---

ಶ್ರೀರೋಧದಲ್ಲಿ ಸಂಪತ್ತಿನಿಂದ ಕೂಡಿರುತ್ತದೆ. ಧನದದಲ್ಲಿ ಧನದಿಂದ ಕೂಡಿರುತ್ತದೆ. ಶೈಲದೈವತದಲ್ಲಿ ದೃಢವಾಗಿರುತ್ತದೆ ಪೃಥ್ವೀದೈವತದಲ್ಲಿ, ದೃಢವಾಗಿಯೂ, ಸೌಮ್ಯವಾಗಿಯೂ, ಇರುತ್ತದೆ. ವೇದದೈವತದಲ್ಲಿ ಶುಭಕರವಾಗಿರುತ್ತದೆ. ಪೌರುಷ ಶೌಚಗಳಲ್ಲಿ ಬಹಳ ಮಟ್ಟಿಗೂ ಧರ್ಮವೃದ್ಧಿಗೆ ಕಾರಣವಾಗುತ್ತದೆ. ಕರ್ತೃವಿಗೂ ಸುಖಕರವಾಗಿದ್ದು ಆಜ್ಞಾಕಾರಿಣಿಯೂ ಆಗಿರುತ್ತದೆ. ಪ್ರತಿಪತ್ತಿನಲ್ಲಿ ದೃಢವಾಗಿಯೂ, ಧನಾಢ್ಯವಾಗಿಯೂ ಅಭ್ಯುದಯದಿಂದ ಕೂಡಿಯೂ ಇರುತ್ತದೆ.

೭೭–೮೦. ದ್ವಿತೀಯೆಯಲ್ಲಿ ಧನದಿಂದ ಕೂಡಿಯೂ, ತೃತೀಯೆಯಲ್ಲಿ ವರಪ್ರದವಾಗಿಯೂ ಚತುರ್ಥಿಯಲ್ಲಿ ನಾಶಹೊಂದುತಕ್ಕದ್ದಾಗಿಯೂ ಆಗುತ್ತದೆ. ಯಮನಿಗೂ ಸುಖಕರವಾಗುತ್ತದೆ. ಆದರೆ ವಿನಾಯಕ ದೇವತೆಯ ಪ್ರತಿಷ್ಠೆಯು ಮಾತ್ರ ಆಗಲೂ ಹಿತಕರವಾಗಿರುತ್ತದೆ. ಪಂಚಮಿಯಲ್ಲಿ ಸಂಪದ್ಯುಕ್ತವಾಗಿಯೂ, ರಮ್ಯವಾಗಿಯೂ, ವರಪ್ರದವಾಗಿಯೂ ಆಗುತ್ತದೆ. ಷಷ್ಠಿಯಲ್ಲಿ ಸಂಪದ್ಯುತವಾಗಿಯೂ, ಸಪ್ತಮಿಯಲ್ಲಿ ರೋಗನಾಶಕವಾಗಿಯೂ, ಅಷ್ಟಮಿಯಲ್ಲಿ ಧಾನ್ಯಸಮೃದ್ಧಿಯಿಂದ ಕೂಡಿಯೂ, ನವಮಿಯಲ್ಲಿ ವಿನಾಶೋನ್ಮುಖವಾಗಿಯೂ ಆಗುತ್ತದೆ.

ಭದ್ರಕಾಲ್ಯಾಃ ಕೃತಾ ತತ್ರ ಕರ್ತುರ್ಭವತಿ ಪುಷ್ಟಿದಾ ।
ಧರ್ಮವೃದ್ಧಿಕರೀ ಜ್ಞೇಯಾ ದಶಮ್ಯಾಂ ತು ತಥಾ ಕೃತಾ ॥ ೮೦ ॥

ಏಕಾದಶ್ಯಾಂ ತಿಥೌ ಯುಕ್ತಾ ದ್ವಾದಶ್ಯಾಂ ಸರ್ವಕಾಮದಾ ।
ತ್ರಯೋದಶ್ಯಾಂ ತಥಾ ಜ್ಞೇಯಾ ಚತುರ್ದಶ್ಯಾಂ ವಿನಶ್ಯತಿ ॥ ೮೧ ॥

ಕೃಷ್ಣಪಕ್ಷೇ ಪಂಚದಶ್ಯಾಂ ಕರ್ತುಃ ಕ್ಷಯಕರೀ ಭವೇತ್ ।
ಪಂಚದಶ್ಯಾಂ ತಥಾ ಶುಕ್ಲೇ ಸರ್ವಕಾಮಕರೀ ಭವೇತ್ ॥ ೮೨ ॥

ಊನರಾತ್ರೇ ಮಹಾರಾಜ ಕರ್ತುರ್ಮರಣದಾ ಭವೇತ್ ।
ಬೃಹತ್ಸ್ಪೃಶಾ ಚ ವಿಜ್ಞೇಯಾ ತಥಾ ದೋಷವತೀ ನೃಪ ॥ ೮೩ ॥

ದಿವ್ಯಾನ್ತರಿಕ್ಷಭೌಮೇನ ಚೋತ್ಪಾತೇನ ತು ಯಾ ಯುತಾ ।
ಕರ್ತವ್ಯಾ ವಿಪ್ರಯೋಗಾಂತಾ ಪ್ರತಿಷ್ಠಾ ತು ಕೃತಾ ಭವೇತ್ ॥ ೮೪ ॥

---

ಇಂತಹ ನವಮಿಯಲ್ಲಿಯೂ ಭದ್ರಕಾಲಿಯ ಪ್ರತಿಷ್ಠೆಯು ಕರ್ತೃವಿಗೆ ಪುಷ್ಟಿಕರವಾಗಿಯೇ ಆಗುತ್ತದೆ. ದಶಮಿಯಲ್ಲಿ ಮಾಡಿದ ಪ್ರತಿಷ್ಠೆಯು ಧರ್ಮಾಭಿವೃದ್ಧಿಗೆ ಕಾರಣವಾಗುತ್ತದೆ ಎಂದು ತಿಳಿಯಬೇಕು. ಹಾಗೆಯೇ ಏಕಾದಶಿಯಲ್ಲಿಯೂ ಆಗುತ್ತದೆ. ದ್ವಾದಶಿಯಲ್ಲಿ ಎಲ್ಲಾ ಮನೋರಥಗಳಿಗೂ ಸಿದ್ಧಿಕರವಾಗುತ್ತದೆ. ತ್ರಯೋದಶಿಯಲ್ಲಿಯೂ ಹಾಗೆಯೇ, ಚತುರ್ದಶಿಯಲ್ಲಿ ವಿನಾಶಹೊಂದುತ್ತದೆ. ಅಮಾವಾಸ್ಯೆಯಲ್ಲಿ ಕರ್ತೃವಿಗೆ ಕ್ಷಯಕರವಾಗುತ್ತದೆ. ಶುಕ್ಲಪಕ್ಷದ ಪೂರ್ಣಿಮೆಯಲ್ಲಿ ಸರ್ವಮನೋರಥ ಸಂಪಾದಕವಾಗುತ್ತದೆ,

೮೩-೮೪. ಅಂತಹ ಪೌರ್ಣಮಿಯೂ ಸಹ ರಾತ್ರಿಯ ಪ್ರಮಾಣವು ಕಡಿಮೆಯಾಗಿದ್ದಲ್ಲಿ, ಹೆಚ್ಚಾಗಿದ್ದಲ್ಲಿಯೂ ಕರ್ತೃವಿಗೆ ಹಾನಿಕರವಾಗಿರುತ್ತದೆಂದೇ ತಿಳಿಯಬೇಕು. ಯಾವ ರಾತ್ರಿಯಲ್ಲಿ ದಿವ್ಯ ಅಂತರಿಕ್ಷ, ಭೌಮಗಳೆಂಬ ಉತ್ಪಾತಗಳುಂಟಾಗುವುವೋ ಅಂತಹ ರಾತ್ರಿಯು ಕಳೆದನಂತರ ಪ್ರತಿಷ್ಠೆಯನ್ನು ಮಾಡಬಹುದು ತಿಥಿ. ಹಾನಿ ಇದ್ದಲ್ಲಿ ಪ್ರತಿಷ್ಠೆಯೂ. ಕ್ಷಯಿಸುತ್ತದೆ. ತಿಥಿವೃದ್ಧಿ ಇದ್ದಲ್ಲಿವೃದ್ಧಿಕರವಾಗುತ್ತದೆ

ತಿಥಿಹಾನೌ ಕ್ಷಯಂ ಪ್ರೋಕ್ತಂ ವೃದ್ಧೌ ವೃದ್ಧಿಃ ಪ್ರಕೀರ್ತಿತಾ ।
ಶಕುನೌ ದೋಷಜನನೀ ಚತುಷ್ಪದಿ ತಥಾವಹಾ ॥ ೮೫ ॥

ನಾಗೇ ಭವತಿ ಶೂನ್ಯಾ ಚ ಕಿಂಸ್ತುಘ್ನೇ ತು ಶುಭಪ್ರದಾ ।
ಬವೇ ದೃಢಾ ತಥಾ ಜ್ಞೇಯಾ ಬಾಲವೇ ತು ಶುಭಪ್ರದಾ ॥ ೮೬ ॥

ಕೌಲವೇ ವರದಾ ಪ್ರೋಕ್ತಾ ತೈತುಲೇ ರೋಗನಾಶಿನೀ ।
ಗರಾದೌ ರೋಗಜನನೀ ತಥಾ ವಣಿಜಿ ಪುಷ್ಟಿದಾ ॥ ೮೭ ॥

ವಿಷ್ಟೌ ಮರಣದಾ ಕರ್ತುಃ ಆತ್ಮದೋಷವತೀ ತಥಾ ।
ಜನ್ಮರಾಶ್ಯುದಯೇ ಕೇತೌ ಕ್ಷಿಪ್ರಂ ನಾಶವತೀ ಭವೇತ್ ॥ ೮೮ ॥

ದ್ವಿತೀಯೇ ಧನನಾಶಾಯ ತೃತೀಯೇ ಕರ್ತೃವೃದ್ಧಿದಾ ।
ಚತುರ್ಥೇ ಗೃಹನಾಶಾಯ ಪಂಚಮೇ ವ್ಯಾಧಿದಾ ಭವೇತ್ ॥ ೮೯ ॥

ಷಷ್ಠೇ ಶತ್ರುವಿನಾಶಾಯ ಸಪ್ತಮೇ ಧನನಾಶನೀ ।
ಅಷ್ಟಮೇ ಮೃತ್ಯುದಾ ಜ್ಞೇಯಾ ನವಮೇ ಧರ್ಮನಾಶನೀ ॥ ೯೦ ॥

---

೮೫-೯೦. ಶಕುನಿ ಕರಣದಲ್ಲಿ ಪ್ರತಿಷ್ಠೆಯು ದೋಷಕಾರಣವಾಗುತ್ತದೆ. ಚತುಷ್ಪಾತ್ ಎಂಬ ಕರಣದಲ್ಲಿಯೂ ಹಾಗೆಯೇ, ನಾಗದಲ್ಲಿ ಶೂನ್ಯವಾಗಿಯೂ ಕಿಂಸ್ತುಘ್ನದಲ್ಲಿ ಶುಭಪ್ರದವಾಗಿಯೂ, ಬವದಲ್ಲಿ ದೃಢವಾಗಿಯೂ, ಬಾಲವದಲ್ಲಿ ಶುಭದಾಯಕವಾಗಿಯೂ, ಕೌಲವದಲ್ಲಿ ವರಪ್ರದವಾಗಿಯೂ, ತೈತುಲದಲ್ಲಿ ರೋಗ ನಾಶಕವಾಗಿಯೂ, ಗರಾದಿಗಳಲ್ಲಿ ರೋಗಜನಕವಾಗಿಯೂ, ವಣಿಜದಲ್ಲಿ ಪುಷ್ಟಿಪ್ರದ ವಾಗಿಯೂ, ವಿಷ್ಟಿಯಲ್ಲಿ ಕರ್ತೃವಿಗೆ ಮರಣಪ್ರದವಾಗಿಯೂ, ದೋಷದೂಷಿತ ವಾಗಿಯೂ, ಆಗುತ್ತದೆ. ಪ್ರತಿಷ್ಠಾಕಾಲದಲ್ಲಿ ಕೇತುವು ಜನ್ಮರಾಶಿಯಲ್ಲಿ ಉದಯ ಹೊಂದಿದ್ದಲ್ಲಿ ಆ ಪ್ರತಿಷ್ಠೆಯು ಜಾಗ್ರತೆಯಾಗಿ ನಾಶಹೊಂದುತ್ತದೆ. ದ್ವಿತೀಯ ರಾಶಿಯಲ್ಲಿ ಧನನಾಶಪ್ರದವಾಗಿಯೂ, ತೃತೀಯದಲ್ಲಿ ಕರ್ತೃವಿಗೆ ವೃದ್ಧಿಪ್ರದ ವಾಗಿಯೂ, ಚತುರ್ಥದಲ್ಲಿ ಗೃಹನಾಶಕ್ಕೆ ಕಾರಣವಾಗಿಯೂ, ಪಂಚಮದಲ್ಲಿ ವ್ಯಾಧಿಪ್ರದವಾಗಿಯೂ, ಷಷ್ಠದಲ್ಲಿ ಶತ್ರುವಿನಾಶಕ್ಕೆ ಕಾರಣವಾಗಿಯೂ, ಸಪ್ತಮದಲ್ಲಿ ಧನನಾಶಕವಾಗಿಯೂ ಅಷ್ಟಮದಲ್ಲಿ ಮೃತ್ಯುಪ್ರದವಾಗಿಯೂ, ನವಮದಲ್ಲಿ ಧರ್ಮ ನಾಶಕವಾಗಿಯೂ, ಆ ಪ್ರತಿಷ್ಠೆಯು ಆಗುತ್ತದೆ.

ದಶಮೇ ಕರ್ಮಣಾಂ ವೃದ್ಧ್ಯೈ ಲಾಭೇ ಲಾಭಕರೀ ಭವೇತ್ ।
ದ್ವಾದಶೇ ತು ವ್ಯಯಾಯ ಸ್ಯಾತ್ಪ್ರತಿಷ್ಠಾ ತು ತಥಾ ಕೃತಾ ॥ ೯೧ ॥

ಜನ್ಮಲಗ್ನೋದಯೇ ಜ್ಯೇಷ್ಠಾ ಧನಧಾನ್ಯವತೀ ಭವೇತ್ ।
ಜನ್ಮರಾಶಿಫಲಂ ಸರ್ವಂ ಶೇಷಸ್ಥಾನೇ ತು ನಿರ್ದಿಶೇತ್ ॥ ೯೨ ॥

ಮೇಷೋದಯೇ ಕೃತಾ ಕ್ಷಿಪ್ರಂ ನಾಶಮಾಪ್ನೋತಿ ಪಾರ್ಥಿವ ।
ವೃಷೋದಯೇ ಸ್ಥಿರಾ ಪ್ರೋಕ್ತಾ ಧನಧಾನ್ಯವತೀ ತಥಾ ॥ ೯೩ ॥

ಲೋಕಕಾನ್ತಾ ಚ ಮಿಥುನೇ ಬಹುಕಲ್ಯಾಣಕಾರಿಣೀ ।
ಕುಳೀರೇ ಕ್ಷಿಪ್ರನಾಶಃ ಸ್ಯಾತ್ಸಿಹ್ಮೇ ವಸುದೃಢಾ ಭವೇತ್ ॥ ೯೪ ॥

ಕನ್ಯಾಯಾಂ ಲೋಕಕಾನ್ತಾ ಸ್ಯಾತ್ತುಲೇ ಭವತಿ ಚಾಸ್ಥಿರಾ ।
ವೃಶ್ಚಿಕೇ ತು ಸ್ಥಿರಾ ಪ್ರೋಕ್ತಾ ಕಲ್ಯಾಣಾಯ ಧನುರ್ಧರೇ ॥ ೯೫ ॥

ಮಕರೇ ಕ್ಷಿಪ್ರನಾಶಾ ಸ್ಯಾತ್ಕುಂಭಲಗ್ನೇ ದೃಢಾ ಭವೇತ್ ।
ಮೀನೇ ಪುಣ್ಯವಹಾ ಕರ್ತುಃ ಕಲ್ಪಶೂನ್ಯಾ ತಥಾ ಭವೇತ್ ॥ ೯೬ ॥

---

೯೧-೯೬. ದಶಮಸ್ಥಾನದಲ್ಲಿ ಕರ್ಮವೃದ್ಧಿಗೆ ಕಾರಣವಾಗಿಯೂ, ಲಾಭದಲ್ಲಿ ಲಾಭಕರವಾಗಿಯೂ, ದ್ವಾದಶಸ್ಥಾನದಲ್ಲಿ ವ್ಯಯವೂ ಆ ಪ್ರತಿಷ್ಠೆಗೆ ಫಲವಾಗುತ್ತದೆ. ಜನ್ಮಲಗ್ನೋದಯಕಾಲದಲ್ಲಿ ಜ್ಯೇಷ್ಠಾನಕ್ಷತ್ರವು ಧನಧಾನ್ಯಕಾರಿಣಿಯಾಗುತ್ತದೆ. ಇತರ ಸ್ಥಾನದಲ್ಲಿ ಆದರೆ, ಜನ್ಮರಾಶಿಫಲವೆಲ್ಲಾ ಅನ್ವಯಿಸುತ್ತದೆ. ಮೇಷಲಗ್ನದಲ್ಲಿ ಮಾಡಿದ ಪ್ರತಿಷ್ಠೆಯು ಜಾಗ್ರತೆಯಾಗಿ ನಾಶಹೊಂದುತ್ತದೆ. ವೃಷಭದಲ್ಲಿ ಸ್ಥಿರವಾಗಿಯೂ, ಧನಧಾನ್ಯಸಮೃದ್ಧಿಯುಳ್ಳದ್ದಾಗಿಯೂ ಆಗುತ್ತದೆ. ಮಿಥುನದಲ್ಲಿ ಲೋಕಕ್ಕೆ ಹಿತಕರವಾಗಿಯೂ, ಮಂಗಳಪ್ರದವಾಗಿಯೂ ಆಗುತ್ತದೆ. ಕರ್ಕಾಟಕದಲ್ಲಿ ಜಾಗ್ರತೆಯಾಗಿ ನಾಶಹೊಂದುತ್ತದೆ. ಸಿಂಹದಲ್ಲಿ ಧನಸಮೃದ್ಧಿಯಿಂದ ದೃಢವಾಗಿರುತ್ತದೆ. ಕನ್ಯಾಲಗ್ನದಲ್ಲಿ ಲೋಕಹಿತಕರವಾಗಿಯೂ, ತುಲಾಲಗ್ನದಲ್ಲಿ ನಶ್ವರವಾಗಿಯೂ, ವೃಶ್ಚಿಕದಲ್ಲಿ ಸ್ಥಿರವಾಗಿಯೂ, ಧನುಸ್ಸಿನಲ್ಲಿ ಮಂಗಳಕರವಾಗಿಯೂ ಆಗುತ್ತದೆ. ಮಕರಲಗ್ನದಲ್ಲಿ ಜಾಗ್ರತೆಯಾಗಿ ನಾಶಹೊಂದತಕ್ಕದ್ದಾಗಿಯೂ, ಕುಂಭಲಗ್ನದಲ್ಲಿ ದೃಢವಾಗಿಯೂ, ಮೀನಲಗ್ನದಲ್ಲಿ ಕರ್ತೃವಿಗೆ ಪುಣ್ಯಕರವಾಗಿಯೂ, ಬಹು ದಿವಸಗಳ ವರೆಗೆ ಪರಿಪೂರ್ಣವಾಗಿಯೂ ಇರುತ್ತದೆ

ಉಗ್ರಾ ಸ್ಯಾತ್ಸೂರ್ಯಹೋರಾಯಾಂ ಸೌಮ್ಯಾ ಸೋಮಸ್ಯ ಕೀರ್ತಿತಾ ।
ಪಾಪಗ್ರಹಸ್ಯ ದ್ರೇಕ್ಕಾಣೇ ಕರ್ತುರ್ನಾಶಾಯ ಕೀರ್ತಿತಾ ॥ ೯೭ ॥

ಸೌಮ್ಯಗ್ರಹಸ್ಯ ಸುಶುಭಾ ಕರ್ತುರ್ಭವತಿ ವೃದ್ಧಿದಾ ।
ಫಲಂ ಯದೇವ ಲಗ್ನೇಷು ನವಾಂಶೇಷು ತದೇವ ತು ॥ ೯೮ ॥

ದ್ವಾದಶಾಂಶೇಷು ವಿಜ್ಞೇಯಸ್ತದೇವ ಮನುಜೋತ್ತಮ ।
ಕರ್ತುರ್ನಾಶಾಯ ವಿಜ್ಞೇಯಾ ತ್ರಿಂಶಾಂಶೇ ಭೌಮಸೌರಯೋಃ ॥ ೯೯ ॥

ಸಿತಜೀವೇಂದುಪುತ್ರಾಣಾಂ ಕರ್ತುಃ ಕಲ್ಯಾಣದಾ ಭವೇತ್ ।
ಶುಭೋಽಪ್ಯಂಶೋ ಮಹಾರಾಜ ಲಗ್ನೇ ಪಾಪಫಲೇ ಶುಭಃ ॥ ೧೦೦ ॥

ಲಗ್ನೇ ಶುಭತರೇ ಜ್ಞೇಯಃ ಪಾಪಾಂಶಃ ಪಾಪದೋ ನೃಣಾಂ ।
ಲಗ್ನಸ್ಥೇ ಶಂಕರಾ ಕರ್ತುಃ ಕೃತಾ ಭವತಿ ಭಾಸ್ಕರೇ ॥ ೧೦೧ ॥

---

೯೭–೧೦೦. ಸೂರ್ಯ ಹೋರೆಯಲ್ಲಿ ಮಾಡಿದ ಪ್ರತಿಷ್ಠೆಯು ಉಗ್ರವಾಗುತ್ತದೆ. ಚಂದ್ರಹೋರೆಯಲ್ಲಿ ಸೌಮ್ಯವಾಗಿರುತ್ತದೆ. ಪಾಪಗ್ರಹದ ದ್ರೇಕ್ಕಾಣದಲ್ಲಿ ಮಾಡಿದ ಪ್ರತಿಷ್ಠೆಯು ಕರ್ತೃವಿನ ನಾಶಕ್ಕೆ ಕಾರಣವಾಗುತ್ತದೆ. ಸೌಮ್ಯಗ್ರಹದ ದ್ರೇಕ್ಕಾಣದಲ್ಲಿ ಶುಭಕರವೂ, ಕರ್ತೃವಿಗೆ ವೃದ್ಧಿಕರವೂ ಆಗುತ್ತದೆ. ಲಗ್ನಕ್ಕೆ ಯಾವ ಯಾವ ಫಲಗಳನ್ನು ಹೇಳಲಾಗಿದೆಯೋ, ಆಯಾಯ ನವಾಂಶಕ್ಕೂ ಅದೇ ಫಲವೆಂದು ತಿಳಿಯಬೇಕು. ದ್ವಾದಶಾಂಶಕ್ಕೂ ಅದೇ ಫಲವಾಗುತ್ತದೆ. ಅಂಗಾರಕ, ಶನಿ ಇವರ ತ್ರಿಂಶಾಂಶದಲ್ಲಿ ಮಾಡಿದ ಪ್ರತಿಷ್ಠೆಯು ಕರ್ತೃವಿನ ಹಾನಿಗೆ ಕಾರಣವಾಗುತ್ತದೆ. ಶುಕ್ರ, ಗುರು, ಬುಧ ಇವರ ತ್ರಿಂಶಾಂಶದಲ್ಲಿ ಮಾಡಿದ ಪ್ರತಿಷ್ಠೆಯು ಕರ್ತೃವಿಗೆ ಮಂಗಲಪ್ರದವಾಗುತ್ತದೆ. ಅಶುಭಫಲವಾದ ಲಗ್ನದಲ್ಲಿಯೂ, ಶುಭಕರವಾದ ಅಂಶವು ಶುಭಫಲವನ್ನೇ ಉಂಟುಮಾಡುತ್ತದೆ.

೧೦೧-೧೦೪ ಶುಭಕರವಾದ ಲಗ್ನದಲ್ಲಿಯೂ ಸಹ ಪಾಪಗ್ರಹಾಂಶವು ಮನುಷ್ಯರಿಗೆ ದುಷ್ಫಲವನ್ನೇ ಕೊಡುತ್ತದೆ ಎಂದು ತಿಳಿಯಬೇಕು. ಸೂರ್ಯನು ಲಗ್ನದಲ್ಲಿರುವಾಗ ಮಾಡಿದ ಪ್ರತಿಷ್ಠೆಯು ಕರ್ತೃವಿಗೆ ಸುಖಕರವಾಗಿಯೇ ಆಗುತ್ತದೆ. ಲಗ್ನಕ್ಕಿಂತಲೂ ಅದೇ ಸೂರ್ಯನು ಎರಡನೆಯ ಸ್ಥಾನದಲ್ಲಿದ್ದಲ್ಲಿ ಕರ್ತೃವಿಗೆ ಅರ್ಥ

ದ್ವಿತೀಯೇಽರ್ಥಸ್ಯ ಹಾನಿಃ ಸ್ಯಾತ್ತೃತೀಯೇ ಧನಸಂಯುತಾ ।
ಆಯುಃಕ್ಷಯಂ ಚತುರ್ಥಸ್ಥೇ ಪಂಚಮೇ ಸ್ವತ್ವನಾಶನಂ ॥ ೧೦೨ ॥

ಷಷ್ಠೇ ಶತ್ರುವಿಘಾತಂ ತು ದಾರಿದ್ರ್ಯಂ ಸಪ್ತಮೇ ಭವೇತ್ ।
ಮರಣಂ ಚಾಷ್ಟಮೇ ಭಾನೌ ನವಮೇ ಧರ್ಮಪೀಡನಂ ॥ ೧೦೩ ॥

ದಶಮೇ ಸುತವೃದ್ಧಿಶ್ಚ ಲಾಭೇ ಲಾಭಯುತಾ ಭವೇತ್ ।
ದ್ವಾದಶೇ ವ್ಯಯಸಂಯುಕ್ತಾ ನಿರ್ಧನಾ ತು ತಥಾ ಭವೇತ್ ॥ ೧೦೪ ॥

ಚಂದ್ರೇ ಲಗ್ನಗತೇ ಜ್ಞೇಯಾ ಸುದೃಢಾ ಮನುಜೋತ್ತಮ ।
ಧನಾನ್ವಿತಾ ದ್ವಿತೀಯೇ ತು ತೃತೀಯೇ ಲಾಭಸಂಯುತಾ ॥ ೧೦೫ ॥

ಚತುರ್ಥೇ ಬಾಂಧವಹಿತಾ ಪಂಚಮೇ ಸುತವೃದ್ಧಿದಾ ।
ಷಷ್ಠೇ ರಿಪುವಿನಾಶಾಯ ಸಪ್ತಮೇ ಚ ಧನಾವಹಾ ॥ ೧೦೬ ॥

---

ಹಾನಿಯೂ, ಮೂರನೆಯ ಸ್ಥಾನಲ್ಲಿ ಧನಯುಕ್ತವಾಗಿಯೂ, ಚತುರ್ಥಸ್ಥಾನದಲ್ಲಿ ಆಯುಃಕ್ಷಯಕಾರಕವಾಗಿಯೂ, ಪಂಚಮಸ್ಥಾನದಲ್ಲಿ ಸ್ವತ್ವನಾಶಕವಾಗಿಯೂ, ಷಷ್ಠದಲ್ಲಿ ಶತ್ರುನಾಶಕವಾಗಿಯೂ, ಸಪ್ತಮದಲ್ಲಿ ದಾರಿದ್ರ್ಯಪ್ರದವಾಗಿಯೂ, ಅಷ್ಟಮದಲ್ಲಿ ಮರಣಪ್ರದವಾಗಿಯೂ, ನವಮದಲ್ಲಿ ಧರ್ಮಪೀಡೆಗೆ ಸಾಧಕವಾಗಿಯೂ, ದಶಮದಲ್ಲಿ ಪುತ್ರವೃದ್ಧಿಗೆ ಕಾರಣವಾಗಿಯೂ, ಏಕಾದಶವೆಂಬ ಲಾಭಸ್ಥಾನದಲ್ಲಿ ಲಾಭದಿಂದ ಕೂಡಿಯೂ, ದ್ವಾದಶದಲ್ಲಿದ್ದರೆ ವ್ಯಯಯುಕ್ತವಾದುದರಿಂದ ನಿರ್ಧನಪ್ರದ ವಾಗಿಯೂ ಆಗುತ್ತದೆ.

೧೦೫–೧೦೭. ಚಂದ್ರನು ಲಗ್ನದಲ್ಲಿರುವಾಗ ಮಾಡಿದ ಪ್ರತಿಷ್ಠೆಯು ದೃಢವಾಗಿ ನಿಲ್ಲುತ್ತದೆ ಎರಡನೆಯ ಸ್ಥಾನದಲ್ಲಿದ್ದಲ್ಲಿ ಧನಯುಕ್ತವಾಗಿಯೂ, ಮೂರನೆಯ ಸ್ಥಾನದಲ್ಲಿದ್ದಲ್ಲಿ ಲಾಭದಾಯಕವಾಗಿಯೂ, ನಾಲ್ಕನೆಯ, ಸ್ಥಾನದಲ್ಲಿದ್ದಲ್ಲಿ ಬಂಧುಗಳಿಗೆ ಹಿತಕರವಾಗಿಯೂ, ಐದನೆಯ ಸ್ಥಾನದಲ್ಲಿ ಪುತ್ರವೃದ್ಧಿಪ್ರದವಾಗಿಯೂ ಆರನೆಯ ಸ್ಥಾನದಲ್ಲಿದ್ದರೆ ಶತ್ರುನಾಶಕವಾಗಿಯೂ, ಏಳನೆಯ ಸ್ಥಾನದಲ್ಲಿದ್ದಲ್ಲಿ ಧನಪ್ರದವಾಗಿಯೂ, ಎಂಟನೆಯ ಸ್ಥಾನದಲ್ಲಿದ್ದಲ್ಲಿ ಮರಣಪ್ರದವಾಗಿಯೂ,

ಅಷ್ಟಮೇ ಮರಣಾಯೋಕ್ತಾ ನವಮೆ ಧರ್ಮಪೀಡನಂ ।
ದಶಮೇ ಕರ್ಮದಾ ಪ್ರೋಕ್ತಾ ಲಾಭೇ ಲಾಭಪ್ರದಾ ಭವೇತ್ ॥ ೧೦೭ ॥

ವ್ಯಯೇ ವ್ಯಯವತೀ ರಾಜನ್ ತಥಾ ಧನವಿವರ್ಜಿತಾ ।
ಅರ್ಧಬಿಂಬಾಧಿಕೇ ಕ್ಷೀಣೇ ಕ್ರಮಾದಥ ನಿಬೋಧ ಮೇ ॥ ೧೦೮ ॥

ಚಂದ್ರೇ ಲಗ್ನಗತೇ ಜ್ಞೇಯಾ ಕ್ಷಿಪ್ರನಾಶಾ ಮಹಾಭುಜ ।
ದ್ವಿತೀಯೇ ಚ ದರಿದ್ರಾ ಸ್ಯಾತ್ತೃತೀಯೇ ಧನಸಂಯುತಾ ॥ ೧೦೯ ॥

ಬಹ್ವನರ್ಥಾ ಚತುರ್ಥೇ ಸ್ಯಾತ್ಪುತ್ರನಾಶಾಯ ಪಂಚಮೆ ।
ಷಷ್ಠೇ ರಿಪುವಿನಾಶಾಯ ಭಾರ್ಯಾನಾಶಾಯ ಸಪ್ತಮೆ ॥ ೧೧೦ ॥

ಅಷ್ಟಮೇ ಮರಣಾಯೋಕ್ತಾ ನವಮೇ ಧರ್ಮಘಾತಿನೀ ।
ಧನಾನ್ವಿತಾ ಸ್ಯಾದ್ದಶಮೇ ಲಾಭೇ ಲಾಭವತೀ ಭವೇತ್ ॥ ೧೧೧ ॥

---

ಒಂಭತ್ತನೆಯ ಸ್ಥಾನದಲ್ಲಿ ಧರ್ಮಪೀಡೆಗೆ ಕಾರಣವಾಗಿಯೂ, ದಶಮಸ್ಥಾನದಲ್ಲಿದ್ದಲ್ಲಿ ಕರ್ಮಪ್ರದವಾಗಿಯೂ, ಲಾಭಸ್ಥಾನವಾದ ಏಕಾದಶದಲ್ಲಿ ಲಾಭಪ್ರದವಾಗಿಯೂ, ಹನ್ನೆರಡನೆಯ ವ್ಯಯಸ್ಥಾನದಲ್ಲಿ ವ್ಯಯದಿಂದ ಧನರಹಿತವಾಗಿಯೂ ಆಗುತ್ತದೆ.

೧೦೮-೧೧೨. ಲಗ್ನದಲ್ಲಿರುವ ಚಂದ್ರನು ಅರ್ಧಬಿಂಬಕ್ಕಿಂತಲೂ, ಹೆಚ್ಚಾಗಿ ಕ್ಷೀಣನಾಗಿದ್ದಲ್ಲಿ ಅವನಿಂದ ಆ ಕಾಲದಲ್ಲಿ ಮಾಡಿದ ಪ್ರತಿಷ್ಠೆಗೆ ಉಂಟಾಗುವ ಫಲವನ್ನು ಕ್ರಮವಾಗಿ ಹೇಳುತ್ತೇನೆ ಕೇಳು ಅಂತಹ ಚಂದ್ರನು ಲಗ್ನಗತನಾಗಿದ್ದಲ್ಲಿ ಪ್ರತಿಷ್ಠೆಯು ಕ್ಷಿಪ್ರದಲ್ಲಿಯೇ ನಾಶಹೊಂದುತ್ತದೆ. ದ್ವಿತೀಯಸ್ಥಾನದಲ್ಲಿದ್ದಲ್ಲಿ ದರಿದ್ರವಾಗುತ್ತದೆ. ತೃತೀಯಸ್ಥಾನದಲ್ಲಿ ಧನದಿಂದ ಕೂಡಿರುತ್ತದೆ. ಚತುರ್ಥದಲ್ಲಿ ಬಹುವಿಧವಾದ ಅನರ್ಥಕ್ಕೆ ಗುರಿಯಾಗಿಯೂ ಪಂಚಮದಲ್ಲಿ ಪುತ್ರನಾಶಕ್ಕೆ ಕಾರಣವಾಗಿಯೂ ಷಷ್ಠದಲ್ಲಿ ಶತ್ರುನಾಶಕರವೂ, ಸಪ್ತಮದಲ್ಲಿ ಭಾರ್ಯಾನಾಶಕವೂ, ಅಷ್ಟಮದಲ್ಲಿ ಮರಣಪ್ರದವಾಗಿಯೂ, ನವಮದಲ್ಲಿ ಧರ್ಮನಾಶಕನಾಗಿಯೂ, ದಶಮದಲ್ಲಿದ್ದಲ್ಲಿ ಧನದಿಂದಕೂಡಿಯೂ ಏಕಾದಶದಲ್ಲಿ ಲಾಭದಿಂದಕೂಡಿಯೂ ವ್ಯಯಸ್ಥಾನವಾದ ದ್ವಾದಶದಲ್ಲಿ ದರಿದ್ರವಾಗಿಯೂ, ಆಗುತ್ತದೆ. ಪ್ರತಿಷ್ಠಾಲಗ್ನ

ವ್ಯಯೇ ವ್ಯಯವಶೀ ನಿತ್ಯೇ ದರಿದ್ರಾ ಚ ತಥಾ ಭವೇತ್ ।
ಲಗ್ನೇ ಮೃತ್ಯುಕರೋ ಭೌಮಃ ತಥಾ ದಾರಿದ್ರ್ಯದೋ ಧನೇ ॥ ೧೧೨ ॥

ಕೀರ್ತಿಂ ತ್ರಿಭುವನೇ ಶುಭ್ರಾಂ ತೃತೀಯಸ್ಥಃ ಕರೋತ್ಯಸೌ ।
ಚತುರ್ಥೇ ಬಂಧುನಾಶಃ ಸ್ಯಾತ್ಸುತನಾಶಸ್ತಥಾ ಸುತೇ ॥ ೧೧೩ ॥

ಅರಿನಾಶಸ್ತಥಾ ಷಷ್ಠೇ ಸಪ್ತಮೇಽಗ್ನೌ ವಿನಶ್ಯತಿ ।
ಅಷ್ಟಮೇ ಕರ್ತೃಮರಣಂ ನವಮೇ ದೇಶವಿಚ್ಯುತಿಃ ॥ ೧೧೪ ॥

ದಶಮೇ ಕರ್ಮಸಿದ್ಧಿಃ ಸ್ಯಾಲ್ಲಾಭೇ ಲಾಭವತೀ ಭವೇತ್ ।
ಧನಜಾಯಾತ್ಮಜೈರ್ನಿತ್ಯಂ ವಿಯೋಗೋ ವ್ಯಯಗೇ ಭವೇತ್ ॥ ೧೧೫ ॥

ಬುಧೇ ಲಗ್ನೇ ಧನಯುತಾ ದ್ವಿತೀಯೇ ಚ ತಥಾ ಭವೇತ್ ।
ತೃತೀಯೇ ವರದಾ ಪ್ರೋಕ್ತಾ ಚತುರ್ಥೇ ಧನಸಂಯುತಾ ॥ ೧೧೬ ॥

---

ದಲ್ಲಿರುವ ಭೌಮನು ಮೃತ್ಯುಪ್ರದನಾಗುತ್ತಾನೆ. ಎರಡನೆಯ ಸ್ಥಾನದಲ್ಲಿ ದಾರಿದ್ರ್ಯ ಪ್ರದನಾಗುತ್ತಾನೆ. ಮೂರನೆಯಸ್ಥಾನದಲ್ಲಿದ್ದಲ್ಲಿ ಮೂರುಲೋಕವನ್ನೂ ಬೆಳಗುವಂತಹ ಧವಲಕೀರ್ತಿಗೆ ಕಾರಣನಾಗುತ್ತಾನೆ.

೧೧೩-೧೧೭. ನಾಲ್ಕನೆಯ ಸ್ಥಾನದಲ್ಲಿದ್ದಾಗ ಬಂಧುನಾಶಕಾರಕನಾಗಿಯೂ ಐದನೆಯ ಸ್ಥಾನದಲ್ಲಿದ್ದಾಗ ಪುತ್ರನಾಶಕ್ಕೆ ಕಾರಣನಾಗಿಯೂ, ಆರನೆಯ ಸ್ಥಾನದಲ್ಲಿ ಶತ್ರುನಾಶಕಾರಕನಾಗಿಯೂ ಏಳನೆಯ ಸ್ಥಾನದಲ್ಲಿದ್ದಲ್ಲಿ ಅಗ್ನಿಗೆ ತುತ್ತಾಗಿಯೂ, ಆಗುತ್ತದೆ. ಎಂಟನೆಯ ಸ್ಥಾನದಲ್ಲಿ ಕರ್ತೃವಿಗೆ ಮರಣವೂ, ಒಂಭತ್ತನೆಯ ಸ್ಥಾನದಲ್ಲಿ ದೇಶಭ್ರಂಶವೂ, ಹತ್ತನೆಯಸ್ಥಾನದಲ್ಲಿ ಕರ್ಮಸಿದ್ಧಿಯೂ ಲಾಭದಲ್ಲಿ ಲಾಭವೂ ವ್ಯಯವೆಂಬ ಹನ್ನೆರಡನೆಯ ಸ್ಥಾನದಲ್ಲಿ ದ್ರವ್ಯ, ಪತ್ನೀ, ಪುತ್ರ ಇವರ ನಿತ್ಯ ವಿಯೋಗವೂ ಆ ಪ್ರತಿಷ್ಠೆಗೆ ಫಲವಾಗುತ್ತದೆ. ಬುಧನು ಲಗ್ನದಲ್ಲಿರುವಾಗ ಮಾಡಿದ ಪ್ರತಿಷ್ಠೆಯು ಧನಯುಕ್ತವಾಗಿಯೂ, ದ್ವಿತೀಯಸ್ಥಾನದಲ್ಲಿಯೂ ಅದೇ ಫಲವನ್ನು ಹೊಂದಿಯೂ, ತೃತೀಯಸ್ಥಾನದಲ್ಲಿ ವರಪ್ರದವಾಗಿಯೂ, ಚತುರ್ಥಸ್ಥಾನದಲ್ಲಿರುವಾಗ ಧನಸಮೃದ್ಧಿಯನ್ನು ಹೊಂದಿಯೂ, ಪಂಚಮಸ್ಥಾನದಲ್ಲಿರುವಾಗ

ಕೀರ್ತಿಶ್ಚ ಪಂಚಮೇ ಜ್ಞೇಯಾ ಷಷ್ಠೇ ರಿಪುವಿನಾಶಿನೀ ।
ಸುಖದಾ ಸಪ್ತಮೇ ಜ್ಞೇಯಾ ಹರ್ಷದಾ ಚ ತಥಾಷ್ಟಮೇ ॥ ೧೧೭ ॥

ಸೌಖ್ಯದಾ ನವಮೇ ರಾಜನ್ ದಶಮೇ ಕರ್ಮವೃದ್ಧಿದಾ ।
ಸ್ಥಿರಾ ಲಾಭಗತೇ ಜ್ಞೇಯಾ ವ್ಯಯೇ ಧನಸಮನ್ವಿತಾ ॥ ೧೧೮ ॥

ಜೀವೇ ಧನಾಢ್ಯಾ ಲಗ್ನಸ್ಥೇ ದ್ವಿತೀಯೇ ಚ ತಥಾ ಭವೇತ್ ।
ದೃಢಾಸ್ಪದಾ ತೃತೀಯೇ ಸ್ಯಾಚ್ಚತುರ್ಥೇ ಧನಸಂಯುತಾ ॥ ೧೧೯ ॥

ಪಂಚಮೇ ಸುತದಾ ಪ್ರೋಕ್ತಾ ಷಷ್ಠೇ ಶತ್ರುವಿನಾಶನೀ ।
ಸಪ್ತಮೇ ರಾಜ್ಯದಾ ಕರ್ತುರಷ್ಟಮೇ ಚ ಸಮೃದ್ಧಿದಾ ॥ ೧೨೦ ॥

ಕೀರ್ತಿದಾ ನವಮೇ ಜ್ಞೇಯಾ ದಶಮೇ ಚ ಸಮೃದ್ಧಿದಾ ।
ಲಾಭಸ್ಥೇ ಲಾಭದಾ ಜ್ಞೇಯಾ ವ್ಯಯೇ ಲಾಭಸಮನ್ವಿತಾ ॥ ೧೨೧ ॥

---

ಕೀರ್ತಿಕರವಾಗಿಯೂ, ಷಷ್ಠದಲ್ಲಿರುವಾಗ ಶತ್ರುನಾಶಕವಾಗಿಯೂ, ಸಪ್ತಮದಲ್ಲಿರುವಾಗ ಸುಖಪ್ರದವಾಗಿಯೂ, ಅಷ್ಟಮದಲ್ಲಿರುವಾಗ ಹರ್ಷಪ್ರದವಾಗಿಯೂ ಆಗುತ್ತದೆ.

೧೧೮-೧೨೧. ನವಮದಲ್ಲಿರುವಾಗ ಸೌಖ್ಯಪ್ರದವಾಗಿಯೂ, ದಶಮದಲ್ಲಿರುವಾಗ ಕರ್ಮವೃದ್ಧಿಪ್ರದವಾಗಿಯೂ, ಏಕಾದಶದಲ್ಲಿರುವಾಗ ಸ್ಥಿರವಾಗಿಯೂ, ದ್ವಾದಶದಲ್ಲಿರುವಾಗ ಧನದಿಂದ ಕೂಡಿದ್ದಾಗಿಯೂ ಆಗುತ್ತದೆ. ಗುರುವು ಲಗ್ನದಲ್ಲಿರುವಾಗ ವಡಿದ ಪ್ರತಿಷ್ಠೆಯು ಧನಾಢ್ಯವಾಗಿಯೂ, ದ್ವಿತೀಯದಲ್ಲಿರುವಾಗಲೂ ಅದೇ ಫಲವನ್ನು ಹೊಂದಿಯೂ, ತೃತೀಯದಲ್ಲಿ ದೃಢವಾಗಿಯೂ, ಚತುರ್ಥದಲ್ಲಿ ಧನಸಮೃದ್ಧಿಯಿಂದ ಕೂಡಿಯೂ, ಪಂಚಮದಲ್ಲಿರುವಾಗ ಪುತ್ರಪ್ರದವಾಗಿಯೂ, ಷಷ್ಠದಲ್ಲಿ ಶತ್ರುನಾಶಕವಾಗಿಯೂ, ಸಪ್ತಮದಲ್ಲಿರುವಾಗ ಕರ್ತೃವಿಗೆ ರಾಜ್ಯಪ್ರದವಾಗಿಯೂ, ಅಷ್ಟಮದಲ್ಲಿರುವಾಗ ಸಮೃದ್ಧಿಕಾರಕವಾಗಿಯೂ, ನವಮದಲ್ಲಿರುವಾಗ ಕೀರ್ತಿಕಾರಕವಾಗಿಯೂ, ದಶಮದಲ್ಲಿರುವಾಗ ಸಮೃದ್ಧಿಕಾರಕವಾಗಿಯೂ, ಏಕಾದಶದಲ್ಲಿಯೂ, ದ್ವಾದಶದಲ್ಲಿಯೂ ಲಾಭಪ್ರದವಾಗಿಯೇ ಆಗುತ್ತದೆ.

**ಲಗ್ನಸ್ಥೇ ನಿಶ್ಚಲಾ ಶುಕ್ರೇ ಸರ್ವಕಾಮಪ್ರದಾ ಭವೇತ್ ।**
**ಧನಗೇ ಚ ಧನಂ ದದ್ಯಾತ್ತೃತೀಯೇ ಭ್ರಾತೃವೃದ್ಧಿದಾ ॥ ೧೨೨ ॥**

**ಚತುರ್ಥೇ ಸುಭಗಾ ಜ್ಞೇಯಾ ಪಂಚಮೇ ಸುತವೃದ್ಧಿದಾ ।**
**ಷಷ್ಠೇ ಪೂಜ್ಯಾ ತಥಾ ಲೋಕೇ ಸಪ್ತಮೇ ಧನವೃದ್ಧಿದಾ ॥ ೧೨೩ ॥**

**ಅಷ್ಟಮೇ ಸುಖದಾ ಪ್ರೋಕ್ತಾ ನವಮೇ ಚ ಸುಖಾರ್ಥದಾ ।**
**ದಶಮೇ ಲೋಕಕಾನ್ತಾ ಸ್ಯಾದರಿನಾಶಸ್ತಥಾ ಯುಗೇ ॥ ೧೨೪ ॥**

**ತಥಾ ವ್ಯಯಸ್ಥೇ ವಿಜ್ಞೇಯಾ ಸವ್ಯಯಾ ಸಧನಾ ತಥಾ ।**
**ಮೃತ್ಯುದಾ ಲಗ್ನಗೇ ಸೌರಾ ದರಿದ್ರಾ ಸ್ಯಾದ್ದ್ವಿತೀಯಗೇ ॥ ೧೨೫ ॥**

**ತೃತೀಯೇ ಧನಲಾಭಾಯ ಚತುರ್ಥೇ ಶತ್ರುಮೃತ್ಯುದಾ ।**
**ಸುತಗೇ ಸುತನಾಶಃ ಸ್ಯಾದರಿನಾಶಸ್ತಥಾರಿಗೇ ॥ ೧೨೬ ॥**

---

೧೨೨-೧೨೪. ಪ್ರತಿಷ್ಠಾಲಗ್ನದಲ್ಲಿ ಶುಕ್ರಸಿದ್ದಲ್ಲಿ ಅಂತಹ ಪ್ರತಿಷ್ಠೆಯು ನಿಶ್ಚಲವಾಗಿ ನಿಲ್ಲುತ್ತದೆ. ಮನೋರಥಪ್ರದವೂ ಆಗುತ್ತದೆ ದ್ವಿತೀಯಸ್ಥಾನದಲ್ಲಿದ್ದಲ್ಲಿ ಧನಪ್ರದವಾಗಿಯೂ, ತೃತೀಯಸ್ಥಾನದಲ್ಲಿ ಭ್ರಾತೃವೃದ್ಧಿಕರವಾಗಿಯೂ, ಚತುರ್ಥಸ್ಥಾನದಲ್ಲಿದ್ದಲ್ಲಿ ರಮ್ಯವಾಗಿಯೂ, ಪಂಚಮಸ್ಥಾನದಲ್ಲಿ ಸುತಪ್ರದವಾಗಿಯೂ, ಷಷ್ಠದಲ್ಲಿ ಪೂಜ್ಯತೆ ಹೊಂದಿಯೂ, ಸಪ್ತಮದಲ್ಲಿ ಧನವೃದ್ಧಿಪ್ರದವಾಗಿಯೂ, ಅಷ್ಟಮದಲ್ಲಿ ಸುಖಪ್ರದವಾಗಿಯೂ, ನವಮದಲ್ಲಿ ಸುಖಾರ್ಥಗಳೆರಡಕ್ಕೂ ಸಾಧಕವಾಗಿಯೂ, ದಶಮದಲ್ಲಿ ಲೋಕಕ್ಕೆ ಆಕರ್ಷಕವಾಗಿಯೂ, ಏಕಾದಶದಲ್ಲಿ ಶತ್ರುನಾಶಕವಾಗಿಯೂ, ವ್ಯಯಸ್ಥಾನವಾದ ದ್ವಾದಶದಲ್ಲಿ ವ್ಯಯ ಮತ್ತು ಧನಪ್ರಾಪ್ತಿಗಳೆರಡಕ್ಕೂ ಸಾಧಕವಾಗಿಯೂ ಆಗುತ್ತದೆ.

೧೨೫-೧೨೯. ಶನಿಯು ಲಗ್ನದಲ್ಲಿದ್ದಾಗ ಮಾಡಿದ ಪ್ರತಿಷ್ಠೆಯು ಮೃತ್ಯುಪ್ರದವಾಗುತ್ತದೆ. ಎರಡನೆಯ ಸ್ಥಾನದಲ್ಲಿದ್ದಲ್ಲಿ ದಾರಿದ್ರ್ಯಪ್ರದವಾಗಿಯೂ, ಮೂರನೆಯ ಸ್ಥಾನದಲ್ಲಿ ಧನಲಾಭಕಾರಿಣಿಯಾಗಿಯೂ, ನಾಲ್ಕನೆಯ ಸ್ಥಾನದಲ್ಲಿ ಮೃತ್ಯುಪ್ರದ

ಜಾಯಾನಾಶಸ್ತು ಜಾಯಾಸ್ಥೇ ಮೃತ್ಯುರ್ಮೃತ್ಯುಗ್ರಹೋಪಗೇ ।
ಧರ್ಮಗೇ ಧರ್ಮಹಾನಿಃ ಸ್ಯಾತ್ಕರ್ಮವೃದ್ಧಿಸ್ತು ಕರ್ಮಗೇ ॥ ೧೨೭ ॥

ಮಹೀಲಾಭಸ್ತು ಲಾಭಸ್ಥೇ ವ್ಯಯಗೇ ಚ ವ್ಯಯೋ ಭವೇತ್ ।
ಶೂನ್ಯಂ ವಿವರ್ಜಯೇತ್ಕೇಂದ್ರಂ ಶುಭಾನ್ಕೇಂದ್ರೇ ನಿಯೋಜಯೇತ್ ॥

ಏವಂ ಜ್ಞಾತ್ವಾ ಶುಭಂ ಕಾಲಂ ಪ್ರಯತ್ನೇನ ತು ದೈವವಿತ್ ।
ಛಾಯಾಮ್ಬುಭಿಃ ಪ್ರಯತ್ನೇನ ಗೃಹ್ಣೀಯಾದವಧಾನತಃ ॥ ೧೨೮ ॥

ಶುಭೇಽಹ್ನಿ ಪೂರ್ವಂ ಯಂತ್ರಸ್ಥಂ ತತ್ಕಾಲಂ ಪ್ರತಿಮಾಂ ಸ್ವಯಂ ।
ಸಮಾಂ ತು ಪೀಠಿಕಾಂ ಗರ್ತೇ ಸ್ಥಪತಿರ್ವಿನಿವೇಶಯೇತ್ ॥ ೧೩೦ ॥

ತತ್ಕಾಲಮೇವ ಕುರ್ವೀತ ನಾಮಚಾಸ್ಯಾಃ ಸಮಾಹಿತಃ ।
ಸ್ವಸ್ಥಾಂ ತಾಂತು ಸ್ವನಾಮಾನ್ತಾ ವೈಷ್ಣವೀಪ್ರತಿಮಾ ಭವೇತ್ ॥ ೧೩೧ ॥

---

ವಾಗಿಯೂ, ಐದನೆಯ ಸ್ಥಾನದಲ್ಲಿ ಪುತ್ರನಾಶಕಾರಿಯಾಗಿಯೂ, ಆರನೆಯ ಸ್ಥಾನದಲ್ಲಿ ಶತ್ರುನಾಶಕ್ಕೆ ಕಾರಣವಾಗಿಯೂ, ಏಳನೆಯ ಸ್ಥಾನದಲ್ಲಿ ಪತ್ನೀನಾಶಕಾರಿಯಾಗಿಯೂ, ಎಂಟನೆಯ ಸ್ಥಾನದಲ್ಲಿ ಮೃತ್ಯುಪ್ರದವಾಗಿಯೂ, ಒಂಭತ್ತನೆಯ ಸ್ಥಾನದಲ್ಲಿ ಧರ್ಮಹಾನಿಕರವಾಗಿಯೂ, ಹತ್ತನೆಯ ಸ್ಥಾನದಲ್ಲಿ ಕರ್ಮವೃದ್ಧಿಕಾರಿಣಿಯಾಗಿಯೂ, ಲಾಭಸ್ಥಾನದಲ್ಲಿದ್ದಲ್ಲಿ ಭೂಮಿಲಾಭಕ್ಕೆ ಕಾರಣವಾಗಿಯೂ, ಹನ್ನೆರಡನೆಯ ಸ್ಥಾನದಲ್ಲಿ ವ್ಯಯಕಾರಿಣಿಯಾಗಿಯೂ ಆಗುತ್ತದೆ. ಶೂನ್ಯವಾದ ಕೇಂದ್ರವುಳ್ಳ ಲಗ್ನವನ್ನು ಬಿಟ್ಟು, ಶುಭಗ್ರಹಗಳುಳ್ಳ ಕೇಂದ್ರವನ್ನು ನೋಡಿ ಲಗ್ನವನ್ನು ನಿಶ್ಚಯಿಸಬೇಕು. ಜ್ಯೋತಿಷಿಕನಾದವನು ಈ ರೀತಿ ಶುಭಕರವಾದ ಕಾಲವನ್ನು ಛಾಯಾ ಅಥವಾ ಜಲಯಂತ್ರಗಳಿಂದ ತಿಳಿದು ಬಹಳ ಜಾಗರೂಕತೆಯಿಂದ ವಿಹಿತವಾದ ಶುಭಕಾಲವನ್ನೇ ಗ್ರಹಿಸಬೇಕು.

೧೩೦-೧೩೩. ಒಳ್ಳೆಯ ದಿನದಲ್ಲಿ ಪೂರ್ವಾಹ್ಣದಲ್ಲಿ ಯಂತ್ರಗತವಾಗಿರುವ ಪ್ರತಿಮೆಯನ್ನು, ಸಮವಾದ ಪೀಠವನ್ನು ಹಳ್ಳದಲ್ಲಿ ಭದ್ರಪಡಿಸಿ ಸ್ಥಪತಿಯು ನಿಲ್ಲಿಸಬೇಕು. ಪ್ರತಿಮೆಯನ್ನು ಸ್ಥಿರಪಡಿಸಿದ ನಂತರ ಅದಕ್ಕೆ ನಾಮಕರಣವನ್ನೂ ಮಾಡಬೇಕು. ವೈಷ್ಣವ ಪ್ರತಿಮೆಗಳು ಸ್ವನಾಮಾಂತವಾಗಿ, ವಾಸುದೇವ,

ಕೇಶವಾನ್ತಾಃ ಸ್ತ್ರಿಯಃ ಕಾರ್ಯಾ ನಾಥಾನ್ತೋ ಬ್ರಾಹ್ಮಣೋ ಭವೇತ್ ।
ಈಶ್ವರಾನ್ತಾ ಹರಸ್ಯೋಕ್ತಾ ಮಿಹಿರಾನ್ತಾ ರವೇಃ ಸ್ಮೃತಾ　　॥ ೧೩೨ ॥

ಅನ್ಯೇಷಾಂ ದೇವನಾಮಾನ್ತಾಃ ಸುರಾಣಾಂ ಪ್ರತಿಮಾಃ ಸ್ಮೃತಾ ।
ಸೂಕ್ಷ್ಮಾ ತು ಪ್ರತಿಮಾ ಕಾರ್ಯಾ ದ್ವಿತೀಯಾ ಚಾಧಿವಾಸನೇ　　॥ ೧೩೩ ॥

ಚಿತ್ರಕರ್ಮಕರಾ ಯಾ ಚ ಮೃನ್ಮಯೀ ಯಾ ತಥಾ ಭವೇತ್ ।
ತಸ್ಯಾಃ ಪವಿತ್ರಕೇ ಕಾರ್ಯಂ ತಥಾ ಚೈವಾಧಿವಾಸನಂ　　॥ ೧೩೪ ॥

ಸಂವತ್ಸರಂ ತು ಕರ್ತವ್ಯಂ ಷಣ್ಮಾಸಾನಥವಾ ಪುನಃ ।
ಪಕ್ಷಂ ದ್ವಾದಶರಾತ್ರಂ ವಾ ಸಪ್ತಾಹಂ ತ್ರ್ಯಹಮೇವ ವಾ　　॥ ೧೩೫ ॥

ಏಕಾಹಮೇಕರಾತ್ರಂ ವಾ ಯಥಾವದಧಿವಾಸನಂ ।
ವಿಭವೇನಾತಿಮಹತಾ ಗೀತೈಃ ನೃತ್ಯೈಃ ಸುಶೋಭನೈಃ　　॥ ೧೩೬ ॥

ನಿತ್ಯಮಂಬುಪ್ರದಾನೈಶ್ಚ ವಹ್ನಿಪೂಜಾಭಿರೇವ ಚ ।
ನಿಜಪುಣ್ಯಾಹಘೋಷೇಣ ಕರ್ತವ್ಯಮಧಿವಾಸನಂ　　॥ ೧೩೭ ॥

---

ಶ್ರೀನಿವಾಸ ಇತ್ಯಾದಿ ನಾಮಗಳಿಂದಲೂ, ಸ್ತ್ರೀಪ್ರತಿಮೆಗಳು ಕೇಶವಾನ್ತವಾಗಿ ಪ್ರಿಯಕೇಶವಾ ಇತ್ಯಾದಿ ನಾಮಗಳಿಂದಲೂ, ಬ್ರಹ್ಮಮೂರ್ತಿಯು ನಾಥಾನ್ತವಾಗಿಯೂ, ಹರನ ಮೂರ್ತಿಯು "ಅರ್ಕೇಶ್ವರ, ಪಾಲುಕೇಶ್ವರ ಇತ್ಯಾದಿ ಈಶ್ವರಾನ್ತನಾಮದಿಂದಲೂ, ಸೂರ್ಯಪ್ರತಿಮೆಯು ಮಿಹಿರಶಬ್ದಾಂತವಾಗಿಯೂ ದೇವತೆಗಳ ಪ್ರತಿಮೆಗಳು ದೇವಶಬ್ದಾನ್ತವಾಗಿಯೂ ಇರಬೇಕು.

೧೩೪-೧೪೦. ಬಹಳ ಸೂಕ್ಷ್ಮವಾದ ಮತ್ತು ಎರಡನೆಯ ಅಂತಸ್ತಿಗೆ ಸೇರಿದ ಪ್ರತಿಮೆಗಳಿಗೆ ಅಧಿವಾಸನವೆಂಬ ಸಂಸ್ಕಾರಕಾಲದಲ್ಲಿಯೇ ನಾಮಕರಣವನ್ನು ಮಾಡಬೇಕು. ಕೇವಲ ಚಿತ್ರಕರ್ಮದಿಂದಲೇ ಮಾಡಿರುವ ಮತ್ತು ಮಣ್ಣಿನಿಂದಲೇ ಮಾಡಿರುವ ಪ್ರತಿಮೆಗಳ ಪ್ರತಿಷ್ಠಾಪೂರ್ವಭಾವಿಯಾದ ಅಧಿವೇಶನವನ್ನು ಪವಿತ್ರದಲ್ಲಿಟ್ಟೇ ನಡೆಸಬೇಕು. ಇತರ ಪ್ರತಿಮೆಗಳಿಗೆ ಸಂವತ್ಸರಪರ್ಯಂತ ಅಥವಾ ಆರು ತಿಂಗಳು, ಒಂದು ಪಕ್ಷ, ಹನ್ನೆರಡು ರಾತ್ರಿ, ಏಳು ದಿನ, ಮೂರು ದಿನ, ಒಂದೇ ದಿನ ಅಥವಾ ಒಂದೇ ರಾತ್ರಿ ಅಧಿವಾಸನವನ್ನು ಮಾಡಿಯೇ ಮಾಡಬೇಕು ಇಂತಹ ಅಧಿವಾಸನವನ್ನು ಗೀತನೃತ್ಯವಾದ್ಯವೇ ಮೊದಲಾದ ವೈಭವಗಳೊಡನೆಯೂ, ನಿತ್ಯವೂ ತೀರ್ಥಪ್ರದಾನ, ಅಗ್ನಿಪೂಜಾ, ಪುಣ್ಯಾಹಘೋಷ ಮುಂತಾದುವು

ತತಃ ಪ್ರತಿಷ್ಠಾ ಕರ್ತವ್ಯಾ ಕಾಲೇ ಸಂವತ್ಸರೋಚಿತೇ ।
ಶುಭೇ ಕಾಲೇ ಕೃತಾ ಸಾ ತು ಪರಾ ವೃದ್ಧಿಕರೀ ಭವೇತ್ ॥ ೧೩೮ ॥

ರಾಜ್ಞಾಂ ಪ್ರಜಾನಾಂ ಕರ್ತುಶ್ಚ ತಥಾ ಕಾಲವಿದೋ ನೃಪ ।
ಋತ್ವಿಜಾಂ ಚ ಮಹಾರಾಜ ಶುಭಕಾಲಕೃತಾ ಹಿತಾ ॥ ೧೩೯ ॥

ಸುಲಕ್ಷಣಾ ಲಕ್ಷಣಸಂಯುತಾ ಚ
ದೇಶೇ ಕೃತಾ ಶಾಸ್ತ್ರವಿದಾ ತು ಸಮ್ಯಕ್ ।
ಕಾಲೇ ಶುಭೇ ಲೋಕಸುಖಾವಹಾಸ್ಯಾ
ತ್ಕರ್ತುಃ ಪ್ರಶಸ್ತಾ ವರದಾನಸೌಮ್ಯಾ ॥ ೧೪೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರ
ಸಂವಾದೇ ಪ್ರತಿಷ್ಠಾಪ್ರತಿಮಾಲಕ್ಷಣಕಾಲನಿರ್ದೇ
ಶೋನಾಮ ಷಣ್ಣವತಿತಮೋಽಧ್ಯಾಯಃ

---

ಗಳೊಡನೆಯೂ ಬಹುಸಂಭ್ರಮದಿಂದ ನಡೆಸಬೇಕು. ಅನಂತರ ಸಂವತ್ಸರಾದಿ ಕಾಲನಿಯಮವನ್ನು ನಿರೀಕ್ಷಿಸಿ ಉಚಿತವಾದ ಕಾಲದಲ್ಲಿ ಶುಭಕರವಾದ ಲಗ್ನಾದಿಗಳಲ್ಲಿ ಪ್ರತಿಷ್ಠಾವಿಧಿಯನ್ನು ನೆರವೇರಿಸಬೇಕು. ಇಂತಹ ಪ್ರತಿಷ್ಠೆಯು ಕರ್ತೃವಿಗೂ, ರಾಷ್ಟ್ರಕ್ಕೂ ವೃದ್ಧಿಕರವಾಗುತ್ತದೆ. ರಾಜರಿಗೂ, ಪ್ರಜೆಗಳಿಗೂ, ಕರ್ತೃವಿಗೂ, ದೈವಜ್ಞನಿಗೂ, ಋತ್ವಿಕ್ಕುಗಳಿಗೂ ಸಹ ಶುಭಕಾಲದಲ್ಲಿ ಮಾಡಿದ ಪ್ರತಿಷ್ಠೆಯು ಹಿತಕರವಾಗಿಯೇ ಆಗುತ್ತದೆ. ಒಳ್ಳೆಯ ಶುಭಲಕ್ಷಣಗಳಿಂದ ಕೂಡಿರುವ ಪ್ರತಿಮಾ ಪ್ರತಿಷ್ಠೆಯನ್ನು ಶುಭಕರವಾದ ದೇಶಕಾಲಾದಿಗಳಿಂದ ಕೂಡಿ ಶಾಸ್ತ್ರಜ್ಞನಾದವನು ನೆರವೇರಿಸಿದಲ್ಲಿ ಅದು ಪ್ರಶಸ್ತವೂ, ಕರ್ತೃವಿಗೆ ಶ್ರೇಯಸ್ಕರವೂ, ವರಪ್ರದಾನ ಸಮರ್ಥವೂ, ಸೌಮ್ಯವೂ ಆಗಿ ದೇಶಕ್ಕೆ ಕಲ್ಯಾಣಪ್ರದವಾಗುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಪ್ರತಿಷ್ಠಾಪ್ರತಿಮಾಲಕ್ಷಣಕಾಲನಿರ್ದೇಶವೆಂಬ
ತೊಂಭತ್ತಾರನೆಯ ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಸಪ್ತನವತಿತಮೋಽಧ್ಯಾಯಃ ||

|| ವಜ್ರಉವಾಚ ||

**ಗದ್ಯ—ಭಗವನ್ ಕೇನ ವಿಧಿನಾ ಪ್ರತಿಷ್ಠಾ ಕೃತಾ ಭವತಿ—ಮಾರ್ಕಂಡೇಯ ಉವಾಚ—ಅಥ ಸುರಪ್ರತಿಷ್ಠಾಪನೇ ಷೋಡಶರ್ತ್ವಿಜೋ ಭವನ್ತಿ ಏತದ್ಯಥಾ—ದೈವವಿತ್ ಸ್ಥಪತಿಃ ಕಲ್ಪಕೋ ವಾಚಕಃ ಯಜುರ್ವೇದವಿದರ್ಘಬಾಹುಃ ಯಜುರ್ವೇದವಿದ್ದೇವಹೋತಾ ಯಜುರ್ವೇದವಿದ್ದೇವದ್ರವ್ಯರಕ್ಷಿತಾ, ಋಗ್ವೇದವಿದ್ಯಜುರ್ವೇದವಿತ್ಸಾಮ ವೇದವಿದಥರ್ವವೇದವಿದಿತಿ ಚತ್ವಾರಃ, ಕಲಶಾಧಾರಾಃ, ಚತ್ವಾರಃ ಸಾತ್ವತಾಃ, ತೇಷಾಮೇಕೋ ಮೂರ್ತಿಧರಃ, ದ್ವಿತೀಯೋ ದೇವ-**

---

### ತೊಂಭತ್ತೇಳನೆಯ ಅಧ್ಯಾಯ.

ವಜ್ರನು ಪ್ರಶ್ನೆಮಾಡುತ್ತಾನೆ:—ಪೂಜ್ಯನೇ, ಪ್ರತಿಷ್ಠಾವಿಧಿಯನ್ನು ನಡೆಸುವ ಬಗೆ ಹೇಗೆ? ಇದಕ್ಕೆ ಮಾರ್ಕಂಡೇಯರು ಉತ್ತರ ಹೇಳುತ್ತಾರೆ—ದೇವತಾ ಪ್ರತಿಷ್ಠೆಯ ಪ್ರಾರಂಭದಲ್ಲಿ ಹದಿನಾರು ಋತ್ವಿಕ್ಕುಗಳನ್ನು ಏರ್ಪಡಿಸಬೇಕು. ಅವರು ಈ ರೀತಿ ಇರಬೇಕು. ಜ್ಯೋತಿಷಿಕ, ಸ್ಥಪತಿ, ಕಲ್ಪಕಃ, ವಾಚಕಃ, ಯಜುರ್ವೇದಜ್ಞನಾದ ಅರ್ಘಬಾಹು, ಯಜುರ್ವೇದಜ್ಞನಾದ ಹೋತಾ, ಯಜುರ್ವೇದಜ್ಞನಾದ ದೇವದ್ರವ್ಯರಕ್ಷಕ, ಋಗಾದಿ ನಾಲ್ಕು ವೇದಗಳನ್ನೂ ತಿಳಿದ ನಾಲ್ಕುಜನ ಕಲಶಾಧಾರರು, ನಾಲ್ಕುಜನ ಆಗಮಶಾಸ್ತ್ರಜ್ಞರು, ಅವರಲ್ಲೊಬ್ಬನು ಮೂರ್ತಿಧರ, ಎರಡನೆಯವನು ದೇವಕರ್ಮವನ್ನು ತಿಳಿದವನು, ಮೂರನೆಯವನು ಮಂತ್ರರಕ್ಷಕ,

ಕರ್ಮವಿತ್ ತೃತೀಯೋ ಮಂತ್ರರಕ್ಷಿತಾ, ಚತುರ್ಥೋ ದ್ರವ್ಯರಕ್ಷಿತಾ।
ತತ್ರ ಕಲಶಾಧಾರಾಣಾಂ ಶಕ್ತ್ಯಾ ಸಹಾಯಾಃ ಕರ್ತವ್ಯಾಃ ॥

ಸರ್ವಏವ ಋತ್ವಿಜೋಽವ್ಯಂಗಾಃ ಅಕಪಿಲಾ, ಅಕೇಕರಾ, ಅನಧಿಕಾಙ್ಗಾಃ ಸ್ವಶಾಸ್ತ್ರಪರಿನಿಷ್ಠಿತಾಃ ಶ್ಲಕ್ಷ್ಣಾಃ ಅಪೌನರ್ಭವಾಶ್ಚೇತಿ ತತಃ ಪ್ರಶಸ್ತೇಽಹ್ನಿ ತೈಃ ಸಹಾಯೈಃ ಸುಸ್ನಾತೈಃ ಸ್ವನುಲಿಪ್ತಾಂಗೈಃ ಮಾಲ್ಯವದ್ಭಿಃ ಹವಿಷ್ಯಾಶಿಭಿಶ್ಚ ಅಹತವಸ್ತ್ರಸಂವೀತೈಃ ಪವಿತ್ರಪಾಣಿಭಿಃ ಸಹ ದೀಕ್ಷಾಂ ಯಜಮಾನೋ ಗೃಹ್ಣೀಯಾತ್ ॥

ತಸ್ಯ ಸ್ನಾತಸ್ಯಾಹತವಸನಸಂವೀತಸ್ಯ ಗೋಮಯೇನೋಪಲಿಪ್ತೇ ದೇಶೇ ಬ್ರಾಹ್ಮಣಾಃ ಸ್ವಸ್ತಿವಾಚನಪೂರ್ವಕವಚನೇನ ಕಲ್ಪಕಃ ಸಿತಸೂತ್ರೇಣ ಸಿತವಸ್ತ್ರೇಣ ಸಿದ್ಧಾರ್ಥಕವಚಾನ್ ಬದ್ಧ್ವಾ ದಕ್ಷಿಣಪಾಣೌ ಪ್ರತಿಸರಂ

---

ನಾಲ್ಕನೆಯವನು ದ್ರವ್ಯರಕ್ಷಕ, ಇವರಲ್ಲಿ ಕಲಶಾಧಾರರಿಗೆ ಯಥಾಶಕ್ತಿ ಸಹಾಯಕರನ್ನೂ ಏರ್ಪಡಿಸಬೇಕು.

ಎಲ್ಲಾ ಋತ್ವಿಕ್ಕುಗಳೂ ವಿಕಲಾಂಗರಾಗಿರದೆಯೂ, ಕೆಂಪುಮಿಶ್ರವಾದ ಕಪ್ಪು ಬಣ್ಣವಿಲ್ಲದವರಾಗಿಯೂ, ನೇತ್ರವಿಕಾರವಿಲ್ಲದವರಾಗಿಯೂ, ಹೆಚ್ಚಾದ ಅಂಗಗಳಿಲ್ಲದವರಾಗಿಯೂ, ತಮ್ಮ ಶಾಸ್ತ್ರದಲ್ಲಿ ನಿಷ್ಣಾತರಾಗಿಯೂ, ಚೊಕ್ಕಟವಾಗಿಯೂ, ಎರಡು ಸಲ ಮದುವೆಯಾದವಳ ಪುತ್ರರಾಗದೆಯೂ ಇರಬೇಕು. ಯಜಮಾನನು ಪ್ರಶಸ್ತವಾದ ದಿನದಲ್ಲಿ ಇವರೊಡಗೂಡಿ ದೀಕ್ಷಾಗ್ರಹಣವನ್ನು ಮಾಡಬೇಕು. ಯಜಮಾನನಿಗೆ ಸಹಾಯಕರಾದ ಇವರುಗಳು ಚನ್ನಾಗಿ ಸ್ನಾನಮಾಡಿಯೂ, ಗಂಧಾದಿಗಳಿಂದ ಅನುಲಿಪ್ತರಾಗಿಯೂ, ಹೂಮಾಲೆಯನ್ನು ಧರಿಸಿಯೂ, ಆಗತಾನೆ ಒಣಗಿಸಿದ ವಸ್ತ್ರಗಳನ್ನು ಧರಿಸಿಯೂ, ಪವಿತ್ರಪಾಣಿಗಳಾಗಿಯೂ, ಕ್ಷಾರಲವಣರಹಿತವಾದ ಆಹಾರವುಳ್ಳವರಾಗಿಯೂ ಆಗಿರಬೇಕು.

ಸ್ನಾನಮಾಡಿ ಶುದ್ಧನಾಗಿಯೂ, ಮಡಿಯ ವಸ್ತ್ರವನ್ನು ಧರಿಸಿಯೂ ಇರುವ ಆ ಯಜಮಾನನನ್ನು ಗೋಮಯದಿಂದ ಶುದ್ಧಿಮಾಡಿರುವ ಮಂಗಲಭೂಮಿಯಲ್ಲಿ ಕುಳ್ಳಿರಿಸಿ ಕಲ್ಪಕನೆಂಬ ಋತ್ವಿಕ್ಕುಬ್ರಾಹ್ಮಣರ ಸ್ವಸ್ತಿವಾಚನಪೂರ್ವಕವಾಗಿ ಬಿಳಿಯ ವಸ್ತ್ರದಿಂದ ಬಿಳಿಯ ಸಾಸವೆ, ಬಜೆ ಇವನ್ನು ಬಿಳಿಯ ದಾರದಿಂದ ಕಟ್ಟಿ ಆ

ಕಙ್ಕಣಂ ಬಧ್ನೀಯಾತ್ ತತಃಪ್ರಭೃತಿ ಯಾವತ್ಪ್ರತಿಷ್ಠಾಕಾಲಂ ಪ್ರತಿಷ್ಠಾಕಾಲಾದುಪರಿ ಸಪ್ತರಾತ್ರಂ ತಾವನ್ಮಾಂಸ ಮದ್ಯಕ್ಷಾರಾ-ಬ್ರಹ್ಮಚರ್ಯಕ್ರೋಧೇರ್ಷ್ಯಾಗರ್ವಮಾನಾನಾರ್ಯತ್ವಾನಿ ವರ್ಜನೀಯಾನಿ ಭವಂತಿ ॥

॥ ಭವತಿ ಚಾತ್ರ ॥

ದೀಕ್ಷಾದಿನಾತ್ಪ್ರಭೃತ್ಯೇವಂ ಪ್ರತಿಷ್ಠಾ ಸಪ್ತಮೇ ದಿನೇ ।
ಯಾವತ್ತಾವದ್ಭವನ್ನಿತ್ಯಂ ಯಜಮಾನಃ ಸುಯಂತ್ರಿತಃ ॥ ೧ ॥

ಬ್ರಹ್ಮಚಾರೀ ಹವಿಷ್ಯಾಶೀ ಜಿತಕ್ರೋಧೋ ವಿಮತ್ಸರಃ ।
ಅಧಃಶಾಯೀ ಚ ರಾಜೇಂದ್ರ ನಿತ್ಯಸ್ನಾಯೀ ತಥೈವ ಚ ॥ ೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಪ್ರತಿಷ್ಠಾಕಲ್ಪೇ ದೀಕ್ಷಾಧ್ಯಾಯೋ ನಾಮ ಸಪ್ತನವತಿತಮೋಽಧ್ಯಾಯಃ

---

ಯಜಮಾನನ ಬಲಗೈಯ್ಯಲ್ಲಿ ಪ್ರತಿಸರವೆಂಬ ಕಂಕಣವನ್ನು ಕಟ್ಟಬೇಕು. ಅದು ಮೊದಲು ಪ್ರತಿಷ್ಠೆಯಕಾಲಪರ್ಯಂತವೂ, ಪ್ರತಿಷ್ಠೆಯ ಅನಂತರವೂ, ಏಳು ರಾತ್ರಿಯ ವರಿಗೂ ಆ ಯಜಮಾನನು ಮಾಂಸ, ಮದ್ಯ, ಕ್ಷಾರಾನ್ನಗಳನ್ನೂ ತ್ಯಜಿಸಿ ಬ್ರಹ್ಮಚರ್ಯದಿಂದ ಕೂಡಿ ಕೋಪ, ಅಸೂಯಾ, ಅಹಂಕಾರ, ದುಃಸ್ವಭಾವಾದಿ ದೋಷಗಳನ್ನೂ ತ್ಯಜಿಸಿರಬೇಕು

೧-೨. ಈ ವಿಷಯದಲ್ಲಿ ಮುಂದೆ ಹೇಳುವ ಪ್ರಮಾಣ ಶ್ಲೋಕಗಳೂ ಉಂಟು ಈ ರೀತಿ ದೀಕ್ಷಾದಿನಮೊದಲುಮಾಡಿ ಪ್ರತಿಷ್ಠೆಯಾನಂತರ ಏಳುದಿನಗಳಪರ್ಯಂತವೂ ಯಜಮಾನನು ನಿತ್ಯದಲ್ಲಿಯೂ, ಜಿತೇಂದ್ರಿಯನಾಗಿಯೂ, ಬ್ರಹ್ಮಚರ್ಯದಿಂದ ಕೂಡಿಯೂ ಇದ್ದು, ಕ್ರೋಧ, ಮಾತ್ಸರ್ಯಗಳನ್ನು ಬಿಟ್ಟು ನಿತ್ಯವೂ ಸ್ನಾನಮಾಡಿ ಹವಿಷ್ಯವನ್ನೇ ಭಕ್ಷಿಸುತ್ತಾ, ಅಧಃಶಯನದಿಂದ ಕೂಡಿ ವ್ರತವನ್ನಾಚರಿಸಬೇಕು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಪ್ರತಿಷ್ಠಾಕಲ್ಪದ ದೀಕ್ಷಾಧ್ಯಾಯವೆಂಬ ತೊಂಭತ್ತೇಳನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾ ಪುರಾಣೇ

## ತೃತೀಯಖಂಡೇ

---

### || ಅಷ್ಟನವತಿತಮೋಽಧ್ಯಾಯಃ ||

**ಗದ್ಯ—ಮಾರ್ಕಂಡೇಯ ಉವಾಚ—ಅಥ ತೋರಣಲಕ್ಷಣಂ । ಪುರತೋ ವಾ ಸುಶುದ್ಧೇ ಭೂಭಾಗೇ ಸ್ಥಂಡಿಲತ್ರಯಂ ಪರಿಕಲ್ಪಯೇತ್ ಯಥಾ-ವರ್ಣೋಕ್ತಮೃದಾ ಸಸಿಕತಯಾ । ತತಃ ಸ್ಥಂಡಿಲತ್ರಯಮುಪಶಿತ ಗೋಮಯೇನೋಪಲೇಪಯೇತ್ । ತತ್ರ ಮಧ್ಯೇಽಧಿ ವಾಸನಸ್ಥಂ-ಡಿಲಂ । ತದ್ದಕ್ಷಿಣ ಇಜ್ಯಾಸ್ಥಂಡಿಲಂ । ತದುದಕ್ ಹೋಮಸ್ಥಂಡಿಲಂ। ತತ್ರಾಧಿವಾಸನಾಸ್ಥಂಡಿಲೆ ಚತ್ವಾರಃ ತೋರಣಾಃ ಪರಿಕಲ್ಪ್ಯಂತೇ । ಸರ್ವೇ ಸ್ಥಂಡಿಲಾಃ ಚತುರಸ್ರಾಶ್ಚತುರ್ಹಸ್ತೋಚ್ಛ್ರಾಯಾಸ್ತೋರ-ಣತ್ರಿಭಾಗವಿಸ್ತೀರ್ಣಾಃ । ಸ್ಥಂಡಿಲದ್ವಯೇ ಆದ್ರ್ರಾಭಿಃ ಪತಾಕಾಭಿಃ ಪ್ರತಿಸರಾಭಿಶ್ಚ ಪರಿವಾರಯೇತ್ ||**

---

### ತೊಂಭತ್ತೆಂಟನೆಯ ಅಧ್ಯಾಯ.

ಮಾರ್ಕಂಡೇಯರು ಹೇಳುತ್ತಾರೆ—ಇನ್ನುಮುಂದೆ ತೋರಣ ಲಕ್ಷಣವನ್ನು ಹೇಳುತ್ತೇನೆ. ಮುಂಭಾಗದಲ್ಲಿ ಶುದ್ಧವಾಗಿರುವ ಭೂಭಾಗದಲ್ಲಿ ಮೂರು ಸ್ಥಂಡಿಲ ವನ್ನು ನಿರ್ಮಿಸಬೇಕು. ಅದನ್ನು ಆಯಾಯ ವರ್ಣದವರಿಗೆ ಹೇಳಿರುವ ಮೃತ್ತಿಕೆ ಯನ್ನು ಮರಳಿನೊಡನೆ ಸೇರಿಸಿ ರಚಿಸಬೇಕು. ಆ ಮೂರು ಸ್ಥಂಡಿಲಗಳನ್ನೂ ಶುದ್ಧವಾದ ಗೋಮಯದಿಂದ ಸಾರಿಸಬೇಕು. ಅವುಗಳಲ್ಲಿ ಮಧ್ಯದ ಸ್ಥಂಡಿಲವು ಅಧಿವಾಸನಕ್ಕಾಗಿ ಉಪಯೋಗಿಸತಕ್ಕದ್ದು ಅದರ ದಕ್ಷಿಣಭಾಗದಲ್ಲಿ ಇಜ್ಯಾಸ್ಥಂಡಿಲ ಅದಕ್ಕೆ ಉತ್ತರಭಾಗದಲ್ಲಿ ಹೋಮಸ್ಥಂಡಿಲ. ಅವುಗಳಲ್ಲಿ ಅಧಿವಾಸನಾಸ್ಥಂಡಿಲದಲ್ಲಿ ನಾಲ್ಕು ತೋರಣಗಳು ನಿರ್ಮಿಸಲ್ಪಡುತ್ತವೆ. ಎಲ್ಲಾ ಸ್ಥಂಡಿಲಗಳೂ ಚಚ್ಚೌಕ ವಾಗಿದ್ದು ನಾಲ್ಕು ಹಸ್ತ ಪರಿಮಾಣದಷ್ಟು ಎತ್ತರವಾಗಿರಬೇಕು. ತೋರಣದ ಮೂರನೆಯೊಂದು ಭಾಗದಷ್ಟು ವಿಸ್ತಾರವಿರಬೇಕು. ಉಳಿದ ಎರಡು ಸ್ಥಂಡಿಲ ಗಳನ್ನೂ ಆದ್ರ್ರವಾಗಿರುವ ಪತಾಕೆಗಳಿಂದಲೂ, ಸೂತ್ರಗಳಿಂದಲೂ ಆವರಿಸ ಲ್ಪಟ್ಟಿರುವಂತೆ ರಚಿಸಬೇಕು.

ವನಪ್ರವೇಶೋಕ್ತೇನ ವಿಧಿನಾ ಪ್ರಶಸ್ತವೃಕ್ಷಾಣಾಮನ್ಯತಮಸ್ಯ ವೃಕ್ಷಸ್ಯ ತೋರಣಾರ್ಥಂ ಕಾಷ್ಠಾನ್ಯಾನೀಯ ಸಂಡಿಲೇಭ್ಯ ಉಪಸ್ಥಾಪಯೇತ್। ನ ತೋರಣಂ ಕಾಷ್ಠದ್ವಯಜಂ ಕುರ್ಯಾತ್ । ನ ಕುಬ್ಜಂ। ತೋರಣಾಶ್ಚ ಸರ್ವೇ ಸಮಪ್ರಮಾಣಾಃ। ಆದಾವೇವಾಧಿವಾಸನ-ಸ್ಥಂಡಿಲಸ್ಯ ಪಶ್ಚಿಮಭಾಗೆ ಪ್ರಾಙ್ಮುಖ ಕಲ್ಪಕಃ (ಸ್ವಾಮೀ ನ ಸ್ಯಾತ್) ಕಲ್ಪಕಾದ್ದಕ್ಷಿಣೇ ಭಾಗೇ ಪ್ರಾಙ್ಮುಖಃ ಏವ ಸಾತ್ವತಃ ಸ್ಯಾತ್। ತಸ್ಯಾಪಿ ದಕ್ಷಿಣೇ ಭಾಗೇ ಪ್ರಾಙ್ಮುಖ ಏವ ಋಗ್ವೇದವಿದ್ಭವೇತ್। ಕಲ್ಪಕಾದ್ವಾಮಭಾಗೇ ಪ್ರಾಙ್ಮುಖ ಏವ ಯಜಮಾನಃ। ತಸ್ಯ ವಾಮತಃ ಪ್ರಾಙ್ಮುಖ ಏವ ಅರ್ಘಬಾಹುಃ। ಸ್ಥಂಡಿಲಾಶ್ರಿತೋ ದಕ್ಷಿಣಾಭಿಮುಖೋ ಯಜುರ್ವೇದವಿತ್। ಸ್ಥಂಡಿಲೇ ಪೂರ್ವತಃ ಪಶ್ಚಿಮಾಭಿಮುಖಃ ಸಾಮವೇದವಿತ್। ತಸ್ಯ ದಕ್ಷಿಣತೋ ವಂಶವಾ-ದಕಃ। ತಸ್ಯಾಪಿ ದಕ್ಷಿಣತೋ ವಾಚಕಃ ತಸ್ಯೋದಗ್ಗಾಯನಃ ಪೃಷ್ಠೇವಾದನಕತಂತಕಾಃ ॥

---

ಹಿಂದೆ ನಾವು ಹೇಳಿರುವ ವನಪ್ರವೇಶವಿಧಿಯನ್ನನುಸರಿಸಿ ಪ್ರಶಸ್ತವೃಕ್ಷಗಳಲ್ಲಿ ಯಾವುದಾದರೊಂದರ ಕಾಷ್ಠಗಳನ್ನು ತೋರಣಕ್ಕಾಗಿ ತಂದು ಸ್ಥಂಡಿಲಪ್ರದೇಶದಲ್ಲಿಡ ಬೇಕು. ತೋರಣವನ್ನು ಎರಡು ಕಾಷ್ಠಗಳಿಂದ ಮಾಡಬಾರದು, ಕುಳ್ಳಾಗಿಯೂ ಮಾಡಬಾರದು. ತೋರಣಗಳೆಲ್ಲವೂ ಒಂದೇ ಪ್ರಮಾಣದಲ್ಲಿರಬೇಕು. ಮೊದ ಲಲ್ಲಿಯೇ ಅಧಿವಾಸಸ್ಥಂಡಿಲದ ಪಶ್ಚಿಮದಿಕ್ಕಿನಲ್ಲಿ ಪೂರ್ವಾಭಿಮುಖನಾಗಿ ಕಲ್ಪಕನಿರ ಬೇಕು (ಅಲ್ಲಿ ಯಜಮಾನನಿರಕೂಡದು). ಕಲ್ಪಕನಿಗಿಂತ ದಕ್ಷಿಣಭಾಗದಲ್ಲಿ ಪೂರ್ವಾಭಿಮುಖನಾಗಿಯೇ ಸಾತ್ವತನಿರಬೇಕು. ಅವನ ದಕ್ಷಿಣಭಾಗದಲ್ಲಿ ಪೂರ್ವಾಭಿಮುಖನಾಗಿಯೇ ಋಗ್ವೇದ ತಿಳಿದಿರುವವನು, ಕಲ್ಪಕನ ಎಡಭಾಗದಲ್ಲಿ ಪೂರ್ವಾಭಿಮುಖನಾಗಿಯೇ ಯಜಮಾನನಿರಬೇಕು, ಅವನ ಎಡಭಾಗದಲ್ಲಿ ಪೂರ್ವಾಭಿಮುಖನಾಗಿಯೇ ಅರ್ಘಬಾಹು. ಸ್ಥಂಡಿಲವನ್ನೇ ಆಶ್ರಯಿಸಿಕೊಂಡು ದಕ್ಷಿಣಾಭಿಮುಖನಾಗಿ ಯಜುರ್ವೇದಜ್ಞನೂ, ಸ್ಥಂಡಿಲದ ಪೂರ್ವಭಾಗದಲ್ಲಿ ಪಶ್ಚಿಮಾಭಿಮುಖನಾಗಿ ಸಾಮವೇದಜ್ಞನೂ ಇರಬೇಕು. ಅವನ ಬಲಗಡೆಯಲ್ಲಿ ಕೊಳಲನ್ನು ಊದುವವನು, ಅವನ ಬಲಭಾಗದಲ್ಲಿ ವಾಚಕ, ಅವನ ಉತ್ತರಭಾಗದಲ್ಲಿ ಗಾಯಕ, ಹಿಂಭಾಗದಲ್ಲಿ ಬಾಯಿಹಾಡು ಮತ್ತು ಝಲ್ಲರೀ ವಾದ್ಯಗಾರರು.

ಸ್ಥಂಡಿಲಾದ್ದಕ್ಷಿಣತಃ ಉತ್ತರಾಭಿಮುಖೋಽಥರ್ವವೇದವಿತ್ । ಹೋಮ-ಸ್ಥಂಡಿಲೇ ಪ್ರಾಙ್ಮುಖ ಅಗಾರಾತ್ಪಶ್ಚಿಮತೋ ಹೋತಾ । ಚತುರಸ್ರಃ ಸಮಂತಾದ್ಧಸ್ತಮಾನಶ್ಚಾಗಾರಃ ಸಮೇಖಲಃ । ತಸ್ಯೋದಙ್ಮಂತ್ರ-ರಕ್ಷಿತಾ ದ್ರವ್ಯರಕ್ಷಿತಾ ಚ । ಇಜ್ಯಾಸ್ಥಂಡಿಲೇ ಇಜ್ಯಾಕೃತ್ಸಾತ್ವತಃ । ತದ್ದಕ್ಷಿಣತಃ ಉತ್ತರಾಭಿಮುಖೋ ಮಂತ್ರರಕ್ಷಿತಾ ದ್ರವ್ಯರಕ್ಷಿತಾ ಚ । ಸಾಂವತ್ಸರೋನ್ಯತ್ರೈಕಃ ವಿತ್ತಕಾಲಗ್ರಹಣಾವಹಿತಃ ಸ್ಯಾತ್ ॥ ಸ್ಥಪತೇರನಿಯಮಃ । ತತಃ ಸೌವರ್ಣಂ, ರಾಜತಂ, ತಾಮ್ರಂ, ಮೃನ್ಮಯಮಕಾಲಮೂಲಂ ವಾ ಕಲಶಂ ಸುದೃಢಂ ತೀರ್ಥೋದಕ-ಪೂರ್ಣಂ ಸರ್ವೌಷಧಿಭಿಃ, ಸರ್ವಗಂಧೈಃ, ಸರ್ವಬೀಜೈಃ, ಸರ್ವ-ರತ್ನೈಃ ಹಿರಣ್ಯೇನ ಚಂದನೇನ ಫಲೈಶ್ಚ ಸಂಯುತಂ ಕೃತ್ವಾ, ಅನು-ಲೇಪನಾರ್ಘನಿರ್ಮಿತಪವಿತ್ರಮುಖಂ ಸಸಿತಸೂತ್ರಮಾಲ್ಯಗ್ರೀವಂ ಕಲ್ಪಕಃ ಪುರತಃ ಪ್ರತಿಷ್ಠಾಪಯೇತ್ ॥

---

ಸ್ಥಂಡಿಲಕ್ಕಿಂತ ದಕ್ಷಿಣದಿಕ್ಕಿನಲ್ಲಿ ಉತ್ತರಾಭಿಮುಖನಾಗಿ ಅಥರ್ವವೇದಜ್ಞನೂ, ಹೋಮಸ್ಥಂಡಿಲದಲ್ಲಿ ಅಗಾರಕ್ಕಿಂತ ಪಶ್ಚಿಮದಿಕ್ಕಿನಲ್ಲಿ ಪೂರ್ವಾಭಿಮುಖನಾಗಿ ಹೋತೃವೂ ಕುಳಿತುಕೊಳ್ಳಬೇಕು. ಅಗಾರವೂ ಸಹ ಚಚ್ಚೌಕವಾಗಿ ನಾಲ್ಕುಕಡೆಯಲ್ಲೂ ಒಂದೊಂದು ಹಸ್ತಪರಿಮಾಣ ವಿಸ್ತಾರವಿದ್ದು ಮೇಖಲೆಯನ್ನೂ ಹೊಂದಿರಬೇಕು. ಅದಕ್ಕೆ ಉತ್ತರದಲ್ಲಿ ಮಂತ್ರರಕ್ಷಿತಾ ಮತ್ತು ದ್ರವ್ಯರಕ್ಷಿತಾ ಇವರುಗಳಿರಬೇಕು. ಇಜ್ಯಾಸ್ಥಂಡಿಲದಲ್ಲಿ ಇಜ್ಯಾಯನ್ನು ನಡೆಸುವ ಸಾತ್ವತ (ಆಗಮಿಕ) ಅದಕ್ಕೆ ದಕ್ಷಿಣಭಾಗದಲ್ಲಿ ಉತ್ತರಾಭಿಮುಖರಾಗಿ ಮಂತ್ರರಕ್ಷಿತಾ ಮತ್ತು ದ್ರವ್ಯರಕ್ಷಿತಾ ಎಂಬ ಋತ್ವಿಜರು, ಮತ್ತೊಂದು ಕಡೆಯಲ್ಲಿ ಒಬ್ಬ ಸಾಂವತ್ಸರಿಕನು (ಜ್ಯೋತಿಷಿಕ) ದ್ರವ್ಯ, ಕಾಲ ಇವುಗಳ ಸ್ವೀಕಾರ ವಿಷಯದಲ್ಲಿ ಜಾಗರೂಕತೆಯಿಂದ ನೋಡುತ್ತ ಕುಳಿತಿರಬೇಕು. ಸ್ಥಪತಿಗೆ ಯಾವ ಸ್ಥಲನಿಯಮವೂ ಇಲ್ಲ. ಅನಂತರ ಕಲ್ಪಕನೆಂಬ ಋತ್ವಿಜನು ಚಿನ್ನದಲ್ಲಿಯೋ, ಬೆಳ್ಳಿಯಲ್ಲಿಯೋ, ತಾಮ್ರದಲ್ಲಿಯೋ ಅಥವಾ ಮಣ್ಣಿನಿಂದಲೋ ಮಾಡಲ್ಪಟ್ಟಿರುವ ಕೆಳಭಾಗದಲ್ಲಿ ಕಪ್ಪಾಗಿಲ್ಲದಿರುವ ದೃಢವಾದ ಕಲಶವನ್ನು ತೀರ್ಥೋದಕದಿಂದ ತುಂಬಿಯೂ, ಎಲ್ಲಾ ಓಷಧಿಗಳು, ಗಂಧ, ಬೀಜ, ರತ್ನಗಳು, ಹಿರಣ್ಯ, ಚಂದನ, ಫಲ ಇವುಗಳಿಂದ ಕೂಡಿಯೂ ಇರುವಂತೆ ಮಾಡಿ, ಚಂದನಾದಿಗಳಿಂದಲೂ, ಪೂಜೆಗಾಗಿ ನಿರ್ಮಿಸಿರುವ ಮುಖಭಾಗದ ಪವಿತ್ರದಿಂದಲೂ, ಕುತ್ತಿಗೆಯಲ್ಲಿ ಬಿಳಿಯ ಸೂತ್ರ ಮತ್ತು ಹೂಮಾಲೆಯಿಂದಲೂ ಶೋಭಿಸುವ ಆ ಕುಂಭವನ್ನು ಮುಂಭಾಗದಲ್ಲಿ ಪ್ರತಿಷ್ಠಿಸಬೇಕು.

ಕಲಶಃ ಪೂರ್ವೇಣ ಸ್ಥಂಡಿಲಮಧ್ಯೇ ಅಷ್ಟಪತ್ರಂ ಕಮಲಮಾಲಿಖೇತ್ । ತತಃ ಕರ್ಮಾರಂಭಂ ಕುರ್ಯಾತ್ । ಪ್ರಣವವ್ಯಾಹೃತಿಪೂರ್ವಿಕಾಂ ಗಾಯತ್ರೀಂ ಸಶಿರಸ್ಕಾಂ ಜಪೇತ್ । ಓಂಕಾರಂ ನಮಸ್ಕಾರಂ ಕರ್ಮಾರಂಭಂ ಪವಿತ್ರಂ ಚೇತಿ । ತತಃ ಸ್ತೋತ್ರಂ ಕಂ ಚಿದ್ವಾಚ-ಯೇತ್ । ತತೋ ರಕ್ಷೋಘ್ನೈಃ ಮಂತ್ರೈಃ ದಿಕ್ಷು ವಿದಿಕ್ಷು ಚ ಸಿದ್ಧಾರ್ಥಕಾನ್ನ್ಯಸೇತ್ । ತತೋ ದ್ವಾದಶಾಂಗುಲೇ ಖಾತೇ "ವನಸ್ಪತೇ ವಿಡ್ವಙ್ಗ" ಇತಿ ಪ್ರಾಚ್ಯಾದಿಕ್ರಮೇಣ ತೋರಣನ್ಯಾಸಂ ಕುರ್ಯಾತ್ । ತೋರಣಾಶ್ಚತ್ವಾರೋ ಯುಗಾ ಭವಂತಿ । ಪೂರ್ವತಃ ಕೃತಯುಗಃ । ದಕ್ಷಿಣತಸ್ತ್ರೇತಾ । ಪಶ್ಚಿಮೋ ದ್ವಾಪರಃ । ಉತ್ತರೇ ಕಲಿರಿತಿ । ಏವಂ ತೋರಣನ್ಯಾಸಂ ಕೃತ್ವಾ "ಯುವಾಸುವಾಸ" ಇತಿ ದರ್ಭೈರಶುಷ್ಕಪತ್ರೈಃ ಸ್ರಗ್ದಾಮಭಿಶ್ಚ ತೋರಣಚತುಷ್ಕಂ ಚಾಪಿ ವೇಷ್ಟಯೇತ್ ॥

---

ಪೂರ್ವಭಾಗದಲ್ಲಿ ಕಲಶವಿರುವಾಗ ಸ್ಥಂಡಿಲದ ಮಧ್ಯದಲ್ಲಿ ಎಂಟು ಪತ್ರಗಳುಳ್ಳ ಕಮಲವನ್ನು ಬರೆಯಬೇಕು. ಅನಂತರ ಕರ್ಮವನ್ನು ಪ್ರಾರಂಭಿಸಬೇಕು. ಪ್ರಣವವ್ಯಾಹೃತಿಪೂರ್ವಕವಾದ ಗಾಯತ್ರಿಯನ್ನು ಸಶಿರಸ್ಕವಾಗಿ ಜಪಿಸಬೇಕು. ಓಂಕಾರ, ನಮಸ್ಕಾರ ಇವುಗಳಿಂದ ಕೂಡಿದ ಕರ್ಮಾರಂಭವು ಪವಿತ್ರಕರವೆಂದು ಹೇಳಲ್ಪಟ್ಟಿದೆ. ಅನಂತರ ಯಾವುದಾದರೊಂದು ಸ್ತೋತ್ರವನ್ನು ಪಠಿಸಬೇಕು. ಅನಂತರ ರಕ್ಷೋಘ್ನಮಂತ್ರಗಳಿಂದ ದಿಕ್ಕು ಮತ್ತು ವಿದಿಕ್ಕುಗಳಲ್ಲಿ ಬಿಳಿಯ ಸಾಸವೆಯನ್ನು ಇಡಬೇಕು. ಅನಂತರ ಹನ್ನೆರಡು ಅಂಗುಲ ಆಳವುಳ್ಳ ಹಳ್ಳದಲ್ಲಿ ವನಸ್ಪತೆ ವಿಡ್ವಙ್ಗ ಎಂಬ ಮಂತ್ರದಿಂದ ಪೂರ್ವದಿಕ್ಕಿನಲ್ಲಿ ಮೊದಲುಮಾಡಿ ತೋರಣನ್ಯಾಸಮಾಡಬೇಕು. ತೋರಣಗಳು ನಾಲ್ಕೂ ಯುಗಸ್ವರೂಗಳಾಗುತ್ತವೆ. ಪೂರ್ವಭಾಗದಲ್ಲಿನ ತೋರಣವು ಕೃತಯುಗ, ದಕ್ಷಿಣದ ತೋರಣವು ತ್ರೇತಾ, ಪಶ್ಚಿಮದಲ್ಲಿ ದ್ವಾಪರ, ಉತ್ತರದಲ್ಲಿ ಕಲಿ, ಹೀಗೆ ತೋರಣನ್ಯಾಸಮಾಡಿ "ಯುವಾಸುವಾಸಾ" ಎಂಬ ಮಂತ್ರದಿಂದ ಹಸುರಾದ ದರ್ಭೆಗಳಿಂದಲೂ, ಹೂವಿನ ಮಾಲಿಕೆಗಳಿಂದಲೂ, ನಾಲ್ಕು ತೋರಣಗಳನ್ನೂ ಸುತ್ತಬೇಕು.

ತತಃ ತೋರಣಾನಾಮುಪರಿ ಧ್ವಜಾಃ ಕರ್ತವ್ಯಾಃ ಪೂರ್ವೇಣ ಪೀತಪತಾಕೋ ಗರುಡಃ। ದಕ್ಷಿಣೇನ ನೀಲಪತಾಕಸ್ತಾಲಃ। ಪಶ್ಚಿಮೇನ ಶ್ವೇತ-ಪತಾಕೋ ಮಕರಃ। ಉದಗ್ರಕ್ತಪತಾಕೋ ಋಷ್ಯಃ। ಗರುಡಸ್ಯ ಪಾರ್ಶ್ವಯೋಃ ಗದಾಚಕ್ರೇ। ತಾಲಸ್ಯ ಹಲಮುಸಲೌ। ಮಕರಸ್ಯ ಧನುರ್ಬಾಣೌ ಋಷ್ಯಸ್ಯ ಖಡ್ಗಚರ್ಮ। ತೋರಣಾಂತರಾಲೇ ಆಗ್ನೇಯೇ ದಿಗ್ಭಾಗೇ ಛತ್ರಂ। ನೈಋತ್ಯಾಂ ವೈಜಯಂತೀಂ ಪತಾಕಾಂ ವಾಯವ್ಯಾಂ ಧ್ವಜಂ। ಐಶಾನ್ಯಾಂ ದಂಡಂ। ಸ್ಥಂಡಿಲೋ-ಪರಿ ವಿತಾನಕಂ। ತೋರಣಂ ಪ್ರತಿಘಂಟಾಮಾದರ್ಶಂ ಚ। ಇಜ್ಯಾ-ಸ್ಥಂಡಿಲೇ ವಿತಾನಕಂ। ತತ್ರ ಚ ಘಟೇ ಲಿಖಿತಾಃ ಪ್ರತೀಹಾರಾಃ॥

ಸುಭದ್ರಭದ್ರೌ ಪೂರ್ವೇಣ। ಆಷಾಢಯಜ್ಞತಾತೌ ದಕ್ಷಿಣೇನ। ಜಯ-ವಿಜಯೌ ಪಶ್ಚಿಮೇನ। ಮೋದಪ್ರಮೋದೌ ಉತ್ತರೇಣ। ಏತತ್ಕೃತ್ವಾ ಧ್ರುವಾದ್ಯಾ ಇತ್ಯುದಾಹರೇತ್। ಮಾಥುರಂ ಚ ಮಂತ್ರಂ ವ್ಯಾ-

---

ಅನಂತರ ತೋರಣಗಳ ಮೇಲೆ ಧ್ವಜಗಳನ್ನು ನಿರ್ಮಿಸಬೇಕು. ಪೂರ್ವದಲ್ಲಿ ಹೊಂಬಣ್ಣದ ಧ್ವಜ, ಅದರಲ್ಲಿ ಗರುಡ, ದಕ್ಷಿಣದಲ್ಲಿ ನೀಲಧ್ವಜವುಳ್ಳ ತಾಲವೃಕ್ಷ, ಪಶ್ಚಿಮದಲ್ಲಿ ಬಿಳಿಯ ಧ್ವಜವುಳ್ಳ ಮಕರ, ಉತ್ತರದಲ್ಲಿ ಕೆಂಪುಧ್ವಜವುಳ್ಳ ಜಿಂಕೆ, ಗರುಡನ ಪಕ್ಕದಲ್ಲಿ ಗದೆ ಮತ್ತು ಚಕ್ರ, ತಾಲದ ಪಕ್ಕದಲ್ಲಿ ನೇಗಿಲು, ಮುಸಲ, ಮಕರಕ್ಕೆ ಧನುರ್ಬಾಣಗಳು, ಜಿಂಕೆಗೆ ಖಡ್ಗ, ಗುರಾಣಿ ಇವನ್ನು ಚಿಹ್ನಿಸಬೇಕು. ತೋರಣಗಳ ಮಧ್ಯದಲ್ಲಿ ಆಗ್ನೇಯದಿಕ್ಕಿನಲ್ಲಿ ಛತ್ರ, ನೈಋತ್ಯದಲ್ಲಿ ವೈಜಯಂತಿ ಎಂಬ ಪತಾಕೆ, ವಾಯವ್ಯದಲ್ಲಿ ಧ್ವಜ, ಈಶಾನ್ಯದಲ್ಲಿ ದಂಡ ಇವು ಇರಬೇಕು. ಸ್ಥಂಡಿಲಗಳಮೇಲೆ ಚಪ್ಪರವನ್ನೂ, ತೋರಣಗಳಮೇಲೆ ಘಂಟೆ ಮತ್ತು ಕನ್ನಡಿ ಇವುಗಳನ್ನೂ ಇಡಬೇಕು. ಇಜ್ಯಾಸ್ಥಂಡಿಲದ ಚಪ್ಪರದಲ್ಲಿ ಸಣ್ಣ ಘಟದಲ್ಲಿ ದ್ವಾರಪಾಲಕರನ್ನು ಬರೆಯಬೇಕು

ಪೂರ್ವಭಾಗದಲ್ಲಿ ಸುಭದ್ರಭದ್ರರನ್ನೂ, ದಕ್ಷಿಣಭಾಗದಲ್ಲಿ ಆಷಾಢ ಯಜ್ಞ ತಾತರನ್ನೂ, ಪಶ್ಚಿಮದಲ್ಲಿ ಜಯವಿಜಯರನ್ನೂ, ಉತ್ತರದಲ್ಲಿ ಮೋದಪ್ರಮೋದ ರನ್ನೂ ಬರೆಯಬೇಕು. ಇದನ್ನು ಮಾಡಿ ಧ್ರುವಾದ್ಯಾ ಎಂಬ ಮಂತ್ರವನ್ನು ಪಠಿಸ ಬೇಕು. ಮಾಥುರಮಂತ್ರವನ್ನೂ ವ್ಯಕ್ತವಾಗಿ ಉಚ್ಚರಿಸಬೇಕು ಅನಂತರ ಕಲಶದ

ಚಕ್ಷೀತ । ತತಃ ಕಲಶೋದಕೇನ ಪವಿತ್ರಮಂತ್ರೇಣ ಯಜಮಾನ-ಋತ್ವಿಜಾಂ ಭೋಗಾಂಶ್ಚಾಭ್ಯುಕ್ಷ್ಯ ಗಾಯತ್ರೀಂ ಜಪೇತ್ । ಯಾ-ಓಷಧಯಶ್ಚೇತಿ ತತ್ರೈಶಾನೀದಿಕ್ಪ್ರಭೃತಿಷು ಸಪುಂಖಾನ್ಸಫಲಾನ್ ದೃಢಾನ್ ಶರಾಂಶ್ಚತ್ವಾರೋ ನಿಖನೇತ್ । ತೇಷಾಂ ನಾಮಾನಿ ಕಂದರ್ಪಃ ಸೋಮನಃ ದುರ್ಧರಃ ಶಿಖರಃ । ತೇಷಾಂ ಚತ್ವಾರೋ ಲೋಕ-ಪಾಲಾಃ ಇಂದ್ರಯಮವರುಣಧನದಾಃ । ತೇಷಾಂ ಚ ನಿವೇಶನೇ "ಕಾಂಡಾತ್ಕಾಂಡಾ" ದಿತ್ಯುದೀರಯೇತ್ । ತತಃ ಪಂಚರಂಗಂ ಕಾಂಡಾತ್ಕಾಂಡ ಮಿತಿ ಬಧ್ನೀಯಾತ್ ॥

ತೇನೈವ ದಿಶಃ ಪರಿವಾರಯೇತ್ । ಪಂಚರಂಗತ್ವಾತ್ಪಂಚಸೂತ್ರಂ ಪಂಚ-ಮಹಾಭೂತಮಯಂ ಸಂಸಾರಸೂತ್ರಂ । ನೀಲಂ ಪೃಥ್ವೀ । ಶ್ವೇತ-ಮಾಪಃ. ರಕ್ತಮಗ್ನಿಃ, ಪೀತಂ ವಾಯುಃ, ಕೃಷ್ಣಮಂತರಿಕ್ಷಂ । ತದ್ಬಂಧನೇ "ದೂಷ್ಯಾದ್ದೂಷ್ಯೇತಿ" ಮಂತ್ರೋ ಭವತಿ । ಇಂದ್ರಾ-

---

ತೀರ್ಥದಿಂದ, ಪವಿತ್ರಮಂತ್ರದಿಂದ ಯಜಮಾನ ಋತ್ವಿಕ್ಕುಗಳು ಇವರ ಭೋಗ ಸಾಧನಗಳನ್ನೆಲ್ಲಾ ಪ್ರೋಕ್ಷಿಸಿ ಗಾಯತ್ರಿಯನ್ನು ಜಪಿಸಬೇಕು. ಯಾ ಓಷಧಯಃ ಎಂಬ ಮಂತ್ರದಿಂದ ನಾಲ್ಕು ಬಾಣಗಳನ್ನು ಈಶಾನ್ಯದಿಗ್ಭಾಗ ಮೊದಲುಮಾಡಿ ನಾಲ್ಕು ಕಡೆಯಲ್ಲಿಯೂ ನೆಡಬೇಕು. ಆ ಬಾಣಗಳೂ ಸಹ ಗರಿಗಳುಳ್ಳ ಬುಡಪ್ರದೇಶ ದಿಂದಲೂ, ಅಗ್ರಭಾಗದ ಅಲಗಿನಿಂದ ಕೂಡಿಯೂ, ದೃಢವಾಗಿರಬೇಕು. ಆ ಬಾಣ ಗಳನ್ನೂ ಕ್ರಮವಾಗಿ ಕಂದರ್ಪ, ಸೋಮನ, ದುರ್ಧರ, ಶಿಖರ ಎಂಬ ಹೆಸರಿನಿಂದ ಕರೆಯಬೇಕು. ಆ ಬಾಣಗಳಿಗೆ ಇಂದ್ರ, ಯಮ, ವರುಣ, ಕುಬೇರ ಈ ಲೋಕ ಪಾಲರು ಅಭಿಮಾನಿದೇವತೆಗಳಾಗುತ್ತಾರೆ. ಆ ಬಾಣಗಳನ್ನು ವಿನ್ಯಾಸಮಾಡುವಾಗ ಕಾಂಡಾತ್ಕಾಂಡಂ ಎಂಬ ಮಂತ್ರವನ್ನು ಜಪಿಸಬೇಕು. ಅನಂತರ ಪಂಚವರ್ಣವುಳ್ಳ ಸೂತ್ರವನ್ನು ಕಾಂಡಾತ್ಕಾಂಡಂ ಎಂಬ ಮಂತ್ರದಿಂದಲೇ ಸುತ್ತಿ ಕಟ್ಟಬೇಕು.

ಆ ಸೂತ್ರದಿಂದಲೇ ದಿಕ್ಕುಗಳನ್ನೂ ಸುತ್ತಿ ಕಟ್ಟಬೇಕು ಐದು ವರ್ಣಗಳುಳ್ಳ ದ್ದರಿಂದ ಆ ಪಂಚಸೂತ್ರವು ಪಂಚಮಹಾಭೂತಮಯವಾದ ಸಂಸಾರಸೂತ್ರ. ಅದರಲ್ಲಿ ನೀಲವರ್ಣವೇ ಪೃಥ್ವಿಯ ಭಾಗ, ಶ್ವೇತವರ್ಣವೇ ಜಲದ ಭಾಗ, ಕೆಂಪು ಬಣ್ಣವೇ ಅಗ್ನಿ, ಹಳದಿಯಬಣ್ಣವೇ ವಾಯು, ಕಪ್ಪುಬಣ್ಣವೇ ಅಂತರಿಕ್ಷ. ಈ ಸೂತ್ರದಿಂದ ಬಂಧಿಸುವಾಗ "ದೂಷ್ಯಾದ್ದೂಷ್ಯಾ" ಎಂಬ ಮಂತ್ರವನ್ನು ಪಯೋಗಿಸ

ಣ್ಯಾ ಕೀರ್ತಿತಂ ಸೂತ್ರಮಿತಿ ಚ। ತತಃ ಕಾಂಡೇ ಮೂಲೇಷು ಸ್ಥಂಡಿಲಾಭ್ಯಂತರೇಣ ಚತುರ್ಷುದಿಕ್ಷು ಚತುರಃ ಪೂರ್ಣಕುಂಭಾನ್ ಪ್ರತಿಷ್ಠಾಪಯೇತ್। ತೇ ಚತ್ವಾರಃ ಸಾಮುರಾ ಜ್ಞೇಯಾಃ। ತತ್ರಾ-ಪ್ಯೈಶಾನ್ಯಾಂ ದಿಶಿ ಪ್ರಥಮಂ ಕುಂಭಂ ಪ್ರತಿಷ್ಠಾಪಯೇತ್। ತತಃ ಕ್ರಮೇಣಾನ್ಯಾನ್। ತೇಷಾಂ ನಾಮಾನಿ, ಸಹಸ್ರವೀರ್ಯಃ, ವಿಮಲಃ, ಶತಧಾರಃ, ಪ್ರಮಂದನಃ. ತಾಂಶ್ಚ ಸಹಿರಣ್ಯಾನ್ಸಚಂದನಾನ್ಸ ಕುಸುಮಾನ್ಸವನಸ್ಪತಿಕಲಾಪಾನ್ ಕುರ್ಯಾತ್ ॥

ತತ್ರ "ಶನ್ನ ಆಪ"ಇತಿ ಪ್ರಥಮಮಭಿಮಂತ್ರಯೇತ್। "ಶನ್ನೋದೇವೀ"ರಿತಿ ದ್ವಿತೀಯಂ। "ಆಪೋಹಿಷ್ಠೇ"ತಿ ತೃತೀಯಂ, "ಇದಮಾಪಃ-ಪ್ರವಹತ' ಇತಿ ಚತುರ್ಥಂ। ತತಃ ಪೂರ್ವೇಣ ಲಾಜಾಪೂರ್ಣಂ ಪಾತ್ರಂ ಸ್ಥಾಪಯೇತ್। ದಕ್ಷಿಣೇನ ತಿಲಪಾತ್ರಂ, ಪಶ್ಚಿಮೇನ ಸಿದ್ಧಾರ್ಥ-ಪಾತ್ರಂ। ಉದಗಕ್ಷತಪಾತ್ರಂ ಪಾತ್ರವಿಶೇಷೇಣ"ಅಬ್ರಹ್ಮನ್ ಬ್ರಾಹ್ಮಣ"

---

ಬೇಕು. ಇಂದ್ರಾಣ್ಯಾಕೀರ್ತಿತಂ ಸೂತ್ರ ಎಂಬ ಮಂತ್ರವನ್ನೂ ಸಹ, ಅನಂತರ ಆಬಾಣಗಳ ಬುಡದಲ್ಲಿ ಸ್ಥಂಡಿಲದ ಒಳಭಾಗಕ್ಕೆ ಸೇರಿದಂತೆ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಪೂರ್ಣ ಕುಂಭಗಳನ್ನು ಪ್ರತಿಷ್ಠಿಸಬೇಕು. ಆ ನಾಲ್ಕೂ ದೇವತೆಗಳಿಂದ ಕೂಡಿವೆ ಎಂದು ತಿಳಿಯಬೇಕು. ಅದರಲ್ಲಿಯೂ ಈಶಾನ್ಯದಿಕ್ಕಿನಲ್ಲಿ ಮೊದಲನೆಯ ಕುಂಭವನ್ನು ಪ್ರತಿಷ್ಠಿಸಬೇಕು. ಅನಂತರ ಇತರ ಕುಂಭಗಳನ್ನು ಕ್ರಮವಾಗಿ ಪ್ರತಿಷ್ಠಿಸಬಹುದು ಆ ಕುಂಭಗಳನ್ನೂ ಕ್ರಮವಾಗಿ ಸಹಸ್ರವೀರ್ಯ, ವಿಮಲ, ಶತಧಾರ, ಪ್ರಮಂದನ ಎಂಬ ನಾಮಗಳಿಂದ ನಿರ್ದೇಶಿಸಬೇಕು. ಅವೆಲ್ಲವನ್ನೂ ಹಿರಣ್ಯ, ಚಂದನ, ಹೂವುಗಳು, ಮಾವಿನೆಲೆಯಗೊಂಚಲು ಇವುಗಳೊಡನೆ ಕೂಡಿರುವಂತೆ ರಚಿಸಬೇಕು.

ಅವುಗಳಲ್ಲಿ ಮೊದಲನೆಯ ಕುಂಭವನ್ನು ಶನ್ನ ಆಪಃ, ಎಂಬ ಮಂತ್ರದಿಂದಲೂ, ಎರಡನೆಯದನ್ನು " ಶನ್ನೋದೇವೀ," ಎಂಬ ಮಂತ್ರದಿಂದಲೂ, ಮೂರನೆಯದನ್ನು " ಆಪೋಹಿಷ್ಠಾ" ಎಂಬ ಮಂತ್ರದಿಂದಲೂ, ನಾಲ್ಕನೆಯದನ್ನು " ಇದಮಾಪಃ ಪ್ರವಹತ" ಎಂಬ ಮಂತ್ರದಿಂದಲೂ, ಅಭಿಮಂತ್ರಿಸಬೇಕು. ಅದರ ಪೂರ್ವ ಭಾಗದಲ್ಲಿ ಭತ್ತದ ಅರಳಿನಿಂದ ತುಂಬಿದ ಪಾತ್ರೆಯನ್ನೂ, ದಕ್ಷಿಣಭಾಗದಲ್ಲಿ ಎಳ್ಳಿನ ಪಾತ್ರೆಯನ್ನೂ, ಪಶ್ಚಿಮದಿಕ್ಕಿನಲ್ಲಿ ಬಿಳಿ ಸಾಸಿವೆಯ ಪಾತ್ರೆಯನ್ನೂ, ಉತ್ತರದಲ್ಲಿ

**ಇತ್ಯುದೀರಯೇತ್। ತತಃ ಚತಸೃಷು ವಿದಿಕ್ಷು ಕುಂಭಾನಾಮಭ್ಯಂತರೇ ಚತ್ವಾರೋ ದೀಪಾದೇಯಾಃ। ತೇ ಚ ವೇದಾಃ ಐಶಾನೀ ಪ್ರಭೃತಿ ಋುಗ್ಯಜುಸ್ಸಾಮಾಥರ್ವಾಣಃ । ತೇಷಾಂ ಚ ನಿವೇಶನೇ ತೇಜೋಽಸಿ ಶುಕ್ರಮಿತ್ಯುದೀರಯೇತ್ । ತತಃ ಪುನರಪಿ ರಕ್ಷೋಘ್ನ್ಯೈಃ ಮಂತ್ರೈಃ ಸಿದ್ಧಾರ್ಥವಿಕಿರಣಂ ಕುರ್ಯಾತ್ । ಯೇ ದೇವಾಃ ಪುರಸ್ಸದೋಮಿತಿ ಜಪೇತ್ । ವಾರಾಹಂ ಪ್ರಾದುರ್ಭಾವಂ ಚ ವಾಚಯೇತ್ । ಶ್ರೀಸೂಕ್ತಮುದೀರಯೇತ್ । ತತಸ್ತೇನ ಪಂಚಗವ್ಯೇನ ಭವನಮಭ್ಯುಕ್ಷಯೇತ್ । ತೋರಣಾನಿ ಚ (ಅರ್ಚಾಂ ಶೌಚಾರ್ಥಂಚ ಸ್ಥಾಪಯೇತ್ ಬೃಹತ್ಸ್ನಪನೇ ತದೇವ ಸ್ಯಾದನ್ಯಂ ವಾ ಕಲ್ಪಯೇತ್) ಅಥಾರ್ಘ್ಯಃ ।**

---

ಅಕ್ಷತೆಯ ಪಾತ್ರವನ್ನೂ ಸ್ಥಾಪಿಸಬೇಕು, ಯಾವುದಾದರೊಂದು ಪಾತ್ರವಿಶೇಷದಿಂದ ಆಬ್ರಹ್ಮನ್ ಬ್ರಾಹ್ಮಣ ಎಂಬ ಮಂತ್ರವನ್ನು ಪಠಿಸಬೇಕು. ಅನಂತರ ನಾಲ್ಕು ದಿಕ್ಕುಗಳಲ್ಲಿ ಕುಂಭಗಳ ಅಂತರದಲ್ಲಿ ನಾಲ್ಕು ದೀಪಗಳನ್ನಿಡಬೇಕು ಆ ದೀಪಗಳೇ ವೇದಗಳು. ಈಶಾನ್ಯ ಮೊದಲುಮಾಡಿಕೊಂಡು ಋಗ್ಯಜುಸ್ಸಾಮಾಥರ್ವಣ ರೂಪಗಳಾಗುತ್ತವೆ. ಆ ದೀಪಗಳ ನ್ಯಾಸವನ್ನೂ "ತೇಜೋಽಸಿಶುಕ್ರಂ" ಎಂಬ ಮಂತ್ರವನ್ನುಚ್ಚರಿಸಿ ಮಾಡಬೇಕು. ಅನಂತರ ಪುನಃ "ರಕ್ಷೋಘ್ನ" ಮಂತ್ರಗಳಿಂದ ಬಿಳಿಯ ಸಾಸವೆಯನ್ನು ಎರಚಬೇಕು, "ಯೇದೇವಾಃ ಪುರಸ್ಸದೊ" ಎಂಬ ಮಂತ್ರವನ್ನೂ ಜಪಿಸಬೇಕು. ವರಹಾವತಾರ ರೂಪಿಯಾಗಿ ಆವಿರ್ಭವಿಸಿದ ಭಗವಂತನ ಚರಿತ್ರೆಯನ್ನು (ಉಪಾಖ್ಯಾನ) ಪಾರಾಯಣ ಮಾಡಬೇಕು. ಶ್ರೀಸೂಕ್ತಪಾರಾಯಣವನ್ನು ಮಾಡಬೇಕು, ಅನಂತರ ಪಂಚಗವ್ಯದಿಂದ ಪ್ರತಿಷ್ಠಾಗೃಹವನ್ನೂ, ತೋರಣಗಳನ್ನೂ, ಪ್ರೋಕ್ಷಿಸಬೇಕು ಶುದ್ಧಿಗಾಗಿ ಪ್ರತಿಮೆಯನ್ನೂ ಅಲ್ಲಿ ಸ್ಥಾಪಿಸಬೇಕು. ಬೃಹತ್ಸ್ನಪನಸಂಭವದಲ್ಲಿ ಅದನ್ನು ಇದರಿಂದಲೇ ಆಗಲೀ ಬೇರೆ ಪಂಚಗವ್ಯದಿಂದಾಗಲಿ ನಡೆಸಬಹುದು. ಅನಂತರ ಅರ್ಘ್ಯವನ್ನು ಹೇಳುತ್ತೇನೆ. ಎಲೈ ಧೊರೆಯೇ, ಈ

**ಏವಂ ತೋರಣವಿನ್ಯಾಸೇ ಕೃತೇ ಭೂಪತಿಸತ್ತಮ ।**
**ಸರ್ವೇ ವಿಘ್ನಾಃ ಕ್ಷಯಂ ಯಾಂತಿ ಪರಾ ವೃದ್ಧಿಶ್ಚ ಜಾಯತೇ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಪ್ರತಿಷ್ಠಾಕಲ್ಪೇ ತೋರಣವರ್ಣನೋ ನಾಮ ಅಷ್ಟನವತಿತಮೋಽಧ್ಯಾಯಃ**

---

ರೀತಿ ತೋರಣ ವಿನ್ಯಾಸಮಾಡಿದ್ದೇ ಆದರೆ ಎಲ್ಲಾ ವಿಘ್ನಗಳೂ ನಾಶವಾಗುತ್ತವೆ, ಹೆಚ್ಚಾದ ಅಭ್ಯುದಯವೂ ಉಂಟಾಗುತ್ತದೆ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಪ್ರತಿಷ್ಠಾಕಲ್ಪದ ತೋರಣವರ್ಣನವೆಂಬ ತೊಂಭತ್ತೆಂಟನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ನವನವತಿತಮೋಽಧ್ಯಾಯಃ ||

**ಗದ್ಯ—ಮಾರ್ಕಂಡೇಯ ಉವಾಚ—ಅಥ ಪಂಚಗವ್ಯಾನಿ—ತತ್ರ ಕಪಿಲಾಯಾಃ ಗೋಃ ಕ್ಷೀರಂ, ಕೃಷ್ಣಾಯಾಶ್ಚ ದಧಿ। ನೀಲಾಯಾಶ್ಚ ಘೃತಂ। ಶ್ವೇತಾಯಾ ಗೋಮಯಂ ತಾಮ್ರವರ್ಣಾಯಾ ಗೋಮೂತ್ರಂ। ಗೃಹ್ಣೀಯಾತ್। ಗಂಧದ್ವಾರೇತಿ ಗೋಮಯಂ। ಆಪ್ಯಾಯಸ್ವೇತಿ ಕ್ಷೀರಂ। ದಧಿಕ್ರಾವ್ಣೇತಿ ದಧಿ। ಘೃತವತೀ ಭುವನಾನಾಮಿತಿ ಘೃತಂ। ದೇವಸ್ಯತ್ವೇತಿ ಕುಶೋದಕಂ। ಅಘಮರ್ಷಣೇನ ಸಂಯೋಜ್ಯ ಗಾಯತ್ರೀಮುದೀರಯೇತ್। ತತಸ್ತೇನ ಪಂಚಗವ್ಯೇನ ಭವನಮ-**

---

### ತೊಂಭತ್ತೊಂಭತ್ತನೆಯ ಅಧ್ಯಾಯ.

ಮಾರ್ಕಂಡೇಯರು ಹೇಳುತ್ತಾರೆ:—

ಇನ್ನು ಮುಂದೆ ಪ್ರೋಕ್ಷಣೋಪಯೋಗಿಯಾದ ಪಂಚಗವ್ಯಗಳನ್ನು ಹೇಳುತ್ತೇನೆ. ಪಂಚಗವ್ಯದಲ್ಲಿ ಕಪಿಲವರ್ಣದ ಗೋವಿನಹಾಲು, ಕೃಷ್ಣವರ್ಣದ ಗೋವಿನ ಮೊಸರು, ನೀಲವರ್ಣದ ಗೋವಿನ ಘೃತ, ಬಿಳಿಯ ಗೋವಿನ ಗೋಮಯ, ಕೆಂದು ಬಣ್ಣದ ಗೋವಿನ ಗೋಮೂತ್ರ ಇವನ್ನು ಸಂಗ್ರಹಿಸಬೇಕು. ಇವುಗಳಲ್ಲಿ ಗೋಮೂತ್ರವನ್ನು ಗಾಯಿತ್ರಿಯಿಂದಲೂ, ಗೋಮಯವನ್ನು ಗಂಧದ್ವಾರಾ ಎಂಬ ಮಂತ್ರದಿಂದಲೂ, ಕ್ಷೀರವನ್ನು ಆಪ್ಯಾಯಸ್ವ ಎಂಬ ಮಂತ್ರದಿಂದಲೂ, ಮೊಸರನ್ನು ದಧಿಕ್ರಾವ್ಣಾ ಎಂಬ ಮಂತ್ರದಿಂದಲೂ, ಘೃತವನ್ನು ಘೃತವತೀಭುವನಾನಾಂ ಎಂಬ ಮಂತ್ರದಿಂದಲೂ, ಶುದ್ಧೋದಕವನ್ನು ದೇವಸ್ಯತ್ವಾ ಎಂಬ ಮಂತ್ರದಿಂದಲೂ ಗ್ರಹಿಸಬೇಕು. ಅಘಮರ್ಷಣ ಮಂತ್ರಗಳಿಂದ ಎಲ್ಲವನ್ನೂ ಸೇರಿಸಿ ಗಾಯತ್ರಿಯಿಂದ

**ಭ್ಯುಕ್ಷಯೇತ್ । ತೋರಣಾನಿ ಚ । ಅರ್ಚಾಶೌಚಾರ್ಥಮವಸ್ಥಾಪಯೇತ್ । ಬೃಹತ್‌ಸ್ನಪನೇ ತದೇವಸ್ಯಾದನ್ಯಂ ವಾ ಕಲ್ಪಯೇತ್ । ಅಥಾರ್ಘ್ಯಕಲ್ಪನಾ ॥**

**೬೬ ರಾಜತೇ ಪಾತ್ರೇ ಶಂಖಬಿಲ್ವಪದ್ಮೋಶೀರದರ್ಭಮೂಲದೂರ್ವಾಕ್ಷೀರಾಕ್ಷತಸಿದ್ಧಾರ್ಥಕ ತಂಡುಲಾನುಪಕಲ್ಪಯೇತ್ । ತೀರ್ಥೋದಕೇನ ಪ್ಲಾವಯೇತ್ ರಥೆ ಅಕ್ಷೇತಿ ಮಂತ್ರಮುದೀರಯೇತ್ । ದ್ರವಿಣಂ ಪಾಪಮನ್ಯಃ ದ್ರುಪದಂ ಪವಿತ್ರಂ ಶಂಖಮಣಿಂ ಶ್ರೀಸೂಕ್ತಂ ಕಾಂಡಾತ್ಕಾಂಡೇತಿ ಪವಿತ್ರಂ ಚ ತತಃ ಶುಭೇ ದೃಢೇ ಸ್ವರ್ಚಿತೇ ಭಾಂಡೇ ಪಾದ್ಯಂ ಕುರ್ಯಾತ್ ॥**

---

ಜಪಿಸಬೇಕು. ಅನಂತರ ಆ ಪಂಚಗವ್ಯದಿಂದ ಪ್ರತಿಷ್ಠಾಭವನವನ್ನೂ ತೋರಣಗಳನ್ನೂ ಪ್ರೋಕ್ಷಿಸಬೇಕು. ಉಳಿದ ಭಾಗವನ್ನು ಪ್ರತಿಮಾಶುದ್ಧಿಗಾಗಿ ಇಡಬೇಕು. ಬೃಹತ್ ಸ್ನಪನವಿದ್ದಲ್ಲಿ ಅದನ್ನೇ ಉಪಯೋಗಿಸಬಹುದು. ಬೇರೆಯಾದರೂ ಏರ್ಪಡಿಸಬಹುದು. ಅನಂತರ ಅರ್ಘ್ಯವನ್ನು ಕಲ್ಪಿಸಬೇಕು.

ಬೆಳ್ಳಿಯ ಪಾತ್ರೆಯಲ್ಲಿ ಶಂಖ, ಬಿಲ್ವ, ಪದ್ಮ, ಲಾಮಂಚ, ದರ್ಭಮೂಲ, ಗರಿಕೆ, ಹಾಲು, ಅಕ್ಷತೆ, ಬಿಳಿಯ ಸಾಸವೆ, ಅಕ್ಕಿ ಇವನ್ನು ಹಾಕಬೇಕು. ತೀರ್ಥೋದಕದಿಂದ ಅವನ್ನು ತುಂಬಬೇಕು. ರಥೆ ಅಕ್ಷೆ ಎಂಬ ಮಂತ್ರವನ್ನು ಪಠಿಸಬೇಕು ದ್ರವಿಣಂ ಪಾಪಮನ್ಯಃ ಎಂಬ ಮಂತ್ರವನ್ನೂ ಹಾಗೆಯೇ ದ್ರುಪದ, ಪವಿತ್ರ, ಶಂಖಮಣಿ, ಈ ಸೂಕ್ತ, ಕಾಂಡಾತ್ಕಾಂಡ, ಪವಿತ್ರ ಈ ಮಂತ್ರಗಳನ್ನೂ ಪಠಿಸಬೇಕು. ಅನಂತರ ಶುಭವಾಗಿಯೂ, ದೃಢವಾಗಿಯೂ, ಇರುವ ಪೂಜ್ಯವಾದ ಬಾಂಡದಲ್ಲಿ ಪಾದ್ಯವನ್ನು ಕಲ್ಪಿಸಬೇಕು. ಈ ಸಂದರ್ಭದಲ್ಲಿ ವಾಚಕನು, ಹಿರಣ್ಯವರ್ಣಾ ಎಂದು ಮೊದಲಾಗುವ ಮೂರು ಋಕ್ಕುಗಳಿಂದಲೂ, ಆಪೋಹಿಷ್ಠಾ ಎಂಬ ಮೂರು ಋಕ್ಕುಗಳಿಂದಲೂ, ಶನ್ನೋದೇವೀ ಎಂಬ ಮಂತ್ರದಿಂದಲೂ, ಬ್ರಹ್ಮ

**ಹಿರಣ್ಯವರ್ಣೇತ್ಯಾರಭ್ಯ ಯುಕ್ತ್ರಯೇಣ ಚ ಪಾರ್ಥಿವ ।**
**ಆಪೋಹಿಷ್ಠೇತಿ ತಿಸೃಭಿಃ ಶನ್ನೋದೇವೀತಿ ಚಾಪ್ಯಥ ।**
**ಬ್ರಹ್ಮ ಶುಕ್ಲೇನ ಸೂಕ್ತೇನ ಪವಿತ್ರೇಣ ತಥೈವ ಚ ।**
**ವಾಚಕೋ ವಾಚಯೇತ್ತತ್ರ ತೀರ್ಥಮಾಹಾತ್ಮ್ಯಮುತ್ತಮಂ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಪ್ರತಿಷ್ಠಾಕಲ್ಪೇ ಪಂಚಗವ್ಯವರ್ಣನೋ ನಾಮ ನವನವತಿತಮೋಽಧ್ಯಾಯಃ**

---

ಶುಕ್ಲೇನ ಎಂಬ ಸೂಕ್ತದಿಂದಲೂ ಪವಿತ್ರಮಂತ್ರದಿಂದಲೂ ಅಭಿಮಂತ್ರಿಸಬೇಕು. ಮತ್ತು ಉತ್ತಮವಾದ ತೀರ್ಥಗಳ ಮಾಹಾತ್ಮ್ಯವನ್ನು ಆಯಾಯ ಉಪಖ್ಯಾನ ಗಳಿಂದ ಪಾರಾಯಣ ಮಾಡಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಪ್ರತಿಷ್ಠಾಕಲ್ಪದಲ್ಲಿ ಪಂಚಗವ್ಯವರ್ಣನವೆಂಬ ತೊಂಭತ್ತೊಂಭತ್ತನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಶತತಮೋಽಧ್ಯಾಯಃ ||

ಗದ್ಯ—ಮಾರ್ಕಂಡೇಯ ಉವಾಚ—ಅಥಾರ್ಚಾಶೌಚಂ ಭವತಿ । ತತ್ರ-ಮೃನ್ಮಯೋಂ ಚಿತ್ರಕರ್ಮಕೃತಾಂ ಚ ಶೌಚಯೇತ್ । ಉಭ-ಯೋರ್ದರ್ಭಪವಿತ್ರಕೇ ಶೌಚಂ ಕುರ್ಯಾದಧಿವಾಸನಂ ಚ। ಯದ್ರವ್ಯಂ ತದ್ರವ್ಯೋಕ್ತಶೌಚಂ ಚಾದಾವೇವ ಕುರ್ಯಾತ್ । ತತೋಽಂಬುನಾ ಗಾಯತ್ರ್ಯಾ ಕುರ್ಯಾತ್ । ಆಕ್ರಾವ್ಯೇತಿ ದ್ವಿತೀಯಾ ಮೃದಾ । ಅಯಂ ಚಾತ್ರಾಪರೋ ಮಂತ್ರೋ ಭವತಿ ||

---

### ನೂರನೆಯ ಅಧ್ಯಾಯ.

ಮಾರ್ಕಂಡೇಯರು ಹೇಳುತ್ತಾರೆ :—ಅನಂತರ ಪ್ರತಿಮಾಶುದ್ಧಿಯನ್ನು ಮಾಡಬೇಕು. ಅವುಗಳಲ್ಲಿ ಮೃಣ್ಮಯವಾಗಿಯೂ, ಚಿತ್ರಪಟರೂಪವಾಗಿಯೂ, ಇರುವ ಪ್ರತಿಮೆಗಳಿಗೆ ದರ್ಭಪವಿತ್ರದಿಂದಲೇ ಶುದ್ಧಿಯನ್ನು ಮಾಡಬೇಕು. ಅಧಿವಾಸನಕ್ಕಾಗಿ ಯಾವ ಯಾವ ವಸ್ತುಗಳನ್ನು ಹೇಳಲಾಗಿದೆಯೋ, ಆ ದ್ರವ್ಯಗಳಿಗೆ ವಿಹಿತವಾಗಿರುವ ಶುದ್ಧಿಯನ್ನು ಮೊದಲೇ ಮಾಡಿರಬೇಕು ಅನಂತರ ಜಲದಿಂದ ಗಾಯತ್ರಿಯಿಂದ ಮೊದಲನೆಯ ಶುದ್ಧಿಯನ್ನು ಮಾಡಬೇಕು. ಆಕ್ರಾವ್ಯಾ ಎಂಬ ಮಂತ್ರದಿಂದ ಎರಡನೆಯ ಶುದ್ಧಿ, ಈ ಶುದ್ಧಿಯಲ್ಲಿ ಮುಂದೆ ಹೇಳುವ ಇತರ ಮಂತ್ರಗಳೂ

**ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೇ ।**
**ಮೃತ್ತಿಕೇ ಹರಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಂ ॥**
**ಉದ್ಧೃತಾಸಿ ವರಾಹೇಣ ಕೃಷ್ಣೇನ ಶತಬಾಹುನಾ ।**
**ಮೃತ್ತಿಕೇ ತ್ವಂ ಪ್ರಯಚ್ಛೇಷ್ಟಂ ಸರ್ವಕಾಮಪ್ರದಾ ಭವ ॥**

**ತೃತೀಯಂ ಭೂತಿಸ್ತ್ವಮಿತಿ ಭಸ್ಮನಾ । ಇಹಗಾವ ಇತಿ ಚತುರ್ಥಂ ಗೋಮಯೇನ ವಿಷ್ಣೋಃ ಪೃಷ್ಠಮಸೀತಿ ಪಂಚಮಂ ಗೌರಸರ್ಷಪೈಃ । ಬೃಹತ್ಸಾಮ್ನಾ ಷಷ್ಠಂ ತ್ರೇತಾಗ್ನಿಭಸ್ಮನಾ । ಶಾಕ್ವರೇಣೇತಿ ಸಪ್ತಮಂ ಪಂಚಗವ್ಯೇನ । ಮನಸಃ ಕಾಮಮಾಕೂತಿರಿತ್ಯಷ್ಟಮಂ ಕುಷ್ಠೇನ । ಹಿರಣ್ಯವರ್ಣೇತಿ ನವಮಂ ಸುವರ್ಣೋದಕೇನ । ತರಸಮರ್ದೀತಿ-ದರ್ಭ ಪಿಂಜಲೈರ್ದಶಮಂ । ಪಾವಮಾನೀಭಿಸ್ತೀರ್ಥಮೃತ್ತಿಕಾಭಿ-**

---

ಉಪಯೋಗಿಸಲ್ಪಡುತ್ತವೆ. ಅಶ್ವಕ್ರಾಂತೆ ಇತ್ಯಾದಿ ಮಂತ್ರವೂ ಮೃತ್ತಿಕೆ ಹರಮೆ ಪಾಪಂ, ಉದ್ಧೃತಾಸಿ ವರಾಹೇಣ ಇತ್ಯಾದಿ ಮಂತ್ರಗಳೂ ಇಲ್ಲಿಯ ಉಪಯೋಗಕೆ ಅರ್ಹವಾಗಿವೆ.

ಭೂತಿಸ್ತ್ವಮಿತ್ಯಾದಿ ಮಂತ್ರದಿಂದ, ಭಸ್ಮದಿಂದ ಮೂರನೆಯ ಶುದ್ಧಿ ಇಹಗಾವಃ ಎಂಬ ಮಂತ್ರದಿಂದ ಗೋಮಯದಿಂದ ನಾಲ್ಕನೆಯ ಶುದ್ಧಿ. ವಿಷ್ಣೋಃ ಪೃಷ್ಠಮಸಿ ಎಂಬ ಮಂತ್ರದಿಂದ, ಬಿಳಿಯ ಸಾಸಿವೆಯಿಂದ ಐದನೆಯ ಶುದ್ಧಿ, ಬೃಹತ್ಸಾಮದಿಂದ ಯಜ್ಞಭಸ್ಮದಿಂದ ಆರನೆಯ ಶುದ್ಧಿ, ಶಾಕ್ವರೇಣ ಎಂಬ ಮಂತ್ರ ದಿಂದ ಪಂಚಗವ್ಯದಿಂದ ಏಳನೆಯ ಶುದ್ಧಿ. ಮನಸಃ ಕಾಮಮಾಕೂತಿರಿತ್ಯಾದಿ ಮಂತ್ರದಿಂದ ಚಂಗಲ್‌ಕೋಷ್ಠದಿಂದ ಎಂಟನೆಯ ಶುದ್ಧಿ, ಹಿರಣ್ಯವರ್ಣಾ ಎಂಬ ಮಂತ್ರದಿಂದ ಸುವರ್ಣೋದಕದಿಂದ ಒಂಭತ್ತನೆಯ ಶುದ್ಧಿ, ತರಸಮರ್ದೀ ಎಂಬ ಮಂತ್ರದಿಂದ ದರ್ಭಪುಂಜದಿಂದ ಹತ್ತನೆಯ ಶುದ್ಧಿ, ಪವಮಾನ ಸೂಕ್ತಗಳಿಂದ ತೀರ್ಥೋದಕಮೃತ್ತಿಕೆಯಿಂದ ಹನ್ನೊಂದನೆಯ ಶುದ್ಧಿ, ನದೀಮೃತ್ತಿಕೆಯಿಂದ ಹನ್ನೆರಡನೆಯ ಶುದ್ಧಿ, ಗಿರಿಯಸ್ತೆ ಎಂಬ ಮಂತ್ರದಿಂದ, ಪರ್ವತದ ಮೇಲಿನ

ರೇಕಾದಶಂ । ನದೀಮೃದಾ ದ್ವಾದಶಂ । ಗಿರಯಸ್ತೇ ಪರ್ವತಾಗ್ರ ಮೃದಾ ತ್ರಯೋದಶಂ । ಋಷಭೇಣ ಜಾತಶೃಂಗೇಣೋದ್ಧೃತಮೃದಾ ಚತುರ್ದಶಂ । ಅಶ್ವಕ್ರಾಂತೇತಿ ಲಾಂಗಲೋದ್ಧೃತಮೃದಾ ಪಂಚದಶಂ । ಕೂಶ್ಮಾಂಡೀತಿ ವಲ್ಮೀಕಾಗ್ರಮೃದಾ ಷೋಡಶಂ । ಪೃಥ್ವೀದೇವೀತಿ ಮಂತ್ರೇಣ ತೀರ್ಥಮೃದಾ ಸಪ್ತದಶಂ। ಸರೋಮೃದಾ ಬ್ರಹ್ಮಜಜ್ಞಾನೇತ್ಯಷ್ಟಾದಶಂ । ದಧಿಕ್ರಾವ್ಣೇತಿ ದಧ್ನಾ ಏಕೋನ-ವಿಂಶಂ ಘೃತವತೀ ಘೃತೇನ ವಿಂಶತಿತಮಂ ॥

ಅಘಮರ್ಷಣೇನ ರತ್ನೈರೇಕವಿಂಶಂ । ಏವಮೇಕವಿಂಶತ್ಯಾತ್ಮಕೇನ ಸೋಮೇನ ತಾಂ ಶೌಚಯಿತ್ವಾ ಪರಮಪಾವನಾ ಮಂತ್ರಾ ಜಪ್ತವ್ಯಾಃ ॥

---

ಮೃತ್ತಿಕೆಯಿಂದ ಹದಿಮೂರನೆಯ ಶುದ್ಧಿ, ಋಷಭೇಣ ಎಂಬ ಮಂತ್ರದಿಂದ ಕರುವಿನ ಕೊಂಬಿನಿಂದ ಉದ್ಧೃತವಾದ ಮೃತ್ತಿಕೆಯಿಂದ ಹದಿನಾಲ್ಕನೆಯ ಶುದ್ಧಿ, ಅಶ್ವಕ್ರಾನ್ತಾ ಎಂಬ ಮಂತ್ರದಿಂದ ನೇಗಲನಿಂದ ಉದ್ಧೃತವಾದ ಮೃತ್ತಿಕೆಯಿಂದ ಹದಿನೈದನೆಯ ಶುದ್ಧಿ, ಕೂಶ್ಮಾಂಡೀ ಎಂಬ ಮಂತ್ರದಿಂದ ಹುತ್ತದ ಮೇಲಿನ ಮೃತ್ತಿಕೆಯಿಂದ ಹದಿನಾರನೆಯ ಶುದ್ಧಿ, ಪೃಥ್ವೀದೇವೀ ಎಂಬ ಮಂತ್ರದಿಂದ, ತೀರ್ಥಮೃತ್ತಿಕೆಯಿಂದ ಹದಿನೇಳನೆಯ ಶುದ್ಧಿ, ಬ್ರಹ್ಮಜಜ್ಞಾನಂ ಎಂಬ ಮಂತ್ರದಿಂದ, ಸರೋವರದ ಮೃತ್ತಿಕೆಯಿಂದ ಹದಿನೆಂಟನೆಯ ಶುದ್ಧಿ, ದಧಿಕ್ರಾವ್ಣಾ ಎಂಬ ಮಂತ್ರದಿಂದ ದಧಿಯಿಂದ ಹತ್ತೊಂಭತ್ತನೆಯ ಶುದ್ಧಿ, ಘೃತವತೀ ಎಂಬ ಮಂತ್ರದಿಂದ, ಘೃತದಿಂದ ಇಪ್ಪತ್ತನೆಯ ಶುದ್ಧಿ.

ಅಘಮರ್ಷಣ ಸೂಕ್ತದಿಂದ, ರತ್ನಗಳಿಂದ ಇಪ್ಪತ್ತೊಂದನೆಯ ಶುದ್ಧಿ, ಈ ರೀತಿ ಇಪ್ಪತ್ತೊಂದು ವಿಧವಾಗಿರುವ ಪರಿಶುದ್ಧತೆಯಿಂದ ಸೋಮರಸದಂತಿರುವ ಈ ಪದಾರ್ಥಗಳಿಂದ ಶೋಧಿಸಿ ಅನಂತರ ಪರಮಪಾವನಗಳಾದ ಮಂತ್ರಗಳನ್ನೂ ಜಪಿಸಬೇಕು. ಅಘಮರ್ಷಣ, ದೇವಕೃತ, ಶುದ್ಧವತೀ, ತರತ್ಸಮಾಕೂಶ್ಮಾಂಡ, ಪಾವಮಾನೀ ಸೂಕ್ತ ದುರ್ಗಾದೇವೀ, ಸರಸ್ವತೀ ಸೂಕ್ತಗಳು, ಚಾಂದ್ರಾಯಣ' ಋಷಭ, ವಾಮದೇವ, ರಥನ್ತರ ಈ ಸೂಕ್ತಗಳೂ, ಪುರುಷಸೂಕ್ತ, ಶ್ರೀಸೂಕ್ತ,

ಅಘಮರ್ಷಣಂ ದೇವಕೃತಂ ಶುದ್ಧವತ್ಯಸ್ತರತ್ಸಮಾಃ ।
ಕೂಶ್ಮಾಂಡಾಃ ಪಾವಮಾನ್ಯಶ್ಚ ದುರ್ಗಾ ದೇವೀ ಸರಸ್ವತಿ ।
ಚಾಂದ್ರಾಯಣಂ ಚ ವೃಷಭಂ ವಾಮದೇವಂ ರಥಂತರಂ ।
ಪೌರುಷಂ ಚ ತಥಾಸೂಕ್ತಂ ಶ್ರೀಸೂಕ್ತಮಥವಾಪ್ಸರಂ ।
ಅಭಿಜ್ಞಾಂ ಚ ಪವಿತ್ರಂ ಚ ಚರಿತಂ ವೈಷ್ಣವಂ ತಥಾ ।

ವಾದಿತ್ರಶಬ್ದೈರ್ಜಯಶಬ್ದಮಿಶ್ರೈ-
ರ್ನೃತ್ತೈಸ್ತಥಾ ಭೂಪ ವರಾಙ್ಗನಾನಾಂ ।
ಶೌಚೇ ನಿವೃತ್ತೇ ತ್ವಧಿವಾಸನಂ ವೈ
ಕಾರ್ಯಂ ಸುರಾರ್ಚಾಸು ಯಥಾಭಿಧಾಸ್ಯೇ ॥

ಇತಿ ಶ್ರೀ ವಿಷ್ಣು ಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಅರ್ಚಾಶೌಚಕಥನಂ ನಾಮ
ಶತತಮೋಽಧ್ಯಾಯಃ

---

ಅಪ್ಸರಸೂಕ್ತ, ಅಭಿಜ್ಞಾಸೂಕ್ತ, ಪವಿತ್ರಮಂತ್ರ, ವೈಷ್ಣವೋಪಾಖ್ಯಾನ, ಇವೆಲ್ಲವೂ ಅದಕ್ಕೆ ಅರ್ಹವಾದ ಮಂತ್ರಭಾಗಗಳು. ಎಲೈ ದೊರೆಯೇ ಈ ರೀತಿ ವಾರವನಿತೆಯರ ನೃತ್ಯಗೀತವಾದ್ಯಗಳೊಡಗೂಡಿದ ಜಯಶಬ್ದದಿಂದ ಪ್ರತಿಮಾ ಶುದ್ಧಿಯಾದ ನಂತರ ಅಧಿವಾಸನವೆಂಬ ಸಂಸ್ಕಾರವನ್ನು ಮುಂದೆ ನಾನು ಹೇಳುವಂತೆ ಆ ಪ್ರತಿಮೆಗಳಿಗೆ ನಡೆಸಬೇಕು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಅರ್ಚಾಶೌಚಕಥನವೆಂಬ
ನೂರನೆಯ ಅಧ್ಯಾಯ ಮುಗಿದಿದೆ.

---

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕಾಧಿಕಶತತಮೋಽಧ್ಯಾಯಃ ||

**ಗದ್ಯ—ಮಾರ್ಕಂಡೇಯ ಉವಾಚ—ಅಥಾರ್ಚಾಶೌಚಾನಂತರಂ ಪವಿತ್ರಕಸ್ಯಾರ್ಚಾಯಾಃ ಪಶ್ಚಾದಧಿವಾಸನಂ ಕುರ್ಯಾತ್ । ತತ್ರ ಕಮಲಕರ್ಣಿಕಾಯಾಂ ಧ್ರುವಾದ್ಯೌರಿತಿ ಮಂತ್ರೇಣ ದಕ್ಷಿಣಶಿರಸ್ಕಂ ಪ್ರಾಕ್‌ಶಿರಸಂ ವಾ ಶಯ್ಯಾಯಾಂ ಸ್ಥಾಪಯೇತ್ । ಅತಃ ಪಂಚವರ್ಣೈಃ ಪಂಚಭಿರಾಸ್ತರಣೈರಾಸ್ತರಯೇತ್ । ಶುದ್ಧಾವತ್ಯಶ್ಚೋದೀರಯೇತ್ । ತತೋ ಯುವಾಸುವಾಸಾ ಇತಿ ಪ್ರಚ್ಛಾದನಪಟಂ ದದ್ಯಾತ್ । ಗಂಡೋಪಧಾನಂ ಚ । ತತೋ ದರ್ಭಮಯಂ ಸಪ್ತಶೀರ್ಷಮನನ್ತಂ ನಾಗಂ ಕುರ್ಯಾತ್ । ತಂ ಚ ಶಯನೇ ಸ್ಥಾಪಯೇತ್ ತತೋ ಜೀವಸ್ಯಾವಾಹನಂ ಕುರ್ಯಾತ್ ಶಿವಸಂಕಲ್ಪಂ ಚೋದೀರಯೇತ್ ||**

---

### ನೂರ ಒಂದನೆಯ ಅಧ್ಯಾಯ.

ಮಾರ್ಕಂಡೇಯರು ಹೇಳುತ್ತಾರೆ ಅರ್ಚಾ ಶುದ್ಧಿಯಾದನಂತರ ಅರ್ಚೆಯ ಹಿಂಭಾಗದಲ್ಲಿ ಪವಿತ್ರವನ್ನಿಟ್ಟು ಅಧಿವಾಸನವನ್ನೇರ್ಪಡಿಸಬೇಕು. ಅಲ್ಲಿರುವ ಕಮಲದ ಮಧ್ಯಭಾಗದಲ್ಲಿ ಧ್ರುವಾದ್ಯೌಃ ಎಂಬ ಮಂತ್ರದಿಂದ ದಕ್ಷಿಣಶಿರಸ್ಸಾಗಿಯಾಗಲಿ ಪೂರ್ವಶಿರಸ್ಸಾಗಿಯಾಗಲಿ ಇರುವಂತೆ ಶಯನದಲ್ಲಿ ಸ್ಥಾಪಿಸಬೇಕು. ಅನಂತರ ಐದುಬಣ್ಣಗಳುಳ್ಳ ಐದು ವಿಧವಾದ ಆಸ್ತರಣಗಳನ್ನು ಅರ್ಪಿಸಬೇಕು. ಶುದ್ಧಾವತ್ಯಃ ಎಂಬ ಮಂತ್ರವನ್ನು ಪಠಿಸಬೇಕು. ಅನಂತರ ಯುವಾಸುವಾಸಾಃ, ಎಂಬ ಮಂತ್ರದಿಂದ ಹೊದ್ದಿಕೆಯ ವಸ್ತ್ರವನ್ನೂ ಅರ್ಪಿಸಬೇಕು ದಿಂಬುಗಳನ್ನೂ ಅರ್ಪಿಸಬೇಕು. ಅನಂತರ ದರ್ಭೆಯಲ್ಲಿ ನಿರ್ಮಿತವಾದ ಏಳು ಹೆಡೆಗಳುಳ್ಳ ಅನಂತನೆಂಬ ನಾಗರಾಜನನ್ನು ಆ ಶಯನದಲ್ಲಿ ಸ್ಥಾಪಿಸಬೇಕು ಅನಂತರ ಚೇತನನ ಆವಾಹನವನ್ನು ಮಾಡಬೇಕು. ಶಿವಸಂಕಲ್ಪವನ್ನುಚ್ಚರಿಸಬೇಕು.

**ತತಸ್ತ್ವನಂತಸ್ಯಾವಾಹನಂ ಪ್ರಯೋಜಯೇತ್ । ತತೋಽರ್ಘ್ಯಪಾದ್ಯಾ-ಚಮನೀಯಾನುಲೇಪನಮಾಲ್ಯ ದೀಪಧೂಪ ಮಧುಪರ್ಕಪ್ರಾಪಣಕ ಯಾತ್ರಾಭಿಃ ಪ್ರತ್ಯೇಕಂ ಸಾವಿತ್ರೇಣಾನನ್ತಮರ್ಚಯೇತ್ । ತತಃ ಸರ್ಪಸಾಮ । ನಮೋಽಸ್ತುಸರ್ಪೇಭ್ಯ ಇತಿ ಯೋಗೇಯೋಗೇತಿ ಮಂತ್ರಂ ಚೋದೀರಯೇತ್ । ಅನಂತಮಾಹಾತ್ಮ್ಯಂ ಚ ವಾವ-ದೇತ್ । ತತೋ ಧ್ರುವಾದ್ಯೌರಿತಿ ಮಂತ್ರೇಣಾನನ್ತೋಪರಿ ಶ್ರೀಭಗವ ದರ್ಚಾಂ ಪವಿತ್ರಕೇ ಸ್ಥಾಪಯೇತ್ । ತತೋ ಜೀವಸ್ಯಾವಾಹನಂ-ಕುರ್ಯಾತ್ । ಶಿವಸಂಕಲ್ಪಂ ಜಪೇತ್ । ತತೋ ಭಗವಂತಮಾವಾಹ-ಯೇತ್ । ತತಸ್ಸರ್ವೇ ಭೂನ್ಯಸ್ತಜಾನವಃ ಪ್ರಣಾಮಂ ಕುರ್ಯುಃ ಆಗತಶ್ಚ ಭಗವಾನಿತಿ ಬ್ರೂಯುಃ । ತತಃ ಶಂಖಪಟಹಭೇರೀ ಜಯ ಶಬ್ದೈಃ ಪೂಜಯೇಯುಃ । ತತೋಽರ್ಘ್ಯಪಾದ್ಯಾ-ಚಮನೀಯ ಸ್ನಾನೀಯಾನುಲೇಪನಮಾಲ್ಯಧೂಪದೀಪಮಧು-**

---

ಅನಂತರ ಅನಂತನ ಆವಾಹನವನ್ನು ಪ್ರಯೋಗಿಸಬೇಕು. ಅರ್ಘ್ಯಪಾದ್ಯ ಆಚಮನೀಯ ಗಂಧಪುಷ್ಪಧೂಪದೀಪ ಮಧುಪರ್ಕಪಾನೀಯಮಾತ್ರಾದಾನಾದಿ ಗಳಿಂದ ಸಾವಿತ್ರಮಂತ್ರದಿಂದ ಪ್ರತ್ಯೇಕವಾಗಿ ಪೂಜಿಸಬೇಕು. ಅನಂತರ ಸರ್ಪಸಾಮ ನಮೋ ಅಸ್ತು ಸರ್ಪೇಭ್ಯ, ಯೋಗೇಯೋಗೇ ಎಂಬ ಮಂತ್ರಗಳನ್ನೂ ಪಠಿಸಬೇಕು. ಅನಂತನ ಮಾಹಾತ್ಮ್ಯವನ್ನೂ ಸಹ ಪಾರಾಯಣಮಾಡಬಹುದು. ಇದಾದಮೇಲೆ ಧ್ರುವಾದ್ಯೌ ಎಂಬ ಮಂತ್ರದಿಂದ ಆ ಅನಂತನ ಮೇಲೆ ಪವಿತ್ರವನ್ನಿಟ್ಟು ಭಗವಂತನ ಪ್ರತಿಮೆಯನ್ನು ಸ್ಥಾಪಿಸಬೇಕು. ಅನಂತರ ಭಗವಂತನ ಆವಾಹನವನ್ನು ಮಾಡಿ ಶಿವಸಂಕಲ್ಪವನ್ನೂ ಜಪಿಸಬೇಕು. ಭಗವಂತನನ್ನು ಆವಾಹನಮಾಡಿದನಂತರ ಎಲ್ಲರೂ ಭೂಮಿಯಲ್ಲಿ ಮಂಡಿಗಳನ್ನಿಟ್ಟು ನಮಸ್ಕಾರಮಾಡಬೇಕು. ಭಗವಂತನು ದಯಮಾಡಿದನು ಎಂದೂ ಉಚ್ಚರಿಸಬೇಕು. ಅನಂತರವೂ ಶಂಖ, ಪಟಹ ಭೇರೀ ಇವುಗಳೊಡಗೂಡಿದ ಜಯಶಬ್ದದಿಂದ ಪೂಜಿಸಬೇಕು. ಅನಂತರ ಅರ್ಘ್ಯಪಾದ್ಯಾ ಚಮನೀಯ ಸ್ನಾನೀಯ ಗಂಧಪುಷ್ಪಧೂಪದೀಪಮಧುಪರ್ಕಪಾನೀಯ ಮಾತ್ರಾ

**ಪರ್ಕಪ್ರಾಶಣಕ ಮಾತ್ರಾಪ್ರದಾನೈಃ ಶ್ರೀ ಭಗವಂತಂ ಪ್ರತ್ಯೇಕಂ ಸಾವಿತ್ರೇಣಾರ್ಚಯೇತ್ । ತತಃ ಸ್ವಸ್ತಿನ ಇಂದ್ರ ಇತಿ ಜಪೇತ್ ॥**

**ತತೋ ಯುವಾ ಸುವಾಸಾ ಇತಿ ಶ್ರೀ ಭಗವಂತಂ ಮಹತಾ ವಾಸೋಯುಗೇನಾಚ್ಛಾದಯೇತ್ । ಯುಂಜತೇ ಮನ ಇತಿ ಪುಷ್ಪೈರವಕಿರೇತ್ । ಬೋಧಶ್ಚಮಾ ಪ್ರತಿಬೋಧಶ್ಚೇತಿ ಸಿದ್ಧಾರ್ಥೈರವಕಿರೇತ್ ಪ್ರಾದುರಭಾವಾನಿತಿ ವಾಚಯೇತ್ । ಏವಮಧಿವಾಸನಂ ಕಾರ್ಯಂ । ಅಧಿವಾಸಿತೇ ಚ ಭಗವತಿ ಅರ್ಚಾಸ್ಥಂಡಿಲೇ ವೇದಿಂ ಪ್ರತಿಷ್ಠಾಪ್ಯ ಆಸನಾನಿ ಪಾದಪೀಠಾನಿ ಚ ಅರ್ಚಾಶೌಚವಿಧಾನೇನ ವೇದಿಮಾಸನಾನಿ ಚ ಶೋಧಯೇತ್ । ತತಃ ಶಂಕರಗೀತೋಕ್ತವಿಧಿನಾ ಇಜ್ಯಾಂ ಸಾತ್ವತಃ ಕುರ್ಯಾದಿತಿ। ಇಜ್ಯಾಸಮಕಾಲಮೇವ ಹೋಮಸ್ಥಂಡಿಲೇ ಹೋತಾ ಹೋಮಂ ವೇದೀಶೌಚಮಾಸನಾನಾಂ ಸಕೃದೇವ ವಿಧತ್ತೇ॥**

---

ದಾನಾದಿಗಳನ್ನು ಪ್ರತ್ಯೇಕವಾಗಿ ಸಾವಿತ್ರಮಂತ್ರದಿಂದ ಅರ್ಪಿಸಿ ಭಗವಂತನನ್ನು ಪೂಜಿಸಬೇಕು. ಸ್ವಸ್ತಿನ ಇಂದ್ರ ಇತ್ಯಾದಿ ಮಂತ್ರವನ್ನೂ ಪಠಿಸಬೇಕು.

ಅನಂತನರ ಯುವಾಸುವಾನಾ ಎಂಬ ಮಂತ್ರದಿಂದ ಭಗವಂತನನ್ನು ಉತ್ತಮ ವಸ್ತ್ರದಿಂದ ಹೊದ್ದಿಸಬೇಕು. ಯುಂಜತೆ ಮನಃ ಎಂಬ ಮಂತ್ರದಿಂದ ಹೂವುಗಳನ್ನು ಎರೆಚಬೇಕು. ಬೋಧಶ್ಚ ಮಾಪ್ರತಿಬೋಧಶ್ಚ ಎಂಬ ಮಂತ್ರದಿಂದ ಬಿಳಿಯ ಸಾಸವೆಯನ್ನು ಎರೆಚಬೇಕು. ಭಗವಂತನ ಪ್ರಾದುರ್ಭಾವಬೋಧಕ ಆಖ್ಯಾನಗಳನ್ನು ಪಠಿಸಬೇಕು. ಈ ರೀತಿ ಅಧಿವಾಸನವನ್ನು ಮಾಡಬೇಕು. ಅದಾದನಂತರ ಅರ್ಚಾಸ್ಥಂಡಿಲದಲ್ಲಿ ವೇದಿಯನ್ನು ಸ್ಥಾಪಿಸಿ ಆಸನ ಪಾದಪೀಠ ಇವುಗಳನ್ನೂ ವೇದಿಯನ್ನೂ ಅರ್ಚಾಶೌಚವಿಧಾನವನ್ನನುಸರಿಸಿ ಶೋಧಿಸಬೇಕು. ಅನಂತರ ಸಾತ್ವತನು ಶಂಕರಗೀತೆಯಲ್ಲಿ ಹೇಳಿರುವ ವಿಧಿಯಿಂದ ಇಜ್ಯೆಯನ್ನು ನೆರವೇರಿಸಬೇಕು. ಇಜ್ಯಾ ಕಾಲದಲ್ಲಿಯೇ ಹೋಮಸ್ಥಂಡಿಲದಲ್ಲಿ ಹೋಮವನ್ನೂ ವೇದಿ ಮತ್ತು ಆಸನಾದಿಗಳ ಶುದ್ಧಿಯನ್ನೂ ಹೋತೃವು ಒಂದೇ ಕಾಲದಲ್ಲಿ ಮಾಡುತ್ತಾನೆ. ಅಧಿವಾಸನವಾದನಂತರ ಪ್ರತಿನಿತ್ಯವೂ ಪ್ರತಿಷ್ಠಾದಿನದ ವರಿಗೂ ಇಜ್ಯಾ ಮತ್ತು ಹೋಮಗಳನ್ನೂ,

**ಇಜ್ಯಾಹೋಮೌ ತು ಕರ್ತವ್ಯೌ ಪ್ರತ್ಯಹಂ ತ್ವಧಿವಾಸಿತೇ ।**
**ಪೂಜನಂ ಗೀತನೃತ್ಯೈಶ್ಚ ಪ್ರತಿಷ್ಠಾಯಾವದಾಗತಾ ।**
**ಅಧಿವಾಸನಮೇತತ್ತೇ ಮಯಾ ಸಮ್ಯಗುದಾಹೃತಂ ।**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ವಾಸನಾವರ್ಣನೋ ನಾಮ**
**ಏಕಾಧಿಕಶತತಮೋಽಧ್ಯಾಯಃ**

---

ಗೀತನೃತ್ಯಾದಿಗಳೊಡನೆ ಪೂಜೆಯನ್ನೂ ಸಹ ಮಾಡುತ್ತಿರಬೇಕು. ಈ ರೀತಿಯಾದ ಅಧಿವಾಸನ ವಿಧಿಯನ್ನು ನಿನಗೆ ವಿವರವಾಗಿ ಹೇಳಿದ್ದಾಯಿತು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಅಧಿವಾಸನವರ್ಣನವೆಂಬ
ನೂರ ಒಂದನೆಯ ಅಧ್ಯಾಯವು ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

**|| ದ್ವ್ಯುತ್ತರಶತತಮೋಽಧ್ಯಾಯಃ ||**

**|| ಮಾರ್ಕಂಡೇಯ ಉವಾಚ ||**

**ಆವಾಹಯಾಮ್ಯಹಂ ಜೀವಂ ಬೀಜಂ ಸರ್ವಗತಂ ಪ್ರಭುಂ |**
**ಪಂಚಭಾವಸ್ಥಿತಂ ದೇಹೇ ಪಂಚಧಾ ಚ ಸ್ಥಿತಂ ಪುನಃ || ೧ ||**

**ವಾಯವ್ಯೇನ ತು ಭಾವೇನ ಪಂಚಧಾವಸ್ಥಿತಂ ಪುನಃ |**
**ಆಗ್ನೇಯೇನ ತು ಭಾವೇನ ಪಂಚಧಾವಸ್ಥಿತಂ ತಥಾ || ೨ ||**

**ವಾರುಣೇನ ತು ಭಾವೇನ ಪಂಚಧಾವಸ್ಥಿತಂ ಪ್ರಭುಂ |**
**ಭೂತಾತ್ಮಕತ್ವೇನ ತಥಾ ಪಂಚಧಾವಸ್ಥಿತಂ ಪುನಃ || ೩ ||**

---

**ನೂರ ಎರಡನೆಯ ಅಧ್ಯಾಯ.**

೧-೭. ಮಾರ್ಕಂಡೇಯರು ಹೇಳುತ್ತಾರೆ. ಸರ್ವಗತನಾಗಿಯೂ, ಸರ್ವ ಜೀವಿಗಳಿಗೆ ಬೀಜದಂತೆಯೂ ಇರುವ ಪ್ರಭುವಾದ ವಾಸುದೇವನನ್ನು ಆವಾಹನೆ ಮಾಡುತ್ತೇನೆ. ದೇಹದಲ್ಲಿ ಐದು ವಿಧವಾದ ಚಿತ್ತವೃತ್ತಿಗೆ ನಿಯಾಮಕನೂ. ಬೇರೆ ಐದು ವಿಧವಾಗಿಯೂ ಯಾವ ಪ್ರಭುವು ಇರುತ್ತಾನೆಯೋ, ಹಾಗೆಯೇ ಪಂಚ ಭೂತಗಳಿಗೂ ನಿಯಾಮಕನಾಗಿಯೂ, ಪಂಚವಿಧವಾದ ವಾಯುಗಳಿಗೂ ಪಂಚವಿಧವಾದ ಅಗ್ನಿಗೂ, ಪಂಚವಿಧವಾಗಿರುವ ಜಲತತ್ವದ ವ್ಯಾಪಾರ ಗಳಿಗೂ ನಿಯಾಮಕನಾಗಿಯೂ, ಜಗದೀಶ್ವರನಾಗಿಯೂ ತೇಜಸ್ಸಿನಿಂದ ಅತ್ಯುಗ್ರ ನಾಗಿದ್ದರೂ, ಭಕ್ತಪರಾಧೀನತೆಯಿಂದ ಸೌಮ್ಯನಾಗಿಯೂ, ಸರ್ವವ್ಯಾಪಕನಾಗಿಯೂ ಸರ್ವಸ್ರಷ್ಟೃವಾಗಿಯೂ ಯಾರಿಂದಲೂ ಪರಾಜಯ ಹೊಂದಲಶಕ್ಯವಾದ ಸರ್ವೇಶ್ವರ

ಪರಮಾತ್ಮಾನಮತ್ಯುಗ್ರಮನುಗ್ರಂ ಜಗದೀಶ್ವರಂ ।
ಸರ್ವಗಂ ಸರ್ವಧಾತಾರಂ ಸರ್ವೇಶಮಪರಾಜಿತಂ ॥ ೪ ॥

ಅತ್ಯರ್ಥಸೂಕ್ಷ್ಮಂ ವರದಂ ಕ್ಷೇತ್ರಜ್ಞಂಪ್ರಭುಮೀಶ್ವರಂ ।
ಭೂತಭವ್ಯಭವಿಷ್ಯಸ್ಯ ಪ್ರಭುಂ ಲೋಕನಮಸ್ಕೃತಂ ॥ ೫ ॥

ಗುಣಾಧಾರಂ ಜಗದ್ಯೋನಿಂ ಮಹದ್ಭ್ಯೋಽಪಿ ಮಹತ್ತರಂ ।
ಜೀವದೇವ ತ್ವಮಭ್ಯೇಹಿ ಪ್ರವಿಶಾರ್ಚಾಮಿಮಾಂ ಸ್ವಯಂ ॥ ೬ ॥

ಕುರುಷ್ವ ದೇವದೇವೇಶ ಸಜೀವಂ ಚ ತಥಾನಘ ।
ಇದಮರ್ಘ್ಯಮಿದಂ ಪಾದ್ಯಂ ಧೂಪೋಯಂ ಪ್ರತಿಗೃಹ್ಯತಾಂ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಜೀವಾವಾಹನಂ ನಾಮ
ದ್ವ್ಯುತ್ತರಶತತಮೋಽಧ್ಯಾಯಃ

---

ತ್ವವುಳ್ಳವನಾಗಿಯೂ, ವರಪ್ರದನಾಗಿಯೂ, ಸರ್ವವಸ್ತುಗಳಲ್ಲಿಯೂ ಅಂತಃ ಪ್ರವೇಶಹೊಂದಿ ನಿಯಾಮಕನಾಗಲು ತಕ್ಕ ಸೂಕ್ಷ್ಮತೆಯುಳ್ಳವನಾಗಿಯೂ, ಕ್ಷೇತ್ರಜ್ಞರಾದ ಜೀವರಿಗೆ ಪ್ರಭುವಾಗಿಯೂ, ಭೂತಭವಿಷ್ಯವರ್ತಮಾನ ಕಾಲಗಳಿಗೆ ಸಂಬಂಧಿಸಿದ ಎಲ್ಲಾ ವಸ್ತುಗಳಿಗೂ ಪ್ರಭುವಾಗಿಯೂ, ಲೋಕಪೂಜ್ಯನಾಗಿಯೂ, ಸಮಸ್ತ ಕಲ್ಯಾಣಗುಣಗಳಿಗೆ ಆಶ್ರಯನಾಗಿಯೂ, ಜಗತ್ಕಾರಣನಾಗಿಯೂ, ವ್ಯಾಪಕವಾಗಿರುವ ಪ್ರಕೃತ್ಯಾದಿಗಳಿಗಿಂತಲೂ ವ್ಯಾಪಕನಾಗಿಯೂ, ಜೀವರುಗಳಿಗೆ ಪ್ರಭುವಾಗಿಯೂ ಇರುವ ಪರಮಾತ್ಮನೇ ಇಲ್ಲಿ ದಯಮಾಡು. ನೀನಾಗಿ ಬಂದು ಈ ವಿಗ್ರಹದಲ್ಲಿ ಸಾನ್ನಿಧ್ಯಹೊಂದು. ಹೇ ದೇವಾಧಿಪತಿಯೇ ಈ ವಿಗ್ರಹವನ್ನು ನಿನ್ನ ಸಾನ್ನಿಧ್ಯದಿಂದ ಸಚೇತನವನ್ನಾಗಿ ಮಾಡು. ಈ ಅರ್ಘ್ಯಪಾದ್ಯಧೂಪಾದಿ ಗಳನ್ನು ಸ್ವೀಕರಿಸು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಜೀವಾವಾಹನವೆಂಬ ನೂರ ಎರಡನೆಯ
ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ತ್ರ್ಯುತ್ತರಶತತಮೋऽಧ್ಯಾಯಃ ||

**|| ವಜ್ರ ಉವಾಚ ||**

**ಆವಾಹನಾನಿ ಮೇ ಬ್ರೂಹಿ ದೇವತಾನಾಂ ಭೃಗೂತ್ತಮ ।**
**ಭವನ್ತ್ಯಾವಾಹಿತಾ ಮಂತ್ರೈಃ ಯಸ್ಮಾತ್ಸನ್ನಿಹಿತಾಃ ಸುರಾಃ || ೧ ||**

**|| ಮಾರ್ಕಂಡೇಯ ಉವಾಚ ||**

**ಆವಾಹನಾನಿ ತೇ ವಕ್ಷ್ಯೇ ದೇವಾನಾಂ ಯದುನಂದನ ।**
**ಅಥೋಕ್ತವರ್ಜಂ ಕೇಷಾಂಚಿತ್ಕೇಷಾಂಚಿತ್ಪುನರೇವ ತೇ || ೨ ||**

**ಸರ್ವಸ್ಯಾವಾಹನಸ್ಯಾಂತೇ ಶ್ಲೋಕಾರ್ಧಂ ಪರಿಕೀರ್ತಿತಂ । :**
**ಇದಮರ್ಘ್ಯಂ ಚ ಪಾದ್ಯಂ ಚ ಧೂಪೋಯಂ ಪ್ರತಿಗೃಹ್ಯತಾಂ || ೩ ||**

---

### ನೂರಮೂರನೆಯ ಅಧ್ಯಾಯ

೧-೩. ವಜ್ರನು ಪ್ರಶ್ನೆಮಾಡುತ್ತಾನೆ. ಎಲೈ ಭೃಗುಕುಲವರೇಣ್ಯನೇ ಮಂತ್ರಗಳಿಂದ ಆವಾಹಿತರಾದ ದೇವತೆಗಳು ಪ್ರತಿಮೆಗಳಲ್ಲಿ ಯಾವ ರೀತಿ ಸನ್ನಿಹಿತ ವಾಗುವರೋ ಅಂತಹ ಆವಾಹನಕ್ರಮವನ್ನು ಹೇಳಬೇಕು. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ :—ಎಲೈ ಯಾದವನೇ, ದೇವತೆಗಳ ಆವಾಹನ ಕ್ರಮವನ್ನು ನಿನಗೆ ಹೇಳುತ್ತೇನೆ. ಹಿಂದೆ ಹೇಳಿರುವವರನ್ನು ಬಿಟ್ಟು ಉಳಿದ ಕೆಲವರ ಆವಾಹನವನ್ನೂ ಹೇಳಿರುವವರ ವಿಷಯದಲ್ಲಿಯೂ ಪುನಃ ಕೆಲವು ವಿಷಯಗಳನ್ನೂ ಹೇಳುತ್ತೇನೆ. ಎಲ್ಲಾ ದೇವತೆಗಳ ಆ ವಾಹನಮಂತ್ರದ ಕೊನೆ ಯಲ್ಲಿ "ಇದಮರ್ಘ್ಯಮಿದಂ ಪಾದ್ಯಂ" ಎಂಬ ಶ್ಲೋಕಾರ್ಧವನ್ನು ಸೇರಿಸಿಕೊಳ್ಳ ಬೇಕು.

ಆವಾಹಯಾಮ್ಯಹಂ ದೇವೌ ನಾಸತ್ಯೌ ಸೂರ್ಯನಂದನೌ ।
ಆಗಚ್ಛೇತಾಂ ಮಹಾಭಾಗೌ ವರದೌ ಚಾಶ್ವಿನೌ ಶುಭೌ ॥ ೪ ॥

ವಸೂನಾವಾಹಯಿಷ್ಯಾಮಿ ದೇವಾನದ್ಭುತತೇಜಸಃ ।
ಆಯಾನ್ತು ವರದಾ ದೇವಾಃ ವಸವಃ ಪಾಪನಾಶನಾಃ ॥ ೫ ॥

ವಿಶ್ವಾನಾವಾಹಯಿಷ್ಯಾಮಿ ದೇವಾನದ್ಭುತತೇಜಸಃ ।
ಆಯಾನ್ತು ವರದಾಃ ಸರ್ವೇ ವಿಶ್ವೇದೇವಾ ಮಹಾಬಲಾಃ ॥ ೬ ॥

ಆವಾಹಯಾಮ್ಯಂಗಿರಸೋ ದೇವಾನದ್ಭುತತೇಜಸಃ ।
ಆಯಾನ್ತ್ವಙ್ಗಿರಸೋ ದೇವಾಃ ಮಹಾಬಲಪರಾಕ್ರಮಾಃ ॥ ೭ ॥

ರುದ್ರಾನಾವಾಹಯಿಷ್ಯಾಮಿ ತ್ರಿನೇತ್ರಾನ್ವೃಷವಾಹನಾನ್ ।
ಆಯಾನ್ತು ವರದಾ ರುದ್ರಾಸ್ತ್ರೈಲೋಕ್ಯವರದಾಃ ಶುಭಾಃ ॥ ೮ ॥

---

೪–೮. ಸೂರ್ಯಪುತ್ರರಾದ ಅಶ್ವಿನೀದೇವತೆಗಳನ್ನು ಆವಾಹಿಸುತ್ತೇನೆ. ಮಹಾಮಹಿಮಶಾಲಿಗಳಾಗಿಯೂ, ವರಪ್ರದರಾಗಿಯೂ, ಶುಭಕಾರಿಗಳಾಗಿಯೂ ಇರುವ ಅಶ್ವಿನೀದೇವತೆಗಳು ಇಲ್ಲಿಗೆ ದಯಮಾಡಲಿ. ವರಪ್ರದರಾದ ಅಷ್ಟವಸುಗಳನ್ನು ಆವಾಹಿಸುತ್ತೇನೆ. ಸರ್ವ ಪಾಪನಾಶಕರಾಗಿಯೂ, ವರಪ್ರದರಾಗಿಯೂ ಇರುವ ಅಷ್ಟವಸುಗಳು ಇಲ್ಲಿ ಸಾನ್ನಿಧ್ಯ ಹೊಂದಲಿ. ಆಶ್ಚರ್ಯಕರವಾದ ತೇಜಸ್ಸನ್ನು ಹೊಂದಿರುವ ವಿಶ್ವೇದೇವತೆಗಳನ್ನು ಆವಾಹಿಸುತ್ತೇನೆ. ಬಲಶಾಲಿಗಳಾಗಿಯೂ ವರಪ್ರದರಾಗಿಯೂ ಇರುವ ವಿಶ್ವೇದೇವತೆಗಳು ಎಲ್ಲರೂ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ಹಾಗೆಯೇ ಅದ್ಭುತ ತೇಜಸ್ವಿಗಳಾದ ಅಂಗಿರಸದೇವತೆಗಳನ್ನೂ ಆವಾಹಿಸುತ್ತೇನೆ. ಹೆಚ್ಚಾದ ಬಲಪರಾಕ್ರಮಗಳಿಂದ ಕೂಡಿದ ಅಂಗಿರಸದೇವತೆಗಳು ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ತ್ರಿನೇತ್ರರಾಗಿಯೂ, ವೃಷವಾಹನರಾಗಿಯೂ, ಇರುವ ಏಕಾದಶರುದ್ರರನ್ನು ಆವಾಹಿಸುತ್ತೇನೆ. ಮೂರು ಲೋಕಕ್ಕೂ ವರಪ್ರದಾನಸಮರ್ಥರೂ, ಶುಭಕರರೂ ಆದ ರುದ್ರರು ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ.

**ಆವಾಹಯಿಷ್ಯಾಮ್ಯಾದಿತ್ಯಾನ್ ವರದಾನ್ ದೀಪ್ತತೇಜಸಃ।**
**ಆಯಾಂತು ವರದಾಃ ಸೂರ್ಯಾಃ ಸರ್ವೇ ತೇ ತೇಜಸೋಲ್ಬಣಾಃ ॥ ೯ ॥**

**ಭೃಗೂನಾವಾಹಯಿಷ್ಯಾಮಿ ದೇವಾನ್ ದೀಪ್ತತಪೋಧನಾನ್ ।**
**ಆಯಾಂತು ಭೃಗವೋ ದೇವಾ ವರದಾ ದೀಪ್ತತೇಜಸಃ ॥ ೧೦ ॥**

**ಸುರಾನಾವಾಹಯಿಷ್ಯಾಮಿ ಮರುತಸ್ತೇಜಸಾಧಿಕಾಃ ।**
**ಆಯಾಂತು ಮರುತೋ ದೇವಾಃ ವರದಾ ಭುವನೇಶ್ವರಾಃ ॥ ೧೧ ॥**

**ಸುರಾನಾವಾಹಯಿಷ್ಯಾಮಿ ಸರ್ವಾನೇವ ದಿವೌಕಸಃ ।**
**ಆಗಚ್ಛಂತು ಸುರಾಃ ಸರ್ವೇ ಮಂತ್ರಪೂಜಾಭಿಲಾಷಿಣಃ ॥ ೧೨ ॥**

**ದೈತ್ಯಾನಾವಾಹಯಿಷ್ಯಾಮಿ ಮಹಾಬಲಪರಾಕ್ರಮಾನ್ ।**
**ಆಯಾಂತು ದೈತ್ಯಾ ಧರ್ಮಿಷ್ಠಾ ದೇವದೇವಾನುಗಾ ಮಮ ॥ ೧೩ ॥**

---

೯–೧೩. ಮಹಾತೇಜಸ್ವಿಗಳಾಗಿಯೂ, ವರಪ್ರದರಾಗಿಯೂ ಇರುವ ದ್ವಾದಶಾದಿತ್ಯರನ್ನು ಆವಾಹಿಸುತ್ತೇನೆ. ಪರಿಪೂರ್ಣತೇಜಃಶಾಲಿಗಳಾದ ಆ ಸೂರ್ಯರೆಲ್ಲರೂ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ಉಜ್ವಲವಾದ ತಪಸ್ಸೇ ಪ್ರಧಾನವಾಗಿ ಉಳ್ಳ ಭಾರ್ಗವದೇವತೆಗಳನ್ನು ಆವಾಹಿಸುತ್ತೇನೆ. ವರಪ್ರದರಾಗಿಯೂ, ತೇಜಃಶಾಲಿಗಳಾಗಿಯೂ ಇರುವ ಭೃಗುದೇವತೆಗಳು ಇಲ್ಲಿ ಬಂದು ಸನ್ನಿಹಿತರಾಗಲಿ, ಅಧಿಕ ತೇಜಃಶಾಲಿಗಳಾದ ಮರುತ್ತುಗಳೆಂಬ ಸುರರನ್ನು ಆವಾಹಿಸುತ್ತೇನೆ. ಜಗತ್ಪ್ರಭುಗಳಾಗಿಯೂ, ವರಪ್ರದರಾಗಿಯೂ ಇರುವ ಮರುತ್ತುಗಳು ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ಎಲ್ಲಾ ದೇವತೆಗಳನ್ನೂ ಆವಾಹಿಸುತ್ತೇನೆ. ಮಂತ್ರಪೂರ್ವಕವಾದ ಪೂಜೆಯಲ್ಲಿ ಅಭಿಲಾಷೆಯುಳ್ಳ ಎಲ್ಲಾ ದೇವತೆಗಳೂ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ಹೆಚ್ಚಾದ ಬಲ ಮತ್ತು ಪರಾಕ್ರಮದಿಂದ ಕೂಡಿರುವ ದೈತ್ಯರನ್ನು ಆವಾಹಿಸುತ್ತೇನೆ. ಸರ್ವೇಶ್ವರನ ಅನುಚರರಾದ ಆ ದೈತ್ಯರೆಲ್ಲರೂ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ.

**ಆವಾಹಯಿಷ್ಯೇ ಗಂಧರ್ವಾನ್ ರೂಪದ್ರವಿಣಸಂಯುತಾನ್ ।**
**ಆಯಾಂತು ಸರ್ವಗಂಧರ್ವಾಃ ವರದಾಃ ಕಾಮರೂಪಿಣಃ ॥ ೧೪ ॥**

**ಯಕ್ಷಾನಾವಾಹಯಿಷ್ಯಾಮಿ ಧನಾಧ್ಯಕ್ಷಸಮನ್ವಿತಾನ್ ।**
**ಆಯಾಂತು ವರದಾ ಯಕ್ಷಾಃ ತ್ರೈಲೋಕ್ಯವಿದಿತಾ ಮಮ ॥ ೧೫ ॥**

**ಆವಾಹಯಿಷ್ಯಾಮಿ ತಥಾ ರಾಕ್ಷಸಾನ್ನಿವಿಧಾಯುಧಾನ್ ।**
**ಆಯಾಂತು ರಾಕ್ಷಸಾ ವೀರಾಃ ದೇವದೇವಾನುಯಾಯಿನಃ ॥ ೧೬ ॥**

**ಆವಾಹಯಿಷ್ಯಾಮಿ ತಥಾ ವಿದ್ಯಾಧರಗಣಾನಹಂ ।**
**ವಿದ್ಯಾಧರಾಃ ಸಮಾಯಾಂತು ವಿವಿಧಾ ಗಗನಂಗಮಾಃ ॥ ೧೭ ॥**

**ಆವಾಹಯಿಷ್ಯಾಮಿ ತಥಾ ಕಿನ್ನರಾನ್ ದೇವಗಾಯಕಾನ್ ।**
**ಆಯಾಂತು ಕಿನ್ನರಾಃ ಸರ್ವೇ ಸುಸ್ವರಾಸ್ತು ಸುಲೋಚನಾಃ ॥ ೧೮ ॥**

---

೧೪–೧೯. ಸ್ವರೂಪವೆಂಬ ದ್ರವ್ಯದಿಂದ ಕೂಡಿರುವ ಗಂಧರ್ವರನ್ನು ಆವಾಹಿಸುತ್ತೇನೆ ಕಾಮರೂಪಿಗಳಾಗಿಯೂ ವರಪ್ರದಾನ ಸಮರ್ಥರಾಗಿಯೂ ಇರುವ ಗಂಧರ್ವರು ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ಧನಾಧ್ಯಕ್ಷನಾದ ಕುಬೇರನೊಡಗೂಡಿರುವ ಯಕ್ಷರನ್ನು ಆವಾಹಿಸುತ್ತೇನೆ. ವರಪ್ರದಾನಸಮರ್ಥರೂ ಲೋಕಪ್ರಸಿದ್ಧರೂ ಆದ ಯಕ್ಷರೆಲ್ಲರೂ ಇಲ್ಲಿ ಬಂದು ಸಾನ್ನಿಧ್ಯಹೊಂದಲಿ. ನಾನಾವಿಧವಾದ ಆಯುಧಗಳುಳ್ಳ ರಾಕ್ಷಸರನ್ನೂ ಆವಾಹನ ಮಾಡುತ್ತೇನೆ. ಶೂರರಾಗಿಯೂ ಸರ್ವೇಶ್ವರನ ಅನುಯಾಯಿಗಳಾಗಿಯೂ ಇರುವ ರಾಕ್ಷಸರನ್ನೂ ಆವಾಹನಮಾಡುತ್ತೇನೆ ಶೂರರಾಗಿಯೂ ಸರ್ವೇಶ್ವರನ ಅನುಯಾಯಿಗಳಾಗಿಯೂ ಇರುವ ರಾಕ್ಷಸರೆಲ್ಲರೂ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ವಿಧ್ಯಾಧರರುಗಳನ್ನೂ ಆವಾಹಿಸುತ್ತೇನೆ. ಗಗನಸಂಚಾರಿಗಳಾದ ಎಲ್ಲಾ ವಿಧವಾದ ವಿಧ್ಯಾಧರರೂ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ದೇವಗಾಯಕರಾದ ಕಿನ್ನರರನ್ನೂ ಆವಾಹಿಸುತ್ತೇನೆ. ಸುಸ್ವರರಾಗಿಯೂ ಸೌಮ್ಯಲೋಚನರಾಗಿಯೂ ಇರುವ ಕಿನ್ನರರೆಲ್ಲರೂ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ಸರ್ಪಲೋಕದಲ್ಲಿರುವ ಭುಜಗಜಾತಿಗೆ ಸೇರಿದ ಎಲ್ಲಾ ಸರ್ಪಗಳನ್ನೂ ನಾನು ಆವಾಹಿಸುತ್ತೇನೆ. ವರಪ್ರದಾನಸಮರ್ಥರೂ ಲೋಕಪ್ರಸಿದ್ಧರೂ ಆದ

ನಾಗಾನಾವಾಹಯಿಷ್ಯಾಮಿ ಭುಜಗಾನ್ ಸರ್ಪಗೋಚರಾನ್ ।
ಆಯಾಂತು ವರದಾ ನಾಗಾಸ್ತ್ರೈಲೋಕ್ಯವಿದಿತಾ ಮಮ ॥ ೧೯ ॥

ಅಹಮಾವಾಹಯಿಷ್ಯಾಮಿ ತಥೈವಾಪ್ಸರಸಃ ಶುಭಾಃ ।
ಸಮಾಯಾಂತು ಮಹಾಭಾಗಾ ದೇವಯೋಷಾ ಮಹೋಜ್ವಲಾಃ ॥ ೨೦ ॥

ಅಹಮಾವಾಹಯಿಷ್ಯಾಮಿ ವರದಾ ದೇವಮಾತರಃ ।
ಆಯಾಂತು ವರದಾಃ ಸರ್ವಾಸ್ತಪ್ತಚಾಮೀಕರಪ್ರಭಾಃ ॥ ೨೧ ॥

ಆವಾಹಯಿಷ್ಯಾಮಿ ತಥಾ ವರದಾ ದೇವಮಾತರಃ ।
ಆಯಾಂತು ವರದಾಃ ಸರ್ವಾ ಸುವೇಶಾ ಸುಖದಾಸ್ತಥಾಃ ॥ ೨೨ ॥

ಪಿತೄನ್ ಆವಾಹಯಿಷ್ಯಾಮಿ ಸೂಕ್ಷ್ಮರೂಪಧರಾನಹಂ ।
ಆಯಾಂತು ಪಿತರಃ ಸರ್ವೇ ಗಣಸ್ಥಾಸ್ತು ಪೃಥಕ್ ಪೃಥಕ್ ॥ ೨೩ ॥

ಆವಾಹಯಿಷ್ಯಾಮಿ ತಥಾ ಸುಪರ್ಣಾನ್ ಬಲವತ್ತರಾನ್ ।
ಸುಪರ್ಣಾಸ್ತು ಸಮಾಯಾಂತು ವಿಷ್ಣುತೇಜೋಪಬೃಂಹಿತಾಃ ॥ ೨೪ ॥

---

ನಾಗಾಧಿಪರು ಇಲ್ಲಿ ಬಂದು ಸಾನ್ನಿಧ್ಯಹೊಂದಲಿ. ಶೋಭನಯರಾದ ಅಪ್ಸರಸೆಯರನ್ನೂ ಆವಾಹಿಸುತ್ತೇನೆ. ಉಜ್ವಲವೇಷಧಾರಿಗಳೂ, ಭಾಗ್ಯಶಾಲಿನಿಗಳೂ ಆದ ದೇವಸ್ತ್ರೀಯರು ಇಲ್ಲಿ ಬಂದು ಸಾನ್ನಿಧ್ಯಹೊಂದಲಿ.

೨೧-೨೪ ಎಲ್ಲಾ ದೇವತೆಗಳ ಪತ್ನಿಗಳನ್ನೂ ನಾನು ಆವಾಹಿಸುತ್ತೇನೆ. ಚಿನ್ನದಂತೆ ಉಜ್ಜ್ವಲವಾದ ದೇಹಪ್ರಭೆಯುಳ್ಳ ವರಪ್ರದರಾದ ಎಲ್ಲಾ ದೇವಮಾತೃಗಳನ್ನೂ ಆವಾಹಿಸುತ್ತೇನೆ. ಸುವೇಶದಿಂದ ಕೂಡಿಯೂ, ಮಂಗಳಪ್ರದರಾಗಿಯೂ, ಸುಖಪ್ರದರಾಗಿಯೂ ಇರುವ ಎಲ್ಲಾ ದೇವಮಾತೃಗಳೂ ಇಲ್ಲಿ ಬಂದು ಸನ್ನಿಹಿತರಾಗಲಿ. ಸೂಕ್ಷ್ಮರೂಪಧಾರಿಗಳಾದ ಪಿತೃದೇವತೆಗಳನ್ನು ಆವಾಹಿಸುತ್ತೇನೆ. ಬೇರೆ ಬೇರೆ ಗಣಗಳಲ್ಲಿ ಸೇರಿರುವ ಎಲ್ಲಾ ಪಿತೃಗಳೂ ಇಲ್ಲಿ ಸಾನ್ನಿಧ್ಯಹೊಂದಲಿ. ಬಹಳ ಬಲಿಷ್ಠರಾಗಿರುವ ಗರುಡಾಭಿಮಾನಿಗಳನ್ನೂ ಆವಾಹಿಸುತ್ತೇನೆ. ವಿಷ್ಣುವಿನ ತೇಜಸ್ಸಿನಿಂದ ಅಭಿವೃದ್ಧಿಗೊಂಡಿರುವ ಎಲ್ಲಾ ಸುಪರ್ಣರೂ ಇಲ್ಲಿ ಬಂದು ಸಾನ್ನಿಧ್ಯಹೊಂದಲಿ. ವರಪ್ರದರಾದ ಎಲ್ಲಾ ಪ್ರಜಾಪತಿಗಳನ್ನೂ ಆವಾಹಿಸುತ್ತೇನೆ. ಲೋಕತ್ರಯ ರಕ್ಷಕರಾದ ಎಲ್ಲಾ ಪ್ರಜಾಪತಿಗಳೂ ಇಲ್ಲಿ ಬಂದು ಸನ್ನಿಹಿತರಾಗಲಿ.

ಆವಾಹಯಾಮಿ ವರದಾನ್ ಸರ್ವಾನೇವ ಪ್ರಜಾಪತೀನ್ ।
ಪ್ರಜಾಧ್ಯಕ್ಷಾಃ ಸಮಾಯಾಂತು ತ್ರೈಲೋಕ್ಯಪರಿಪಾಲಕಾಃ ॥ ೨೫ ॥

ಆವಾಹಯಾಮಿ ದೇವೇಂದ್ರಾನ್ ದೇವಾನ್ ಭುವನನಾಯಕಾನ್ ।
ಆಯಾಂತು ದೇವನಾಥಾಮೇ ವರದಾಃ ಕಾಮರೂಪಿಣಃ ॥ ೨೬ ॥

ಮನೂನಾವಾಹಯಿಷ್ಯಾಮಿ ಪ್ರಭೂತ್ವೇ ಜಗತಃ ಸ್ಥಿತಾನ್ ।
ಆಯಾಂತು ಮನವಃ ಸರ್ವೇ ತಪಸಾ ನಷ್ಟಕಿಲ್ಬಿಷಾಃ ॥ ೨೭ ॥

ಆವಾಹಯಿಷ್ಯಾಮ್ಯೋಷಧ್ಯಃ ಸರ್ವಪ್ರಾಣಿಧರಾಃ ಶುಭಾಃ ।
ಓಷಧ್ಯಶ್ಚ ಸಮಾಯಾಂತು ಸರ್ವಾಃ ಕಾಮಪ್ರದಾಃ ಶುಭಾಃ ॥ ೨೮ ॥

ಋಷೀನಾವಾಹಯಿಷ್ಯಾಮಿ ತಪಸಾದ್ಯೋತಿತಪ್ರಭಾನ್ ।
ಆಯಾಂತು ಋಷಯಃ ಸಿದ್ಧಾಃ ಸರ್ವೇ ಮೇ ದೀಪ್ತತೇಜಸಃ ।
ಶೈಲಾನಾವಾಹಯಿಷ್ಯಾಮಿ ಸರ್ವೌಷಧಿಸಮನ್ವಿತಾನ್ ॥ ೨೯ ॥

ಆಯಾಂತು ಭೂಧರಾಃ ಶೈಲಾಃ ಸರ್ವೇ ಮೇ ಸ್ಥಾವರೇಶ್ವರಾಃ ।
ದ್ರುಮಾನಾವಾಹಯಿಷ್ಯಾಮಿ ನಾನಾರೂಪಧರಾನಹಂ ॥ ೩೦ ॥

---

೨೫-೩೦. ಪ್ರಪಂಚಗಳಿಗೇ ನಾಯಕರಾಗಿರುವ ದೇವತಾ ಸ್ವರೂಪರಾದ ದೇವೇಂದ್ರರನ್ನು ಆವಾಹಿಸುತ್ತೇನೆ. ಕಾಮರೂಪಿಗಳೂ, ವರಪ್ರದಾನಸಮರ್ಥರೂ ಆದ ದೇವಾಧಿಪರೆಲ್ಲರೂ ಇಲ್ಲಿಬಂದು ಸಾನ್ನಿಧ್ಯಹೊಂದಲಿ ಜಗತ್ಪ್ರಭುಗಳಾಗಿರುವ ಮನುಗಳನ್ನು ಆವಾಹಿಸುತ್ತೇನೆ. ತಪಸ್ಸಿನಿಂದ ನಿಷ್ಪಾಪರಾಗಿರುವ ಎಲ್ಲಾ ಮನುಗಳೂ ಇಲ್ಲಿ ಬಂದು ಸನ್ನಿಹಿತರಾಗಲಿ. ಎಲ್ಲಾ ಪ್ರಾಣಿಗಳ ಜೀವನವನ್ನೂ ಧರಿಸಿರುವ ಮಂಗಳಪ್ರದಗಳಾದ ಓಷಧಿಗಳನ್ನೆಲ್ಲಾ ಆವಾಹಿಸುತ್ತೇನೆ. ಸರ್ವಮನೋರಥಪ್ರದಗಳಾದ ಓಷಧಿಗಳೆಲ್ಲವೂ ಇಲ್ಲಿ ಬಂದು ಸಾನ್ನಿಧ್ಯಹೊಂದಲಿ, ತಪಸ್ಸಿನಿಂದ ದೇದೀಪ್ಯಮಾನರಾದ ಋಷಿಗಳನ್ನು ಆವಾಹಿಸುತ್ತೇನೆ. ತೇಜಸ್ವಿಗಳಾಗಿಯೂ, ಸಿದ್ಧರಾಗಿಯೂ ಇರುವ ಆ ಋಷಿಗಳೆಲ್ಲರೂ ಇಲ್ಲಿ ಬಂದು ಸಾನ್ನಿಧ್ಯಹೊಂದಲಿ. ಎಲ್ಲಾ ವಿಧವಾದ ಔಷಧಗಳಿಂದಲೂ ಕೂಡಿರುವ ಪರ್ವತಗಳನ್ನು ಆವಾಹಿಸುತ್ತೇನೆ. ಸ್ಥಿರವಸ್ತುಗಳಿಗೆಲ್ಲಾ ಅಧೀಶ್ವರರಾದ ಎಲ್ಲಾ ಪರ್ವತಗಳೂ ಇಲ್ಲಿ ಬಂದು ಸಾನ್ನಿಧ್ಯಹೊಂದಲಿ ನಾನಾರೂಪಗಳನ್ನು ಹೊಂದಿರುವ ಮಹಾವೃಕ್ಷಗಳನ್ನು ಆವಾಹಿಸುತ್ತೇನೆ.

ದ್ರುಮಾಃ ಸರ್ವೇ ಸಮಾಯಾಂತು ಮನೋಮಾರುತರಂಹಸಃ ।
ಆವಾಹಯಿಷ್ಯಾಮಿ ತಥಾ ಪಾತಾಲಾನ್ಸರ್ವಗೋಚರಾನ್ ॥ ೩೦ ॥

ಆಯಾಂತು ಸರ್ವೇ ಪಾತಾಲಾಃ ದೈತ್ಯಸ್ಥಾನಾದನಿಂದಿತಾಃ ।
ದ್ವೀಪಾನಾವಾಹಯಿಷ್ಯಾಮಿ ಸರ್ವಾನದ್ಭುತಧಾರಿಣಃ ॥ ೩೧ ॥

ಆಯಾಂತು ದ್ವೀಪಾ ಲೋಕಾನಾಂ ಸ್ಥಾನಭೂತಾ ಜಗತ್ಪ್ರಿಯಾಃ ।
ಲೋಕಾನಾವಾಹಯಿಷ್ಯಾಮಿ ಸ್ಥಾನಭೂತಾನ್ಮನೋಹರಾನ್ ॥ ೩೨ ॥

ಆಯಾಂತು ಲೋಕಾಃ ಸಕಲಾಃ ಸರ್ವೇ ಮೇ ಭೂತಭಾವನಾಃ ।
ಆವಾಹಯಿಷ್ಯಾಮಿ ತಥಾ ಸಮುದ್ರಾನ್ ಜಗತಃ ಪ್ರಿಯಾನ್ ॥ ೩೪ ॥

ಸಮುದ್ರಾ ಮೇ ಸಮಾಯಾನ್ತು ರಸಾಧಾರಾ ಜಗತ್ಪ್ರಿಯಾಃ ।
ವರ್ಷಾನಾವಾಹಯಿಷ್ಯಾಮಿ ಸರ್ವಭೂತಾಶ್ರಯಾನಿಹ ॥ ೩೫ ॥

---

೩೦-೩೫. ಮನಸ್ಸಿಗೂ ಮಾರುತಕ್ಕೂ ಸಮಾನವಾದ ವೇಗದಿಂದ ಕೂಡಿ ಆ ಮಹಾ ದ್ರುಮಗಳೆಲ್ಲಾ ಇಲ್ಲಿ ಬಂದು ಸಾನ್ನಿಧ್ಯಹೊಂದಲಿ. ಪಾತಾಲದಲ್ಲಿರುವ ಸಮಸ್ತರನ್ನೂ ಆವಾಹಿಸುತ್ತೇನೆ. ಸ್ತೋತ್ರಾರ್ಹರಾದ ಪಾತಾಳವಾಸಿಗಳೆಲ್ಲರೂ ದೈತ್ಯಸ್ಥಾನದಿಂದ ಇಲ್ಲಿ ಬಂದು ನೆಲಸಲಿ. ಸರ್ವಾಶ್ಚರ್ಯಕಾರಿಗಳಾದ ಎಲ್ಲಾ ದ್ವೀಪಗಳನ್ನೂ ಆವಾಹಿಸುತ್ತೇನೆ. ಎಲ್ಲಾ ಲೋಕಗಳಿಗೂ ಆಶ್ರಯವಾಗಿಯೂ ಜಗತ್ಪ್ರಿಯರಾಗಿಯೂ ಇರುವ ದ್ವೀಪಗಳೆಲ್ಲವೂ, ಇಲ್ಲಿ ಬಂದು ಸಾನ್ನಿಧ್ಯಹೊಂದಲಿ. ಎಲ್ಲಕ್ಕೂ ಆಶ್ರಯವಾಗಿಯೂ, ರಮ್ಯವಾಗಿಯೂ ಇರುವ ಲೋಕಗಳನ್ನು ಆವಾಹಿಸುತ್ತೇನೆ. ಸರ್ವಭೂತಕಾರಣಗಳಾದ ಎಲ್ಲಾ ಲೋಕಗಳೂ ಇಲ್ಲಿ ಬಂದು ಸಾನ್ನಿಧ್ಯಹೊಂದಲಿ ಜಗತ್ಪ್ರಿಯಗಳಾದ ಎಲ್ಲಾ ಸಮುದ್ರಗಳನ್ನು ಆವಾಹಿಸುತ್ತೇನೆ. ಜಲಾಧಾರಗಳಾದ ಎಲ್ಲಾ ಸಮುದ್ರಗಳೂ ಇಲ್ಲಿ ಬಂದು ಸಾನ್ನಿಧ್ಯಹೊಂದಲಿ. ಸರ್ವಭೂತಗಳಿಗೂ ಆಶ್ರಯಗಳಾಗಿರುವ ವರ್ಷಗಳನ್ನು ಆವಾಹಿಸುತ್ತೇನೆ. ಸರ್ವ ರಮ್ಯಗಳಾದ ವರ್ಷಗಳೆಲ್ಲವೂ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ.

ಆಗಚ್ಛಂತು ತಥಾ ಚೇಹ ವರ್ಷಾಃ ಸರ್ವಮನೋಹರಾಃ ।
ಆವಾಹಯಿಷ್ಯಾಮಿ ತಥಾ ಚತುರಃ ಸಾಗರಾನಹಂ ॥ ೩೬ ॥

ಸಾಗರಾಃ ಶೀಘ್ರಮಾಯಾಂತು ಸರ್ವೇ ತೋಯಧರಾ ಮಮ ।
ನದೀಸ್ತ್ವಾವಾಹಯಿಷ್ಯಾಮಿ ವರದಾ ಲೋಕಮಾತರಃ ॥ ೩೭ ॥

ಆಯಾಂತು ವರದಾ ನದ್ಯಃ ಸರ್ವಪಾಪಹರಾಃ ಶುಭಾಃ ।
ಆವಾಹಯಿಷ್ಯಾಮಿ ತಥಾ ಸರ್ವಾನಭ್ರಗಣಾನಹಂ ॥ ೩೮ ॥

ಆಯಾಂತ್ವಭ್ರಾ ಮಹಾಭಾಗಾಃ ಸರ್ವೇ ಚಾಶುಚರಾ ಮಮ ।
ಆವಾಹಯಿಷ್ಯಾಮಿ ತಥಾ ಪಿಶಾಚಾನ್ಸರ್ವಗಾನಹಂ ॥ ೩೯ ॥

ಪಿಶಾಚಾಸ್ತು ಸಮಾಯಾಂತು ಸರ್ವೇ ಮೇ ಕಾಮರೂಪಿಣಃ ।
[1] ಆವಾಹಯಿಷ್ಯಾಮಿ ತಥಾ ಸ್ಕಂದಸ್ಯ ಪಾರ್ಶ್ವಗಾನಹಂ ॥ ೪೦ ॥

ನಾನಾರೂಪಾಃ ಸಮಾಯಾಂತು ಸ್ಕಂದಸ್ಯ ಪಾರ್ಶ್ವಗಾ ಮಮ ।
ಆವಾಹಯಿಷ್ಯಾಮಿ ತಥಾ ದೇವಾನಾಂ ಪಾರ್ಷದಾನಹಂ ॥ ೪೧ ॥

---

೩೬–೪೧. ನಾಲ್ಕು ಸಾಗರಗಳನ್ನೂ ಆವಾಹಿಸುತ್ತೇನೆ. ಜಲಾಧಾರಗಳಾದ ಸರ್ವಸಾಗರಗಳೂ ಇಲ್ಲಿ ಬಂದು ಸಾನ್ನಿಧ್ಯಹೊಂದಲಿ. ಲೋಕಮಾತೆಗಳಾಗಿಯೂ, ವರಪ್ರದೆಗಳಾಗಿಯೂ ಇರುವ ನದಿಗಳನ್ನು ಆವಾಹಿಸುತ್ತೇನೆ. ಸರ್ವಪಾಪನಾಶಕಗಳಾದ ಶುಭನದಿಗಳೆಲ್ಲಾ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ಎಲ್ಲಾ ಮೇಘಗಣಗಳನ್ನೂ ಆವಾಹಿಸುತ್ತೇನೆ. ಮಹಾಮಾಹಾತ್ಮ್ಯಶಾಲಿಗಳಾದ ಎಲ್ಲಾ ಮೇಘಗಳೂ ವೇಗದಿಂದ ಕೂಡಿ ಇಲ್ಲಿ ಬಂದು ಸಾನ್ನಿಧ್ಯಹೊಂದಲಿ. ಎಲ್ಲಾ ಕಡೆಗಳಲ್ಲಿಯೂ ಇರುವ ಪಿಶಾಚಗಳನ್ನು ಆವಾಹಿಸುತ್ತೇನೆ. ಕಾಮರೂಪಿಗಳಾದ ಪಿಶಾಚಿಗಳೆಲ್ಲವೂ ಇಲ್ಲಿ ಬಂದು ಸಾನ್ನಿಧ್ಯಹೊಂದಲಿ. ಸ್ಕಂದನ ಪಾರ್ಶ್ವದಲ್ಲಿರುವವರನ್ನೂ ಆವಾಹಿಸುತ್ತೇನೆ. ನಾನಾರೂಪಿಗಳಾದ ಆ ಪಾರ್ಶ್ವಗತರೆಲ್ಲರೂ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ದೇವತೆಗಳ ಪಾರ್ಶ್ವಗತರನ್ನೂ ಆವಾಹಿಸುತ್ತೇನೆ. ನಾನಾರೂಪಿಗಳಾದ ದೇವಪರಿಷದ್ಗತರೆಲ್ಲರೂ ಇಲ್ಲಿ ಬಂದು ಸಾನ್ನಿಧ್ಯವೀಯಲಿ

---

1 ಇಲ್ಲಿ ವೃತ್ತಭಂಗವಿದೆ.

ನಾನಾರೂಪಾಃ ಸಮಾಯಾಂತು ದೇವಾನಾಂ ಪಾರ್ಷದಾ ಮಮ ।
ಆವಾಹಯಿಷ್ಯಾಮಿ ತಥಾ ಹರಸ್ಯ ಪಾರ್ಷದಾನಹಂ ।

ನಾನಾರೂಪಾಃ ಸಮಾಯಾಂತು ಹರಸ್ಯ ಪಾರ್ಷದಾ ಮಮ ॥ ೪೨ ॥

ಆವಾಹಯಿಷ್ಯಾಮಿ ತಥಾ ಮಾತರೋ ಲೋಕಮಾತರಃ ॥ ೪೩ ॥

ಆಯಾಂತು ಮಾತರೋ ದೇವ್ಯೋ ವರದಾಃ ಸರ್ವಗಾಃ ಶುಭಾಃ ।
ಗ್ರಹಾನಾವಾಹಯಿಷ್ಯಾಮಿ ಸರ್ವಲೋಕೇಶ್ವರಾನಹಂ ॥ ೪೪ ॥

ಗ್ರಹಾಃ ಸರ್ವೇ ಸಮಾಯಾಂತು ದೀಪ್ತಾ ಭುವನನಾಯಕಾಃ ।
ಆವಾಹಯಿಷ್ಯಾಮಿ ತಥಾ ನಕ್ಷತ್ರಾನ್ವರದಾನಹಂ ॥ ೪೫ ॥

ಆಯಾಂತು ಸರ್ವೇ ನಕ್ಷತ್ರಾಃ ಸರ್ವೇ ಭುವನನಾಯಕಾಃ ।
ದಿಶಸ್ತ್ವಾವಾಹಯಿಷ್ಯಾಮಿ ಪ್ರಾಗಾದ್ಯಾಃ ಸುಮನೋಹರಾಃ ॥ ೪೬ ॥

ಆಗಚ್ಛಂತು ದಿಶಃ ಸರ್ವಾಃ ಸರ್ವಭೂತಸುಖಾವಹಾಃ ।
ವೀಥ್ಯಸ್ತ್ವಾವಾಹಯಿಷ್ಯಾಮಿ ದಿವ್ಯಾ ನವಗ್ರಹಾಶ್ರಯಾಃ ॥ ೪೭ ॥

---

೪೨–೪೬. ಹರನ ಪರಿವಾರದವರನ್ನು ಆವಾಹಿಸುತ್ತೇನೆ. ನಾನಾರೂಪಿಗಳಾದ ಆ ಹರನ ಪರಿವಾರದವರೆಲ್ಲಾ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ಲೋಕಮಾತೆಗಳಾದ ಸಪ್ತಮಾತೃಕೆಗಳನ್ನು ಆವಾಹಿಸುತ್ತೇನೆ. ಸರ್ವವ್ಯಾಪಕರಾಗಿಯೂ, ವರಪ್ರದರಾಗಿಯೂ, ಶುಭಕಾರಿಣಿಗಳಾಗಿಯೂ ಇರುವ ಆ ದೇವಿಗಳೆಲ್ಲರೂ ಇಲ್ಲಿ ಬಂದು ಸಾನ್ನಿಧ್ಯಹೊಂದಲಿ. ಲೋಕಾಧಿಪತಿಗಳಾದ ಗ್ರಹಗಳನ್ನು ಆವಾಹಿಸುತ್ತೇನೆ. ಪ್ರಭೆಯಿಂದ ಪ್ರಕಾಶಮಾನವಾದ ಆ ಗ್ರಹಗಳೆಲ್ಲವೂ ಇಲ್ಲಿ ಬಂದು ಸಾನ್ನಿಧ್ಯ ಹೊಂದಿರಲಿ. ವರಪ್ರದಗಳಾದ ನಕ್ಷತ್ರಗಳನ್ನು ಆವಾಹಿಸುತ್ತೇನೆ. ಲೋಕನಾಯಕರಾದ ನಕ್ಷತ್ರಗಳೆಲ್ಲರೂ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ಪೂರ್ವವೇ ಮೊದಲಾದ ರಮ್ಯಗಳಾದ ದಿಕ್ಕುಗಳನ್ನು ಆವಾಹಿಸುತ್ತೇನೆ. ಸರ್ವಪ್ರಾಣಿಗಳಿಗೂ ಸುಖಕರಗಳಾದ ದಿಕ್ಕುಗಳೆಲ್ಲವೂ ಇಲ್ಲಿ ಸಾನ್ನಿಧ್ಯ ಹೊಂದಲಿ.

**ಆಯಾಂತು ವೀಥ್ಯಃ ಸಕಲಾಃ ಗ್ರಹನಕ್ಷತ್ರಮಂಡಿತಾಃ ।**
**ಅಹಮಾವಾಹಯಿಷ್ಯಾಮಿ ಮುಹೂರ್ತಾನ್ ಸೂಕ್ಷ್ಮರೂಪಿಣಃ　　॥ ೪೮ ॥**

**ಮುಹೂರ್ತಾಃ ಶೀಘ್ರಮಾಯಾಂತು ಕಾಲಸ್ಯಾವಯವಾಃ ಶುಭಾಃ ।**
**ಋತೂನಾವಾಹಯಿಷ್ಯಾಮಿ ಷಡಹಂ ಭುವನೇಶ್ವರಾನ್　　॥ ೪೯ ॥**

**ಆಯಾಂತು ಋತವಃ ಸರ್ವೇ ಜಗಚ್ಚಕ್ರಪ್ರವರ್ತಕಾಃ ।**
**ಆವಾಹಯಿಷ್ಯಾಮಿ ತಥಾ ಪಂಚ ಸಂವತ್ಸರಾನಹಂ　　॥ ೫೦ ॥**

**ಆಯಾಂತು ವತ್ಸರಾಃ ಸರ್ವೇ ಕಾಲಚಕ್ರಪ್ರವರ್ತಕಾಃ ।**
**ಯುಗಾನಾವಾಹಯಿಷ್ಯಾಮಿ ಚತುರೋ ದೀಪ್ತತೇಜಸಃ　　॥ ೫೧ ॥**

**ಆಗಚ್ಛಂತು ಯುಗಾಃ ಸರ್ವೇ ಚತುರ್ಮೂರ್ತಿವ್ಯವಸ್ಥಿತಾಃ ।**
**ಆಹಮಾವಾಹಯಿಷ್ಯಾಮಿ ಮನೂಂಶ್ಚೈವ ಚತುರ್ದಶ　　॥ ೫೨ ॥**

---

೪೭-೫೦. ನವಗ್ರಹಗಳಿಗೂ ಆಶ್ರಯವಾದ ದಿವ್ಯ ವೀಥಿಗಳನ್ನು ಆಹ್ವಾನಿಸುತ್ತೇನೆ. ಗ್ರಹನಕ್ಷತ್ರಗಳಿಂದ ಕೂಡಿದ ಎಲ್ಲಾ ವೀಥಿಗಳೂ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ಸೂಕ್ಷ್ಮರೂಪಗಳಾದ ಮುಹೂರ್ತಗಳನ್ನು ಆಹ್ವಾನಿಸುತ್ತೇನೆ. ಮಹಾಕಾಲದ ಅವಯವರೂಪಗಳಾದ ಎಲ್ಲಾ ಶುಭಮುಹೂರ್ತಗಳೂ ಶೀಘ್ರವಾಗಿ ಇಲ್ಲಿ ಸಾನ್ನಿಧ್ಯ ಹೊಂದಲಿ. ಪ್ರಪಂಚ ವ್ಯವಹಾರಕ್ಕೆಲ್ಲಾ ನಿಯಾಮಕಗಳಾದ ಷಟ್ ಋತುಗಳನ್ನು ಆಹ್ವಾನಿಸುತ್ತೇನೆ ಜಗಚ್ಚಕ್ರಕ್ಕೆ ಪ್ರವರ್ತಕಗಳಾದ ಎಲ್ಲಾ ಋತುಗಳೂ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ಐದು ಸಂವತ್ಸರಗಳನ್ನು ಆವಾಹಿಸುತ್ತೇನೆ. ಕಾಲಚಕ್ರಗತಿಗೆ ಸಹಾಯಕಗಳಾದ ವತ್ಸರಗಳೆಲ್ಲವೂ ಇಲ್ಲಿ ಸಾನಿಧ್ಯ ಹೊಂದಲಿ.

೫೧-೫೫. ಉಜ್ವಲ ತೇಜಸ್ವಿಗಳಾದ ನಾಲ್ಕು ಯುಗಗಳನ್ನು ಆವಾಹಿಸುತ್ತೇನೆ. ನಾಲ್ಕು ವಿಧವಾದ ಆಕಾರದಿಂದ ನಿರ್ಣಯಿಸಲ್ಪಟ್ಟಿರುವ ಎಲ್ಲಾ ಯುಗಗಳೂ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ಚತುರ್ದಶಮನುಗಳನ್ನೂ ನಾನು ಆವಾಹಿಸುತ್ತೇನೆ. ಎಲ್ಲಾ ದೇವತೆಗಳು ಇರುವವರಿಗೆ ಇರುವ ಮನ್ವಂತರಗಳೆಲ್ಲವೂ ಇಲ್ಲಿ ಸನ್ನಿಹಿತವಾಗಲಿ. ಅನೇಕ ಅವಯವಗಳಿಂದ ಕೂಡಿದ ಶುಭಕರನಾದ ಕಾಲ

ಮನ್ವಂತರಾಃ ಸಮಾಯಾಂತು ತ್ರಿದಶಾವಧಿಸಂಸ್ಥಿತಾ ।
ಕಾಲಮಾವಾಹಯಿಷ್ಯಾಮಿ ದೇವಂ ಸಾವಯವಂ ಶುಭಂ ॥ ೫೩ ॥

ಆಗಚ್ಛ ಭಗವನ್ ಕಾಲ ದೇವದೇವ ಜನಾರ್ದನ ।
ದೇವಾನಾವಾಹಯಿಷ್ಯಾಮಿ ಯಜ್ಞಮೂರ್ತಿಧರಾನಹಂ ॥ ೫೪ ॥

ದೇವಾಃ ಸರ್ವೇ ಸಮಾಯಾಂತು ವರದಾ ಬಹುರೂಪಿಣಃ ।
ಗ್ರಹಮಾವಾಹಯಿಷ್ಯಾಮಿ ವಿದ್ಯಾಸ್ಥಾನಾನ್ಯಶೇಷತಃ ॥ ೫೫ ॥

ಸರ್ವಾಣೀಹ ಸಮಾಯಾಂತು ಲೋಕಾನಾಂ ಹಿತಕಾಮ್ಯಯಾ ।
ಶಸ್ತ್ರಾಣ್ಯಾವಾಹಯಿಷ್ಯಾಮಿ ಶಾಂತದರ್ಶನವತ್ ಸ್ಥಿತಾನ್ ॥ ೫೬ ॥

ಶಸ್ತ್ರಾಣಿ ಶೀಘ್ರಮಾಯಾಂತು ಚಮೂನಾಂ ಮಂಡನಂ ಪರಂ ।
ಅಸ್ತ್ರಾಣ್ಯಾವಾಹಯಿಷ್ಯಾಮಿ ತ್ರೈಲೋಕ್ಯಸ್ಯ ಹಿತಾನಿ ವೈ ॥ ೫೭ ॥

ಸರ್ವೇ ಚೇಹ ಸಮಾಯಾಂತು ಧರ್ಮಸೇತುಪ್ರವರ್ತಕಾಃ ।
ಅಹಮಾವಾಹಯಿಷ್ಯಾಮಿ ವೇದಶಾಸ್ತ್ರಾಣ್ಯನೇಕಶಃ ॥ ೫೮ ॥

---

ಪುರುಷನನ್ನು ಆವಾಹಿಸುತ್ತೇನೆ. ದೇವಪ್ರಭುವಾಗಿಯೂ, ಜನಾರ್ಧನನ ಸಹಕಾರಿಯಾಗಿಯೂ ಇರುವ ಕಾಲಪುರುಷನೇ ಇಲ್ಲಿ ಬಂದು ನೀನು ಸಾನ್ನಿಧ್ಯ ಹೊಂದು. ಯಜ್ಞದ ಮೂರ್ತಿಮತ್ತಾದ ಸ್ವರೂಪವೇ ಆಗಿರುವ ದೇವತೆಗಳನ್ನು ಆವಾಹಿಸುತ್ತೇನೆ. ಅನೇಕ ರೂಪಧಾರಿಗಳಾಗಿಯೂ ವರಪ್ರದರಾಗಿಯೂ ಇರುವ ಎಲ್ಲಾ ದೇವತೆಗಳೂ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ಎಲ್ಲಾ ವಿದ್ಯೆಗಳಿಗೂ ಅಭಿಮಾನಿದೇವತೆಗಳಾದ ಗ್ರಹಗಳನ್ನು ಆವಾಹಿಸುತ್ತೇನೆ. ಲೋಕಹಿತಕ್ಕಾಗಿ ಆ ಗ್ರಹಗಳು ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ.

೫೬–೬೨. ಶಾಂತಚಿತ್ತರಾದವರ ತತ್ವಶಾಸ್ತ್ರದಂತೆ ಪ್ರತಿವಾದಿನಿರಸನಸಮರ್ಥಗಳಾದ ಶಸ್ತ್ರಗಳನ್ನು ಆವಾಹಿಸುತ್ತೇನೆ. ಸೈನ್ಯಗಳಿಗೆ ಅಲಂಕಾರಗಳಾದ ಶಸ್ತ್ರಗಳೆಲ್ಲವೂ ಇಲ್ಲಿ ಸಾನ್ನಿಧ್ಯ ಹೊಂದಲಿ. ಮೂರು ಲೋಕಗಳಿಗೂ ಹಿತಕರಗಳಾದ ಅಸ್ತ್ರಗಳನ್ನು ಆವಾಹಿಸುತ್ತೇನೆ. ಧರ್ಮದ ಎಲ್ಲೆಗೆ ರಕ್ಷಕವಾಗಿರುವ ಶಸ್ತ್ರಗಳೆಲ್ಲವೂ ಇಲ್ಲಿ ಸಾನ್ನಿಧ್ಯ ಹೊಂದಲಿ. ವೇದಶಾಸ್ತ್ರಗಳೆಲ್ಲವನ್ನೂ ನಾನು ಆವಾಹಿಸುತ್ತೇನೆ. ಜಗದ್ರಕ್ಷಣದಲ್ಲಿಯೇ ನಿರತವಾಗಿರುವ ವೇದಶಾಸ್ತ್ರಗಳೆಲ್ಲವೂ ಇಲ್ಲಿ ಬಂದು ನೆಲೆಸಲಿ.

ವೇದಶಾಸ್ತ್ರಾಃ ಸಮಾಯಾಂತು ಜಗದ್ರಕ್ಷಣತತ್ಪರಾಃ ।
ಅಹಮಾವಾಹಯಿಷ್ಯಾಮಿ ಸರ್ವಾಂಸ್ತ್ರಿದಶವಾಹನಾನ್ || ೫೯ ||

ಇಹ ಸರ್ವೇ ಸಮಾಯಾಂತು ಸರ್ವೇ ತ್ರಿದಶವಾಹನಾಃ ।
ನಾಗಾನಾವಾಹಯಿಷ್ಯಾಮಿ ದೇವಪುತ್ರಾನ್ಮಹಾಬಲಾನ್ || ೬೦ ||

ದೇವೋಪವಾಹ್ಯಾ ನಾಗೇಂದ್ರಾಃ ಶೀಘ್ರಮಾಯಾಂತು ಸತ್ವರಾಃ ।
ನಿಧೀನಾವಾಹಯಿಷ್ಯಾಮಿ ಶಂಖಪದ್ಮಪುರೋಗಮಾನ್ ।
ಆಯಾಂತು ನಿಧಯಃ ಸರ್ವೇ ಸರ್ವಲೋಕೈಕಭಾವನಾಃ || ೬೧ ||

ಆಹ್ವಾನಕಾರ್ಯಂ ಯದಿ ಸಂಘಮಧ್ಯಾ-
ದೇಕಸ್ಯ ಕಾರ್ಯಂ ಯದುವಂಶನಾಥ ।
ಕಾರ್ಯಾ ತಥೋಹಾ ತು ತದೇಕವಕ್ತ್ರಾ-
ದಾಹ್ವಾನಮಂತ್ರಸ್ಯ ಯಥಾನುರೂಪಾ || ೬೨ ||

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಪ್ರತಿಷ್ಠಾಕಲ್ಪೇ ದೇವಸಂಘಾಹ್ವಾನಂ ನಾಮ ತ್ರ್ಯುತ್ತರಶತತಮೋಽಧ್ಯಾಯಃ

---

ದೇವತೆಗಳ ವಾಹನಗಳನ್ನೆಲ್ಲಾ ನಾನು ಆವಾಹಿಸುತ್ತೇನೆ. ಆವಾಹನಗಳೆಲ್ಲವೂ ಇಲ್ಲಿ ಬಂದು ಸಾನ್ನಿಧ್ಯಹೊಂದಲಿ. ದೇವತೆಗಳ ಪುತ್ರರಂದ ನಾಗಗಳನ್ನೂ ಆವಾಹಿಸುತ್ತೇನೆ. ದೇವತೆಗಳಿಗೆ ವಾಹನಗಳಾಗಿರುವ ನಾಗಶ್ರೇಷ್ಠಗಳೆಲ್ಲವೂ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ಶಂಖ, ಪದ್ಮ ಮೊದಲಾದ ನಿಧಿಗಳನ್ನೂ ಆವಾಹಿಸುತ್ತೇನೆ. ಎಲ್ಲಾ ಲೋಕಗಳಿಗೂ ಉಪಕಾರಿಗಳಾದ ನಿಧಿಗಳೆಲ್ಲವೂ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ಆಹ್ವಾನಕ್ರಮವು ಒಂದು ಸಂಘದ ಮಧ್ಯದಿಂದ ಒಬ್ಬೊಬ್ಬರಿಗೇ ಅನ್ವಯಿಸುವ ಸಂಭವವಿದ್ದಲ್ಲಿ ಆಗ ಒಬ್ಬರಿಗೇ ಅನ್ವಯಿಸುವಂತೆ ಈ ಆಹ್ವಾನಮಂತ್ರಗಳಲ್ಲಿ ಊಹೆಯನ್ನು ಏರ್ಪಡಿಸಿಕೊಳ್ಳಬೇಕು. (ಆಹ್ವಾನಕ್ಕೆ ಅನ್ವಯಿಸುವ ವ್ಯಕ್ತಿಗೆ ಬೋಧಕವಾದ ಶಬ್ದದಲ್ಲಿ ಲಿಂಗವಚನವ್ಯತ್ಯಾಸಮಾಡಿಕೊಳ್ಳುವುದಕ್ಕೆ ಊಹವೆಂದು ಹೆಸರು.)

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಪ್ರತಿಷ್ಠಾಕಲ್ಪದಲ್ಲಿ ದೇವಸಂಘಾಹ್ವಾನವೆಂಬ ನೂರ ಮೂರನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಚತುರುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಆವಾಹಯಾಮ್ಯಹಂ ದೇವಂ ಬ್ರಹ್ಮಾಣಂ ಪರಮೇಷ್ಠಿನಂ |**
**ಜಗತೋಽಸ್ಯ ಸಮುತ್ಪತ್ತಿಸ್ಥಿತಿಸಂಹಾರಕಾರಣಂ || ೧ ||**

**ಚತುರ್ವೇದಂ ಚತುರ್ವಕ್ತ್ರಂ ಚಾತುರ್ವರ್ಣ್ಯಪ್ರಭುಂ ಗುರುಂ |**
**ಚತುರಾಶ್ರಮಗೋಪ್ತಾರಂ ವರದಂ ಭೂತಭಾವನಂ || ೨ ||**

**ಪದ್ಮಯೋನಿಂ ಜಗದ್ಯೋನಿಂ ಯಜ್ಞಯೋನಿಂ ಜಗತ್ಪತಿಂ |**
**ಆತ್ಮಯೋನಿಮನಾಧೃಷ್ಯಂ ಯಜ್ಞವಾಹಂ ಜಗತ್ಪತಿಂ || ೩ ||**

---

### ನೂರ ನಾಲ್ಕನೆಯ ಅಧ್ಯಾಯ.

೧-೫. ಮಾರ್ಕಂಡೇಯರು ಹೇಳುತ್ತಾರೆ :-ಅತ್ಯುಚ್ಚಸ್ಥಾನದಲ್ಲಿರುವ ಬ್ರಹ್ಮದೇವನನ್ನು ಆವಾಹಿಸುತ್ತೇನೆ. ಯಾವ ಬ್ರಹ್ಮನು ಜಗತ್ತಿನ ಉತ್ಪತ್ತಿ ಸ್ಥಿತಿಸಂಹಾರಗಳಿಗೆ ಕಾರಣನೋ ಚತುರ್ವೇದಧಾರಿಯಾಗಿಯೂ, ಚತುರ್ವಕ್ತ್ರಧಾರಿಯಾಗಿಯೂ, ವೇದೋಪದೇಶದಿಂದ ಗುರುವಾಗಿ ಚಾತುರ್ವರ್ಣ್ಯಕ್ಕೆ ಪ್ರಭುವಾಗಿಯೂ, ಇರುವನೋ ಮತ್ತು ನಾಲ್ಕು ಆಶ್ರಮಗಳಿಗೂ ರಕ್ಷಕನಾಗಿ ವರಪ್ರದನಾಗಿ, ಮಹಾಭೂತಗಳಿಂದ ಕೂಡಿರುವ ಜಗತ್ತಿಗೆ ಉತ್ಪಾದಕನಾಗಿರುವನೋ ಪದ್ಮೋದ್ಭವನಾಗಿಯೂ, ಜಗತ್ಕಾರಣನಾಗಿಯೂ, ಯಜ್ಞವಿಧಿಪ್ರವರ್ತಕನಾಗಿಯೂ, ಜಗತ್ಪತಿಯಾಗಿಯೂ ಇರುವನೋ, ಪರಮಾತ್ಮನ ಸಂಕಲ್ಪಮಾತ್ರದಿಂದ ಉದ್ಭವಿಸಿಯೂ ಇತರರಿಂದ ಪರಿಭವಾನರ್ಹನಾಗಿಯೂ, ಯಜ್ಞಪ್ರವರ್ತಕನಾಗಿಯೂ

ಯಜ್ಞೇಶಂ ಯಜ್ಞಮೂರ್ತಿಂ ಚ ತ್ರೈಲೋಕ್ಯಸ್ಯೈಕಕಾರಣಂ ।
ಸರ್ವಗಂ ನಾರಪಂ ಸೌಮ್ಯಂ ಪರಮಂ ಪರಮೇಶ್ವರಂ　　॥ ೪ ॥

ಭೂತಭವ್ಯಭವನ್ನಾಥಂ ಯೋಗಜ್ಞೇಯಂ ಸನಾತನಂ ।
ಆಗಚ್ಛ ಭಗವನ್ ಬ್ರಹ್ಮನ್ ಯಜಮಾನಸ್ಯ ವೃದ್ಧಯೇ　　॥ ೫ ॥

ಇದಮರ್ಘ್ಯಮಿದಂ ಪಾದ್ಯಂ ಧೂಪಂಚೇದಂ ಪ್ರಗೃಹ್ಯತಾಂ ।
ಆವಾಹಯಾಮ್ಯಹಂ ದೇವಂ ದೇವದೇವಂ ಹುತಾಶನಂ　　॥ ೬ ॥

ಜಗತೋಸ್ಯ ಸಮುತ್ಪತ್ತಿಸ್ಥಿತಿಸಂಹಾರಕಾರಣಂ ।
ದೇವಮೂರ್ತಿಂ ತದಾಧಾರಂ ಸರ್ವದೇವಮುಖಂ ಪ್ರಭುಂ　　॥ ೭ ॥

ಪಿಙ್ಗೇಕ್ಷಣಂ ಪಿಙ್ಗಜಟಂ ಧೂಮಕೇತುಂ ವಿಭಾವಸುಂ ।
ಶುಕಯಾನಗಮಂ ದೇವಂ ಸರ್ವಾಭರಣಭೂಷಿತಂ　　॥ ೮ ॥

---

ಯಜ್ಞವಿಧಿಗೆ ನಿಯಾಮಕನಾಗಿಯೂ, ಯಜ್ಞಸ್ವರೂಪನಾಗಿಯೂ, ಮೂರು ಲೋಕಕ್ಕೂ ಏಕಮಾತ್ರನೇ ಆದ ಕಾರಣರೂಪನಾಗಿಯೂ, ಸರ್ವವ್ಯಾಪಕನಾಗಿಯೂ ಪಾಪನಾಶಕನಾಗಿಯೂ, ಸೌಮ್ಯನಾಗಿಯೂ, ಪರಮಪ್ರಭುವಾಗಿಯೂ, ಇರುವನೋ ಕಾಲತ್ರಯದ ವಸ್ತುಗಳಿಗೆಲ್ಲಾ ಪ್ರಭುವಾಗಿಯೂ, ಅಷ್ಟಾಂಗಯೋಗದಿಂದ ಅರಿಯಲು ಸಾಧ್ಯನಾಗಿಯೂ, ಶಾಶ್ವತನಾಗಿಯೂ, ಇರುವನೋ ಅಂತಹ ಎಲೈ ಚತುರ್ಮುಖನೇ ಯಜಮಾನನ ಅಭ್ಯುದಯಕ್ಕಾಗಿ ನೀನು ಇಲ್ಲಿ ಬಂದು ಸಾನ್ನಿಧ್ಯಹೊಂದು. ಇದೋ ಈ ಅರ್ಘ್ಯಪಾದ್ಯಧೂಪಾದಿಗಳನ್ನು ಸ್ವೀಕರಿಸು.

೬-೧೧. ದೇವತೆಗಳಲ್ಲಿ ಉತ್ಕೃಷ್ಟನಾಗಿರುವ ಅಗ್ನಿದೇವನನ್ನು ಆವಾಹಿಸುತ್ತೇನೆ. ಯಾವ ಅಗ್ನಿಯು ಸೃಷ್ಟಿಗೆ ಸಹಾಯಕನಾಗಿ ಜಗತ್ತಿನ ಉತ್ಪತ್ತಿಸ್ಥಿತಿ ಸಂಹಾರಗಳಿಗೂ, ಕಾರಣನಾಗಿರುವನೋ, ದೇವತೆಗಳಿಗೆ ಅಭಿಮಾನಮೂರ್ತಿಯಾಗಿಯೂ, ಆಧಾರನಾಗಿಯೂ, ದೇವತೆಗಳಿಗೆ ಮುಖರೂಪನಾಗಿಯೂ, ಇರುವನೋ, ಹೊಂಬಣ್ಣವುಳ್ಳ ನೇತ್ರ ಮತ್ತು ಜಟೆಗಳನ್ನು ಹೊಂದಿ ಧೂಮಧ್ವಜನಾಗಿ ಪ್ರಕಾಶರೂಪನಾಗಿರುವನೋ, ಶುಕಯಾನಸಂಚಾರಿಯಾಗಿ ಆಭರಣ

ಸರ್ವಗಂ ವರದಂ ಧಾನುಂ ಜಠರಸ್ಥಂ ಚ ದೇಹಿನಾಂ ।
ತೇಜೋಮೂರ್ತಿಂ ದುರಾಧರ್ಷಂ ಸಪ್ತಜಿಹ್ವಂ ಮಹಾಬಲಂ ॥ ೯ ॥

ಸಪ್ತಾರ್ಚಿಷಂ ಸಪ್ತಮುನಿಂ ಸಮಿತ್ಸಪ್ತಕಮಚ್ಯುತಂ ।
ವಿಷ್ಣೋರಂಶಮನಿರ್ದೇಶ್ಯಂ ಭಾನವಂ ಜಾತವೇದಸಂ ॥ ೧೦ ॥

ಪಾವನಂ ಪುಷ್ಟಿದಂ ಸೌಮ್ಯಂ ಭಕ್ತಾನಾಂ ಭೂತಿವರ್ಧನಂ ।
ಯಾಜಕಂ ಯಜಮಾನಂ ಚ ಪುಷ್ಟ್ಯಾ ವಿಭಜ ಸರ್ವಶಃ ॥ ೧೧ ॥

ಇದಮರ್ಘ್ಯಮಿದಂ ಪಾದ್ಯಂ ಧೂಪಂ ಚೇದಂ ಪ್ರಗೃಹ್ಯತಾಂ ।
ಆವಾಹನಾನ್ಯತೋ ವಕ್ಷ್ಯೇ ಸರ್ವೇಷಾಂ ಪಾರ್ಥಿವೋತ್ತಮ ॥ ೧೨ ॥

ಸರ್ವಸ್ಯಾವಾಹನಸ್ಯಾಂತೇ ಶ್ಲೋಕೋಽಯಂ ಪರಿಕೀರ್ತಿತಃ ।
ಪ್ರವಿಶ್ಯಾರ್ಚಾಮಿಮಾಂ ಸಮ್ಯಕ್ ಮಯಾ ಭಕ್ತ್ಯಾವಿನಿರ್ಮಿತಾಂ ॥ ೧೩ ॥

---

ಭೂಷಿತನಾಗಿ, ಸರ್ವವ್ಯಾಪಕನೂ, ವರಪ್ರದನೂ ಪ್ರಾಣಿಗಳ ಜಠರವಾಸಿಯಾಗಿಯೂ ಆಗಿರುವನೋ, ತೇಜೋಮೂರ್ತಿಯಾಗಿಯೂ, ಅಜೇಯನಾಗಿಯೂ, ಏಳು ಚಿಹ್ನೆ (ಶಿಖೆ)ಗಳುಳ್ಳವನಾಗಿಯೂ, ಮಹಾಬಲಶಾಲಿಯಾಗಿಯೂ ಏಳು ವಿಧವಾದ ತೇಜಸ್ಸುಳ್ಳವನಾಗಿಯೂ, ಸಪ್ತರ್ಷಿಸ್ವರೂಪನಾಗಿಯೂ, ಏಳು ವಿಧವಾದ ಸಮಿತ್ತಿಗೆ ಅರ್ಹನಾಗಿಯೂ, ಪತನರಹಿತನಾಗಿಯೂ, ವಿಷ್ಣುವಿನ ಅಂಶವಾಗಿಯೂ, ಅಪರಿಮೇಯನಾಗಿಯೂ, ಸೂರ್ಯಸಂಬಂಧಿಯಾಗಿಯೂ, ವೇದಗಳ ಪ್ರಕಾಶಕ್ಕೆ ಕಾರಣನಾಗಿಯೂ, ಪವಿತ್ರಕರನಾಗಿಯೂ, ಪುಷ್ಟಿಕರನಾಗಿಯೂ, ಭಕ್ತರಿಗೆ ಐಶ್ವರ್ಯಪ್ರದನಾಗಿಯೂ, ಇರುವನೋ ಅಂತಹ ಎಲೈ ಅಗ್ನಿದೇವನೇ ಯಾಜಕನಿಗೂ, ಯಜಮಾನನಿಗೂ ಸರ್ವವಿಧದಲ್ಲೂ ಪುಷ್ಟಿಯನ್ನುಂಟುಮಾಡುವ, ಇಗೋ ಈ ಅರ್ಘ್ಯಪಾದ್ಯಗಳನ್ನು ಸ್ವೀಕರಿಸು.

೧೨-೧೩. ಎಲೈ ದೊರೆಯೇ, ಇತರ ದೇವತೆಗಳ ಆವಾಹನವನ್ನೂ ಇನ್ನು ಮುಂದೆ ಹೇಳುತ್ತೇನೆ. ಎಲ್ಲಾ ಆವಾಹನಗಳಲ್ಲಿಯೂ ಈ ಶ್ಲೋಕವನ್ನು ಅನಂತರ ಸೇರಿಸಿಕೊಳ್ಳಬೇಕು. "ಪ್ರವಿಶ್ಯಾರ್ಚಾಂ" ಎಂಬುದೇ ಆ ಶ್ಲೋಕ, ಭಕ್ತಿಯಿಂದ ನಾನು ನಿರ್ಮಿಸಿರುವ ಈ ವಿಗ್ರಹದಲ್ಲಿ ಸಾನ್ನಿಧ್ಯಹೊಂದಿರಿ. ಈ ಅರ್ಘ್ಯಪಾದ್ಯ

**ಇದಮರ್ಘ್ಯಮಿದಂ ಪಾದ್ಯಂ ಧೂಪಂ ಚೇದಂ ಪ್ರಗೃಹ್ಯತಾಂ ।**
**ಧ್ರುವಮಾವಾಹಯಿಷ್ಯಾಮಿ ಸರ್ವದೇವಗಣೇಶ್ವರಂ ॥ ೧೪ ॥**

**ನಿಬದ್ಧಂ ಭ್ರಾಮ್ಯತೇ ಯೇನ ಭಚಕ್ರಂ ವಾತರಜ್ಜುಭಿಃ ।**
**ಏಹಿ ಮೇ ಧ್ರುವ ದೇವೇಶ ಕೇಶವಾಚಿಂತ್ಯವಿಕ್ರಮ ॥ ೧೫ ॥**

**ಸರ್ವಗ್ರಹಗಣಾಧ್ಯಕ್ಷ ಸರ್ವಲೋಕನಮಸ್ಕೃತ ।**
**ಆವಾಹಯಿಷ್ಯಾಮ್ಯಾಕಾಶಂ ವಿಮಾನಶತಮಂಡಿತಂ ॥ ೧೬ ॥**

**ತೃತೀಯಂ ದೇವದೇವಸ್ಯ ಪದಂ ವಿಷ್ಣೋರ್ಮಹಾತ್ಮನಃ ।**
**ಏಹಿ ಮೇ ಭಗವನ್ ಸೌಮ್ಯ ನಿರಾಲಂಬ ನಭಸ್ಥಲ ॥ ೧೭ ॥**

**ಅಪ್ರಮೇಯಾತಿಗಂಭೀರ ವಿಮಾನಶತಮಂಡಿತ ।**
**ಊರ್ಧ್ವಮಾವಾಹಯಿಷ್ಯಾಮಿ ಈಶಾನಸ್ಥಾಂ ಮಹತೀಂ ದಿಶಂ ॥ ೧೮ ॥**

---

ಧೂಪಾದಿಗಳನ್ನೂ ಸ್ವೀಕರಿಸಿರಿ. ಎಲ್ಲಾ ದೇವಗಣಗಳಿಗೂ ಅಧಿಪತಿಯಾದ ಧ್ರುವನನ್ನು ಆವಾಹಿಸುತ್ತೇನೆ. ಯಾವ ಧ್ರುವನಿಂದ ವಾಯುರಜ್ಜುಗಳಿಂದ ದೃಢೀಕೃತವಾದ ನಕ್ಷತ್ರಮಂಡಲವು ಸುತ್ತುತ್ತಿದೆಯೋ, ಯಾವ ಧ್ರುವನು ಕೇಶವನಿಂದಲೂ ಚಿಂತಿಸಲಶಕ್ಯವಾದ ವಿಕ್ರಮಶಾಲಿಯೋ. ಗ್ರಹಗಣಗಳಿಗೆ ಅಧ್ಯಕ್ಷನಾಗಿಯೂ, ಲೋಕವಂದ್ಯನಾಗಿಯೂ ಇರುವನೋ ಅಂತಹ ಪೂಜ್ಯನಾದ ಧ್ರುವನೇ ಇಲ್ಲಿ ಬಂದು ಸಾನ್ನಿಧ್ಯಹೊಂದು. ಅನೇಕ ವಿಮಾನಗಳಿಂದ ಅಲಙ್ಕೃತನಾಗಿಯೂ, ಮಹಾತ್ಮನಾದ ವಿಷ್ಣುವಿಗೆ ಮೂರನೇಯ ಸ್ಥಾನವಾಗಿಯೂ, ನಿರಾಲಂಬಸ್ವರೂಪನಾಗಿಯೂ ಗಂಭೀರನಾಗಿಯೂ, ಅಪ್ರಮೇಯನಾಗಿಯೂ, ಇರುವ ಆಕಾಶವನ್ನು ಆವಾಹಿಸುತ್ತೇನೆ. ಎಲೈ ಆಕಾಶವೇ ಸೌಮ್ಯಮೂರ್ತಿಯೇ ಇಲ್ಲಿ ಬಂದು ಸಾನ್ನಿಧ್ಯಹೊಂದು.

೧೮-೨೧. ವಿಶಾಲವಾಗಿಯೂ, ಅನಂತವಾಗಿಯೂ ಇರುವ ಅಂತರಿಕ್ಷ ದಿಕ್ಕುಗಳನ್ನು ಆವಾಹಿಸುತ್ತೇನೆ. ಅಪರಿಚ್ಛೇದ್ಯೆಯಾಗಿಯೂ, ನಿರಾಲಂಬವಾಗಿಯೂ, ಚಂದ್ರಸೂರ್ಯಪ್ರಭೆಗಳಿಗೂ ನಿಲುಕದಿರುವವಳಾಗಿಯೂ, ಭಾಗ್ಯಶಾಲಿನಿಯಾಗಿಯೂ, ಯಾವಾಗಲೂ ಸಿದ್ಧಸೇವಿತೆಯಾಗಿಯೂ, ನಿರ್ಮಲೆಯಾಗಿಯೂ ಹಿತಪ್ರದೆಯಾಗಿಯೂ

**ಅಪ್ರಮೇಯಾಂ ನಿರಾಲಮ್ಬಾಂ ಚಂದ್ರಸೂರ್ಯಾಂಶುವರ್ಜಿತಾಂ ।**
**ಆಗಚ್ಛೇಹ ಮಹಾಭಾಗೇ ಸತತಂ ಸಿದ್ಧಸೇವಿತೇ ॥ ೧೯ ॥**

**ಅನಂತೇ ವಿಪುಲೇ ದೇವಿ ನಿರ್ಮಲೇ ಹಿತಕಾರಿಣಿ ।**
**ಆವಾಹಯಾಮ್ಯಧಸ್ತಾತ್ತು ದಿಶಂ ಶೇಷೇಣ ಪಾಲಿತಾಂ ॥ ೨೦ ॥**

**ನಾಗದೈತ್ಯೋರಗಗಣೈಃ ಸತತಂ ಚ ನಿಷೇವಿತಾಂ ।**
**ಗಂಭೀರೆ ವಿಪುಲೇ ಭೀಮೆ ಬಹುಸ್ಥಾನಾತಿಮಂಡಿತೇ ॥ ೨೧ ॥**

**ಏಹಿ ಮೇ ರತ್ನಬಹುಲೇ ಬಹುರೂಪೇ ಮಹಾಬಲೇ ।**
**ಆವಾಹಯಿಷ್ಯೇ ವರದಂ ಸಹಸ್ರಾಂಶುಂ ದಿವಾಕರಂ ॥ ೨೨ ॥**

**ತೇಜೋಮೂರ್ತಿಂ ದುರಾಧರ್ಷಂ ಭಕ್ತಾನಾಮಭಯಪ್ರದಂ ।**
**ಏಹಿ ದೇವ ಜಗನ್ನಾಥ ಋುಕ್ಸಾಮಯಜುಷಾಂ ಪತೇ ॥ ೨೩ ॥**

---

ಇರುವ ಅಂತರಿಕ್ಷದಿಗ್ದೇವತೆಯೇ ಇಲ್ಲಿ ಬಂದು ಸಾನ್ನಿಧ್ಯಹೊಂದು. ಶೇಷನಿಂದ ರಕ್ಷಿತವಾಗಿರುವ ಪಾತಾಳದಿಕ್ಕನ್ನೂ ಆವಾಹಿಸುತ್ತೇನೆ. ನಾಗ, ದೈತ್ಯ, ಸರ್ಪ ಇವುಗಳ ಸಮೂಹದಿಂದ ಸರ್ವದಾ ಸೇವಿಸಲ್ಪಟ್ಟು, ಬಹುವಿಧವಾದ ವಿಹಾರ ಸ್ಥಾನಗಳಿಂದ ಕೂಡಿಯೂ, ಗಂಭೀರವಾಗಿಯೂ, ವಿಸ್ತಾರವಾಗಿಯೂ, ಭಯಂಕರ ವಾಗಿಯೂ, ಮಹಾಬಲಶಾಲಿನಿಯಾಗಿಯೂ, ನಾನಾರೂಪಗಳನ್ನು ಹೊಂದಿಯೂ, ರತ್ನಪ್ರಚುರವಾಗಿಯೂ ಇರುವ ಪಾತಾಳದಿಗ್ದೇವತೆಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೨೨–೨೫. ವರಪ್ರದನಾಗಿಯೂ, ಸಹಸ್ರಕಿರಣಮಾಲಿಯಾಗಿಯೂ, ತೇಜಃ ಸ್ವರೂಪನಾಗಿಯೂ, ಭಕ್ತರಿಗೆ ಅಭಯದಾತೃವಾಗಿಯೂ, ಪರಾಭವರಹಿತ ನಾಗಿಯೂ ಇರುವ ಸೂರ್ಯದೇವನನ್ನು ಆವಾಹಿಸುತ್ತೇನೆ. ಋುಗ್ಯಜುಃಸಾಮ ವೇದಗಳಿಗೆ ಅಧಿಪತಿಯಾಗಿಯೂ, ಲೋಕತ್ರಯಕ್ಕೆ ದೀಪದಂತೆ ಪ್ರಕಾಶಕ ನಾಗಿಯೂ, ಜಗತ್ಪತಿಯಾಗಿಯೂಸರ್ವವ್ಯಾಧಿನಾಶಕನಾಗಿಯೂ ಇರುವ ಸೂರ್ಯ ದೇವನೇ ನೀನು ಇಲ್ಲಿ ಬಂದು ಸಾನ್ನಿಧ್ಯಹೊಂದು. ಸೂರ್ಯನಂತೆ ಪ್ರಕಾಶಮಾನ ನಾಗಿಯೂ, ಅಥವಾ ಅದಿತಿಪುತ್ರನಾಗಿಯೂ, ಹೊಳಪಾದ ವೈಡೂರ್ಯಮಣಿ

ತ್ರೈಲೋಕ್ಯಮಂಡಲೇ ದೀಪ ಸರ್ವವ್ಯಾಧಿವಿನಾಶನ ।
ಆವಾಹಯಾಮ್ಯಹಂ ದೇವಮಾದಿತ್ಯಮುದಕೇಶಯಂ ॥ ೨೪ ॥

ಸ್ನಿಗ್ಧವೈದೂರ್ಯಸಂಕಾಶಂ ವರುಣಂ ಸುಮಹಾದ್ಯುತಿಂ ।
ಏಹಿ ದೇವ ಜಲಾಧ್ಯಕ್ಷ ಯಾದೋಗಣಮಹೇಶ್ವರ ॥ ೨೫ ॥

ನಾಗದೈತ್ಯೋರಗಗಣೈಃ ಸತತಂ ಸೇವಿತಾಚ್ಯುತ ।
ಆವಾಹಯಾಮ್ಯಹಂ ಚಂದ್ರಂ ಶೀತಾಂಶುಮಮೃತಪ್ರಭಂ ॥ ೨೬ ॥

ಓಷಧೀಶಂ ದ್ವಿಜಾಧ್ಯಕ್ಷಂ ನಯನಾನಂದಕಾರಕಂ ।
ಏಹಿ ಮೇ ಭಗವನ್ ಚಂದ್ರ ಶಶಾಙ್ಕಮೃಗಲಾಂಛನ ॥ ೨೭ ॥

ಭಕ್ತಾನುಕಂಪಿನ್ ಸತತಂ ಸರ್ವನಕ್ಷತ್ರಪೂಜಿತ ।
ಭೌಮಮಾವಾಹಯಿಷ್ಯಾಮಿ ತೇಜೋಮೂರ್ತಿಂ ದುರಾಸದಂ ॥ ೨೮ ॥

ಭದ್ರಮೂರ್ತಿಮನಿರ್ದೇಶ್ಯಂ ವಕ್ತ್ರೇ ರುಧಿರಸಪ್ರಭಂ ।
ಏಹಿ ಮೇ ಭಗವನ್ ಭೌಮ ಅಂಗಾರಕಸಮಪ್ರಭ ॥ ೨೯ ॥

---

ಯಂತೆ ಪ್ರಕಾಶಮಾನನಾಗಿಯೂ, ಮಹಾತೇಜಸ್ವಿಯಾಗಿಯೂ ಇರುವ ವರುಣನನ್ನು ಆವಾಹಿಸುತ್ತೇನೆ. ಜಲಾಧ್ಯಕ್ಷನಾಗಿಯೂ, ಜಲಚರಪ್ರಾಣಿಗಳಿಗೆ ಪ್ರಭುವಾಗಿಯೂ, ಗಜ, ದೈತ್ಯ, ಉರಗ ಇವುಗಳ ಸಂಘದಿಂದ ಯಾವಾಗಲೂ ಸೇವಿಸಲ್ಪಡುತ್ತಿರುವ ಎಲೆ ವರುಣದೇವನೇ ಇಲ್ಲಿ ಬಂದು ಸಾನ್ನಿಧ್ಯಹೊಂದು.

೨೬–೨೯. ಶೀತಕಿರಣನಾಗಿಯೂ, ಅಮೃತದ್ಯುತಿಯಾಗಿಯೂ, ಓಷಧ್ಯಿಗಳಿಗೆ ಪ್ರಭುವಾಗಿಯೂ, ಬ್ರಾಹ್ಮಣಾಧಿಪತಿಯಾಗಿಯೂ, ನೇತ್ರಾನಂದದಾಯಿಯಾಗಿಯೂ ಇರುವ ಚಂದ್ರನನ್ನು ಆವಾಹಿಸುತ್ತೇನೆ. ಶಶಚಿಹ್ನನೂ, ಮೃಗಚಿಹ್ನನೂ, ಭಕ್ತರಲ್ಲಿ ದಯಾಶಾಲಿಯೂ, ಸರ್ವನಕ್ಷತ್ರಗಳಿಂದಲೂ ಸನ್ಮಾನಿತನೂ ಆದ ಎಲೈ ಚಂದ್ರನೇ. ನೀನು ಇಲ್ಲಿ ಬಂದು ಸಾನ್ನಿಧ್ಯಹೊಂದು. ತೇಜೋಮೂರ್ತಿಯಾಗಿಯೂ, ಅಪರಾಜಿತನಾಗಿಯೂ, ಮಂಗಲದೇಹನಾಗಿಯೂ, ಅಚಿಂತ್ಯನಾಗಿಯೂ, ರಕ್ತದಂತೆ ಕೆಂಪಾದ ಮುಖವುಳ್ಳವನಾಗಿಯೂ, ಇರುವ ಅಂಗಾರಕನನ್ನು ಆವಾಹಿಸುತ್ತೇನೆ. ಅಗ್ನಿಯಂತಿರುವ ಎಲೈ ಅಂಗಾರಕನೇ ಇಲ್ಲಿ ಬಂದು ಸಾನ್ನಿಧ್ಯಹೊಂದು. ಪೂಜ್ಯನೇ ಪ್ರಪಂಚದ ಶುಭಾಶುಭವೆಲ್ಲವೂ ನಿನಗೆ ಅಧೀನವಾದುದು.

ಕ್ರೈಯಿ ಸರ್ವಂ ಸಮಾಯುಕ್ತಂ ಭೂತಲೇಽಸ್ಮಿನ್ ಶುಭಾಶುಭಂ ।
ಸ್ಕಂದಮಾವಾಹಯಿಷ್ಯಾಮಿ ಷಣ್ಮುಖಂ ವರದಂ ಶಿಶುಂ ॥ ೩೦ ॥

ದೇವಾರಿಸೇನಾಮಥನಂ ಪಾರ್ವತ್ಯಾನಂದವರ್ಧನಂ ।
ಏಹಿ ದೇವ ಕುಮಾರಾದ್ಯ ಮಹಿಷಾಸುರತಸ್ಕರ ॥ ೩೧ ॥

ಕಾರ್ತಿಕೇಯ ಜಗನ್ನಾಥ ಮಯೂರವರವಾಹನ ।
ಬುಧಮಾವಾಹಯಿಷ್ಯಾಮಿ ಬೋಧನಂ ಜಗದೀಶ್ವರಂ ॥ ೩೨ ॥

ಚಾಂದ್ರಿಂ ಗ್ರಹಗಣಾಧ್ಯಕ್ಷಂ ತೇಜೋಮೂರ್ತಿಂ ದುರಾಸದಂ ।
ಏಹಿ ಶೀತಾಂಶುಜಾಽಚಿಂತ್ಯ ಜಗಜ್ಜಿಷ್ಣೋ ಜನಾರ್ದನ ॥ ೩೩ ॥

ಮಹಾಬಲ ಮಹಾಭಾಗ ಮಹಾಬಾಹೋ ಮಹಾದ್ಯುತೇ ।
ವಿಷ್ಣುಮಾವಾಹಯಿಷ್ಯಾಮಿ ಶಂಖಚಕ್ರಗದಾಧರಂ ॥ ೩೪ ॥

---

೩೦-೩೩. ಷಣ್ಮುಖನಾಗಿಯೂ, ವರಪ್ರದನಾಗಿಯೂ, ಪಾರ್ವತಿಯ ಸಂತೋಷಕ್ಕೆ ಕಾರಣನಾಗಿಯೂ, ಶಿಶುವಾಗಿಯೂ, ದೇಶಶತ್ರುಗಳ ಸೇನಾ ನಾಶಕನಾಗಿಯೂ ಇರುವ ಕುಮಾರಸ್ವಾಮಿಯನ್ನು ಆವಾಹಿಸುತ್ತೇನೆ. ಮಹಿಷಾಸುರ ನಾಶಕನಾಗಿಯೂ, ಕೃತ್ತಿಕಾಪುತ್ರನಾಗಿಯೂ, ಜಗತ್ಪತಿಯಾಗಿಯೂ, ಮಯೂರ ವಾಹನನಾಗಿಯೂ ಇರುವ ಕುಮಾರಸ್ವಾಮಿಯೇ, ಇಲ್ಲಿ ಬಂದು ಸಾನ್ನಿಧ್ಯಹೊಂದು. ಜಗತ್ಪತಿಯಾಗಿಯೂ, ಜ್ಞಾನಪ್ರದನಾಗಿಯೂ, ಚಂದ್ರಪುತ್ರನಾಗಿಯೂ, ಗ್ರಹಗಣಾ ಧಿಪತಿಯಾಗಿಯೂ, ತೇಜೋಮೂರ್ತಿಯಾಗಿಯೂ, ಅಜೇಯನಾಗಿಯೂ ಇರುವ ಬುಧಗ್ರಹವನ್ನು ಆವಾಹಿಸುತ್ತೇನೆ. ಅಪ್ರಮೇಯನಾಗಿಯೂ, ಚಂದ್ರಪುತ್ರ ನಾಗಿಯೂ, ಜಗದ್ವಿಜಯಿಯಾಗಿಯೂ, ಜನಾರ್ದನಾಂಶನಾಗಿಯೂ, ಮಹಾಬಲ, ಮಹಾಭಾಗ್ಯಶಾಲಿಯಾಗಿಯೂ, ಪರಾಕ್ರಮಿಯಾಗಿಯೂ, ತೇಜಶ್ಶಾಲಿಯಾಗಿಯೂ ಇರುವ ಬುಧದೇವನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೩೪-೩೭. ಶಂಖಚಕ್ರಗದಾಧರನಾಗಿಯೂ, ಅಗಸೆಯ ಹೂವಿನಂತೆ ಶ್ಯಾಮ ವರ್ಣನಾಗಿಯೂ, ಪೀತಾಂಬರಧಾರಿಯಾಗಿಯೂ, ಸ್ಥಿರಪ್ರಕೃತಿಯಾಗಿಯೂ ಇರುವ ವಿಷ್ಣುವನ್ನು ಆವಾಹಿಸುತ್ತೇನೆ. ದೇವಾಧಿಪನಾಗಿಯೂ, ಪ್ರಜೆಗಳ ನಿರ್ವಾಪಕ

ಅತಸೀಕುಸುಮಶ್ಯಾಮಂ ಪೀತವಾಸಸಮುಚ್ಯುತಂ ।
ಏಹಿ ಮೇ ದೇವದೇವೇಶ ಪ್ರಜಾನಿರ್ವಾಣಕಾರಕ || ೩೫ ||

ನಾರಾಯಣ ಸುದುಷ್ಪಾರ ಮಹೇಷ್ವಾಸ ಧನುರ್ಧರ ।
ಶಕ್ರಮಾವಾಹಯಿಷ್ಯಾಮಿ ದೇವಂ ಸುರಗಣೇಶ್ವರಂ || ೩೬ ||

ವಜ್ರಪಾಣಿಂ ಮಹಾಬಾಹುಂ ಗೋಬ್ರಾಹ್ಮಣಹಿತೇ ರತಂ ।
ಏಹಿ ದೇವ ಸಹಸ್ರಾಕ್ಷ ದೇವಾರಿಬಲಸೂದನ || ೩೭ ||

ಐರಾವತಗ ಧರ್ಮಜ್ಞ ಶಚೀಹೃದಯನಂದನ ।
ಜೀವಮಾವಾಹಯಿಷ್ಯಾಮಿ ದೇವೇಶ್ವರಪುರೋಹಿತಂ || ೩೮ ||

ಬೃಹಸ್ಪತಿಂ ಬೃಹದ್ವಾಕ್ಯಂ ವೇದವೇದಾಙ್ಗಪಾರಗಂ ।
ಏಹಿ ಜೀವ ಮಹಾಭಾಗ ಜೀವಭೂತಮಹೀತಲೆ || ೩೯ ||

---

ನಾಗಿಯೂ, ಸರ್ವವ್ಯಾಪಕನಾಗಿರುವುದರಿಂದ ನಾರಾಯಣಪದವಾಚ್ಯನಾಗಿಯೂ, ದುಷ್ಪ್ರಾಪನಾಗಿಯೂ, ಮಹಾಧಾನುಷ್ಕನಾಗಿಯೂ ಇರುವ ಎಲೈ ವಿಷ್ಣುವೇ ನನಗಾಗಿ ಇಲ್ಲಿ ಬಂದು ಸಾನ್ನಿಧ್ಯ ಹೊಂದು ಸುರಾಧಿಪನಾಗಿಯೂ, ವಜ್ರಪಾಣಿಯಾಗಿಯೂ, ಪರಾಕ್ರಮಿಯಾಗಿಯೂ, ಗೋಬ್ರಾಹ್ಮಣ ಹಿತದಲ್ಲಿ ಆಸಕ್ತನಾಗಿಯೂ ಇರುವ ಇಂದ್ರನನ್ನು ಆವಾಹಿಸುತ್ತೇನೆ. ಸಹಸ್ರಾಕ್ಷನೂ, ದೇವಶತ್ರುಗಳ ದರ್ಪನಾಶಕನೂ, ಐರಾವತಗಾಮಿಯೂ, ಧರ್ಮಜ್ಞನೂ, ಶಚಿಯ ಹೃದಯಾಹ್ಲಾದಿಯೂ ಆಗಿರುವ ಎಲೈ ಇಂದ್ರನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೩೮-೪೧. ದೇವಾಧಿಪತಿಯಾದ ಇಂದ್ರನ ಪುರೋಹಿತನಾಗಿಯೂ, ಬುದ್ಧಿಶಾಲಿಯಾಗಿಯೂ, ಗಂಭೀರಾರ್ಥಭಾಷಣ ಉಳ್ಳವನಾಗಿಯೂ, ವೇದವೇದಾಙ್ಗಪಾರಂಗತನಾಗಿಯೂ ಇರುವ ಬೃಹಸ್ಪತಿಯನ್ನು ಆವಾಹಿಸುತ್ತೇನೆ. ಭಾಗ್ಯಶಾಲಿಯಾಗಿಯೂ, ಭೂಮಿಯಲ್ಲಿರುವ ಚೇತನವರ್ಗಕ್ಕೆ ಜೀವಪ್ರದನಾಗಿಯೂ, ಇರುವ ಎಲೈ ಬೃಹಸ್ಪತಿಯೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಭೂಮಿವರ್ಧಕನಾದ ನಿನ್ನಲ್ಲಿಯೇ ಪ್ರಜೆಗಳ ವೃದ್ಧಿಯು ಅಧೀನವಾಗಿದೆ. ವರಪ್ರದಳಾಗಿಯೂ, ಪರ್ವತ

ಸಮ್ಯಗ್ವೃದ್ಧಿಃ ತವಾಯತ್ತಾ ಸತತಂ ಭೂಮಿವರ್ಧನ ।
ದೇವೀಮಾವಾಹಯಿಷ್ಯಾಮಿ ಪಾರ್ವತೀಂ ವರದಾಮುಮಾಂ ॥ ೪೦ ॥

ಹರಸ್ಯದಯಿತಾಂ ಭಾರ್ಯಾಂ ಚಾರ್ವಙ್ಗೀಂ ಭೂತಿವರ್ಧನೀಂ ।
ಏಹಿ ದೇವಿ ಜಗನ್ಮಾತಃ ಮೇನಾಹೃದಯನಂದನಿ ॥ ೪೧ ॥

ಪವಿತ್ರೇ ವರದೇ ಸೌಮ್ಯೇ ನಿತ್ಯಂ ಭಕ್ತಜನಪ್ರಿಯೇ ।
ಶುಕ್ರಮಾವಾಹಯಿಷ್ಯಾಮಿ ಭಾರ್ಗವಂ ಜಗದೀಶ್ವರಂ ॥ ೪೨ ॥

ನಿತ್ಯಂ ಸರ್ವಧನಾಧ್ಯಕ್ಷಂ ತಪಸಾ ದ್ಯೋತಿತಪ್ರಭಂ ।
ಏಹಿ ಶುಕ್ರ ಮಹಾಭಾಗ ಷೋಡಶಾರ್ಚೇ ವರಪ್ರದ ॥ ೪೩ ॥

ಪ್ರಭುಸ್ತ್ವಂ ವರದೋನಿತ್ಯಂ ವರ್ಷಾವರ್ಷಸ್ಯ ನಿಗ್ರಹೇ ।
ಆವಾಹಯಾಮ್ಯಹಂ ದೇವಂ ಪ್ರಜಾಧ್ಯಕ್ಷಮಕಲ್ಮಷಂ ॥ ೪೪ ॥

ಭಕ್ತಾನುಕಂಪಿನಂ ದೇವಂ ಪ್ರಜಾನಿರ್ಮಾಣಕಾರಕಂ ।
ಏಹಿ ದೇವ ಪ್ರಜಾಧ್ಯಕ್ಷ ಪ್ರಜಾನಿರ್ಮಾಣಕಾರಕ ॥ ೪೫ ॥

---

ಪುತ್ರಿಯಾಗಿಯೂ, ಹರನ ಪ್ರಿಯಭಾರ್ಯೆಯಾಗಿಯೂ, ಸುಂದರಿಯಾಗಿಯೂ' ಐಶ್ವರ್ಯವೃದ್ಧಿಕಾರಿಣಿಯಾಗಿಯೂ, ಇರುವ ಉಮಾದೇವಿಯನ್ನು ಆವಾಹಿಸುತ್ತೇನೆ. ಜಗನ್ಮಾತೆಯೂ, ಮೇನಾದೇವಿಯ ಹೃದಯಾಹ್ಲಾದಿನಿಯೂ, ಪವಿತ್ರ ಸ್ವರೂಪಳಾಗಿಯೂ, ಸೌಮ್ಯಳಾಗಿಯೂ, ಭಕ್ತಜನಪ್ರಿಯಳಾಗಿಯೂ, ವರಪ್ರದೆಯಾಗಿಯೂ ಇರುವ ಪಾರ್ವತೀದೇವಿಯೇ ನೀನು ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೪೨-೪೫. ಭಾರ್ಗವನಾಗಿಯೂ, ಜಗತ್ಪತಿಯಾಗಿಯೂ, ಯಾವಾಗಲೂ ಧನಾಧಿಪತಿಯಾಗಿಯೂ, ತಪಸ್ಸಿನಿಂದ ಜ್ವಲಿಸುತ್ತಲೂ ಇರುವ ಶುಕ್ರನನ್ನು ಆವಾಹಿಸುತ್ತೇನೆ ಭಾಗ್ಯಶಾಲಿಯಾಗಿಯೂ, ಹದಿನಾರು ರೂಪವುಳ್ಳವನಾಗಿಯೂ, ವರಪ್ರದನಾಗಿಯೂ, ವೃಷ್ಟಿ ಅವೃಷ್ಟಿಗಳಿಗೆ ನಾಶಕನಾಗಿಯೂ, ಪ್ರಭುವಾಗಿಯೂ ಇರುವ ಶುಕ್ರನೇ ಇಲ್ಲಿ ಬಂದು ಸಾನ್ನಿಧ್ಯಹೊಂದು. ನಿಷ್ಕಲ್ಮಷನಾಗಿಯೂ, ಭಕ್ತರಲ್ಲಿ ದಯೆಯಿಂದ ಕೂಡಿಯೂ, ಪ್ರಜಾನಿರ್ಮಾಣಸಮರ್ಥನೂ ಆದ ಪ್ರಜಾಧ್ಯಕ್ಷನನ್ನು ಆವಾಹಿಸುತ್ತೇನೆ. ಎಲೈ ಪ್ರಜಾಧ್ಯಕ್ಷನೇ ಇಲ್ಲಿ ಬಂದು ನೀನು ಸಾನ್ನಿಧ್ಯಹೊಂದು. ಪ್ರಜೆಗಳ ಉತ್ಪತ್ತ್ಯನುತ್ಪತ್ತಿಗಳೆಲ್ಲಾ ನಿನಗೇ ಅಧೀನವಾಗಿವೆ.

ತ್ವಯಿ ದೇವ ಸಮಾಯತ್ತಂ ಪ್ರಜಾನಾಮುಭವೋದ್ಭವಂ ।
ಸೌರಿಮಾವಾಹಯಿಷ್ಯಾಮಿ ಶನೈಶ್ಚಾರಿಣಮಚ್ಯುತಂ ॥ ೪೬ ॥

ತಪಸ್ವಿನಮನಾಧೃಷ್ಯಂ ಭಕ್ತಾನಾಮಭಯಪ್ರದಂ ।
ಏಹಿ ತೀಕ್ಷ್ಣಾಂಶುಜಾಚಿಂತ್ಯ ಭಾವಾಭಾವಪ್ರದರ್ಶಕ ॥ ೪೭ ॥

ತ್ವಯಿ ಸರ್ವಂ ಸಮಾಯತ್ತಂ ರಾಜ್ಞಾಂ ಭೂಮೌ ಶುಭಾಶುಭಂ ।
ಆವಾಹಯಾಮ್ಯಹಂ ದೇವಂ ಗಜವಕ್ತ್ರಂ ಗಣೇಶ್ವರಂ ॥ ೪೮ ॥

ವಿಘ್ನೇಶಂ ವಿಘ್ನಹರ್ತಾರಂ ಪಾರ್ವತೀಹೃದಯಪ್ರಿಯಂ ।
ಏಹಿ ದೇವ ಗಣಾಧ್ಯಕ್ಷ ಲಂಬೋದರ ಮಹಾಭುಜ ॥ ೪೯ ॥

ಕಾರ್ಯಸಿದ್ಧಿಃ ಸಮಾಯತ್ತಾ ತ್ವಯಿ ಸರ್ವೇಶ ದೇಹಿನಾಂ ।
ರಾಹುಮಾವಾಹಯಿಷ್ಯಾಮಿ ದೈತ್ಯೇಂದ್ರಂ ಗ್ರಹತಾಂ ಗತಂ ॥ ೫೦ ॥

---

೪೬–೪೯. ವಿಲಂಬದಿಂದ ಸಂಚರಣಶೀಲನೂ, ಶಾಶ್ವತನೂ, ತಪಸ್ವಿಯೂ, ಅಜೇಯನೂ, ಭಕ್ತರಿಗೆ ಅಭಯಪ್ರದನೂ ಆದ ಸೂರ್ಯಪುತ್ರನಾದ ಶನಿಯನ್ನು ಆವಾಹಿಸುತ್ತೇನೆ. ಸೂರ್ಯಪುತ್ರನೂ, ಮಹಾಮಹಿಮನೂ, ಎಲ್ಲಾ ಫಲಗಳ ಭಾವಾಭಾವಸೂಚಕನೂ, ಆದ ಶನಿಯೇ, ಇಲ್ಲಿ ಬಂದು ಸಾನ್ನಿಧ್ಯಹೊಂದು. ಭೂಮಿಯಲ್ಲಿರುವ ರಾಜರುಗಳ ಶುಭಾಶುಭವೆಲ್ಲವೂ ನಿನಗೆ ಅಧೀನವಾಗಿದೆ. ಗಜಮುಖನಾಗಿಯೂ, ಗಣಾಧಿಪತಿಯಾಗಿಯೂ, ವಿಘ್ನನಾಶಕನಾಗಿಯೂ, ಪಾರ್ವತೀಪ್ರಿಯನಾಗಿಯೂ ಇರುವ ವಿಘ್ನೇಶ್ವರನನ್ನು ಆವಾಹಿಸುತ್ತೇನೆ. ದೇವಗಣಗಳಿಗೆ ಅಧಿಪತಿಯಾಗಿಯೂ, ಲಂಬೋಧರನಾಗಿಯೂ ಪರಾಕ್ರಮಿಯಾಗಿಯೂ, ಇರುವ ವಿಘ್ನೇಶನೇ ಇಲ್ಲಿ ಬಂದು ಸಾನ್ನಿಧ್ಯಹೊಂದು ಪ್ರಾಣಿಗಳ ಕಾರ್ಯಸಿದ್ಧಿ ಎಲ್ಲವೂ ನಿನಗೆ ಅಧೀನವಾದುದು.

೫೦–೫೪ ದೈತ್ಯೇಂದ್ರನಾಗಿದ್ದು ಗ್ರಹತ್ವವನ್ನು ಹೊಂದಿರುವ, ವೀರನಾಗಿಯೂ, ತಪಸ್ಸಿನಿಂದ ಗತಪಾಪನಾಗಿಯೂ, ಕೇಶವನಿಂದ ಪ್ರಾಪ್ತವರನಾಗಿಯೂ ಇರುವ ರಾಹುವನ್ನು ಆವಾಹಿಸುತ್ತೇನೆ. ದೈತ್ಯಶ್ರೇಷ್ಠನಾಗಿಯೂ, ವರಪ್ರದ

ಕೇಶವಾತ್ತವರಂ ವೀರಂ ತಪಸಾ ದಗ್ಧಕಿಲ್ಬಿಷಂ ।
ಏಹ್ಯೇಹಿ ದೈತ್ಯಪ್ರವರ ವರದಾಚಿನ್ತ್ಯವಿಕ್ರಮ ॥ ೫೧ ॥

ತಮೋಮೂರ್ತೇ ದುರಾಧರ್ಷ ವಿಪರೀತಾಂಬರಾಂಬರ ।
ಆವಾಹಯಾಮ್ಯಹಂ ದೇವಂ ವಿಶ್ವಕರ್ಮಾಣಮಚ್ಯುತಂ ॥ ೫೨ ॥

ಸರ್ವಾಸಾಂ ದೇವತಾನಾಂ ತು ಸದಾ ಶಿಲ್ಪಪ್ರವರ್ತಕಂ ।
ಏಹಿ ದೇವವರಾಚಿಂತ್ಯ ಸರ್ವಶಿಲ್ಪಪ್ರವರ್ತಕ ॥ ೫೩ ॥

ತ್ವಯಿ ಸರ್ವೇಶ ಸರ್ವೇಷಾಂ ಕರ್ಮಣಾಮಾಶ್ರಿತಾಗತಿಃ ॥ ೫೪ ॥

ಕೇತುಮಾವಾಹಯಿಷ್ಯಾಮಿ ಕೇತುಂ ಸರ್ವದಿವೌಕಸಾಂ ।
ಬ್ರಹ್ಮಣ್ಯಂ ಸರ್ವಧರ್ಮಜ್ಞಂ ಭಕ್ತಾನಾಮಭಯಪ್ರದಂ ॥ ೫೫ ॥

ಧೂಮಕೇತೋ ಇಹಾಭ್ಯೇಹಿ ಹುತಾಶನಸಮಪ್ರಭ ।
ಶಿಖಾಕರಾಲವಿಕಟ ಪೂಜಕಾರ್ತಿವಿನಾಶನ ॥ ೫೬ ॥

---

ನಾಗಿಯೂ, ಅಚಿಂತ್ಯಪರಾಕ್ರಮಿಯಾಗಿಯೂ, ತಮೋಮೂರ್ತಿಯಾಗಿಯೂ, ವ್ಯತ್ಯಸ್ತವಾದ ಆಕಾಶ ಮತ್ತು ವಸ್ತ್ರವುಳ್ಳವನಾಗಿಯೂ, ಇರುವ ರಾಹುವೇ ಇಲ್ಲಿ ಬಂದುಸಾನ್ನಿಧ್ಯಹೊಂದು. ಸರ್ವದೇವತೆಗಳಿಗೂ ಶಿಲ್ಪಪ್ರವರ್ತಕನಾಗಿರುವ ಶಾಶ್ವತ ಮೂರ್ತಿಯಾದ ವಿಶ್ವಕರ್ಮನನ್ನು ಆವಾಹಿಸುತ್ತೇನೆ. ದೇವತೆಗಳ ಶಿಲ್ಪಗಳಿಗೆ ಯಾವಾಗಲೂ ಪ್ರವರ್ತಕನಾಗಿರುವ ದೇವಶ್ರೇಷ್ಠನಾದ ಎಲೈ ವಿಶ್ವಕರ್ಮನೇ ಇಲ್ಲಿ ಬಾ. ಇಲ್ಲಿ ಬಂದು ಸಾನ್ನಿಧ್ಯಹೊಂದು. ಎಲ್ಲರಿಗೂ ಎಲ್ಲಾ ಕರ್ಮಗಳ ಪ್ರವರ್ತನೆಯು ನಿನಗೆ ಅಧೀನವಾಗಿದೆ.

೫೫-೫೬. ಎಲ್ಲಾ ದೇವತೆಗಳಿಗೂ ಧ್ವಜದಂತಿರುವ ಬ್ರಾಹ್ಮಣಪ್ರಿಯನಾದ ಧರ್ಮಜ್ಞನಾದ ಭಕ್ತಾಭಯಪ್ರದನಾದ ಕೇತುವನ್ನು ಆವಾಹಿಸುತ್ತೇನೆ. ಅಗ್ನಿಯಂತೆ ಜ್ವಲಿಸುವ ಧೂಮಧ್ವಜನೇ, ಶಿಖೆಗಳಿಂದ ಭಯಂಕರನೇ, ಪೂಜಕನ ದುಃಖನಾಶಕನೇ, ಕೇತುವೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು.

ಆವಾಹಯಿಷ್ಯಾಮಿ ಶುಭಾಂ ಕೃತ್ತಿಕಾಂ ದೇವಪೂಜಿತಾಂ ।
ಏಹಿ ಸಾಧಾರಣೇ ದೇವಿ ಜ್ಯೇಷ್ಠೇ ದಕ್ಷಸುತೇ ಶುಭೇ ॥ ೫೭ ॥

ಆವಾಹಯಾಮಿ ವರದಾಂ ರೋಹಿಣೀಂ ಚಂದ್ರವಲ್ಲಭಾಂ ।
ಏಹಿ ರೋಹಿಣೀ ಧರ್ಮಜ್ಞೇ ಧ್ರುವಕರ್ಮಸು ಶೋಭನೇ ॥ ೫೮ ॥

ಆವಾಹಯಾಮಿ ವರದಾಮಿಲ್ವಿಲಾಂ ಶಶಿವಲ್ಲಭಾಂ ।
ಏಹಿ ಮೇ ಇಲ್ವಿಲೇ ದೇವಿ ಮೃದುಕರ್ಮಸು ಶೋಭನೇ ॥ ೫೯ ॥

ರುದ್ರಮಾವಾಹಯಿಷ್ಯಾಮಿ ತ್ರಿನೇತ್ರಂ ಶೂಲಪಾಣಿನಂ ।
ಏಹಿ ಶಂಕರ ಸರ್ವಾತ್ಮನ್ ಮಹಾಗಣಗಣೇಶ್ವರ ॥ ೬೦ ॥

ಆದ್ರಾರ್ವಮಾವಾಹಯಿಷ್ಯಾಮಿ ನಕ್ಷತ್ರಂ ಬಾಹುಸಂಜ್ಞಿತಂ ।
ಏಹ್ಯಾರ್ದ್ರೇ ಚಾರುಸರ್ವಾಙ್ಗೇ ದಾರುಣೇ ರುದ್ರಸಂಮಿತೇ ॥ ೬೧ ॥

---

೫೭–೬೦. ದೇವತೆಗಳಿಂದ ಪೂಜಿತಳೂ, ಶುಭಕರಳೂ ಆದ ಕೃತ್ತಿಕಾ ದೇವಿಯನ್ನು ಆವಾಹಿಸುತ್ತೇನೆ. ದಕ್ಷನ ಜ್ಯೇಷ್ಠಪುತ್ರಿಯಾಗಿಯೂ, ಸರ್ವಜನ ಸುಲಭಳಾಗಿಯೂ ಇರುವ ಕೃತ್ತಿಕಾದೇವಿಯೇ ಇಲ್ಲಿ ಬಂದು ಸಾನ್ನಿಧ್ಯಹೊಂದು. ಚಂದ್ರಪತ್ನಿಯಾದ ರೋಹಿಣಿಯನ್ನು ಆವಾಹಿಸುತ್ತೇನೆ. ಸ್ಥಿರಕರ್ಮಗಳಲ್ಲಿ ಮಂಗಲ ಪ್ರದೆಯಾಗಿಯೂ, ವರಪ್ರದೆಯಾಗಿಯೂ, ಧರ್ಮಜ್ಞೆಯಾಗಿಯೂ ಇರುವ ರೋಹಿಣೀದೇವಿಯೇ ಇಲ್ಲಿ ಬಂದು ಸಾನ್ನಿಧ್ಯಹೊಂದು. ಚಂದ್ರನಪ್ರಿಯಳಾದ ಇಲ್ವಲಾದೇವಿಯನ್ನು ಆವಾಹಿಸುತ್ತೇನೆ. ಮೃದುಕಾರ್ಯಗಳಲ್ಲಿ ಮಂಗಲಪ್ರದೆಯಾದ ಇಲ್ವಲಾದೇವಿಯೇ ಇಲ್ಲಿ ಬಂದು ಸಾನ್ನಿಧ್ಯಹೊಂದು. ಶೂಲಪಾಣಿಯಾಗಿಯೂ, ತ್ರಿನೇತ್ರನಾಗಿಯೂ ಇರುವ ರುದ್ರದೇವನನ್ನು ಆವಾಹಿಸುತ್ತೇನೆ. ಸರ್ವಾತ್ಮನೂ ಪ್ರಮಥಗಣಾಧಿಪತಿಯೂ ಆದ ಎಲೈ ಶಂಕರನೇ ಇಲ್ಲಿ ಬಂದು ಸಾನ್ನಿಧ್ಯಹೊಂದು.

೬೧–೬೫. ಬಾಹುನಾಮಕವಾದ ಆದ್ರಾರ್ನಕ್ಷತ್ರವನ್ನು ಆವಾಹಿಸುತ್ತೇನೆ. ಸರ್ವಾಂಗಸುಂದರಿಯೂ, ದಾರುಣೆಯೂ, ರುದ್ರಪ್ರಿಯಳೂ ಆದ ಎಲೈ ಆರ್ದ್ರೆಯೇ ಇಲ್ಲಿ ಬಂದು ಸಾನ್ನಿಧ್ಯಹೊಂದು. ತಪಸ್ಸಿನಿಂದ ನಷ್ಟವಾದ ಪಾಪವುಳ್ಳ ದಿತಿಯನ್ನು

ಆವಾಹಯಿಷ್ಯಾಮಿ ದಿತಿಂ ತಪಸಾ ದಗ್ಧಕಿಲ್ಬಿಷಾಂ ।
ಆದಿತ್ಯಾರಣಿ ಧರ್ಮಜ್ಞೇ ಏಹಿ ದೇವಿ ಮಹಾವ್ರತೇ ॥ ೬೨ ॥

ಋಕ್ಷಮಾವಾಹಯಿಷ್ಯಾಮಿ ಧರ್ಮಜ್ಞಂ ತು ಪುನರ್ವಸುಂ ।
ಪುನರ್ವಸೋ ಇಹಾಗಚ್ಛ ಚರಕರ್ಮಪ್ರಸಾಧಕ ॥ ೬೩ ॥

ತಿಷ್ಯಮಾವಾಹಯಿಷ್ಯಾಮಿ ನಕ್ಷತ್ರಂ ಕ್ಷಿಪ್ರಸಂಜ್ಞಿತಂ ।
ಏಹಿ ಪುಷ್ಯಮಹಾಭಾಗಾ ಪೋಷಂ ವರ್ಧಯ ಸರ್ವತಃ ॥ ೬೪ ॥

ಸರ್ಪಾನಾವಾಹಯಿಷ್ಯಾಮಿ ತ್ರೈಲೋಕ್ಯಾನಸ್ತಗೋಚರಾನ್ ।
ಆಯಾಂತು ಸರ್ವತಃ ಸರ್ಪಾಃ ಸೌಮ್ಯರೂಪಾ ಭವಂತು ತೇ ॥ ೬೫ ॥

ಆವಾಹಯಾಮಿ ಚಾಶ್ಲೇಷಾಂ ಭಕ್ತಾನಾಂ ಶ್ರೀವಿವರ್ಧಿನೀಂ ।
ಅಶ್ಲೇಷೇ ತ್ವಮಿಹಾಭ್ಯೇಹಿ ದಾರುಣೇ ವಿಜಯಪ್ರದೇ ॥ ೬೬ ॥

---

ಆವಾಹಿಸುತ್ತೇನೆ. ಧರ್ಮಶೀಲೆಯೂ, ಮಹಾವ್ರತೆಯೂ, ದೇವತೆಗಳ ಉತ್ಪತ್ತಿಗೆ ಅರಣಿಯಂತೆ ಕಾರಣಳೂ ಆದ ದಿತೀದೇವಿಯೇ ಇಲ್ಲಿ ಬಂದು ಸಾನ್ನಿಧ್ಯಹೊಂದು. ಧಾರ್ಮಿಕವಾದ ಪುನರ್ವಸೂನಕ್ಷತ್ರವನ್ನು ಆವಾಹಿಸುತ್ತೇನೆ. ಚರಕರ್ಮಗಳಿಗೆ ಸಾಧಕನಾಗಿರುವ ಪುನರ್ವಸೂನಕ್ಷತ್ರವೇ ಇಲ್ಲಿ ಬಂದು ಸಾನ್ನಿಧ್ಯಹೊಂದು. ಕ್ಷಿಪ್ರ ಸಂಜ್ಞಕವಾದ ಪುಷ್ಯನಕ್ಷತ್ರವನ್ನು ಆವಾಹಿಸುತ್ತೇನೆ. ಭಾಗ್ಯಶಾಲಿಯಾದ ಪುಷ್ಯ ನಕ್ಷತ್ರವೇ ಇಲ್ಲಿ ಬಂದು ಸಾನ್ನಿಧ್ಯಹೊಂದು. ಎಲ್ಲಾವಿಧವಾದ ಪುಷ್ಟಿಯನ್ನೂ ಉಂಟುಮಾಡು. ಮೂರುಲೋಕದಲ್ಲೂ ಇರುವ ಅನಂತನೇ ಮೊದಲಾದಸರ್ಪಗಳನ್ನು ಆವಾಹಿಸುತ್ತೇನೆ. ಸರ್ಪಗಳೆಲ್ಲವೂ ಇಲ್ಲಿ ಬಂದು ಸಾನ್ನಿಧ್ಯಹೊಂದಲಿ ಅವು ಸೌಮ್ಯ ರೂಪವನ್ನೂ ಹೊಂದಲಿ.

೬೬-೭೦. ಭಕ್ತರ ಸಂಪತ್ತನ್ನು ಅಭಿವೃದ್ಧಿಗೊಳಿಸುವ ಆಶ್ಲೇಷೆಯನ್ನು ಆವಾಹಿಸುತ್ತೇನೆ. ದಾರುಣಗಳಾಗಿಯೂ, ವಿಜಯಪ್ರದೆಯಾಗಿಯೂ ಇರುವ ಆಶ್ಲೇಷೆಯೇ ಇಲ್ಲಿ ಬಂದು ಸಾನ್ನಿಧ್ಯಹೊಂದು. ಮನುಷ್ಯರ ಮೂರ್ತಿಯನ್ನೇ ಧರಿಸಿರುವ ಪಿತೃಗಳನ್ನೂ ಆವಾಹಿಸುತ್ತೇನೆ. ಸುಧಾರೂಪವಾದ ಕವ್ಯವನ್ನು

ಪಿತ್ರ್ಯಾನಾವಾಹಯಿಷ್ಯಾಮಿ ಮರ್ತ್ಯಮೂರ್ತಿಧರಾನಹಂ ।
ಆಯಾಂತು ಪಿತರಃ ಶೀಘ್ರಂ ಸುಧಾಕವ್ಯಭುಜೋऽವ್ಯಯಾಃ　　॥ ೬೭ ॥

ಮಘಾಮಾವಾಹಯಿಷ್ಯಾಮಿ ಉಗ್ರನಕ್ಷತ್ರಮಂಜಸಾ ।
ಏಹಿ ಮೇ ಸುಭಗೇ ದೇವಿ ಸರ್ವಾಘವಿನಿಷೂದಿನಿ　　॥ ೬೮ ॥

ಭಗಮಾವಾಹಯಿಷ್ಯಾಮಿ ಭಕ್ತಸೌಭಾಗ್ಯವರ್ಧನಂ ।
ಏಹಿ ದೇವವರಾಚಿಂತ್ಯ ಭಕ್ತಸಂಕಟನಾಶಕ　　॥ ೬೯ ॥

ಋಕ್ಷಮಾವಾಹಯಿಷ್ಯಾಮಿ ಪೂರ್ವಫಲ್ಗುನಸಂಜ್ಞಕಂ ।
ಏಹಿ ಭಾಗಿ ಮಹಾಭಾಗ ಉಗ್ರಕರ್ಮಪ್ರಸಾದಕ　　॥ ೭೦ ॥

ಆವಾಹಯಿಷ್ಯಾಮ್ಯರ್ಯಮಣ್ಣಮಾದಿತ್ಯಂ ತೇಜಸಾಂ ನಿಧಿಂ ।
ಅರ್ಯಮಂಸ್ತ್ವಂ ಸಮಭ್ಯೇಹಿ ಭಕ್ತಸಂಕಟನಾಶನ　　॥ ೭೧ ॥

ಋಕ್ಷಮಾವಾಹಯಿಷ್ಯಾಮಿ ಉತ್ತರಾಫಲ್ಗುನೀಂ ಶುಭಾಂ ।
ಏಹಿ ತ್ವಂ ಸುಭಗೇ ದೇವಿ ಧ್ರುವೇ ಸರ್ವಾಂಗಸುಂದರಿ　　॥ ೭೨ ॥

---

ಭುಂಜಿಸುವ ಪಿತೃಗಳೆಲ್ಲರೂ ಶೀಘ್ರವಾಗಿ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ಉಗ್ರವಾದ ಮಖಾನಕ್ಷತ್ರವನ್ನು ಆವಾಹಿಸುತ್ತೇನೆ. ಸರ್ವಪಾಪನಾಶಕಳಾಗಿಯೂ ಸೌಭಾಗ್ಯಶಾಲಿಯಾಗಿಯೂ, ಇರುವ ಮಖಾದೇವಿಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು ಭಕ್ತರ ಸೌಭಾಗ್ಯವರ್ಧಕನಾದ ಭಗನೆಂಬದೇವತೆಯನ್ನು :ಆವಾಹಿಸು ತ್ತೇನೆ. ಭಕ್ತರ ದುಃಖಗಳನ್ನು ಹೋಗಲಾಡಿಸುವ ಅಪ್ರಮೇಯನಾದ ಭಗದೇವನೇ ಇಲ್ಲಿ ಬಂದು ಸಾನ್ನಿಧ್ಯಹೊಂದು. ಪೂರ್ವಫಲ್ಗುನವೆಂಬ ನಾಮವುಳ್ಳ ನಕ್ಷತ್ರವನ್ನು ಆವಾಹಿಸುತ್ತೇನೆ. ಉಗ್ರಕರ್ಮಗಳಿಗೆ ಸಾಧಕವಾದ ಫಲ್ಗುನನಕ್ಷತ್ರವೇ ಭಾಗ್ಯ ಶಾಲಿಯಾದ ನೀನು ಇಲ್ಲಿ ಬಂದು ಸಾನ್ನಿಧ್ಯಹೊಂದು.

೭೧–೭೫. ತೇಜೋನಿಧಿಯಾದ ಅರ್ಯಮನೆಂಬ ಆದಿತ್ಯನನ್ನು ಆವಾಹಿಸು ತ್ತೇನೆ. ಭಕ್ತದುಃಖನಾಶಕನಾದ ಎಲೈ ಅರ್ಯಮನೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಉತ್ತರ ಫಲ್ಗುನಿ ಎಂಬ ಶುಭನಕ್ಷತ್ರವನ್ನು ಆವಾಹಿಸುತ್ತೇನೆ. ಸೌಭಾಗ್ಯಪ್ರದೆಯ ೂ, ಶೋಭನಾಂಗಿಯೂ ಆದ, ಶುಭಕರಳಾದ ಉತ್ತರಫಲ್ಗುನಿಯೇ,

ಹಸ್ತಮಾವಾಹಯಿಷ್ಯಾಮಿ ಸಾವಿತ್ರಂ ಕ್ಷಿಪ್ರಮಂಜಸಾ ।
ಏಹಿ ಸಾವಿತ್ರ ಧರ್ಮಜ್ಞ ಭಕ್ತಾನಾಂ ಪಾಪನಾಶನ ॥ ೭೩ ॥

ಆವಾಹಯಾಮ್ಯಹಂ ದೇವಂ ತ್ವಷ್ಟಾರಮಸಿತದ್ಯುತಿಂ ।
ಏಹಿ ಮೇ ಭಗವಂಸ್ತ್ವಷ್ಟಃ ಪ್ರಜಾಪಾಲನತತ್ಪರ ॥ ೭೪ ॥

ಚಿತ್ರಾಮಾವಾಹಯಿಷ್ಯಾಮಿ ಚಿತ್ರಮೂರ್ತಿಂ ಮನೋಹರಾಂ ।
ಏಹಿ ಮೇ ವರದೇ ದೇವಿ ಮೃದುಕರ್ಮಪ್ರಸಾಧಿಕೇ ॥ ೭೫ ॥

ವಾಯುಮಾವಾಹಯಿಷ್ಯಾಮಿ ಸರ್ವಗಂ ದೀಪ್ತತೇಜಸಂ ।
ದೇವ ವಾಯೋ ತ್ವಮಭ್ಯೇಹಿ ಸರ್ವಭೂತಜಗತ್ಪ್ರಿಯ ॥ ೭೬ ॥

ಸ್ವಾತಿಮಾವಾಹಯಿಷ್ಯಾಮಿ ನಿತ್ಯಮುತ್ತರಸರ್ವಗಾಂ ।
ದೇವಿ ಸ್ವಾತಿ ತ್ವಮಭ್ಯೇಹಿ ಚರಕರ್ಮಸು ಶೋಭನೇ ॥ ೭೭ ॥

---

ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಸವಿತೃದೇವತಾಕವಾದ ಕ್ಷಿಪ್ರಸಂಜ್ಞೆಯುಳ್ಳ ಹಸ್ತನಕ್ಷತ್ರವನ್ನು ಆವಾಹಿಸುತ್ತೇನೆ. ಭಕ್ತಪಾಪನಾಶಕನೂ, ಧರ್ಮಜ್ಞನೂ ಆದ ನೀನು ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಕಪ್ಪಾದ ದೇಹಕಾಂತಿಯುಳ್ಳ ತ್ವಷ್ಟಾ ಎಂಬ ದೇವತೆಯನ್ನು ಆವಾಹಿಸುತ್ತೇನೆ. ಪ್ರಜಾಪಾಲನತತ್ಪರನಾದ ಎಲೈ ತ್ವಷ್ಟೃವೇ ಪೂಜ್ಯನಾದ ನೀನು ಇಲ್ಲಿ ಬಂದು ಸಾನ್ನಿಧ್ಯ ಹೊಂದು. ವಿಚಿತ್ರವಾದ ದೇಹವುಳ್ಳ ರಮ್ಯಳಾದ ಚಿತ್ರಾನಕ್ಷತ್ರವನ್ನು ಆವಾಹಿಸುತ್ತೇನೆ. ಮೃದುಕರ್ಮ ಸಾಧಕಳೂ, ವರಪ್ರದೆಯೂ ಆದ ಚಿತ್ರಾದೇವಿಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೭೬–೮೦. ಸರ್ವವ್ಯಾಪಕನಾಗಿಯೂ, ಮಹಾತೇಜಸ್ವಿಯಾಗಿಯೂ ಇರುವ ವಾಯುವನ್ನು ಆವಾಹಿಸುತ್ತೇನೆ. ಸರ್ವಭೂತಗಳಿಗೂ ಪ್ರಿಯನಾದ ವಾಯು ದೇವನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಯಾವಾಗಲೂ ಸರ್ವೋತ್ತರ ದಿಕ್ಕಿನಲ್ಲಿರುವ ಸ್ವಾತೀನಕ್ಷತ್ರವನ್ನು ಆವಾಹಿಸುತ್ತೇನೆ. ಚರಕರ್ಮದಲ್ಲಿ ಶುಭಕರ

ಆವಾಹಯಿಷ್ಯಾಮೀಂದ್ರಾಗ್ನೀ ಸಹಿತೌ ದೀಪ್ತತೇಜಸೌ ।
ಇಂದ್ರಾತ್ರೇಹಿ ಜಗನ್ನಾಥ ವಿಹ್ಯಗ್ನೇ ವಿಜಯಪ್ರದ ॥ ೭೮ ॥

ಋಕ್ಷಮಾವಾಹಯಿಷ್ಯಾಮಿ ವಿಶಾಖಾಮುಗ್ರತೇಜಸಂ ।
ವಿಶಾಖೆ ತ್ವಮಿಹಾಭ್ಯೇಹಿ ದೇವಿಸಾಧಾರಣೇ ಶುಭೇ ॥ ೭೯ ॥

ಮಿತ್ರಮಾವಾಹಯಿಷ್ಯಾಮಿ ದೇವಂ ದೀಪ್ತಾಂಶುತೇಜಸಂ ।
ಏಹಿ ಮಿತ್ರ ಮಹಾಭಾಗ ಭಕ್ತಾನಾಮಭಯಂ ಕುರು ॥ ೮೦ ॥

ಋಕ್ಷಮಾವಾಹಯಿಷ್ಯಾಮಿ ತ್ವನೂರಾಧಾಂ ವರಪ್ರದಾಂ ।
ಅನುರಾಧೇ ತ್ವಮಭ್ಯೇಹಿ ಮೃದುಕರ್ಮಸು ಶೋಭನೇ ॥ ೮೧ ॥

ಶಕ್ರಸ್ಯಾವಾಹನಂ ಪ್ರೋಕ್ತಂ ಜ್ಯೇಷ್ಠಾಯಾಃ ಶೃಣು ಪಾರ್ಥಿವ ।
ಜ್ಯೇಷ್ಠಾಮಾವಾಹಯಿಷ್ಯಾಮಿ ನಕ್ಷತ್ರಂ ಶಕ್ರದೈವತಂ ॥ ೮೨ ॥

---

ಳಾದ ಸ್ವಾತೀದೇವಿಯೇ ನೀನು ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಮಹಾತೇಜಸ್ವಿಗಳಾಗಿಯೂ, ಅವಿನಾಭಾವ ಹೊಂದಿಯೂ ಇರುವ ಇಂದ್ರಾಗ್ನಿಗಳನ್ನು ಆವಾಹಿಸುತ್ತೇನೆ. ಜಗತ್ಪತಿಯಾದ ಎಲೈ ಇಂದ್ರನೇ, ವಿಜಯಪ್ರದನಾದ ಅಗ್ನಿಯೇ, ನೀವು ಇಲ್ಲಿ ಬಂದು ಸಾನ್ನಿಧ್ಯ ಹೊಂದಿರಿ. ಬಹಳ ತೇಜಸ್ವಿಯಾದ ವಿಶಾಖಾನಕ್ಷತ್ರವನ್ನು ಆವಾಹಿಸುತ್ತೇನೆ. ಸಾಧಾರಣ ಸ್ವರೂಪಳಾಗಿಯೂ, ಮಂಗಳಪ್ರದಳಾಗಿಯೂ ಇರುವ ವಿಶಾಖೆಯೇ, ನೀನು ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಪ್ರಕಾಶಮಾನವಾದ ಕಿರಣಗಳಿಂದ ಕೂಡಿ ತೇಜಸ್ವಿಯಾಗಿರುವ ಮಿತ್ರನೆಂಬ ಸೂರ್ಯನನ್ನು ಆವಾಹಿಸುತ್ತೇನೆ. ಭಕ್ತರಿಗೆ ಅಭಯಪ್ರದನಾಗಿಯೂ, ಮಹಾಮಹಿಮನಾಗಿಯೂ ಇರುವ ಮಿತ್ರನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೮೧-೮೪. ವರಪ್ರದಳಾದ ಅನೂರಾಧಾನಕ್ಷತ್ರವನ್ನು ಆವಾಹಿಸುತ್ತೇನೆ. ಮೃದುಕರ್ಮಗಳಲ್ಲಿ ಶುಭಕರಳೇ ಅನೂರಾಧೆಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು ಜ್ಯೇಷ್ಠಾವಾಹನಕಾಲದಲ್ಲಿ ಅಧಿದೈವತನಾದ ಇಂದ್ರನ ಆವಾಹನೆಯೂ ಹೇಳಲ್ಪಟ್ಟಿದೆ. ಇಂದ್ರದೇವತೆಯಾದ ಜ್ಯೇಷ್ಠಾನಕ್ಷತ್ರವನ್ನು ಆವಾಹಿಸುತ್ತೇನೆ ದಾರುಣಳಾಗಿಯೂ, ಚಾರುನಯನಳಾಗಿಯೂ ಇರುವ ಜ್ಯೇಷ್ಠೆಯೇ ಇಲ್ಲಿ ಬಂದು ಸಾನ್ನಿಧ್ಯಹೊಂದು.

ಜ್ಯೇಷ್ಠೇ ದೇವಿ ತ್ವಮಭ್ಯೇಹಿ ದಾರುಣೇ ಚಾರುಲೋಚನೆ ।
ದೇವಮಾವಾಹಯಿಷ್ಯಾಮಿ ನಿರ್ಋತಿಂ ವೀರವಂದಿತಂ ॥ ೮೩ ॥

ಏಹಿ ದೇವ ವಿರೂಪಾಕ್ಷ ಮಹಾಬಲ ಸದಾಶ್ರಯ ।
ಮೂಲಮಾವಾಹಯಿಷ್ಯಾಮಿ ನಕ್ಷತ್ರಂ ದಾರುಣಂ ಮಹತ್ ॥ ೮೪ ॥

ಏಹಿ ಮೂಲ ಮಹಾಭಾಗ ಭಕ್ತಾನಾಮಭಯಪ್ರದ ।
ಆಪಸ್ತ್ವಾವಾಹಯಿಷ್ಯಾಮಿ ಸರ್ವಗಾ ವರದಾಃ ಶುಭಾಃ ॥ ೮೫ ॥

ಆಪಸ್ತ್ವಾವಾಹಯಿಷ್ಯಾಮಿ ಪೂರ್ವಾಷಾಢೇತಿ ಸಂಜ್ಞಿತಂ ।
ಏಹಿ ತ್ವಮುಗ್ರೇ ವರದೇ ಪೂರ್ವಾಷಾಢೇತಿ ಸಂಜ್ಞಿತೇ ॥ ೮೬ ॥

ಋಕ್ಷಮಾವಾಹಯಿಷ್ಯಾಮಿ ಯತ್ತದಭಿಜಿದುಚ್ಯತೇ ।
ಏಹಿ ಧಿಷ್ಣ್ಯ ವರಿಷ್ಠಾದ್ಯ ಕ್ಷಿಪ್ರಕರ್ಮಪ್ರಸಾದಕ ॥ ೮೭ ॥

---

ವೀರರಿಂದ ಪುರಸ್ಕರಿಸಲ್ಪಟ್ಟ ನಿಋುಋತಿಯನ್ನೂ ಆವಾಹಿಸುತ್ತೇನೆ. ಮಹಾಬಲಶಾಲಿಯಾದ ಎಲೈ ವಿರೂಪಾಕ್ಷನೇ, ಇಲ್ಲಿ ಬಂದು ಸಾನ್ನಿಧ್ಯಹೊಂದು. ದಾರುಣ ಮಹಾನಕ್ಷತ್ರವಾದ ಮೂಲವನ್ನು ಆವಾಹಿಸುತ್ತೇನೆ. ಭಕ್ತರಿಗೆ ಅಭಯಪ್ರದನಾದ ಮೂಲವೇ ಭಾಗ್ಯಶಾಲಿಯಾದ ನೀನು ಬಂದು ಸಾನ್ನಿಧ್ಯಹೊಂದು.

೮೫-೯೦. ವರಪ್ರದೆಯಾಗಿಯೂ ಸರ್ವವ್ಯಾಪಕವಾಗಿಯೂ, ಶುಭಕರವಾಗಿಯೂ ಇರುವ ಪೂರ್ವಾಷಾಢಾಸಂಜ್ಞೆಯುಳ್ಳ ಅಬ್ದೇವತೆಯನ್ನು ಆವಾಹಿಸುತ್ತೇನೆ. ಉಗ್ರಳಾದ ಪೂರ್ವಾಷಾಢೆಯೇ ವರಪ್ರದೆಯಾದ ನೀನು ಇಲ್ಲಿ ಬಂದು ಸಾನ್ನಿಧ್ಯಹೊಂದು. ಅಭಿಜಿತ್ ಎಂಬ ಸಂಜ್ಞೆಯುಳ್ಳ ಉತ್ತರಾಷಾಢಾನಕ್ಷತ್ರವನ್ನು ಆವಾಹಿಸುತ್ತೇನೆ. ಕ್ಷಿಪ್ರಕರ್ಮಗಳಲ್ಲಿ ಸಿದ್ಧಿಪ್ರದವಾದ ಉತ್ತರಾಷಾಢೆಯೇ ಇಲ್ಲಿ ಬಂದು ಸಾನ್ನಿಧ್ಯಹೊಂದು. ಸರ್ವಮನೋರಥಗಳಿಗೂ ಪೂರಕವಾದ ಶ್ರವಣ ನಕ್ಷತ್ರವನ್ನು ಆವಾಹಿಸುತ್ತೇನೆ. ಚರಕರ್ಮಗಳಿಗೆ ಸಾಧಕನಾದ ಶ್ರವಣವೇ ಇಲ್ಲಿ ಬಂದು ಪ್ರಸನ್ನತೆಯಿಂದ ಸಾನ್ನಿಧ್ಯ ಹೊಂದು. ಚರಕರ್ಮಗಳಲ್ಲಿ ಸಾಧಿಕೆಯಾದ

ಋಕ್ಷಮಾವಾಹಯಿಷ್ಯಾಮಿ ಶ್ರವಣಂ ಸರ್ವಕಾಮದಂ ।
ಪ್ರಸನ್ನಸ್ತ್ವಂ ಸಮಭ್ಯೇಹಿ ಚರಕರ್ಮಪ್ರಸಾಧಕ ॥ ೮೮ ॥

ಧನಿಷ್ಠೇ ತ್ವಮಿಹಾಭ್ಯೇಹಿ ಚರಕರ್ಮಪ್ರಸಾಧಿಕೇ ॥ ೮೯ ॥

ಋಕ್ಷಮಾವಾಯಿಷ್ಯಾಮಿ ನಾಮ್ನಾ ಶತಭಿಷಾಂ ಶುಭಾಂ ।
ಆಗಚ್ಛ ತ್ವಂ ಶತಭಿಷೇ ಚರಕರ್ಮಸು ಶೋಭನೇ ॥ ೯೦ ॥

ಅಜೈಕಪಾದಂ ವರದಂ ರುದ್ರಮಾವಾಹಯಾಮ್ಯಹಂ ।
ಆಗಚ್ಛ ರುದ್ರ ವರದ ತ್ರಿಶೂಲಪರಮಾಯುಧ ॥ ೯೧ ॥

ಋಕ್ಷಮಾವಾಹಯಿಷ್ಯಾಮಿ ಪೂರ್ವಭದ್ರಪದಾಮಹಂ ।
ಏಹಿ ಭದ್ರಪದೇ ಪೂರ್ವೇ ಉಗ್ರಕರ್ಮಪ್ರಸಾಧಿನಿ ॥ ೯೨ ॥

ಅಹಿರ್ಬುಧ್ನ್ಯಂ ಮಹಾಭಾಗಂ ರುದ್ರಮಾವಾಹಯಾಮ್ಯಹಂ ।
ಅಹಿರ್ಬುಧ್ನ್ಯ ಸಮಭ್ಯೇಹಿ ಜಟಾಜೂಟೋಪಶೋಭಿತ ॥ ೯೩ ॥

ಧ್ರುವಮಾವಾಹಯಿಷ್ಯಾಮಿ ದೇಶೇ ಭದ್ರಪದೋತ್ತರಾಂ ।
ಏಹಿ ತ್ವಂ ಸುಮಹಾಭಾಗೇ ಮಮ ಭದ್ರಪದೋತ್ತರೇ ॥ ೯೪ ॥

---

ಧನಿಷ್ಠೆಯೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಶತಭಿಷೆ ಎಂಬ ಶುಭನಕ್ಷತ್ರವನ್ನು ಆವಾಹಿಸುತ್ತೇನೆ. ಚರಕರ್ಮಗಳಲ್ಲಿ ಶುಭಕರಳಾದ ಶತಭಿಷೆಯೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೯೧-೯೪. ಅಜೈತಪಾತ್ ಎಂಬ ವರಪ್ರದನಾದ ರುದ್ರನನ್ನು ಆವಾಹಿಸುತ್ತೇನೆ. ತ್ರಿಶೂಲಾಯುಧಧಾರಿಯಾದ ರುದ್ರನೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಪೂರ್ವಾಭಾದ್ರವೆಂಬ ನಕ್ಷತ್ರವನ್ನು ಆವಾಹಿಸುತ್ತೇನೆ. ಉಗ್ರಕರ್ಮಸಾಧಿಕೆಯಾದ ಪೂರ್ವಾಭಾದ್ರೆಯೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಮಾಹಾತ್ಮ್ಯಶಾಲಿಯಾದ ಅಹಿರ್ಬುಧ್ನ್ಯನೆಂಬ ರುದ್ರನನ್ನು ಆವಾಹಿಸುತ್ತೇನೆ. ಜಟಾಮಾಲೆಗಳಿಂದ ಅಲಂಕೃತನಾದ ಅಹಿರ್ಬುಧ್ನ್ಯನೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಧ್ರುವಸಂಜ್ಞೆಯುಳ್ಳ ಉತ್ತರಾಭಾದ್ರೆಯನ್ನು ಆವಾಹಿಸುತ್ತೇನೆ ಭಾಗ್ಯಶಾಲಿನಿಯಾದ ಉತ್ತರಾಭಾದ್ರೆಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು.

ಆವಾಹಯೊಮ್ಯಹಂ ದೇವಂ ಪೂಷಣಂ ಪಾಪನಾಶಕಂ ।
ಪೂಷನ್ ಸಮ್ಯಗಿಹಾಭ್ಯೇಹಿ ಸರ್ವಕಲ್ಮಷನಾಶಕ ॥ ೯೫ ॥

ಋಕ್ಷಮಾವಾಹಯಿಷ್ಯಾಮಿ ರೇವತೀಂ ಭೀರುದರ್ಶನಾಂ ।
ಏಹಿ ರೇವತಿ ಧರ್ಮಜ್ಞೇ ಮೃದುಕರ್ಮಪ್ರಸಾಧಿಕೇ ॥ ೯೬ ॥

ಋಕ್ಷಮಾವಾಹಯಿಷ್ಯಾಮಿ ಕ್ಷಿಪ್ರಮಶ್ವಿನಿಸಂಜ್ಞಕಂ ।
ಏಹ್ಯಶ್ವಿನಿ ಮಹಾಭಾಗೇ ವರದೇ ಕಾಮದಾಯಿನಿ ॥ ೯೭ ॥

ಯಮಮಾವಾಹಯಿಷ್ಯಾಮಿ ಧರ್ಮರಾಜಮಥಾಚ್ಯುತಂ ।
ಏಹಿ ಧರ್ಮಭೃತಾಂ ಶ್ರೇಷ್ಠ ವೈವಸ್ವತ ಮಹಾಭುಜ ॥ ೯೮ ॥

ಋಕ್ಷಮಾವಾಹಯಿಷ್ಯಾಮಿ ಉಗ್ರಂ ಭರಣಿಸಂಜ್ಞಕಂ ।
ಏಹಿ ತ್ವಂ ದೇವಿ ಭರಣಿ ಸುಭಗೇ ಚಾರುದರ್ಶನೆ ॥ ೯೯ ॥

---

೯೫-೯೯. ಪಾಪನಾಶಕನಾದ ಪೂಷನೆಂಬ ಸೂರ್ಯದೇವನನ್ನು ಆವಾಹಿಸುತ್ತೇನೆ. ಸರ್ವಪಾಪನಾಶಕನಾದ ಪೂಷನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಅಂಜಿಕೆಯ ಸ್ವಭಾವವುಳ್ಳ ರೇವತೀ ನಕ್ಷತ್ರವನ್ನು ಆವಾಹಿಸುತ್ತೇನೆ. ಮೃದುಕರ್ಮಸಾಧಿಕೆಯೂ, ಧರ್ಮಜ್ಞೆಯೂ ಆದ ರೇವತಿಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಅಶ್ವಿನೀ ಎಂಬ ಕ್ಷಿಪ್ರನಕ್ಷತ್ರವನ್ನು ಆವಾಹಿಸುತ್ತೇನೆ. ಮನೋರಥಪ್ರದಳೂ ಮಹಾಮಹಿಮಳೂ ಆದ ಅಶ್ವಿನಿಯೇ, ಇಲ್ಲಿ ಬಂದು ಸಾನ್ನಿಧ್ಯಹೊಂದು. ಧರ್ಮರಾಜನಾದ ಯಮನನ್ನು ಆವಾಹಿಸುತ್ತೇನೆ. ವೈವಸ್ವತನೇ, ಮಹಾಪರಾಕ್ರಮಿಯೇ ಧರ್ಮಜ್ಞಾಗ್ರೇಸರನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಭರಣಿ ಎಂಬ ಉಗ್ರ ನಕ್ಷತ್ರವನು ಆವಾಹಿಸುತ್ತೇನೆ. ರಮ್ಯದರ್ಶನಳಾಗಿಯೂ, ಭಾಗ್ಯಶಾಲಿನಿಯಾಗಿಯೂ ಇರುವ ಭರಣಿದೇವಿಯೇ ಇಲ್ಲಿ ಬಂದು ಸಾನ್ನಿಧ್ಯಹೊಂದು.

ಪ್ರಾಚೀಮಾವಾಹಯಿಷ್ಯಾಮಿ ಸೂರ್ಯೋದಯವಿಭೂಷಣಾಂ ।
ಏಹಿ ತ್ವಂ ವರದೇ ಪೂರ್ವೇ ಶುಭಕರ್ಮಪ್ರಸಾಧಿನಿ　　॥ ೧೦೦ ॥

ದಿಶಮಾವಾಹಯಿಷ್ಯಾಮಿ ವರದಾಂ ಪೂರ್ವದಕ್ಷಿಣಾಂ ।
ವಹ್ನಿಪ್ರಿಯೇ ಸಮಭ್ಯೇಹಿ ವರದೇ ಪೂರ್ವದಕ್ಷಿಣೇ　　॥ ೧೦೧ ॥

ಅಹಮಾವಾಹಯಿಷ್ಯಾಮಿ ದಕ್ಷಿಣಾಂ ದಕ್ಷಿಣಾಂ ದಿಶಂ ।
ದಕ್ಷಿಣೇ ತ್ವಂ ಸಮಭ್ಯೇಹಿ ಸರ್ವಕರ್ಮಶುಭಪ್ರದೇ　　॥ ೧೦೨ ॥

ದಿಶಮಾವಾಹಯಿಷ್ಯಾಮಿ ಶುಭಾಂ ದಕ್ಷಿಣಪಶ್ಚಿಮಾಂ ।
ಏಹಿ ತ್ವಂ ನೈಋತೇ ದೇವಿ ಸತತಂ ಭೂತಿವರ್ಧಿನಿ　　॥ ೧೦೩ ॥

ದಿಶಮಾವಾಹಯಿಷ್ಯಾಮಿ ವಾರುಣೀಂ ವರದಾಂ ಸದಾ ।
ಆಗಚ್ಛ ಪಶ್ಚಿಮೇ ದೇವಿ ವರದೇ ವರುಣಪ್ರಿಯೇ　　॥ ೧೦೪ ॥

ಆವಾಹಯಿಷ್ಯಾಮಿ ದಿಶಂ ವಾಯವೀಂ ಪಶ್ಚಿಮೋತ್ತರಾಂ ।
ವರದೇ ತ್ವಂ ಸಮಭ್ಯೇಹಿ ವಾಯವ್ಯೇ ಪಶ್ಚಿಮೋತ್ತರೇ　　॥ ೧೦೫ ॥

---

೧೦೦-೧೦೫. ಉದಯ ಹೊಂದುವ ಸೂರ್ಯನಿಂದ ಅಲಂಕೃತೆಯಾದ ಪೂರ್ವದಿಕ್ಕನ್ನು ಆವಾಹಿಸುತ್ತೇನೆ. ಶುಭಕರ್ಮಸಾಧಕೆಯಾದ ಪೂರ್ವದಿಕ್ಕೇ ವರಪ್ರದೆಯಾದ ನೀನು ಇಲ್ಲಿ ಸಾನ್ನಿಧ್ಯ ಹೊಂದು. ವರಪ್ರದೆಯಾದ ಆಗ್ನೇಯದಿಕ್ಕನ್ನು ಆವಾಹಿಸುತ್ತೇನೆ. ಅಗ್ನಿಪ್ರಿಯಳಾದ ಆಗ್ನೇಯ ದಿಕ್ಕೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಉದಾರಪ್ರಕೃತಿಯಾದ ದಕ್ಷಿಣದಿಕ್ಕನ್ನು ಆವಾಹಿಸುತ್ತೇನೆ. ಸರ್ವಕಾರ್ಯದಲ್ಲಿಯೂ ಮಂಗಳಪ್ರದೆಯಾದ ನೀನು ಇಲ್ಲಿ ಬಂದು ಸಾನ್ನಿಧ್ಯ ಹೊಂದು ಶುಭವಾದ ನೈಋತ್ಯದಿಕ್ಕನ್ನು ಆವಾಹಿಸುತ್ತೇನೆ ಯಾವಾಗಲೂ ಐಶ್ವರ್ಯಸಮೃದ್ಧಿಗೆ ಕಾರಣಳಾದ ನೈಋತದೇವಿಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಯಾವಾಗಲೂ ಇಷ್ಟಾರ್ಥಪ್ರದಳಾದ ವರುಣದಿಕ್ಕನ್ನು ಆವಾಹಿಸುತ್ತೇನೆ, ವರುಣಪ್ರಿಯಳಾದ ಪಶ್ಚಿಮದಿಕ್ಕೇ ಇಲ್ಲಿ ಬಂದು ಸಾನ್ನಿಧ್ಯಹೊಂದು. ಶುಭಕರಳಾದ ವಾಯವ್ಯದಿಕ್ಕನ್ನು ಆವಾಹಿಸುತ್ತೇನೆ. ವರಪ್ರದಳಾದ ವಾಯವ್ಯದಿಕ್ಕೇ ನೀನು ಇಲ್ಲಿ ಬಂದು ಸಾನ್ನಿಧ್ಯಹೊಂದು.

ಆವಾಹಯಾಮಿ ಧನದಂ ದೇವಂ ವೈಶ್ರವಣಂ ಪ್ರಭುಂ ।
ರಾಜರಾಜ ಸಮಭ್ಯೇಹಿ ಸರ್ವಯಜ್ಞೇಶ್ವರಾಧಿಪ ॥ ೧೦೬ ॥

ದಿಶಮಾವಾಹಯಿಷ್ಯಾಮಿ ಸೌಮ್ಯಾಂ ಧನದಪಾಲಿತಾಂ ।
ಉತ್ತರೇ ತ್ವಂ ಸಮಭ್ಯೇಹಿ ಸರ್ವಧರ್ಮಫಲಪ್ರದೇ ॥ ೧೦೭ ॥

ದಿಶಮಾವಾಹಯಿಷ್ಯಾಮಿ ಶುಭಾಂ ಪ್ರಾಗುತ್ತರಾಮಹಂ ।
ಏಹಿ ತ್ವಂ ಸುಭಗೇ ದೇವಿ ಸತತಂ ಶಿವಪಾಲಿತೇ ॥ ೧೦೮ ॥

ಸರ್ವಾನಾವಾಹಯಿಷ್ಯಾಮಿ ಪೂರ್ಣಕುಂಭೇಷು ಸಾಗರಾನ್ ।
ರತ್ನಾಧ್ಯಕ್ಷಾಃ ಸಮಾಯಾಂತು ಚತ್ವಾರ ಇಹ ಸಾಗರಾಃ ॥ ೧೦೯ ॥

ಐಶಾನ್ಯಂ ದಿಶಿಯಃ ಕುಂಭಃ ಪೂರ್ವಸ್ತಸ್ಯಾಂ ತು ಸಾಗರಃ ।
ಆಯಾತು ಶೀಘ್ರಮೇವೇಹ ತರಙ್ಗೋರ್ಮಿಸಮಾಕುಲಃ ॥ ೧೧೦ ॥

---

೧೦೬-೧೧೦. ವೈಶ್ರವಣವೆಂಬ ಪ್ರಸಿದ್ಧನಾದ, ಪ್ರಭುವಾದ ಕುಬೇರನನ್ನು ಆವಾಹಿಸುತ್ತೇನೆ. ಎಲ್ಲಾ ಯಜ್ಞಪತಿಗಳಿಗೂ ಪ್ರಭುವಾದ ರಾಜರಾಜನೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು ಕುಬೇರನಿಂದ ರಕ್ಷಿಸಲ್ಪಡುತ್ತಿರುವ ಸೌಮ್ಯದಿಕ್ಕನ್ನು ಆವಾಹಿಸುತ್ತೇನೆ. ಎಲ್ಲಾ ಧರ್ಮಗಳಿಗೂ ಫಲದಾಯಿನಿಯಾದ ಉತ್ತರದಿಕ್ಕೇ ನೀನು ಇಲ್ಲಿ ಬಂದು ಸಾನ್ನಿಧ್ಯ ಹೊಂದು ಶುಭಕರವಾದ ಈಶಾನ್ಯದಿಕ್ಕನ್ನು ಆವಾಹಿಸುತ್ತೇನೆ. ಶಿವನಿಂದ ರಕ್ಷಿಸಲ್ಪಡುತ್ತ ಸೌಭಾಗ್ಯಪ್ರದೆಯಾದ ಈಶಾನ್ಯ ದಿಗ್ದೇವಿಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಎಲ್ಲಾ ಸಾಗರಗಳನ್ನೂ ಪೂರ್ಣ ಕುಂಭಗಳಲ್ಲಿ ಆವಾಹಿಸುತ್ತೇನೆ. ರತ್ನಾಧ್ಯಕ್ಷರಾದ ನಾಲ್ಕು ಸಾಗರಗಳೂ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ಈಶಾನ್ಯದಿಕ್ಕಿನಲ್ಲಿರುವ ಕುಂಭದಲ್ಲಿ ಪೂರ್ವಸಾಗರ ವನ್ನು ಆವಾಹಿಸುತ್ತೇನೆ. ಆ ಪೂರ್ವಸಾಗರವೂ ಸಣ್ಣ ಮತ್ತು ದೊಡ್ಡದೊಡ ಅಲೆಗಳಿಂದ ಕೂಡಿ ಜಾಗ್ರತೆಯಾಗಿ ಈ ಕುಂಭದಲ್ಲಿ ಬಂದು ಸಾನ್ನಿಧ್ಯ ಹೊಂದಲಿ.

ಶೀಘ್ರಮಭ್ಯೇಹಿ ನಿಲಯೊ ಯಾದಸಾಂ ಪೂರ್ವಸಾಗರ ।
ತರಂಗಶತಸಂಕ್ರಾನ್ತಬಾಲಭಾಸ್ಕರಮಂಡಲ　　॥ ೧೧೧ ॥

ಆಗ್ನೇಯೇ ಚ ಸಮಾಯಾತು ದಕ್ಷಿಣೇ ದಕ್ಷಿಣಃ ಶಿವಃ ।
ಬಹುರತ್ನಪ್ರಭಾಪುಂಜವಿಮಿಶ್ರಸಲಿಲೋತ್ಕಟಃ　　॥ ೧೧೨ ॥

ಯಾದಸಾಂ ನಿಲಯಾಭ್ಯೇಹಿ ಕ್ಷಿಪ್ರಂ ದಕ್ಷಿಣಸಾಗರ ।
ತರಙ್ಗಧೌತಪಾದಾಗ್ರತ್ರಿಕೂಟಶಿಖರಾಚ್ಯುತ　　॥ ೧೧೩ ॥

ಪಶ್ಚಿಮಾಯಾಃ ಸಮಾಯಾತು ಕುಂಭೇ ದಕ್ಷಿಣಪಶ್ಚಿಮೇ ।
ರತ್ನಪುಂಜಮಹಾಜ್ವಾಲಾ ವಿರಾಜಿತಮಹೋದಕ　　॥ ೧೧೪ ॥

ತರಙ್ಗಮಂಡಿತಾಭ್ಯೇಹಿ ಕ್ಷಿಪ್ರಂ ಪಶ್ಚಿಮಸಾಗರ ।
ಅಸ್ತಾರ್ಕಬಿಂಬಸಂಕ್ರಾಂತಗತಮಂಡಲದುರ್ದೃಶ　　॥ ೧೧೫ ॥

---

೧೧೧-೧೧೬. ಜಲಜಂತುಗಳಿಗೆ ಆಶ್ರಯನಾಗಿಯೂ, ಅನೇಕಾನೇಕ ತರಂಗಗಳಲ್ಲಿ ಸಂಕ್ರಾಂತಿ ಹೊಂದಿರುವ ಬಾಲಸೂರ್ಯಮಂಡಲನಾಗಿಯೂ ಇರುವ ಪೂರ್ವಸಾಗರನೇ, ಶೀಘ್ರವಾಗಿ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಆಗ್ನೇಯದಿಕ್ಕಿನ ಕುಂಭದಲ್ಲಿ ಮಂಗಳಕರನಾದ ದಕ್ಷಿಣಸಾಗರವು ಸಾನ್ನಿಧ್ಯ ಹೊಂದಲಿ ಅನೇಕ ರತ್ನಗಳ ಪ್ರಭೆಯ ಪುಂಜದಿಂದ ಕೂಡಿಕೊಂಡಿರುವ ಜಲಭಾಗವುಳ್ಳ ಮತ್ತು ಜಲಜಂತುಗಳಿಗೆ ಆಶ್ರಯದಾತನಾಗಿರುವ ದಕ್ಷಿಣಸಾಗರನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ನೈರುತ್ಯದಿಕ್ಕಿನ ಕುಂಭದಲ್ಲಿ ತರಂಗಗಳಿಂದ ತೊಳೆಯಲ್ಪಟ್ಟ ಬುಡದ ಪ್ರದೇಶವುಳ್ಳ ತ್ರಿಕೂಟಪರ್ವತದ ಶಿಖರಗಳಿಂದ ಕೂಡಿದ ಪಶ್ಚಿಮಸಮುದ್ರವು ಸಾನ್ನಿಧ್ಯ ಹೊಂದಲಿ. ರತ್ನಸಮೂಹಗಳ ಕಿರಣಗಳೆಂಬ ಜ್ವಾಲೆಯಿಂದ ವಿರಾಜಿಸಲ್ಪಟ್ಟ ಜಲರಾಶಿಯುಳ್ಳ ಪಶ್ಚಿಮಸಾಗರನೇ, ತರಂಗಸಂಕುಲನಾಗಿಯೂ ಅಸ್ತಂಗತನಾದ ಸೂರ್ಯಮಂಡಲದಲ್ಲಿ ಅರ್ಧಭಾಗವು ನೀರಿನಲ್ಲಿ ಮುಳುಗಿರುವುದರಿಂದ ಮುಳುಗಿ ಹೋಗಿರುವ ಅರ್ಧಭಾಗದಿಂದ ದುರ್ದರ್ಶನಹೊಂದಿಯೂ ಇರುವ ನೀನು ಈ ಕುಂಭದಲ್ಲಿ ಸಾನ್ನಿಧ್ಯ ಹೊಂದು. ಹಾಗೆಯೇ ವಾಯುವ್ಯದಿಕ್ಕಿನ ಕುಂಭದಲ್ಲಿ ಹಿಮಪರ್ವತದ

ಉತ್ತರಶ್ಚ ತಥಾಭ್ಯೇತು ಕುಂಭೇ ವೈ ಪಶ್ಚಿಮೋತ್ತರೇ ।
ಹಿಮಾದ್ರಿಶಿಖರಚ್ಛಾಯಾಕ್ಷೀರೋದಸದೃಶಃ ಪ್ರಭುಃ ॥ ೧೧೬ ॥

ಮಹಾಪವಿತ್ರಸಲಿಲ ಶೀಘ್ರಮುತ್ತರಸಾಗರ ।
ಇಹಾಭ್ಯೇಹಿ ಮಹಾಭಾಗ ಯಜಮಾನಾಭಿವೃದ್ಧಯೇ ॥ ೧೧೭ ॥

ಆವಾಹಿತಾನಾಂ ಕರ್ತವ್ಯಂ ಭೂಮೌ ಕೃತ್ವಾ ತತಃ ಶಿರಃ ।
ಪ್ರಣಾಮಮಭಿವಾದಂ ಚ ತತೋ ಮಂತ್ರಮುದೀರಯೇತ್ ॥ ೧೧೮ ॥

ಭವತಾಂ ಹಿ ಪ್ರಸಾದೇನ ಭವತಾಂ ಪ್ರತಿಪೂಜನೇ ।
ಪ್ರಯತಿಷ್ಯೇ ಯಥಾಶಕ್ತ್ಯಾ ತನ್ಮೇಽನುಜ್ಞಾತುಮರ್ಹಥ ॥ ೧೧೯ ॥

ಯುಷ್ಮಾಕಂ ಪೂಜನಂ ಕರ್ತುಂ ಕೇನ ಶಕ್ಯಂ ಯಥಾವಿಧಿ ।
ಯುಷ್ಮತ್ಪೂಜಾವಿಹೀನೇನ ಕೇನ ಲಭ್ಯಂ ಮಹತ್ಫಲಂ ॥ ೧೨೦ ॥

ತತಃ ಕರ್ತುಂ ಯಥಾಶಕ್ತಿ ಭವತಾಂ ಪ್ರತಿಪೂಜನಂ ।
ವರದಾಃ ಪ್ರಯತಿಷ್ಯಾಮಿ ತನ್ಮೇಽನುಜ್ಞಾತುಮರ್ಹಥ ॥ ೧೨೧ ॥

---

ಶಿಖರಚ್ಛಾಯೆಯಿಂದ ಕ್ಷೀರಸಮುದ್ರದಂತೆ ತೋರುವ ಉತ್ತರಸಾಗರವು ಸಾನ್ನಿಧ್ಯ ಹೊಂದಲಿ. ಪವಿತ್ರವಾದ ತೀರ್ಥವುಳ್ಳ ಉತ್ತರಸಾಗರನೇ, ಪೂಜ್ಯನಾದ ನೀನು ಯಜಮಾನನ ಅಭ್ಯುದಯಕ್ಕಾಗಿ ಜಾಗ್ರತೆಯಾಗಿ ಇಲ್ಲಿ ಬಂದು ಸಾನ್ನಿಧ್ಯಹೊಂದು

೧೧೮-೧೨೧. ಆವಾಹಿತರಾದ ಆಯಾಯ ದೇವತೆಗಳಿಗೆ ತಲೆಯನ್ನು ಭೂಮಿಯವರಿಗೂ ಬಗ್ಗಿಸಿ ಪ್ರಣಾಮ ಅಭಿವಾದನವನ್ನು ಮಾಡಿ ಅನಂತರ ಮಂತ್ರವನ್ನುಚ್ಚರಿಸಬೇಕು. ನಿಮ್ಮಗಳ ಅನುಗ್ರಹದಿಂದ ಭಕ್ತನಾದ ನನ್ನಲ್ಲಿ ಪ್ರೀತಿಯಿಟ್ಟು ಬಂದಿರುವ ನಿಮ್ಮಗಳ ಪ್ರತಿಪೂಜಾವಿಷಯದಲ್ಲಿ ಯಥಾಶಕ್ತಿ ಪ್ರಯತ್ನಿಸುತ್ತೇನೆ. ಇದಕ್ಕಾಗಿ ನನಗೆ ಅಭ್ಯನುಜ್ಞೆ(ಅಪ್ಪಣೆ)ಕೊಡಿರಿ. ಪೂಜ್ಯರಾದ ನಿಮ್ಮಗಳ ಪೂಜೆಯನ್ನು ಯಥಾವಿಧಿಯಾಗಿ ನೆರವೇರಿಸಲು ಯಾರಿಂದತಾನೇ ಸಾಧ್ಯ. ಆದರೂ ನಿಮ್ಮ ಪೂಜೆಇಲ್ಲದಿರುವವನಿಗೆ ಯಾವನಿಗೆ ತಾನೇ ಫಲವು ಲಭಿಸುತ್ತದೆ ಆದುದರಿಂದ ಅವಶ್ಯನೆರವೇಸಬೇಕಾಗಿರುವ ತಮ್ಮಗಳ ಪ್ರತಿಪೂಜೆಯಲ್ಲಿ ಯಥಾಶಕ್ತಿ ಪ್ರಯತ್ನಿಸುತ್ತೇನೆ. ವರಪ್ರದರಾದ ನೀವುಗಳು ನನಗೆ ಅಪ್ಪಣೆಕೊಡಿರಿ.

ಸ್ವಾಂ ಸ್ವಾಂ ದಿಶಮಧಿಷ್ಠಾಯ ದಿಕ್ಪಾಲಾಃ ದೀಪ್ತತೇಜಸಃ ।
ಉತ್ಸಾದಯಂತು ಸಕಲಾನ್ ವಿಘ್ನಾನ್ ಯಾನ್ಸಮುಪಸ್ಥಿತಾನ್ ॥ ೧೨೨ ॥

ವಿನಾಯಕಾ ವಿಘ್ನಕರಾಃ ಸಮೋಗ್ರಾ
ಯಜ್ಞದ್ವಿಷೋ ಯೇ ಪಿಶಿತಾಶನಾಶ್ಚ ।
ಸಿದ್ಧಾರ್ಥಕೈರ್ವಜ್ರಸಮಾನಕಲ್ಪೈ-
ರ್ಮಯಾನಿರಸ್ತಾ ವಿದಿಶಃ ಪ್ರಯಾಂತು ॥ ೧೨೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಬ್ರಹ್ಮಾದಿದೇವಾಹ್ವಾನವರ್ಣನೋ ನಾಮ
ಚತುರುತ್ತರಶತತಮೋಽಧ್ಯಾಯಃ

---

೧೨೨-೧೨೩. ತೇಜಸ್ವಿಗಳಾದ ದಿಕ್ಪಾಲಕರೆಲ್ಲರೂ ತಮ್ಮತಮ್ಮ ದಿಕ್ಕುಗಳಲ್ಲಿಯೇ ಇದ್ದುಕೊಂಡು ಇಲ್ಲಿ ಸಂಭವಿಸಬಹುದಾದ ಸಕಲವಿಘ್ನಗಳನ್ನೂ ನಾಶಪಡಿಸಲಿ. ವಿಘ್ನಕಾರಿಗಳಾದ ವಿನಾಯಕಾದಿಗೃಹದೈವಗಳೂ, ಯಜ್ಞನಾಶಕರಾದ ರಾಕ್ಷಸರೂ ವಜ್ರಾಯುಧಕ್ಕೆ ಸಮಾನವಾದ ಸಿದ್ಧಾರ್ಥಕ (ಬಿಳಿಸಾಸವೆ)ಗಳಿಂದ ಓಡಿಸಲ್ಪಟ್ಟು ದಿಕ್ಕುಗಳಿಗೆ ಹೋಗಿ ಸೇರಿಕೊಳ್ಳಲಿ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಬ್ರಹ್ಮಾದಿದೇವಾಹ್ವಾನವೆಂಬ
ನೂರ ನಾಲ್ಕನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಪಂಚೋತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಲೋಕಾನಾವಾಹಯಿಷ್ಯಾಮಿ ಹಂಸರೂಪಾನ್ಮನೋಹರಾನ್ ।**
**ಆಯಾಂತು ವಾಹನತ್ವೇನ ಯೇ ಸ್ಥಿತಾಃ ಪರಮೇಷ್ಠಿನಃ || ೧ ||**

**ವೃಷಮಾವಾಹಯಿಷ್ಯಾಮಿ ಚತುಷ್ಪಾದಂ ಕಕುದ್ಮಿನಂ ।**
**ವೃಷಾಭ್ಯೇಹಿ ಮಹಾಭಾಗ ಧರ್ಮಮೂರ್ತೇ ವರಪ್ರದ || ೨ ||**

**ಶೂಲಮಾವಾಹಯಿಷ್ಯಾಮಿ ಗುಣಾಧಾರಂ ಮಹಾದ್ಯುತಿಂ ।**
**ಏಹಿ ಶೂಲ ಮಹಾಭಾಗ ದೈತ್ಯನಾಥಗಣಾಂತಕ || ೩ ||**

---

### ನೂರ ಐದನೆಯ ಅಧ್ಯಾಯ.

೧-೩. ಮಾರ್ಕಂಡೇಯರು ಹೇಳುತ್ತಾರೆ:—ಹಂಸರೂಪಿಗಳಾದ ರಮ್ಯ ಪ್ರಾಣಿಗಳನ್ನೂ ಆವಾಹಿಸುತ್ತೇನೆ. ಚತುರ್ಮುಖನಿಗೆವಾಹನವಾಗಿ ಯಾವ ಹಂಸಗಳಿವೆಯೋ ಅವೆಲ್ಲವೂ ಇಲ್ಲಿ ಸಾನ್ನಿಧ್ಯ ಹೊಂದಲಿ. ನಾಲ್ಕು ಪಾದಗಳಿಂದ ಕೂಡಿ ಪ್ರಶಸ್ತವಾದ ಹಿರಳುಳ್ಳ ವೃಷಭವನ್ನು ಆವಾಹಿಸುತ್ತೇನೆ. ವರಪ್ರದನೂ, ಧರ್ಮಸ್ವರೂಪನೂ ಆದ ವೃಷಭನೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಪ್ರಕಾಶಮಾನವಾಗಿಯೂ, ಗುಣಾಶ್ರಯವಾಗಿಯೂ ಇರುವ ಶೂಲಾಯುಧವನ್ನು ಆವಾಹಿಸುತ್ತೇನೆ, ಮಹಾಮಹಿಮಶಾಲಿಯಾಗಿಯೂ, ದೈತ್ಯಾಧಿಪತಿಗಳ ಸಂಘಕ್ಕೆ ನಾಶಕವಾಗಿಯೂ ಇರುವ ಶೂಲಾಯುಧವೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು.

**ಅಹಮಾವಾಹಯಿಷ್ಯಾಮಿ ದೇವಂ ನಂದೀಶ್ವರಂ ಪ್ರಭುಂ |**
**ಅಭ್ಯೇಹಿ ನಂದಿ ಭಗವನ್ ಸರ್ವಲೋಕನಮಸ್ಕೃತ || ೪ ||**

**ಆವಾಹಯಾಮಿ ವರದಂ ವೀರಭದ್ರಂ ಮಹಾಬಲಂ |**
**ಅಭ್ಯೇಹಿ ವೀರಭದ್ರಾದ್ಯ ಮಹಾಗಣಗಣೇಶ್ವರ || ೫ ||**

**ಜ್ವರಮಾವಾಹಯಿಷ್ಯಾಮಿ ತ್ರಿಪಾದಂ ತ್ರಿಭುಜಂ ಪ್ರಭುಂ |**
**ಜ್ವರಾಭ್ಯೇಹಿ ಮಹಾಭಾಗ ಸತತಂ ಚರಣೋಜ್ವಲ || ೬ ||**

**ದೇವೀಮಾವಾಹಯಿಷ್ಯಾಮಿ ಭದ್ರಕಾಲೀಂ ಸುಖಪ್ರದಾಂ |**
**ಆಗಚ್ಛ ವರದೇ ದುರ್ಗೇ ಸರ್ವಲೋಕನಮಸ್ಕೃತೇ || ೭ ||**

**ಆವಾಹಯಾಮಿ ಪೌಲೋಮೀಂ ವರದಾಂ ನಿತ್ಯನಂದಿನೀಂ |**
**ಶಕ್ರಪತ್ನೀ ತ್ವ ಮಭ್ಯೇಹಿ ವರದೇ ಕಾಮರೂಪಿಣಿ || ೮ ||**

---

ಪ್ರಭುವಾದ ನಂದೀಶ್ವರನನ್ನು ಆವಾಹಿಸುತ್ತೇನೆ ಸರ್ವಜನ ನಮಸ್ಕೃತನೂ, ಪೂಜ್ಯನೂ ಆದ ನಂದಿಯೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಮಹಾಬಲಶಾಲಿಯಾಗಿಯೂ, ವರಪ್ರದನಾಗಿಯೂ ಇರುವ ವೀರಭದ್ರನನ್ನು ಆವಾಹಿಸುತ್ತೇನೆ. ಮಹಾಗಣಗಳಿಗೂ ಗಣಾಧಿಪತಿಯಾದ ವೀರಭದ್ರನೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೬-೧೧ ತ್ರಿಪಾದನೂ, ತ್ರಿಭುಜನೂ ಆಗಿರುವ ಜ್ವರವನ್ನು ಆವಾಹಿಸುತ್ತೇನೆ. ಯಾವಾಗಲೂ ಬಿಸಿಯಾದ ಕಾಲುಗಳುಳ್ಳ ಮಾಹಾತ್ಮ್ಯಶಾಲಿಯಾದ ಜ್ವರನೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಸುಖದಾಯಿನಿಯಾದ ಭದ್ರಕಾಲೀದೇವಿಯನ್ನು ಆವಾಹಿಸುತ್ತೇನೆ. ಸರ್ವಲೋಕವಂದ್ಯೆಯಾದ ದುರ್ಗಾದೇವಿಯೇ. ವರಪ್ರದಳಾದ ನೀನು ಇಲ್ಲಿ ಸಾನ್ನಿಧ್ಯ ಹೊಂದು ನಿತ್ಯಾನಂದಶಾಲಿನಿಯಾಗಿಯೂ, ವರಪ್ರದೆಯಾಗಿಯೂ ಇರುವ ಶಚೀದೇವಿಯನ್ನು ಆವಾಹಿಸುತ್ತೇನೆ. ಕಾಮರೂಪಿಣಿಯಾದ ಇಂದ್ರಪತ್ನಿಯೇ, ನೀನು ಇಲ್ಲಿ ಬಂದು ಸಾನ್ನಿಧ್ಯ ಹೊಂದು ಐರಾವಣವೆಂಬ ಗಜವನ್ನು ಆವಾಹಿಸುತ್ತೇನೆ. ಮಹಾಮಹಿಮನಾಗಿಯೂ, ಜಯಪ್ರದನಾಗಿಯೂ

ನಾಗಮಾವಾಹಯಿಷ್ಯಾಮಿ ಶೈರಾವಣಸಂಜ್ಞಿತಂ ।
ಇಹಾಭ್ಯೇಹಿ ಮಹಾಭಾಗ ಶಕ್ರನಾಗ ಜಯಾವಹ ॥ ೯ ॥

ವಜ್ರಮಾವಾಹಯಿಷ್ಯಾಮಿ ಸರ್ವಭೇದಕಮಾಶುಗಂ ।
ಶೀಘ್ರಂ ವಜ್ರ ತ್ವಮಭ್ಯೇಹಿ ಸರ್ವದುಷ್ಟನಿಬರ್ಹಣ ॥ ೧೦ ॥

ಹಯಾನಾವಾಹಯಿಷ್ಯಾಮಿ ಛಂದೋರೂಪಾನ್ಮನೋಹರಾನ್ ।
ಆಗಚ್ಛಂತು ಮಮಾದ್ಯೇಹ ತುರಗಾ ವ್ಯೋಮಗೋಚರಾಃ ॥ ೧೧ ॥

ಅಹಮಾವಾಹಯಿಷ್ಯಾಮಿ ದಂಡಸಂಜ್ಞಂ ಬಲೋತ್ಕಟಂ ।
ದಂಡ ಶೀಘ್ರಮಿಹಾಭ್ಯೇಹಿ ಮಹಾಬಲಪರಾಕ್ರಮ ॥ ೧೨ ॥

ಅಹಮಾವಾಹಯಿಷ್ಯಾಮಿ ಪಿಂಗಲಂ ಸುಮಹಾಬಲಂ ।
ಲೋಕಸಾಕ್ಷಿಂಸ್ತ್ವಮಭ್ಯೇಹಿ ಪಿಂಗಲಾಯ ಮಹಾಬಲ ॥ ೧೩ ॥

---

ಇರುವ ಇಂದ್ರನ ಆನೆಯೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಸರ್ವಭೇದಕವಾಗಿಯೂ, ತ್ವರಿತಗಮನಶಾಲಿಯಾಗಿಯೂ ಇರುವ ವಜ್ರಾಯುಧವನ್ನು ಆವಾಹಿಸುತ್ತೇನೆ. ಎಲ್ಲಾ ದುಷ್ಟರಿಗೂ ನಾಶಕನಾದ ವಜ್ರಾಯುಧವೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ವೇದರೂಪಗಳಾಗಿಯೂ, ರಮ್ಯಗಳಾಗಿಯೂ ಇರುವ ಸೂರ್ಯಾಶ್ವಗಳನ್ನು ಆವಾಹಿಸುತ್ತೇನೆ. ಆಕಾಶಚಾರಿಗಳಾದ ಸೂರ್ಯ ತುರಗಗಳು ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ.

೧೨-೧೫. ಉತ್ಕಟ ಬಲಶಾಲಿಯಾದ ದಂಡನೆಂಬ ಸೂರ್ಯಪರಿವಾರನನ್ನು ಆವಾಹಿಸುತ್ತೇನೆ. ಪರಾಕ್ರಮಿಯಾದ ದಂಡನೇ ಜಾಗ್ರತೆಯಾಗಿ ಸಾನ್ನಿಧ್ಯ ಹೊಂದು. ಬಲಶಾಲಿಯಾದ ಪಿಂಗಲನೆಂಬ ಸೂರ್ಯಪರಿವಾರವನ್ನು ಆವಾಹಿಸುತ್ತೇನೆ. ಲೋಕಸಾಕ್ಷಿಯಾದ ಸೂರ್ಯನೇ ನಿನ್ನ ಪಾರಿಪಾರ್ಶ್ವಕನಾದ ಪಿಂಗಲನಿಗಾಗಿ ನೀನೂ ಇಲ್ಲಿ ಸಾನ್ನಿಧ್ಯ ಹೊಂದು. ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳ ಚಿತ್ರವಾದಧ್ವಜವನ್ನು ಆವಾಹಿಸುತ್ತೇನೆ. ಸೂರ್ಯಧ್ವಜಗತನಾದ ಧರ್ಮನೇ

ಧ್ವಜಮಾವಾಹಯಿಷ್ಯಾಮಿ ಚಿತ್ರಂ ಸೂರ್ಯಸಮಪ್ರಭಂ ।
ಧರ್ಮ ಶೀಘ್ರಂ ತ್ವಮಭ್ಯೇಹಿ ಸೂರ್ಯಧ್ವಜಗತಾಚ್ಯುತ || ೧೪ ||

ದೇವೀಮಾವಾಹಯಿಷ್ಯಾಮಿ ಸೂರ್ಯಭಾಂ ಕಾಮರೂಪಿಣೀಂ ।
ದೇವಿ ತ್ವಂ ತೂರ್ಣಮಾಗಚ್ಛ ಸರ್ವಲೋಕನಮಸ್ಕೃತೇ || ೧೫ ||

ರಾಜ್ಞೀಮಾವಾಹಯಿಷ್ಯಾಮಿ ಸೂರ್ಯಪತ್ನೀಂ ಸುರೂಪಿಣೀಂ ।
ಆಗಚ್ಛ ವರದೇ ರಾಜ್ಞಿ ಜಗದ್ಧಾರಿಣಿ ಪೂಜಿತೇ || ೧೬ ||

ಅಹಮಾವಾಹಯಿಷ್ಯಾಮಿ ಸೂರ್ಯಪತ್ನೀಂ ಸುವರ್ಚಲಾಂ ।
ಧ್ಯಾಯೇ ದೇವಿ ತ್ವಮಾಗಚ್ಛ ಕೃತಾಕೃತವಿಚಾರಿಣಿ || ೧೭ ||

ಅಹಮಾವಾಹಯಿಷ್ಯಾಮಿ ದಶ ಚಂದ್ರಮಸೋ ಹಯಾನ್ ।
ಸರ್ವೇ ಶೀಘ್ರಮಿಹಾಯಾಂತು ಚಂದ್ರಾಶ್ವಾಃ ಕಾಮರೂಪಿಣಃ || ೧೮ ||

ಅಹಮಾವಾಹಯಿಷ್ಯಾಮಿ ಕಾಂತಿಂ ತ್ರಿದಶವಲ್ಲಭಾಂ ।
ಕಾನ್ತೆ ಶೀಘ್ರಂ ತ್ವಮಭ್ಯೇಹಿ ಶಶಾಂಕದಯಿತೆ ಶುಭೆ || ೧೯ ||

---

ಜಾಗ್ರತೆಯಾಗಿ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಕಾಮರೂಪಿಯಾದ ಸೂರ್ಯನ ಪ್ರಭಾದೇವಿಯನ್ನು ಆವಾಹಿಸುತ್ತೇನೆ. ಸರ್ವಲೋಕಪೂಜ್ಯೆಯಾದ ಪ್ರಭಾದೇವಿಯೇ ನೀನು ಜಾಗ್ರತೆಯಾಗಿ ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೧೬–೨೦. ಸುರೂಪಿಣಿ ಎಂಬ ಸೂರ್ಯಪತ್ನಿಯಾದ ರಾಣಿಯನ್ನು ಆವಾಹಿಸುತ್ತೇನೆ. ಜಗತ್ತನ್ನು ಧರಿಸುವ ಪೂಜ್ಯೆಯಾದ ಸೂರ್ಯರಾಣಿಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಸೂರ್ಯಪತ್ನಿಯಾದ ಸುವರ್ಚಲಾ ದೇವಿಯನ್ನು ಆವಾಹಿಸುತ್ತೇನೆ ಪುಣ್ಯಾಪುಣ್ಯವಿಚಾರಕಳಾಗಿರುವ ದೇವಿಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ನಿನ್ನನ್ನೇ ಧ್ಯಾನಿಸುತ್ತಿರುವೆನು. ಚಂದ್ರನ ಹತ್ತು ಕುದುರೆಗಳನ್ನು ಆವಾಹಿಸುತ್ತೇನೆ. ಕಾಮರೂಪಿಗಳಾದ ಚಂದ್ರನ ಕುದುರೆಗಳೆಲ್ಲಾ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ದೇವತೆಗಳಿಗೆ ಅತ್ಯಂತ ಪ್ರಿಯಳಾದ ಕಾಂತಿದೇವಿಯನ್ನು ಆವಾಹಿಸುತ್ತೇನೆ. ಶುಭಕರಳಾದ ಮತ್ತು ಚಂದ್ರಪ್ರಿಯಳಾದ ಕಾಂತಿಯೇ ಜಾಗ್ರತೆ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಜಗದೀಶ್ವರಿಯಾಗಿಯೂ ಜಗತ್ತಿಗೆ

**ಶೋಭಾಮಾವಾಹಯಿಷ್ಯಾಮಿ ಕಾಂಕ್ಷಿತಾಂ ಭುವನೇಶ್ವರೀಂ ।**
**ಶೋಭೇ ಶೀಘ್ರಂ ತ್ವಮಭ್ಯೇಹಿ ಸರ್ವಲೋಕೈಕಸುಂದರಿ ॥ ೨೦ ॥**

**ದಿನಮಾವಾಹಯಿಷ್ಯಾಮಿ ಸಮಸ್ತಧ್ವಾಂತನಾಶಕಂ ।**
**ದಿನ ಶೀಘ್ರಂ ತ್ವಮಭ್ಯೇಹಿ ದರ್ಶಿತಾಖಿಲಮಂಡಲ ॥ ೨೧ ॥**

**ರಾತ್ರಿಮಾವಾಹಯಿಷ್ಯಾಮಿ ಸರ್ವಭೂತಸುಖಾವಹಾಂ ।**
**ರಾತ್ರಿ ದೇವಿ ತ್ವಮಭ್ಯೇಹಿ ಸರ್ವಭೂತವರಪ್ರದೇ ॥ ೨೨ ॥**

**ಸನ್ಧ್ಯಾಮಾವಾಹಯಿಷ್ಯಾಮಿ ದೇವೀಂಬ್ರಾಹ್ಮಣಪೂಜಿತಾಂ ।**
**ಆಗಚ್ಛ ವರದೇ ಸಂಧ್ಯೇ ಸರ್ವಭೂತನಮಸ್ಕೃತೇ ॥ ೨೩ ॥**

**ಸ್ವಾಹಾಮಾವಾಹಯಿಷ್ಯಾಮಿ ವಹ್ನೇಭಾರ್ಗಂ ವಿಭಾವರೀಂ ।**
**ಸ್ವಾಹೇ ಭ್ಯೇಹಿ ಮಹಾಭಾಗೇ ವರದೇ ಕಾಮರೂಪಿಣಿ ॥ ೨೪ ॥**

**ವೇದಾನಾವಾಹಯಿಷ್ಯಾಮಿ ಶುಭರೂಪಧರಾನಹಂ ।**
**ಆಯಾಂತು ವಾಹನತ್ವೇನ ಧೂಮ್ರಕೇತುವ್ಯವಸ್ಥಿತಾಃ ॥ ೨೫ ॥**

---

ಅಭಿಲಷಣೀಯಳೂ ಆದ ಶೋಭಾದೇವಿಯನ್ನು ಆವಾಹಿಸುತ್ತೇನೆ ಲೋಕಸುಂದರಿಯಾದ ಶೋಭಾದೇವಿಯೇ ಜಾಗ್ರತೆಯಾಗಿ ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೨೧–೨೫. ಎಲ್ಲಾ ಅಂಧಕಾರಗಳನ್ನೂ ನಾಶಮಾಡುವ ದಿನವನ್ನು ಆವಾಹಿಸುತ್ತೇನೆ. ಅಖಿಲಪ್ರಪಂಚಕ್ಕೂ ಪ್ರಕಾಶಕವಾದ ದಿನವೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಸರ್ವಪ್ರಾಣಿಗಳಿಗೂ ಸುಖಪ್ರದೆಯಾದ ರಾತ್ರಿಯನ್ನು ಆವಾಹಿಸುತ್ತೇನೆ. ವರಪ್ರದಳಾದ ರಾತ್ರಿದೇವಿಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಬ್ರಾಹ್ಮಣರಿಂದ ಸತ್ಕೃತಳಾದ ಸಂಧ್ಯಾದೇವಿಯನ್ನು ಅವಾಹಿಸುತ್ತೇನೆ. ಪೂಜ್ಯಳಾದ ಸಂಧ್ಯಾದೇವಿಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಅಗ್ನಿಯ ಅಂಶಳಾಗಿ ರಾತ್ರಿರೂಪಳಾಗಿರುವ ಸ್ವಾಹಾದೇವಿಯನ್ನು ಆವಾಹಿಸುತ್ತೇನೆ. ಕಾಮರೂಪಿಣಿಯಾಗಿಯೂ ವರಪ್ರದೆಯಾಗಿಯೂ ಇರುವ ಸ್ವಾಹಾದೇವಿಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಶುಭರೂಪಧಾರಿಗಳಾದ ವೇದಗಳನ್ನು ಆವಾಹಿಸುತ್ತೇನೆ. ಅವುಗಳ ವಾಹನವಾಗಿರುವ ಧೂಮ್ರಕೇತುಗಳೂ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ.

ಆವಾಹಯಿಷ್ಯೇ ಮಹಿಷಂ ಮಹಾಬಲಪರಾಕ್ರಮಂ ।
ಆಗಚ್ಛೇಹ ಮಹಾಭಾಗ ಸರ್ವದುಷ್ಟನಿಬರ್ಹಣ ॥ ೨೬ ॥

ದಂಡಮಾವಾಹಯಿಷ್ಯಾಮಿ ಸರ್ವವಾಹನಪೂಜಿತಂ ।
ಏಹಿ ದಂಡ ಮಹಾಭಾಗ ಸರ್ವಸತ್ವವಿನಾಶನ ॥ ೨೭ ॥

ದೇವೀಮಾವಾಹಯಿಷ್ಯಾಮಿ ಧೂಮ್ರೋರ್ಣಾಂ ಚಾರುಲೋಚನಾಂ ।
ಆಗಚ್ಛ ದೇವಿ ಧೂಮ್ರೋರ್ಣೇ ಸರ್ವಲೋಕನಮಸ್ಕೃತೆ ॥ ೨೮ ॥

ಕಾಲಮಾಹಯಿಷ್ಯಾಮಿ ಸರ್ವಶಾಸ್ತ್ರಹತಪೂಜಿತಂ ।
ಕಾಲಾಭ್ಯೇಹಿಮಹಾಭಾಗ ಸರ್ವಸತ್ವಭಯಂಕರ ॥ ೨೯ ॥

ಮೃತ್ಯುಮಾವಾಹಯಿಷ್ಯಾಮಿ ದೇವೀಂ ಸರ್ವಹರಾಮಹಂ ।
ದೇವಿ ಮೃತ್ಯೋ ತ್ವಮಭ್ಯೇಹಿ ಸರ್ವಗೇ ಕಾಮರೂಣಿ ॥ ೩೦ ॥

---

೨೬-೨೯. ಅಮೋಘವಾದ ಬಲಪರಾಕ್ರಮಗಳಿಂದ ಕೂಡಿದ ಮಹಿಷವನ್ನು ಆವಾಹಿಸುತ್ತೇನೆ ದುಷ್ಟನಾಶಕನೂ, ಮಹಿಮಶಾಲಿಯೂ ಆದ ಮಹಿಷನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಎಲ್ಲಾ ವಾಹನಗಳಿಂದಲೂ ಗೌರವಿಸಲ್ಪಟ್ಟ ದಂಡನನ್ನು ಆವಾಹಿಸುತ್ತೇನೆ. ಸರ್ವಬಲನಾಶಕನಾದ ದಂಡನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ರಮ್ಯನೇತ್ರಳಾದ ಧೂಮ್ರೋರ್ಣಾದೇವಿಯನ್ನು ಆವಾಹಿಸುತ್ತೇನೆ. ಸರ್ವಪೂಜ್ಯೆಯಾದ ಧೂಮ್ರೋರ್ಣಾದೇವಿಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಎಲ್ಲಾ ಕಾರ್ಯದಲ್ಲಿಯೂ ನಿರ್ಬಾಧಕವಾಗಿ ಪೂಜಿಸಲ್ಪಡುವ ಕಾಲಪುರುಷನನ್ನು ಆವಾಹಿಸುತ್ತೇನೆ. ಸರ್ವಪ್ರಾಣಿಭಯಂಕರನಾಗಿಯೂ, ಮಹಾಮಹಿಮಶಾಲಿಯಾಗಿಯೂ ಆದ ಕಾಲನೇ ಇಲ್ಲಿ ಬಂದು ಸಾನ್ನಿಧ್ಯಹೊಂದು.

೩೦-೩೪. ಸರ್ವಸಂಹಾರಿಣಿಯಾದ ಮೃತ್ಯುದೇವಿಯನ್ನು ಆವಾಹಿಸುತ್ತೇನೆ. ಸರ್ವವ್ಯಾಪಿಕೆಯಾಗಿಯೂ, ಕಾಮರೂಪಿಣಿಯಾಗಿಯೂ ಇರುವ ಮೃತ್ಯುದೇವಿಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ವರಪ್ರದನಾಗಿಯೂ, ಸುಖಪ್ರದನಾಗಿಯೂ ಇರುವ

ಆವಾಹಯಾಮಿ ವರದಂ ಚಿತ್ರಗುಪ್ತಂ ಸುಖಪ್ರದಂ ।
ಚಿತ್ರಗುಪ್ತ ಸಮಭ್ಯೇಹಿ ಸರ್ವತ್ರ ಸಮದರ್ಶನ ॥ ೩೧ ॥

ಅಹಮಾವಾಹಯಿಷ್ಯಾಮಿ ವಿರೂಪಾಕ್ಷಂ ಮಹಾಬಲಂ ।
ವಿರೂಪಾಕ್ಷ ಸಮಭ್ಯೇಹಿ ನಿಶಾಚರಗಣೇಶ್ವರ ॥ ೩೨ ॥

ಉಷ್ಟ್ರಮಾವಾಹಯಿಷ್ಯಾಮಿ ಮಹಾಮೋಹಮಿತಿ ಶ್ರುತಂ ।
ಉಷ್ಟ್ರಾಭ್ಯೇಹಿ ಮಹಾಭಾಗ ಮಹಾಗ್ರೀವ ಮಹಾಗತೇ ॥ ೩೩ ॥

ಗೌರೀಮಾವಾಹಯಿಷ್ಯಾಮಿ ಜಲಾಧಿಪತಿಸುಂದರೀಂ ।
ಏಹಿ ಗೌರಿ ಮಹಾದೇವಿ ವರದೇ ಕಾಮರೂಪಿಣಿ ॥ ೩೪ ॥

ಹಂಸಾನಾವಾಹಯಿಷ್ಯಾಮಿ ಸಮುದ್ರೇಣ ಸುಪೂಜಿತಾನ್ ।
ಆಯಾಂತು ವರದಾ ಹಂಸಾ ರಸಾಚಾರಾ ವಿಹಂಗಮಾಃ ॥ ೩೫ ॥

---

ಚಿತ್ರಗುಪ್ತನನ್ನು ಆವಾಹಿಸುತ್ತೇನೆ. ಸರ್ವಸಮದೃಷ್ಟಿಯುಳ್ಳ ಚಿತ್ರಗುಪ್ತನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಮಹಾಬಲಶಾಲಿಯಾದ ವಿರೂಪಾಕ್ಷನೆಂಬ ಕಾಲ ಪರಿವಾರನನ್ನು ಆವಾಹಿಸುತ್ತೇನೆ. ರಾಕ್ಷಸ ಗಣಾಧಿಪನಾದ ವಿರೂಪಾಕ್ಷನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಮಹಾಮೋಹವೆಂದು ಪ್ರಸಿದ್ಧಿಹೊಂದಿರುವ ಉಷ್ಟ್ರ(ಒಂಟೆ)ವನ್ನು ಆವಾಹಿಸುತ್ತೇನೆ. ಮಹಾಕಂಠನಾಗಿಯೂ, ಮಹಾಗತಿ ಶಾಲಿಯಾಗಿಯೂ ಇರುವ ಉಷ್ಟ್ರವೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ವರುಣನ ಸುಂದರಿಯಾದ ಗೌರೀದೇವಿಯನ್ನು ಆವಾಹಿಸುತ್ತೇನೆ. ವರಪ್ರದೆಯಾಗಿಯೂ, ಕಾಮರೂಪಿಣಿಯಾಗಿಯೂ, ಇರುವ ಗೌರೀದೇವಿಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೩೫–೪೦. ಸಮುದ್ರದಿಂದ ಸತ್ಕರಿಸಲ್ಪಟ್ಟ ಹಂಸಗಳನ್ನು ಆವಾಹಿಸುತ್ತೇನೆ. ಜಲಚಾರಿಪಕ್ಷಿಗಳಾದ ಹಂಸಗಳೆಲ್ಲವೂ, ಇಲ್ಲಿ ಬಂದು ಪ್ರಸನ್ನತೆಯಿಂದ ಸಾನ್ನಿಧ್ಯ ಹೊಂದಲಿ. ಎಲ್ಲವನ್ನೂ ಆಕರ್ಷಣಮಾಡುವುದರಲ್ಲಿ ಸಮರ್ಥವಾದ ಪಾಶಾ

ಪಾಶಮಾವಾಹಯಿಷ್ಯಾಮಿ ಸರ್ವಾಕರ್ಷಣತತ್ಪರಂ ।
ಪಾಶಾಭ್ಯೇಹಿ ಮಹಾಭಾಗ ಸರ್ವಸತ್ವವಶಂಕರ || ೩೬ ||

ಗಂಗಾಮಾವಾಹಯಿಷ್ಯಾಮಿ ಸರ್ವಕಲ್ಮಷನಾಶಿನೀಂ ।
ಗಂಗೇ ಶೀಘ್ರಂ ತ್ವಮಭ್ಯೇಹಿ ಪೀಯೂಷಸದೃಶೋದಕೆ || ೩೭ ||

ಅಹಮಾವಾಹಯಿಷ್ಯಾಮಿ ಯಮುನಾಂ ಚ ಯಮಾನುಜಾಂ ।
ಆಗಚ್ಛ ಯಮುನೇ ದೇವಿ ಸರ್ವಕಲ್ಮಷನಾಶಿನಿ || ೩೮ ||

ಶಿವಾಮಾವಾಹಯಿಷ್ಯಾಮಿ ವಾಯೋಃ ಪತ್ನೀಂ ಪ್ರಭಾವತೀಂ ।
ಶಿವೇಭ್ಯೇಹಿ ಮಹಾಭಾಗೇ ವರದೇ ಕಾಮರೂಪಿಣಿ || ೩೯ ||

ಅಹಮಾವಾಹಯಿಷ್ಯಾಮಿ ಶಿಬಿಕಾಂ ಪರಮಾಯತಾಂ ।
ಶಿಬಿಕೇ ತ್ವಮಿಹಾಭ್ಯೇಹಿ ಸರ್ವಸತ್ವಸುಖಂಕರಿ || ೪೦ ||

---

ಯುಧವನ್ನು ಆವಾಹಿಸುತ್ತೇನೆ. ಎಲ್ಲಾ ಪ್ರಾಣಿಗಳನ್ನೂ ಸ್ವಾಧೀನಪಡಿಸಿಕೊಳ್ಳುವ ಪಾಶಾಯುಧವೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಸಮಸ್ತಪಾಪಗಳನ್ನೂ ನಾಶ ಮಾಡುವ ಗಂಗೆಯನ್ನು ಆವಾಹಿಸುತ್ತೇನೆ. ಅಮೃತದಂತೆ ಸ್ವಾದುವಾದ ತೀರ್ಥವುಳ್ಳ ಗಂಗೆಯೇ ಜಾಗ್ರತೆಯಾಗಿ ನೀನು ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಯಮನ ಅನುಜೆಯಾದ ಯಮುನೆಯನ್ನೂ ನಾನು ಆವಾಹಿಸುತ್ತೇನೆ. ಸರ್ವಪಾಪ ನಾಶಕಳಾದ ಯಮುನೆಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಪ್ರಭಾಶಾಲಿನಿಯೂ ವಾಯುಪತ್ನಿಯೂ ಆದ ಶಿವಾದೇವಿಯನ್ನೂ ಆವಾಹಿಸುತ್ತೇನೆ. ಕಾಮರೂಪಿಣಿ ಯಾಗಿಯೂ. ವರಪ್ರದೆಯಾಗಿಯೂ ಇರುವ ಶಿವಾದೇವಿಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ವಿಸ್ತಾರವಾದ ಶಿಬಿಕೆ(ಪಲ್ಲಕ್ಕಿ)ಯನ್ನು ಆವಾಹಿಸುತ್ತೇನೆ. ಸರ್ವಪ್ರಾಣಿ ಸುಖಕರೆಯಾದ ಶಿಬಿಕೆಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು.

**ನರಮಾವಾಹಯಿಷ್ಯಾಮಿ ನರಾಧಿಪತಿವಾಹನಂ ।**
**ನರ ಶೀಘ್ರಂ ತ್ವಮಭ್ಯೇಹಿ ತಥಾ ನೃಪತಿನಾಯಕ ॥ ೪೧ ॥**

**ಶಂಖಮಾವಾಹಯಿಷ್ಯಾಮಿ ನಿಧಿಪ್ರವರಮುತ್ತಮಂ ।**
**ಶೀಘ್ರಂ ಶಂಖ ತ್ವಮಭ್ಯೇಹಿ ಧನಾಧಿಪತಿವಲ್ಲಭ ॥ ೪೨ ॥**

**ಪದ್ಮಮಾವಾಹಯಿಷ್ಯಾಮಿ ನಿಧಿಪ್ರವರಮುತ್ತಮಂ ।**
**ಪದ್ಮ ಶೀಘ್ರಂ ತ್ವಮಭ್ಯೇಹಿ ಮಹಾವಿಭವಕಾರಕ ॥ ೪೩ ॥**

**ದೇವೀಮಾವಾಹಯಿಷ್ಯಾಮಿ ಪಾರ್ವತೀಂ ಹರವಲ್ಲಭಾಂ ।**
**ದೇವಿ ಶೀಘ್ರಂ ತ್ವಮಭ್ಯೇಹಿ ಮಹಾವಿಭವಕಾರಿಣಿ ॥ ೪೪ ॥**

**ಅಹಮಾವಾಹಯಿಷ್ಯಾಮಿ ಜಯಂತಂ ಶಕ್ರನಂದನಂ ।**
**ಜಯಂತ ಶೀಘ್ರಮಭ್ಯೇಹಿ ಸರ್ವಾಸುರವಿಮರ್ದನ ॥ ೪೫ ॥**

**ಆವಾಹಯಿಷ್ಯೇ ವರದಂ ಪುಷ್ಕರಂ ಕಾಮಗಂ ಶುಭಂ ।**
**ಪುಷ್ಕರ ತ್ವಮಿಹಾಭ್ಯೇಹಿ ಸರ್ವಜ್ಞಾನಪ್ರಕಾಶಕ ॥ ೪೬ ॥**

---

೪೧–೪೬. ಕುಬೇರನ ವಾಹನನಾದ ನರನನ್ನು ಆವಾಹಿಸುತ್ತೇನೆ. ದೊರೆಗಳಿಗೂ, ನಾಯಕನಾದ ನರನೇ,, ನೀನು ಜಾಗ್ರತೆಯಾಗಿ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ನಿಧಿಶ್ರೇಷ್ಠವಾದ ಶಂಖವನ್ನು ಆವಾಹಿಸುತ್ತೇನೆ. ಧನಾಧಿಪತಿಗೆ, ಪ್ರಿಯನಾದ ಶಂಖನಿಧಿಯೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ನಿಧಿಶ್ರೇಷ್ಠವಾದ ಪದ್ಮನಿಧಿಯನ್ನು ಆವಾಹಿಸುತ್ತೇನೆ. ವೈಭವಪ್ರದನಾದ ಪದ್ಮನಿಧಿಯೇ, ನೀನು ಶೀಘ್ರವಾಗಿ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಹರನ ಪ್ರಿಯೆಯಾದ ಪಾರ್ವತೀ ದೇವಿಯನ್ನು ಆವಾಹಿಸುತ್ತೇನೆ. ಬಹು ವೈಭವಧಾಯಿನಿಯಾದ ಪಾರ್ವತೀ ದೇವಿಯೇ, ನೀನು ಇಲ್ಲಿ ಬಂದು ಸಾನ್ನಿಧ್ಯ ಹೊಂದು ಇಂದ್ರ ಪುತ್ರನಾದ ಜಯಂತನನ್ನು ಆವಾಹಿಸುತ್ತೇನೆ. ಸರ್ವರಾಕ್ಷಸಸಂಹಾರಿಯಾದ ಜಯಂತನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು ಇಷ್ಟಾರ್ಥಪ್ರದವಾಗಿಯೂ, ಕಾಮಚಾರಿಯಾಗಿಯೂ ಇರುವ ಪುಷ್ಕರವಿಮಾನವನ್ನು ಆವಾಹಿಸುತ್ತೇನೆ. ಸರ್ವಜ್ಞಾನ ಪ್ರಕಾಶಕನಾದ ಪುಷ್ಕರವಿಮಾನವೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು.

ಜ್ಯೋತ್ಸ್ನಾಮಾವಾಹಯಿಷ್ಯಾಮಿ ತ್ರೈಲೋಕ್ಯಸ್ಯೈಕಸುಂದರೀಂ ।
ಆಗಚ್ಛ ವರದೇ ಜ್ಯೋತ್ಸ್ನೇ ಸರ್ವಭೂತಸುಖಂಕರಿ　　|| ೪೭ ||

ಅಹಮಾವಾಹಯಿಷ್ಯಾಮಿ ತ್ವಾಮೇವ ನಳಕೂಬರಂ ।
ಸಮಭ್ಯೇಹಿ ಮಹಾಭಾಗ ಧನದಸ್ಯಾತ್ಮಸಂಭವ　　|| ೪೮ ||

ಆವಾಹಯಿಷ್ಯಾಮಿ ತಥಾ ರವಿಪುತ್ರಂ ಯಮಾಗ್ರಜಂ ।
ಸೂರ್ಯಪುತ್ರ ಸಮಭ್ಯೇಹಿ ಭಕ್ತಕಲ್ಯಾಣಕಾರಕ　　|| ೪೯ ||

ಧರ್ಮಮಾವಾಹಯಿಷ್ಯಾಮಿ ಸರ್ವಲೋಕಸುಖಾವಹಂ ।
ಧರ್ಮಾಭ್ಯೇಹಿ ಮಹಾಭಾಗ ಜಗತಾಂ ಪರಿಪಾಲಕ　　|| ೫೦ ||

ಅರ್ಥಮಾವಾಹಯಿಷ್ಯಾಮಿ ಸರ್ವಲೋಕಸುಖಾವಹಂ ।
ಅರ್ಥಾಭ್ಯೇಹಿ ಮಹಾಭಾಗ ಸರ್ವಬಾಧಾವಿನಾಶಕ　　|| ೫೧ ||

ಕಾಮಮಾವಾಹಯಿಷ್ಯಾಮಿ ಫಲಂ ಸರ್ವಸ್ಯ ಕಾರಣಂ ।
ಕಾಮ ಶೀಘ್ರಂ ತ್ವಮಭ್ಯೇಹಿ ಸರ್ವಪ್ರಾಣಿಹೃದಿಸ್ಥಿತ　　|| ೫೨ ||

---

೪೭-೫೨. ಮೂರು ಲೋಕದಲ್ಲಿಯೂ ಸುಂದರಿಯಾದ ಜ್ಯೋತ್ಸ್ನಾದೇವಿಯನ್ನು ಆವಾಹಿಸುತ್ತೇನೆ. ಸರ್ವಪ್ರಾಣಿಸುಖಕಾರಿಣಿಯಾದ ಜ್ಯೋತ್ಸ್ನಾ ದೇವಿಯೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ನಳಕೂಬರನೇ ನಿನ್ನನ್ನು ಆವಾಹಿಸುತ್ತೇನೆ. ಭಾಗ್ಯಶಾಲಿಯೂ, ಕುಬೇರ ಪುತ್ರನೂ ಆದ ನೀನು ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಯಮನ ಅಣ್ಣನಾದ ಸೂರ್ಯ ಪುತ್ರನನ್ನು ಆವಾಹಿಸುತ್ತೇನೆ. ಭಕ್ತರಿಗೆ ಮಂಗಲಪ್ರದನಾದ ಸೂರ್ಯ ಪುತ್ರನೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಎಲ್ಲಾ ಲೋಕಗಳಿಗೂ ಸುಖಕಾರಕನಾದ ಧರ್ಮವೆಂಬ ಪುರುಷಾರ್ಥವನ್ನು ಆವಾಹಿಸುತ್ತೇನೆ. ಜಗತ್ಪಾಲಕನೂ, ಮಹಾಮಹಿಮನೂ ಆದ ನೀನು ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಸರ್ವಲೋಕಕ್ಕೂ ಸುಖಕರವಾದ ಅರ್ಥವೆಂಬ ಪುರುಷಾರ್ಥವನ್ನು ಆವಾಹಿಸುತ್ತೇನೆ. ಸರ್ವದುಃಖನಾಶಕನೂ, ಮಹಾತ್ಮನೂ ಆದ ನೀನು ಇಲ್ಲಿ ಬಂದು ಸಾನ್ನಿಧ್ಯ ಹೊಂದು ಎಲ್ಲರಿಗೂ ಕಾರಣಭೂತವಾದ, ಸಂತಾನಫಲಪ್ರದವಾದ ಕಾಮನನ್ನು ಆವಾಹಿಸುತ್ತೇನೆ. ಎಲ್ಲಾ ಪ್ರಾಣಿಗಳ ಹೃದಯದಲ್ಲಿಯೇ ಇರುವ ಕಾಮನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು.

ರತಿಮಾವಾಹಯಿಷ್ಯಾಮಿ ದೇವೀಂ ಸರ್ವಜಗತ್ಪ್ರಿಯಾಂ ।
ಅಭ್ಯೇಹಿ ವರದೇ ದೇವಿ ರತಿ ತ್ವಮಪರಾಜಿತೇ ॥ ೫೩ ॥

ನಿದ್ರಾಮಾವಾಹಯಿಷ್ಯಾಮಿ ಸರ್ವಲೋಕಸುಖಪ್ರದಾಂ ।
ಆಗಚ್ಛ ವರದೇ ನಿದ್ರೇ ತ್ರೈಲೋಕ್ಯಪರಿಮೋಹಿನಿ ॥ ೫೪ ॥

ಆವಾಹಯಿಷ್ಯೇ ವರದಾಂ ಮಹಾದೇವೀಂ ಸರಸ್ವತೀಂ ।
ಶೀಘ್ರಂ ದೇವಿ ತ್ವಮಭ್ಯೇಹಿ ಸರ್ವಕಾಮವರಪ್ರದೆ ॥ ೫೫ ॥

ಅಹಮಾವಾಹಯಿಷ್ಯಾಮಿ ತಥಾ ಧನ್ವಂತರಿಂ ಪ್ರಭುಂ ।
ಧನ್ವಂತರೇ ತ್ವಮಭ್ಯೇಹಿ ಕ್ಷೀರೋದಾರ್ಣವಸಂಭವ ॥ ೫೬ ॥

ಅಹಮಾವಾಹಯಿಷ್ಯಾಮಿ ಉಚ್ಚೈಃಶ್ರವಸಮುತ್ತಮಂ ।
ಹಯರಾಜ ಸಮಭ್ಯೇಹಿ ಕ್ಷೀರೋದಾರ್ಣಸಂಭವ ॥ ೫೭ ॥

---

೫೩–೫೫. ಜಗತ್ಪ್ರಿಯಳಾದ ರತೀದೇವಿಯನ್ನು ಆವಾಹಿಸುತ್ತೇನೆ. ಅಪರಾಜಿತೆಯಾದ ರತೀದೇವಿಯೇ, ವರಪ್ರದಳಾದ ನೀನು ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಸರ್ವಪ್ರಾಣಿಗಳಿಗೂ ಸುಖಪ್ರದವಾದ ನಿದ್ರಾದೇವಿಯನ್ನು ಆವಾಹಿಸುತ್ತೇನೆ. ತ್ರೈಲೋಕ್ಯಮೋಹಿನಿಯಾಗಿಯೂ, ವರಪ್ರದೆಯಾಗಿಯೂ ಇರುವ ನಿದ್ರಾದೇವಿಯೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ವರಪ್ರದಳಾದ ಸರಸ್ವತೀ ದೇವಿಯನ್ನು ಆವಾಹಿಸುತ್ತೇನೆ. ಸರ್ವಪುರುಷಾರ್ಥ ವಿಷಯದಲ್ಲಿಯೂ ವರಪ್ರದೆಯಾದ ಸರಸ್ವತೀದೇವಿಯೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೫೬–೫೭. ಪ್ರಭುವಾದ ಧನ್ವಂತರಿಯನ್ನು ಆವಾಹಿಸುತ್ತೇನೆ. ಕ್ಷೀರಸಮುದ್ರದಲ್ಲಿ ಹುಟ್ಟಿದ ಧನ್ವಂತರಿಯೇ, ನೀನು ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಉಚ್ಚೈಃಶ್ರವಸ್ಸೆಂಬ ಅಶ್ವಶ್ರೇಷ್ಠವನ್ನು ಆವಾಹಿಸುತ್ತೇನೆ. ಕ್ಷೀರಸಮುದ್ರದಲ್ಲಿ ಉದ್ಭವಿಸಿದ ಹಯರಾಜನೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಯಾವ ದೇವತೆಗಳಿಗೆ ಆವಾಹನವನ್ನು ಹೇಳಲಾಗಿದೆಯೋ ಅವರವರಿಗೆ ಈ ಮಂತ್ರವನ್ನು ಪಠಿಸಬೇಕು. ದರ್ಭಪಾಣಿಯಾಗಿ ಅಶ್ವಿನೀದೇವತೆಗಳಿಗೆ ವಂದಿಸಿ ಅವರನ್ನು ಸ್ತೋತ್ರ

**ಯೇಷಾಮಾವಾಹನಂ ಪ್ರೋಕ್ತಂ ತೇಷಾಂ ಮನ್ತ್ರಮಿಮಂ ಪಠೇತ್ ।**
**ಅಶ್ವಿನೌ ಪ್ರಣತಃ ಸ್ತೌಮಿ ದರ್ಭಪಾಣಿರತಂದ್ರಿತಃ ॥ ೫೮ ॥**

**ಆವಾಹನಾನಾಂ ಚಗಣಂ ತಥೋಕ್ತಂ**
**ಮಹಾಶುಭಂ ಪಾಪಹರಂ ಪವಿತ್ರಂ ।**
**ಆವಾಹಿತಾಃ ಸನ್ನಿಹಿತಾಸ್ತ್ವವಶ್ಯಂ**
**ದೇವಾಭವನ್ತ್ಯುತ್ತಮವಂಶಜಾತಾಃ ॥ ೫೯ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಲೋಕಾದ್ಯಾವಾಹನವರ್ಣನೋ ನಾಮ ಪಂಚೋತ್ತರಶತತನೋಽಧ್ಯಾಯಃ**

---

ಮಾಡುತ್ತೇನೆ. ಇಲ್ಲಿ ಹೇಳಿರುವ ಆವಾಹನ ಸಮೂಹವೆಲ್ಲವೂ, ಬಹುಶುಭಕರವಾಗಿಯೂ ಪಾಪನಾಶಕವಾಗಿಯೂ ಪವಿತ್ರಕರವಾಗಿಯೂ ಇರುತ್ತದೆ. ಈ ಆವಾಹನದಿಂದ ಸನ್ನಿಹಿತರಾದವರು ಉತ್ತಮವಂಶೀಯರಾದ ದೇವತೆಗಳೇ ಆಗಿ ಫಲಪ್ರದರಾಗುತ್ತಾರೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಲೋಕಾದ್ಯಾವಾಹನವರ್ಣನವೆಂಬ ನೂರ ಐದನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಷಡುತ್ತರಶತತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಆವಾಹನಾನ್ಯತೋ ವಕ್ಷ್ಯೆ ಯಾನ್ಯಹಂ ರಘುನಂದನ ।**
**ತೇಷಾ ಮಂತೇ ಪಠೇಚ್ಛ್ಲೋಕಂ ಪ್ರತ್ಯೇಕಸ್ಯ ಮಹಾಭುಜ || ೧ ||**

**ಯಾಜಕಂ ಯಜಮಾನಂ ಚ ಶ್ರೇಯಸಾಭ್ಯೇತ್ಯ ಯೋಜಯ ।**
**ಇದಮರ್ಘ್ಯಮಿದಂ ಪಾದ್ಯಂ ಧೂಪೋಯಂ ಪ್ರತಿಗೃಹ್ಯತಾಂ || ೨ ||**

---

### ನೂರ ಆರನೆಯ ಅಧ್ಯಾಯ.

೧-೨. ಮಾರ್ಕಂಡೇಯರು ಹೇಳುತ್ತಾರೆ. ಎಲೈ ಯಾದವಶ್ರೇಷ್ಠನೇ, ಇನ್ನು ಮುಂದೆ ನಾನು ಯಾವಯಾವ ಆವಾಹನೆಗಳನ್ನು ಹೇಳುತ್ತೇನೆಯೋ ಅವುಗಳ ಕೊನೆಯಲ್ಲಿ ಈ ಯಾಜಕಂ ಯಜಮಾನಂ ಚ ಎಂಬ ಶ್ಲೋಕವನ್ನು ಪ್ರತ್ಯೇಕವಾಗಿ ಸೇರಿಸಿಕೊಳ್ಳಬೇಕು. (ಅದರ ಅರ್ಥ ಇಲ್ಲಿ ಬಂದು ಸಾನ್ನಿಧ್ಯ ಹೊಂದಿ ಯಾಜಕನಿಗೂ, ಯಜಮಾನನಿಗೂ ಶ್ರೇಯಸ್ಸನ್ನು ಉಂಟುಮಾಡು. ಈ ಅರ್ಘ್ಯಪಾದ್ಯ ಧೂಪಾದಿಗಳನ್ನು ಸ್ವೀಕರಿಸು)

**ಆವಾಹಯಾಮ್ಯಹಂ ದೇವಂ ವಾಸುದೇವಂ ಜಗತ್ಪತಿಂ ।**
**ಅಮೃತಾಧ್ಮಾತಮೇಘಾಭಂ ವಿದ್ಯುತ್ಸದೃಶವಾಸಸಂ ॥ ೩ ॥**

**ಚತುರ್ವಕ್ತ್ರಂ ಮಹಾಬಾಹುಂ ಚತುರ್ವೇದಧರಂ ಪ್ರಭುಂ ।**
**ಚತುರಾಶ್ರಮಗೋಪ್ತಾರಂ ಚಾತುರ್ವರ್ಣ್ಯಧರಂ ತಥಾ ॥ ೪ ॥**

**ಚತುರ್ಯುಗಂ ಚತುಷ್ಕೇಶಂ ಚತುರ್ಮೂರ್ತಿಧರಂ ಪರಂ ।**
**ಚತುರಂಘ್ರಿತನುಂ ನಾಥಂ ಚತುರ್ವಿಧವಿಭಾವನಂ ॥ ೫ ॥**

**ಜರಾಯುಜಸ್ಯ ಕರ್ತವ್ಯಂ ತಥಾಚಾಂಡೋದ್ಭವಸ್ಯ ಚ ।**
**ಸರ್ವಗಂ ವರದಂ ನಿತ್ಯಂ ಸೂಕ್ಷ್ಮಂ ಸ್ಥೂಲಮಜಂ ವಿಭುಂ ॥ ೬ ॥**

---

೩-೬. ಜಗತ್ಪತಿಯಾದ ವಾಸುದೇವನನ್ನು ಆವಾಹಿಸುತ್ತೇನೆ. ಯಾವ ವಾಸುದೇವನು ಜಲಪೂರ್ಣವಾದ ಮೇಘದಂತೆಯೂ, ಮಿಂಚಿನಂತಹ ಹೊಂಬಣ್ಣದ ವಸ್ತ್ರಧಾರಿಯೂ ಆಗಿರುವನೋ, ನಾಲ್ಕು ಮುಖವುಳ್ಳವನಾಗಿಯೂ, ಮಹಾ ಬಾಹುಶಾಲಿಯಾಗಿಯೂ, ಚತುರ್ವೇದಧಾರಿಯಾಗಿಯೂ, ಪ್ರಭುವಾಗಿಯೂ ಇರುವನೋ, ಬ್ರಹ್ಮಚರ್ಯಾದಿ ನಾಲ್ಕು ಆಶ್ರಮುಕ್ಕೂ ರಕ್ಷಕನಾಗಿಯೂ, ಬ್ರಾಹ್ಮಣಾದಿ ನಾಲ್ಕು ವರ್ಣಗಳಿಗೆ ಧಾರಕನಾಗಿಯೂ, ಚತುರ್ಯುಗಾಭಿಮಾನಿಯಾಗಿಯೂ ನಾಲ್ಕು ವಿಧವಾದ ಕೇಶಧಾರಿಯಾಗಿಯೂ ಇರುವನೋ ಮತ್ತು ಸಂಕರ್ಷಣಾದಿಗಳೊಡನೆ ನಾಲ್ಕು ವಿಧವಾದ ಮೂರ್ತಿಹೊಂದಿಯೂ, ನಾಲ್ಕು ಪಾದಗಳುಳ್ಳ ದೇಹಧಾರಿಯಾಗಿಯೂ, ರಕ್ಷಕನಾಗಿಯೂ, ಚತುರ್ವಿಧಪುರುಷಾರ್ಥಗಳಿಗಾಗಿ ಪ್ರಾಪಕನಾಗಿಯೂ, ಜರಾಯುಜ, ಅಂಡಜಗಳೆಂಬ ಪ್ರಾಣಿಗಳಿಗೂ ನಿಯಾಮಕನಾಗಿಯೂ, ಸರ್ವವ್ಯಾಪಕನಾಗಿಯೂ, ವರಪ್ರದನಾಗಿಯೂ, ನಿತ್ಯನಾಗಿಯೂ, ಸರ್ವವಸ್ತುಗಳಲ್ಲಿಯೂ ಅಂತಃಪ್ರವೇಶಕ್ಕೆ ತಕ್ಕ ಸೂಕ್ಷ್ಮತೆಯುಳ್ಳವನಾಗಿಯೂ, ಸರ್ವವ್ಯಾಪಕತೆಗೆ ತಕ್ಕಂತೆ ಸ್ಥೂಲನಾಗಿಯೂ, ಉತ್ಪತ್ತಿರಹಿತನಾಗಿಯೂ (ಅಂತರ್ಯಾಮಿ ರೂಪದಿಂದ) ಆತ್ಮರಲ್ಲಿಯೂ, ಅನಾತ್ಮರಲ್ಲಿಯೂ, ದೂರದಲ್ಲಿಯೂ, ಸಮೀಪದಲ್ಲಿಯೂ ಇರುವನೋ ಸದ್ಗುಣಗಳಿಗೆ ಆಶ್ರಯನಾಗಿಯೂ, ಹೇಯಗುಣಗಳಿಂದ

ಆತ್ಮಸ್ಥಂ ಚ ಬಹಿಸ್ಥಂ ಚ ದೂರಸ್ಥಂ ಚಾಂತಿಕಂ ಚ ತಂ ।
ಗುಣಾಧಾರಂ ಗುಣೈರ್ಹೀನಂ ಗುಣಾತೀತಂ ಗುಣೋತ್ತರಂ ॥ ೭ ॥

ಸಗುಣಂ ನಿರ್ಗುಣಾತ್ಮಾನಂ ಚಾಜೇಯಂ ಜಗತಃಪರಂ ।
ಏಹಿ ಮೇ ಪುಂಡರೀಕಾಕ್ಷ ಶರಣಾಗತವತ್ಸಲ ॥ ೮ ॥

ಕ್ಷುರಪರ್ಯಂತವಕ್ತ್ರಾಸ್ತ್ರನಿರಸ್ತಾಸುರಮಂಡಲ ।
ಗದಾವೇಗನಿರಸ್ತೋಗ್ರ ದೈತ್ಯನಾಥಗಣೇಶ್ವರ ॥ ೯ ॥

ಉತ್ಫುಲ್ಲಚಾರುಕಮಲವಿರಾಜಿತಕರಾಂಬುಜ ।
ಶಂಖನಾದೋದ್ಭವಶ್ವಾಸಮೂರ್ಛೀಕೃತ ಮಹಾಸುರ ॥ ೧೦ ॥

ಮಹೀಕರಾಂಬುಜನ್ಯಸ್ತ ಚರಣದ್ವಯರಾಜಿತ ।
ಕೌಸ್ತುಭೋದ್ಭೂತಗೋಜಾಲಹತಾಸುರವಿಲೋಚನ ॥ ೧೧ ॥

---

ಹೀನನಾಗಿಯೂ (ಮೇಲೆ ಹೇಳಿದಂತೆ) ಗುಣರಹಿತನೂ, ಗುಣೋತ್ತರನೂ ಆಗಿರುವನೋ ಸಗುಣನೂ, ನಿರ್ಗುಣಸ್ವರೂಪನೂ, ಅಜೇಯನೂ, ಅಪ್ರಾಕೃತನೂ ಆಗಿರುವನೋ ಅಂತಹ ವಾಸುದೇವನನ್ನು ಆವಾಹಿಸುತ್ತೇನೆ.

೯-೧೨. ಶರಣಾಗತರಲ್ಲಿ ವಾತ್ಸಲ್ಯವುಳ್ಳವನೇ, ಅಸುರಮಂಡಲವನ್ನೆಲ್ಲಾ ಕಾಲರೂಪಿಯಾಗಿ ಭಯಂಕರ ದುಃಖದಿಂದ ಗ್ರಹಿಸಿದವನೇ ಗದಾವೇಗದಿಂದ ಉಗ್ರವಾದ ದೈತ್ಯಾಧಿಪತಿಗಳ ಸಮೂಹವನ್ನೆಲ್ಲಾ ನಾಶಮಾಡಿದವನೇ, ಅರಳಿರುವ ರಮ್ಯವಾದ ಕಮಲದಿಂದ ಶೋಭಿಸುವ ಕರಕಮಲವುಳ್ಳವನೇ, ಶಂಖನಾದಕಾಲದಲ್ಲಿ ಉಂಟಾದ ಶ್ವಾಸವಾಯುವಿನಿಂದ ಮಹಾಸುರನನ್ನೂ ಮೋಹಗೊಳಿಸಿದವನೇ, ಭೂದೇವಿಯ ಕರಪದ್ಮಗಳಲ್ಲಿಡಲ್ಪಟ್ಟ ಪಾದದ್ವಯದಿಂದ ಶೋಭಿಸುತ್ತಿರುವವನೇ, ಕೌಸ್ತುಭಮಣಿಯಿಂದ ಹೋರ ಹೊಮ್ಮಿದ ಕಿರಣಗಳಿಂದ ಅಸುರರ ನೇತ್ರಗಳನ್ನೇ ಅಪಹರಿಸಿದವನೇ, ವನಮಾಲೆಯಿಂದ ಅಲಂಕೃತವಾದ ಹೃದಯವುಳ್ಳವನೇ. ಕಿರೀಟದಿಂದ ವಿರಾಜಿತವಾದ ಹಣೆಯುಳ್ಳವನೇ, ಯಜ್ಞಸ್ವರೂಪನೇ, ಯಜ್ಞ ಮತ್ತು ಉಪ

ವನಮಾಲಾಙ್ಕಿತೋರಸ್ಕ ಕಿರೀಟೋದ್ಭಾಸಿತಾನನ ।
ಯಜ್ಞ ಯಜ್ಞೋಪಯಜ್ಞಾಂಗ ಯಜ್ಞಯೋನೇ ಜಗದ್ಗುರೋ ॥ ೧೨ ॥

ಸರ್ವಕಾಮಪ್ರದಾಚಿಂತ್ಯ ಸರ್ವಶಕ್ತಿಬಲಾನ್ವಿತ ।
ಆವಾಹಯಾಮ್ಯಹಂ ದೇವಂ ಸಙ್ಕರ್ಷಣಮಯೋನಿಜಂ ॥ ೧೩ ॥

ಶಶಾಙ್ಕಶತಸಂಕಾಶಂ ಸಜಲಾಂಬುದವಾಸಸಂ ।
ಕ್ರೋಧಾಗ್ನಿಶಮಿತಾ ಯೇನ ಕಲ್ಪಾಂತೆ ಭುವನತ್ರಯಂ ॥ ೧೪ ॥

ವಾಙ್ಮನಃಕಾಯಸಂಭೂತ ಮಲತ್ರಿತಯನಾಶನಂ ।
ಏಹಿ ಸಂಕರ್ಷಣಾಚಿಂತ್ಯ ದೇವ ಭಕ್ತಜನಪ್ರಿಯ ॥ ೧೫ ॥

ಲಾಂಗೂಲಾಕೃಷ್ಟದೈತ್ಯೇಂದ್ರ ದೀನೇಕ್ಷಣನಿರೀಕ್ಷಣ ।
ಮುಸಲಾಗ್ರವಿನಿರ್ಭಿನ್ನ ತಮೋಮೂರ್ತಿವಿನಾಶನ ॥ ೧೬ ॥

ಹಾರ್ದಮೂರ್ತೇನಿಶೀಥಸ್ಯ ತಮಸಶ್ಚ ವಿನಾಶಕ ।
ದೇವಮಾವಾಹಯಿಷ್ಯಾಮಿ ಪ್ರದ್ಯುಮ್ನಮಪರಾಜಿತಂ ॥ ೧೭ ॥

---

ಯಜ್ಞಗಳ ಅಂಗಸ್ವರೂಪನೇ, ಯಜ್ಞೋತ್ಪತ್ತಿಗೆ ಕಾರಣನೇ, ಜಗದ್ಗುರುವೇ ಸಕಲ ಪುರುಷಾರ್ಥ ಪ್ರದನೇ. ಅಪ್ರಮೇಯನೇ, ಸರ್ವಶಕ್ತಿ ಮತ್ತು ಬಲದಿಂದ ಕೂಡಿರುವವನೇ, ಪುಂಡರೀಕಾಕ್ಷನೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೧೩-೧೬. ಅಯೋನಿಜ (ದಿವ್ಯಪ್ರಕೃತಿ) ನಾಗಿಯೂ, ಅನೇಕ ಚಂದ್ರರುಗಳ ಪ್ರಭಾಶಾಲಿಯಾಗಿಯೂ, ನೀಲಮೇಘದಂತಿರುವ ವಸ್ತ್ರಧಾರಿಯಾಗಿಯೂ, ಕ್ರೋಧಾಗ್ನಿಯಿಂದ ಅನೇಕ ಕಲ್ಪಾಂತರಭುವನಗಳನ್ನು ನಾಶಪಡಿಸಿದವನಾಗಿಯೂ, ವಾಙ್ಮನಸಾದಿಕರಣತ್ರಯ ಸಂಭಾವಿತ, ಪಾಪತ್ರಯನಾಶಕನಾಗಿಯೂ, ಇರುವ ಸಂಕರ್ಷಣಮೂರ್ತಿಯನ್ನು ಆವಾಹಿಸುತ್ತೇನೆ ಅಚಿಂತ್ಯಮಹಿಮನೂ, ಭಕ್ತಜನ ಪ್ರಿಯನೂ, ನೇಗಿಲಿನಿಂದ ದೈತ್ಯಶ್ರೇಷ್ಠರನ್ನು ಆಕರ್ಷಿಸಿದವನೂ, ದೀನರಲ್ಲಿ ಕಟಾಕ್ಷವುಳ್ಳವನೂ, ತಮಃಪ್ರಚುರರಾದ ದೈತ್ಯಾದಿಗಳನ್ನೂ ಮುಸಲಾಯುಧದಿಂದ ನಾಶಪಡಿಸಿದವನೂ, ರಾತ್ರಿಗೂ ಅಜ್ಞಾನಾಂಧಕಾರಕ್ಕೂ ನಿವರ್ತಕನಾಗಿಯೂ, ಹೃದಯವರ್ತಿಯಾಗಿಯೂ ವರುವ ಎಲೈ ಸಂಕರ್ಷಣನೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು.

ದೂರ್ವಾಙ್ಕುರದಲಶ್ಯಾಮಂ ಶಶಾಙ್ಕಾಂಶುಸಮಾಂಬರಂ ।
ಕಾಮಂ ಕಾಮಪ್ರದಂ ಶಾಂತಂ ಕಮನೀಯಂ ಸುಶೋಭಿತಂ ॥ ೧೮ ॥

ಸರ್ವಮಾನಭೃತಾಂ ದೇವಂ ಮನೋವಿಷಯಗೋಚರಂ ।
ಪ್ರದ್ಯುಮ್ನಾಭ್ಯೇಹಿ ದೇವೇಶ ಪ್ರದ್ಯೋತಿತ ಚರಾಚರ ॥ ೧೯ ॥

ತೇಜೋಮೂರ್ತೇ ದುರಾಧರ್ಷ ಸೂರ್ಯಕೋಟಿಸಮಪ್ರಭ ।
ಅಜ್ಞಾತಮಧ್ಯಪರ್ಯಂತ ದೇವಾರಿಗಣನಾಶನ ॥ ೨೦ ॥

ಚಾಪಕೃಷ್ಟಿವಿನಿರ್ಮುಕ್ತ ಶರಾಹತ ಜಗತ್ತ್ರಯ ।
ಆವಾಹಯಾಮ್ಯಹಂ ದೇವಂ ಚಾನಿರುದ್ಧಂ ಜಗದ್ಗುರುಂ ॥ ೨೧ ॥

ಪದ್ಮಪತ್ರಾಗ್ರಸಂಕಾಶಂ ರಕ್ತಾಂಬರ ವಿಭೂಷಣಂ ।
ಅರುದ್ಧಮಾರ್ಗಂ ಸರ್ವತ್ರ ದೀಪ್ತಾನಲಸಮಪ್ರಭಂ ॥ ೨೨ ॥

---

೧೭–೨೦ ಅಪರಾಜಿತನೂ, ಗರಿಕೆಯ ಚಿಗುರಿನಂತೆ ಶಾಮವರ್ಣವುಳ್ಳವನೂ, ಚಂದ್ರಕಿರಣಗಳಂತೆ ಶುಭ್ರವಸನನೂ, ಕಾಮಸ್ವರೂಪನೂ, ಇಷ್ಟಾರ್ಥಪ್ರದನೂ, ಶಾಂತನೂ, ರಮ್ಯನೂ, ಅತ್ಯಂತ ಶೋಭಾಶಾಲಿಯೂ, ಎಲ್ಲಾ ಅಹಂಕಾರಿಗಳಿಗೆ ಅಧಿದೇವತೆಯೂ, ಮನೋಮಾತ್ರಗೋಚರನೂ ಆಗಿರುವ ಪ್ರದ್ಯುಮ್ನನನ್ನು ಆವಾಹಿಸುತ್ತೇನೆ. ದೇವೇಶನೂ, ಚರಾಚರಪ್ರಕಾಶಕನೂ, ತೇಜೋಮೂರ್ತಿಯೂ, ಅಜೇಯನೂ, ಸೂರ್ಯಕೋಟಿಸದೃಶತೇಜಸ್ವಿಯೂ, ಇತರರಿಗೆ ಗೋಚರವಾಗದಿರುವ ಮಧ್ಯಾಂತದೆಶೆಯುಳ್ಳವನೂ, ದೇವಶತ್ರುನಾಶಕನೂ, ಚಾಪಾಕರ್ಷಣದಿಂದ ಹೊರಟ ಬಾಣಗಳಿಂದ ಜಗತ್ತ್ರಯವನ್ನೇ ನಾಶಪಡಿಸಿದವನೂ ಆದ ಎಲೈ ಪ್ರದ್ಯುಮ್ನ ಮೂರ್ತಿಯೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೨೧–೨೪. ಜಗದ್ಗುರುವಾಗಿಯೂ ಪದ್ಮಪತ್ರಾಗ್ರಸದೃಶಮೂರ್ತಿಯಾಗಿಯೂ, ರಕ್ತವಸ್ತ್ರಭೂಷಣನಾಗಿಯೂ ಎಲ್ಲ ಕಡೆಯಲ್ಲಿಯೂ ಅಪ್ರತಿಹತಗತಿಯಾಗಿಯೂ ಜ್ವಲಸುವಅಗ್ನಿಯಂತೆ ತೇಜಸ್ವಿಯಾಗಿಯೂ, ಕಾವ್ಯರೂಪಿಯಾದ, ಪರಮಾತ್ಮನಾಗಿಯೂ, ಜಗತ್ಕಾರಣನಾದ ಬ್ರಹ್ಮನಿಗೂ ಕಾರಣನಾಗಿಯೂ ಇರುವ ಅನಿರುದ್ಧ

ಕಾರ್ಯಂ ಪರಮಮೀಶಾನಂ ಜಗತ್ಕಾರಣಕಾರಣಂ ।
ಅನಿರುದ್ಧ ತ್ವಮಭ್ಯೇಹಿ ವ್ಯಾಪ್ತಾಶೇಷ ಚರಾಚರ ॥ ೨೩ ॥

ಆಕಾಶತುಲ್ಯಸದ್ವಜ್ರ ವಿದಾರಿತಸುರಾಹಿತ ।
ಚರ್ಮಸಂಛಾದಿತಾಶೇಷ ಭುವನಾದಿತ್ಯವಿಕ್ರಮ ॥ ೨೪ ॥

ಆವಾಹಯಿಷ್ಯೇ ವರದಂ ಚಾನಂತಂ ದೀಪ್ತತೇಜಸಂ ।
ಫಣಾವಲಿಗತಾಶೀರ್ಷ ಮಹೀಮಂಡಲಧಾರಣಂ ॥ ೨೫ ॥

ಲಾಂಗಲಾಲಿಂಗಿತಕರಂ ಮುಸಲಾಸಕ್ತವಿಗ್ರಹಂ ।
ಮಹೋಚ್ಛ್ರಿತೇನ ತಾಲೇನ ತಥಾ ಚಿಹ್ನೇನ ರಾಜಿತಂ ॥ ೨೬ ॥

ಏಹ್ಯನಂತ ಮಹಾಭಾಗ ಶೇಷಾಹೇ ಧರಣೀಧರ ।
ಶಶಾಂಕಶತಸಂಕಾಶ ತಥಾಮ್ಬರಸುಶೋಭಿತ ॥ ೨೭ ॥

ಆಧಾರಃ ಸರ್ವಭೂತಾನಾಂ ತ್ವಮೇಕೋ ಭೂತಭಾವನಃ ।
ತ್ವಯೇದಂ ಧಾರ್ಯತೇ ವಿಶ್ವಂ ತ್ರೈಲೋಕ್ಯಂ ಚ ಜಗತ್ಪತೇ ॥ ೨೮ ॥

---

ನನ್ನು ಆವಾಹಿಸುತ್ತೇನೆ. ಅಶೇಷಚರಾಚರವ್ಯಾಪಕನಾಗಿಯೂ, ಆಕಾಶದಂತೆ ನೀಲವಾದ ವಜ್ರದಿಂದ ನಾಶಪಡಿಸಲ್ಪಟ್ಟ ಸುರಶತ್ರುವಾಗಿಯೂ, ಚರ್ಮಾಯುಧದಿಂದ ಆಚ್ಛಾದಿಸಲ್ಪಟ್ಟ ಪ್ರಪಂಚದ ಮತ್ತು ಆದಿತ್ಯರತೇಜಸ್ಸುಳ್ಳವನಾಗಿಯೂ ಇರುವ ಅನಿರುದ್ಧಮೂರ್ತಿಯೇ ಇಲ್ಲಿ ಬಂದು ಸಾನ್ನಿಧ್ಯಹೊಂದು.

೨೫-೨೮. ವರಪ್ರದನಾಗಿಯೂ, ಮಹಾತೇಜಸ್ವಿಯಾಗಿಯೂ, ಹೆಡೆಗಳ ಅಗ್ರಭಾಗಗಳಿಂದ ಭೂಮಂಡಲವನ್ನೇ ಧರಿಸಿರುವವನೂ, ಕೈಗಳಲ್ಲಿ ನೇಗಿಲನ್ನೂ ದೇಹದಲ್ಲಿ ಮುಸಲವನ್ನೂ ಹೊಂದಿರುವವನೂ ಉನ್ನತವಾದ ತಾಳನನ್ನೂ ತಾಲಧ್ವಜವನ್ನೂ ಹೊಂದಿರುವ ಅನಂತನನ್ನು ಆವಾಹಿಸುತ್ತೇನೆ. ಶೇಷಸ್ವರೂಪನಾಗಿಯೂ, ಭೂಮಿಧಾರಿಯಾಗಿಯೂ, ಚಂದ್ರರಸಮೂಹದಂತೆಧವಲನಾಗಿಯೂ, ಅಂತಹ ವಸ್ತ್ರದಿಂದ ಶೋಭಿತನಾಗಿಯೂ, ಇರುವ ಮಹಾಮಹಿಮನಾದ ಅನಂತನೇ ಇಲ್ಲಿ ಬಂದು ಸಾನ್ನಿಧ್ಯಹೊಂದು. ಸರ್ವಭೂತಗಳಿಗೂ ಆಧಾರನಾಗಿಯೂ ಕಾರಣನಾಗಿಯೂ ಇರುವವನು ನೀನೊಬ್ಬನೇ. ಎಲೈ ಜಗತ್ಪತಿಯೇ, ನಿನ್ನಿಂದಲೇ ಈ ಜಗತ್ತೂ ಲೋಕತ್ರಯವೂ ಸಹ ಧರಿಸಲ್ಪಟ್ಟಿದೆ.

**ಲಕ್ಷ್ಮೀಮಾವಾಹಯಿಷ್ಯಾಮಿ ವಿಷ್ಣೋರ್ವಕ್ಷಸಿ ಸಂಸ್ಥಿತಾಂ ।**
**ಪದ್ಮಾನನಾಂ ಪದ್ಮಕರಾಂ ಶಶಾಂಕಸದೃಶಾಂಬರಾಂ ॥ ೨೯ ॥**

**ಹಿತಸ್ಥಾಂ ಸರ್ವಲೋಕಸ್ಯ ವರದಾಂ ಕಾಮರೂಪಿಣೀಂ ।**
**ಸರ್ವಗಾಂ ಸರ್ವಜನನೀಂ ದೇವೀಂ ತ್ರಿಭುವನೇಶ್ವರೀಂ ॥ ೩೦ ॥**

**ಆಗಚ್ಛ ವರದೇ ಲಕ್ಷ್ಮಿ ದುರ್ಧರೇ ಭೂತಭಾವನೆ ।**
**ಹರಿಪ್ರಿಯೇ ವಿಶಾಲಾಕ್ಷಿ ಸರ್ವಲೋಕನಮಸ್ಕೃತೆ ॥ ೩೧ ॥**

**ಯತ್ರ ತ್ವಂ ತತ್ರ ಸಕಲಂ ತ್ರೈಲೋಕ್ಯಂ ವರವರ್ಣಿನಿ ।**
**ಯುನಕ್ಷಿ ಭೋಗೈಃ ಸಕಲಂ ಸ್ಮೃತಿಪ್ರಾಪ್ತಂ ಜನಂ ಶುಭಂ ॥ ೨೨ ॥**

**ತಾರ್ಕ್ಷ್ಯಮಾವಾಹಯಿಷ್ಯಾಮಿ ಮನೋಮಾರುತರಂಹಸಂ ।**
**ಪಕ್ಷವಾತಸಮುದ್ಧೂತ ಸಮಸ್ತಭುವನತ್ರಯಂ ॥ ೩೩ ॥**

---

೨೯–೩೨ ವಿಷ್ಣುವಿನ ಹೃದಯವಾಸಿನಿಯಾಗಿಯೂ, ಪದ್ಮಮುಖಳಾಗಿಯೂ ಪದ್ಮಧಾರಿಣಿಯಾಗಿಯೂ ಚಂದ್ರನಂತೆ ಶುಭ್ರವಾದ ವಸ್ತ್ರಧಾರಿಣಿಯಾಗಿಯೂ ಸರ್ವ ಲೋಕಹಿತಪ್ರದೆಯಾಗಿಯೂ, ವರಪ್ರದಳಾಗಿಯೂ, ಕಾಮರೂಪಿಣಿಯಾಗಿಯೂ, ಸರ್ವವ್ಯಾಪಕಿಯಾಗಿಯೂ, ಸರ್ವಲೋಕಮಾತೆಯಾಗಿಯೂ, ಭುವನತ್ರಯಕ್ಕೆ ಈಶ್ವರಿ ಯಾಗಿಯೂ ಇರುವ ಲಕ್ಷ್ಮೀದೇವಿಯನ್ನು ಆವಾಹಿಸುತ್ತೇನೆ, ವರಪ್ರದೆಯಾಗಿಯೂ (ಚಂಚಲೆಯಾದುದರಿಂದ) ಧರಿಸಲಶಕ್ಯಳೂ, ಭೂತಸೃಷ್ಟಿಕಾರಿಣಿಯೂ, ಹರಿ ಪ್ರಿಯಳೂ ವಿಶಾಲಾಕ್ಷಿಯೂ, ಸರ್ವಲೋಕಪೂಜ್ಯೆಯೂ ಆಗಿರುವ ಲಕ್ಷ್ಮೀದೇವಿಯೇ, ಇಲ್ಲಿ ಬಂದು ಸಾನ್ನಿಧ್ಯಹೊಂದು. ಸೌಭಾಗ್ಯಶಾಲಿನಿಯಾದ ನೀನು ಎಲ್ಲಿ ನೆಲೆಸಿರು ವೆಯೋ ಅಲ್ಲಿಯೇ ಎಲ್ಲವೂ ಮೂರುಲೋಕಗಳೂ ಸಹ ಇರುತ್ತವೆ, ನಿನ್ನ ಸ್ಮರಣೆಗೆ ಗೋಚರನಾದ ಭಾಗ್ಯಶಾಲಿಗೆ ಎಲ್ಲಾ ಭೋಗಗಳನ್ನೂ ನೀನೇ ಉಂಟುಮಾಡುತ್ತೀಯೆ.

೩೩–೩೭ ಮನಸ್ಸು ಮತ್ತು ವಾಯುಗಳಿಗೆ ಸಮಾನವಾದ ವೇಗವುಳ್ಳ, ರೆಕ್ಕೆಗಳ ವಾಯುವಶದಿಂದ ಮೂರುಲೋಕಗಳನ್ನೂ ನಡುಗಿಸಿದ ತಾರ್ಕ್ಷ್ಯನನ್ನು ಆವಾಹಿಸು ತ್ತೇನೆ. ಅಗ್ನಿರಾಶಿಯಂತೆ ರಾಜಿಸುವವನೇ, ಮಹಾವಿಷದಿಂದ ಮೋಹಗೊಂಡವ

**ಗರುಡೈರ್ಹಿ ಸಮುಭ್ಯೇಹಿ ದೀಪ್ತಾನಲಚಯೋಪಮ ।**
**ಮಹಾವಿಷಕವೋಗ್ರಸ್ತ ನಿರ್ವಿಷೀಕರಣಾಚ್ಯುತ** ॥ ೩೪ ॥

**ತಾಲಮಾವಾಹಯಿಷ್ಯಾಮಿ ಕೇತುಂ ಸಂಕರ್ಷಣಸ್ಯ ತು ।**
**ಏಹಿ ನೋ ಭಗವಂಸ್ತಾಲ ಸಮಸ್ತಭುವನೇಶ್ವರ** ॥ ೩೫ ॥

**ಝಷಮಾವಾಹಯಿಷ್ಯಾಮಿ ಕಾಮಕೇತುಂ ವರಪ್ರದಂ ।**
**ಏಹಿ ನೋ ಮಕರಾಗ್ರ್ಯೇಹ ಸಮಸ್ತಭುವನೇಶ್ವರ** ॥ ೩೬ ॥

**ಋಷ್ಯಮಾವಾಹಯಿಷ್ಯಾಮಿ ಋಷಿರಾಜಂ ಮಹಾಬಲಂ ।**
**ಏಹಿ ಋಷ್ಯ ಮಹಾಭಾಗ ಕೂರ್ಮಮೂರ್ತೇ ದುರಾಸದ** ॥ ೩೭ ॥

**ದೇವಮಾವಾಹಯಿಷ್ಯಾಮಿ ನೃಸಿಹ್ಮಂ ಜ್ಞಾನರೂಪಿಣಂ ।**
**ದಂಷ್ಟ್ರಾಕರಾಲವದನಮಲಾತಮಸಿತೇಕ್ಷಣಂ** ॥ ೩೮ ॥

**ಸಹಸ್ರಯಮಸಕ್ರೋಧಂ ಸಹಸ್ರೇಂದ್ರಪರಾಕ್ರಮಂ ।**
**ಸಹಸ್ರಧನದಂ ಸ್ಫೀತಂ ಮನಸೋಽಪ್ಯತಿಶೀಘ್ರಗಂ** ॥ ೩೯ ॥

---

ರನ್ನು ನಿರ್ವಿಷರನ್ನಾಗಿ ಮಾಡುವವನೇ, ಗರುಡರೊಡನೆ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಸಂಕರ್ಷಣನ ಧ್ವಜವಾದ ತಾಲವೃಕ್ಷವನ್ನು ಆವಾಹಿಸುತ್ತೇನೆ. ಭುವನ ನಾಯಕನಾದ ತಾಲನೇ ಪೂಜ್ಯನಾದ ನೀನು ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಕಾಮಧ್ವಜನಾಗಿಯೂ ವರಪ್ರದನಾಗಿಯೂ ಇರುವ ಮತ್ಸ್ಯವಿಶೇಷವನ್ನು ಆವಾಹಿಸುತ್ತೇನೆ. ಸಮಸ್ತ ಜಲೇಶ್ವರನಾದ ಮಕರನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಋಷಿರಾಜನಾಗಿರುವ ಮಹಾಬಲಶಾಲಿಯಾದ ಋಷ್ಯನನ್ನು ಆವಾಹಿಸುತ್ತೇನೆ. ಕೂರ್ಮರೂಪಿಯೂ, ಭಾಗ್ಯಶಾಲಿಯೂ ಆದ ನೀನು ಇಲ್ಲಿ ಬಂದು ಸಾನ್ನಿಧ್ಯ ಹೊಂದು

೩೮–೪೩. ಜ್ಞಾನರೂಪಿಯಾಗಿಯೂ, ಕೋರೆದಾಡೆಗಳಿಂದ ಭಯಂಕರವಾದ ಮುಖವುಳ್ಳವನೂ, ಕೊಳ್ಳಿಯಂತೆ ಕೆಂಗಣ್ಣುಳ್ಳವನೂ, ಸಾವಿರಾರು ಯಮರ ಕ್ರೋಧವುಳ್ಳವನೂ, ಸಾವಿರಾರು ಇಂದ್ರರ ಪ್ರರಾಕ್ರಮವುಳ್ಳವನೂ, ಸಾವಿರಾರು ಕುಬೇರರರೂಪನೂ, ಅಭಿವೃದ್ಧನೂ, ಮನಸ್ಸಿಗಿಂತಲೂ ವೇಗಶಾಲಿಯಾಗಿಯೂ

ವಿದ್ಯುಜ್ಜಿಹ್ವಂ ವ್ಯಾದಿತಾಸ್ಯಂ ಭ್ರುಕುಟೀಕುಟಿಲಾನನಂ ।
ವಹ್ನಿಜ್ವಾಲಾವಲೀಪುಂಜ ದುರ್ನಿರೀಕ್ಷ್ಯಮುಖಶ್ರಿಯಂ ॥ ೪೦ ॥

ಆಗಚ್ಛೇಹ ನೃಸಿಹ್ಮಾದ್ಯ ಮಹಾಬಲಪರಾಕ್ರಮ ।
ವಜ್ರತೀಕ್ಷ್ಣನಖಾಕ್ರಾಂತ ಮಹಾದೈತ್ಯೇಂದ್ರಜೀವಿತ ॥ ೪೧ ॥

ಅಜ್ಞಾನಧ್ವಾಂತಮಾತಂಗ ಭಂಗವಿಸ್ಪಷ್ಟಕೇಸರಿನ್ ।
ಮಹಾಮಂತ್ರಕಪಾಟೋಗ್ರದಾರುಣಾಚಿಂತ್ಯವಿಕ್ರಮ ॥ ೪೨ ॥

ದೇವಮಾವಾಹಯಿಷ್ಯಾಮಿ ಕಾಪಿಲೀಂ ತನುಮಾಶ್ರಿತಂ ।
ತೇಜೋನಿಧಾನಮಜಿತಂ ಸಾಗರಾತ್ಮಜವಾಡವಂ ॥ ೪೩ ॥

ಏಹಿ ಮೇ ಕಪಿಲಾದ್ಯೇಹ ಪರಮಾತ್ಮನ್ ಸನಾತನ ।
ಧ್ಯಾನವೀಕ್ಷಿತಸದ್ಭಾವ ಸಾಂಖ್ಯಮಾರ್ಗಪ್ರವರ್ತಕ ॥ ೪೪ ॥

---

ಮಿಂಚಿನಂತಹ ಜಿಹ್ವೆಯುಳ್ಳವನೂ, ತೆರೆದ ಬಾಯುಳ್ಳವನೂ, ಹುಬ್ಬುಗಳ ಗಂಟಿನಿಂದ ವಕ್ರವಾದ ಮುಖವುಳ್ಳವನೂ, ಬೆಂಕಿಯ ಜ್ವಾಲಾವಳಿಗಳಿಂದ ದುರ್ದರ್ಶವಾದ ಮುಖಕಾಂತಿಯುಳ್ಳವನೂ ಆದ ನೃಸಿಹ್ಮದೇವನನ್ನು ಆವಾಹಿಸುತ್ತೇನೆ. ಮಹಾಪರಾಕ್ರಮಿಯಾಗಿಯೂ, ವಜ್ರಾಯುಧವಂತೆ ತೀಕ್ಷ್ಣವಾಗಿರುವ ಉಗುರುಗಳಿಂದ ದೈತ್ಯಾಧಿಪತಿಯ ಜೀವವನ್ನೇ ಆಕ್ರಮಿಸಿದವನೂ, ಕತ್ತಲೆಯಂತಿರುವ ಅಜ್ಞಾನ ಗಜವನ್ನು ಭಂಗಪಡಿಸಿ ಸ್ಪಷ್ಟವಾಗಿಯೂ ಸಿಹ್ಮತ್ವಹೊಂದಿದವನೂ, ಮಹಾಮಂತ್ರವೆಂಬ ದೃಢವಾದ ಕವಾಟವುಳ್ಳವನೂ, ಭಯಂಕರನೂ ಅಪ್ರಮೇಯಪರಾಕ್ರಮನೂ, ಆಗಿರುವ ನೃಸಿಹ್ಮನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೪೩-೪೬. ಕಪಿಲಋಷಿಯ ದೇಹವನ್ನು ಹೊಂದಿಯೂ, ತೇಜೋನಿಧಿಯಾಗಿಯೂ, ಜಯಶಾಲಿಯಾಗಿಯೂ, ಸಗರಪುತ್ರರಿಗೆ ಬಡಬಾಗ್ನಿಯಾಗಿಯೂ ಇರುವ ಕಾಪಿಲರೂಪಧಾರಿಯಾದ ದೇವನನ್ನು ಆವಾಹಿಸುತ್ತೇನೆ. ಪರಮಾತ್ಮಸ್ವರೂಪನಾಗಿಯೂ, ಸನಾತನಮೂರ್ತಿಯಾಗಿಯೂ, ಧ್ಯಾನದಿಂದ ಬ್ರಹ್ಮವಸ್ತುವನ್ನು ಸಾಕ್ಷಾತ್ಕರಿಸಿಯೂ, ಸಾಂಖ್ಯಮಾರ್ಗಪ್ರವರ್ತಕನೂ ಆದ ಕಪಿಲಮುನಿಯೇ, ಇಲ್ಲಿ

**ದೇವಮಾವಾಹಯಿಷ್ಯಾಮಿ ನೃವರಾಹಂ ಮಹಾಬಲಂ ।**
**ಭಿನ್ನಾಂಜನಚಯಶ್ಯಾಮ ಲೀಲೋದ್ಧೃತವಸುಂಧರ ॥ ೪೫ ॥**

**ಆಗಚ್ಛ ನೃವರಾಹೇಹ ಹಿರಣ್ಯಾಕ್ಷವಿನಾಶನ ।**
**ಶೇಷಾಹಿಭೋಗವಿನ್ಯಸ್ತಮಹಾಚರಣಪಙ್ಕಜ ॥ ೪೬ ॥**

**ಶಂಖನಾದೋದ್ಭವ ತ್ರಾಹಿ ನಿಯಂತಾಸುರನಾಯಕಂ ।**
**ದೇವಮಾವಾಹಯಿಷ್ಯಾಮಿ ವರಾಹಂ ವರದರ್ಪಿತಂ ॥ ೪೭ ॥**

**ಬಾಲೇಂದುಲೇಖಾದಂಷ್ಟ್ರಾಗ್ರವಿಭಾಸಿತಜಗತ್ತ್ರಯ ।**
**ವಿಸ್ಮಯೋತ್ಫುಲ್ಲನಯನ ಭೂಮಿವೀಕ್ಷಿತವಿಗ್ರಹ ॥ ೪೮ ॥**

**ಬಾಲೇಂದುತುಲ್ಯದಂಷ್ಟ್ರಾಗ್ರ ಲೀಲೋದ್ಧೃತವಸುಂಧರ ।**
**ಏಹಿ ಮೇ ಭಗವನ್ ದೇವ ವರಾಹಾಮಿತವಿಕ್ರಮ ॥ ೪೯ ॥**

---

ಬಂದು ಸಾನ್ನಿಧ್ಯ ಹೊಂದು. ಮಹಾಬಲಶಾಲಿಯಾಗಿಯೂ, ಅಂಜನದಂತೆ ಶ್ಯಾಮವರ್ಣನೂ, ಲೀಲಾಮಾತ್ರದಿಂದ ಭೂಮಿಯನ್ನು ಉದ್ಧರಿಸಿದವನೂ, ಆದ ನೃವರಾಹಮೂರ್ತಿಯನ್ನು ಆವಾಹಿಸುತ್ತೇನೆ. ಹಿರಣ್ಯಾಕ್ಷನಾಶಕನಾಗಿಯೂ ಶೇಷಸರ್ಪದ ದೇಹದಲ್ಲಿ ವಿಹರಿಸುವ ಪಾದವುಳ್ಳವನೂ, ಶಂಖನಾದದೊಡನೆಯೇ ಉದ್ಭವಿಸಿದವನೂ ಇಂದ್ರನಿಗೆ ನಿಯಾಮಕನೂ ಆದ ನರವರಾಹನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೪೭-೪೯ ವರಪ್ರದಾನಸಮರ್ಥನಾಗಿರುವ ವರಾಹದೇವನನ್ನು ಆವಾಹಿಸುತ್ತೇನೆ. ಬಾಲಚಂದ್ರರೇಖೆಯಂತಿರುವ ಕೋರದಾಡೆಗಳ ಕಾಂತಿಯಿಂದ ಜಗತ್ತ್ರಯವನ್ನೇ ಬೆಳಗಿದವನಾಗಿಯೂ, ಆಶ್ಚರ್ಯದಿಂದ ಅರಳಿದ ಕಣ್ಣುಗಳುಳ್ಳ ಭೂಮಿಯಿಂದ ನೋಡಲ್ಪಟ್ಟ ಮಹಾವಿಗ್ರಹವುಳ್ಳವನಾಗಿಯೂ, ಬಾಲಚಂದ್ರನಂತೆ ಕೋಮಲವಾಗಿರುವ ಕೋರದಾಡೆಗಳಿಂದ ಅನಾಯಾಸದಿಂದ ಭೂಮ್ಯುದ್ಧರಣಮಾಡಿದವನಾಗಿಯೂ, ದೈತ್ಯಾಧಿಪರನ್ನು ನಾಶಗೊಳಿಸಿದವನಾಗಿಯೂ, ದೀನರಾದ ಭಕ್ತರನ್ನು ಉದ್ಧರಿಸಿದವನಾಗಿಯೂ ಇರುವ ವರಾಹಮೂರ್ತಿಯೇ, ಅಪ್ರಮೇಯ ಪರಾಕ್ರಮಿಯಾದ ನೀನು ಇಲ್ಲಿ ಬಂದು ಸಾನ್ನಿಧ್ಯ ಹೊಂದು.

ನಿರಸ್ತಾಶೇಷದೈತ್ಯೇಂದ್ರ ದೀನಭಕ್ತಜನೋದ್ಧರ ।
ಧರ್ಮಮಾವಾಹಯಿಷ್ಯಾಮಿ ಸರ್ವಭೂತಸುಖಾವಹಂ ॥ ೫೦ ॥

ದುರ್ವಿಜ್ಞೇಯಂ ಬಹುದ್ವಾರಂ ಖಲಮೂರ್ತಿದುರಾಸದಂ ।
ಏಹಿ ಧರ್ಮಮವಾಭ್ಯೇಹಿ ಭುವನತ್ರಯಪಾಲಕ ॥ ೫೧ ॥

ಸಮಸ್ತಪಾಪಶಮನ ಸರ್ವಬಾಧಾವಿನಾಶನ ।
ರುದ್ರಮಾವಾಹಯಿಷ್ಯಾಮಿ ತೇಜೋಮೂರ್ತಿಂ ದುರಾಸದಂ ॥ ೫೨ ॥

ಐಶ್ವರ್ಯಮತಿಗಂಭೀರಂ ಸರ್ವಸಂಹಾರಕಾರಕಂ ।
ಏಹಿ ನೋ ಭಗವನ್ ರುದ್ರ ಜಟಾಮಂಡಲದುರ್ದೃಶ ॥ ೫೩ ॥

ನಿರ್ದಗ್ಧಾಶೇಷಭುವನ ತೃತೀಯೇಕ್ಷಣತೇಜಸಾ ।
ದೇವಮಾವಾಹಯಿಷ್ಯಾಮಿ ಬ್ರಹ್ಮಾಣಂ ದೀಪ್ತತೇಜಸಂ ॥ ೫೪ ॥

---

೫೦-೫೩. ಸರ್ವಪ್ರಾಣಿಗಳಿಗೂ, ಸುಖದಾಯಕವಾಗಿಯೂ, ಅನೇಕ ಮಾರ್ಗಗಳಿಂದ ಕೂಡಿರುವುದರಿಂದ ತಿಳಿಯಲಶಕ್ಯವಾಗಿಯೂ, ಮೂರ್ಖನಿಂದ ಹೊಂದಲು ಸಾಧ್ಯವಿಲ್ಲದುದಾಗಿಯೂ ಇರುವ ಧರ್ಮವನ್ನು ಆವಾಹಿಸುತ್ತೇನೆ. ಸಮಸ್ತ ಪಾಪನಾಶಕನಾಗಿಯೂ, ಸರ್ವಪೀಡಾಪರಿಹಾರಕನಾಗಿಯೂ, ತ್ರೈಲೋಕ್ಯ ರಕ್ಷಕನಾಗಿಯೂ ಇರುವ ಧರ್ಮವೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ತೇಜೋಮೂರ್ತಿಯಾಗಿಯೂ, ಅನಭಿಭವನೀಯನಾಗಿಯೂ, ಐಶ್ವರ್ಯಬುದ್ಧಿಗಳಿಂದ ಗಂಭೀರನಾಗಿಯೂ, ಸರ್ವಸಂಹಾರಕಾರಣನಾಗಿಯೂ, ಇರುವ ರುದ್ರದೇವನನ್ನು ಆವಾಹಿಸುತ್ತೇನೆ. ಜಟಾಮಂಡಲದಿಂದ ದುರ್ದರ್ಶನಾಗಿಯೂ, ಮೂರನೆಯ ಕಣ್ಣಿನ ಜ್ವಾಲೆಯಿಂದ ಪ್ರಪಂಚವನ್ನು ದಹಿಸಿದವನಾಗಿಯೂ, ಇರುವ ಪೂಜ್ಯನಾದ ರುದ್ರನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೫೪-೫೮. ಮಹಾತೇಜಸ್ವಿಯಾಗಿಯೂ, ಚತುರ್ಮುಖನಾಗಿಯೂ. ಕಲ್ಯಾಣ ಗುಣಾಕರನಾಗಿಯೂ, ಹೇಯಗುಣಗಳಿಂದ ಬೇರೆಯಾಗಿಯೂ ಇರುವ ಚತುರ್ಮುಖ ಬ್ರಹ್ಮನನ್ನು ಆವಾಹಿಸುತ್ತೇನೆ. ಎಲ್ಲಾ ಲೋಕಗಳಿಗೂ ಅಧ್ಯಕ್ಷನಾಗಿಯೂ,

ಚತುರ್ಮುಖಂ ಚತುರ್ಬಾಹುಂ ಗುಣಾಧೀನಂ ಗುಣೋತ್ತರಂ ।
ದೇವದೇವ ತ್ವಮಭ್ಯೇಹಿ ಪಿತಾಮಹ ಸುರೇಶ್ವರ　　॥ ೫೫ ॥

ಸಮಸ್ತಭುವನಾಧ್ಯಕ್ಷ ಜಗತ್ಕಾರಣಕಾರಣ ।
ಭೂಮಿಮಾವಾಹಯಿಷ್ಯಾಮಿ ಧಾರಿಣೀಂ ಸರ್ವದೇಹಿನಾಂ　　॥ ೫೬ ॥

ಸರ್ವಭೂತಪ್ರತಿಷ್ಠಾಂ ಚ ಕ್ಷಿತಿಂ ಕ್ಷೋಣೀಂ ಸರಸ್ವತೀಂ ।
ಏಹಿ ಮೇ ವರದೇ ದೇವಿ ವಸುಧೇ ಭೂತಭಾವನಿ　　॥ ೫೭ ॥

ಸರ್ವಾಶ್ರಯೇ ಮಹಾಭಾಗೇ ದೇವವದ್ಭಯಹಾರಿಣಿ　　॥ ೫೮ ॥

ಶಂಖಮಾವಾಹಯಿಷ್ಯಾಮಿ ನಭೋಮೂರ್ತಿಮಥಾವ್ಯಯಂ　　॥ ೫೯ ॥

ಶಬ್ದಯೋನಿಂ ನಿರಾಲಂಬಂ ಸಮಸ್ತಭುವನಾಶ್ರಯಂ ।
ಏಹ್ಯೇಹಿ ಶಂಖಪ್ರವರ ಪಾಂಚಜನ್ಯ ಮಹಾಸ್ವನ　　॥ ೬೦ ॥

---

ಸುರೇಶ್ವರನಾಗಿಯೂ, ಕಾರಣವಸ್ತುಗಳಿಗೂ, ಕಾರಣನಾಗಿಯೂ. ಇರುವ ಪಿತಾಮಹನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಎಲ್ಲಾ ಪ್ರಾಣಿಗಳಿಗೂ ಧಾರಕಳಾಗಿಯೂ, ಸ್ಥಿತಿಕಾರಣಳಾಗಿಯೂ, ಕ್ಷಿತಿ, ಕ್ಷೋಣಿ, ಸರಸ್ವತಿ ಎಂಬ ಅಭಿಧಾನಗಳುಳ್ಳವಳಾಗಿಯೂ. ಇರುವ ಭೂದೇವಿಯನ್ನು ಆವಾಹಿಸುತ್ತೇನೆ. ಎಲ್ಲಾ ಪ್ರಾಣಿಗಳಿಗೂ ಕಾರಣಳಾಗಿಯೂ, ಆಶ್ರಯದಾತೆಯಾಗಿಯೂ, ಪರಮಾತ್ಮನಂತೆ ಭಯಹಾರಿಣಿಯಾಗಿಯೂ ಇರುವ ಭೂದೇವಿಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೫೯–೬೩. ಆಕಾಶಸ್ವರೂಪನಾಗಿಯೂ, ನಾಶರಹಿತನಾಗಿಯೂ ಶಬ್ದೋತ್ಪತ್ತಿಕಾರಣನಾಗಿಯೂ. ನಿರಾಶ್ರಯನಾಗಿಯೂ, ಎಲ್ಲಾ ಪ್ರಪಂಚಕ್ಕೂ ಆಶ್ರಯದಾತನಾಗಿಯೂ ಇರುವ ಶಂಖನನ್ನು ಆವಾಹಿಸುತ್ತೇನೆ. ಪಾಂಚಜನ್ಯವೆಂದು ಪ್ರಸಿದ್ಧಿಹೊಂದಿರುವನೇ, ಮಹಾಧ್ವನಿಯುಳ್ಳವನೇ, ಶಬ್ದಮಾತ್ರದಿಂದ ಎಲ್ಲಾ ದಾನವಮಂಡಲವನ್ನೂ ನಾಶಮಾಡಿದವನೇ, ಶಂಖಪ್ರವರನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಸಮಸ್ತ ಲೋಕಗಳಿಗೂ ಆಶ್ರಯವಾಗಿಯೂ, ಜಲದ ಮೂರ್ತ್ಯಂತರವಾಗಿಯೂ, ಸೌಮ್ಯವಾಗಿಯೂ. ಪುಂಡರೀಕವೆಂದು ಪ್ರಸಿದ್ಧಿಹೊಂದಿಯೂ, ಇರುವ

ಶಬ್ದಮಾತ್ರಹತಾಶೇಷ ಮಹಾದಾನವಮಂಡಲ ।
ಪದ್ಮಮಾವಾಹಯಿಷ್ಯಾಮಿ ಸಮಸ್ತಭುವನಾಶ್ರಯಂ ॥ ೬೧ ॥

ಅಪಾಂ ಮೂರ್ತಿಮಯಂ ಸೌಮ್ಯಂ ಪುಂಡರೀಕಮಿತಿ ಸ್ಮೃತಂ ।
ಏಹಿ ಪದ್ಮ ಮಹಾಭಾಗ ಭೂತಭವ್ಯಭವಪ್ರಭೋ ॥ ೬೨ ॥

ಲಕ್ಷ್ಮೀನಿಲಯ ವಿಸ್ತೀರ್ಣಬ್ರಹ್ಮಯೋನೇ ಜಗನ್ಮಯ ।
ಚಕ್ರಮಾವಾಹಯಿಷ್ಯಾಮಿ ಕ್ಷರತ್ಪರ್ಯಂತಮಂಡಲಂ ॥ ೬೩ ॥

ವಜ್ರನಾಭಂ ವಿಶಾಲಾಕ್ಷಂ ವಾಯುಮೂರ್ಜಿತಮವ್ಯಯಂ ।
ಕಾಲಚಕ್ರಂ ಜಗಚ್ಚಕ್ರಂ ಧರ್ಮಚಕ್ರಂ ಸುದರ್ಶನಂ ॥ ೬೪ ॥

ನಿತ್ಯಂ ಸತತಗಂ ದೇವಂ ತೃಪ್ತಂ ದಾನವಶೋಣಿತೈಃ ।
ಏಹಿ ಚಕ್ರಾಮಿತಶಿತ ಜಗತ್ಪಾಲನತತ್ಪರ ॥ ೬೫ ॥

ದೇವೇಂದ್ರಹೃದಯತ್ರಾಸತಮೋನಾಶನತತ್ಪರ ।
ಗದಾಮಾವಾಹಯಿಷ್ಯಾಮಿ ತೇಜೋಮೂರ್ತಿದುರಾಸದಂ ॥ ೬೬ ॥

---

ಪದ್ಮವನ್ನು ಆವಾಹಿಸುತ್ತೇನೆ. ತ್ರಿಕಾಲದ ವಸ್ತುಗಳಿಗೆ ಪ್ರಭುವಾಗಿಯೂ, ಲಕ್ಷ್ಮಿಗೆ ವಾಸಸ್ಥಾನವಾಗಿಯೂ, ವಿಸ್ತೀರ್ಣವಾಗಿಯೂ, ಜಗತ್ಸೃಷ್ಟಿಗೆ ಕಾರಣನಾದ ಬ್ರಹ್ಮನಿಗೂ, ಕಾರಣವಾಗಿಯೂ ಇರುವ ಮಹಾಮಹಿಮಶಾಲಿಯಾದ ಪದ್ಮವೇ ಇಲ್ಲಿ ಬಂದು ಸಾನ್ನಿಧ್ಯಹೊಂದು.

೬೩–೬೬. ಹೊರಭಾಗದಲ್ಲಿ ದುಂಡಾಗಿ ಉದುರುತ್ತಿರುವ ಕಿಡಿಗಳಿಂದ ಕೂಡಿಯೂ, ವಜ್ರಮಯವಾದ ನಾಭಿದೇಶದಿಂದ ಕೂಡಿಯೂ, ವಿಶಾಲವಾದ ಅರಗಳಿಂದ ಕೂಡಿಯೂ, ವಾಯುಮೂರ್ತಿಯಾಗಿಯೂ, ಶಾಶ್ವತವಾಗಿಯೂ ಇರುವ ಮತ್ತು ಕಾಲಚಕ್ರದಂತೆಯೂ, ಧರ್ಮಚಕ್ರದಂತೆಯೂ, ಜಗಚ್ಚಕ್ರದಂತೆಯೂ, ಪ್ರವರ್ತಕಸ್ವರೂಪದಿಂದ ಕೂಡಿಯೂ, ಯಾವಾಗಲೂ ಸಂಚರಿಸುವ ಸ್ವಭಾವಹೊಂದಿ ದಾನವರಕ್ತದಿಂದ ತೃಪ್ತವಾಗಿಯೂ ಇರುವ ಸುದರ್ಶನವೆಂಬ ಚಕ್ರವನ್ನು ಆವಾಹಿಸುತ್ತೇನೆ. ಬಹುಮಟ್ಟಿಗೆ ಹರಿತವಾಗಿಯೂ. ಜಗದ್ರಕ್ಷಣತತ್ಪರವಾಗಿಯೂ, ದೇವೇಂದ್ರನ ಹೃದಯಗತವಾದ ಭಯವೆಂಬ ಅಂಧಕಾರವನ್ನು ನಾಶಮಾಡುವುದರಲ್ಲಿಯೇ ಆಸಕ್ತ

ಗಾಯತ್ರೀಂ ದೇವಜನನೀಂ ಕಾಲರಾತ್ರಿಂ ಭಯಂಕರೀಂ ।
ಏಹಿ ಕೌಮೋದಕಿ ಗದೇ ಸಮಸ್ತಾಸುರನಾಶನಿ ॥ ೬೭ ॥

ಯಾಸಾಂ ತ್ವಂ ಗಹ್ವರಾ ಪ್ರೋಕ್ತಾ ವೈಷ್ಣವೀ ತು ಸುದುರ್ಧರಾ ।
ಆಹಮಾವಾಹಯಿಷ್ಯಾಮಿ ಸಾವಂತಂ ನಾಮ ಲಾಙ್ಗಲಂ ॥ ೬೮ ॥

ಆಗಚ್ಛ ಲಾಂಗಲಾಸ್ಯೇಹ ವ್ಯಾಹೃತಿಂ ಭುವನತ್ರಯಂ ।
ಅಹಮಾವಾಹಯಿಷ್ಯಾಮಿ ಸೌಧನ್ವಂ ಮುಸಲಂ ಪ್ರಭುಂ ॥ ೬೯ ॥

ಆಗಚ್ಛ ಮುಸಲಾದ್ಯೇಹ ದೇವಾರಿಗಣಸೂದನ ।
ಚಾಪಮಾವಾಹಯಿಷ್ಯಾಮಿ ಶಾರ್ಙ್ಗಂ ರಿಪುನಿಷೂದನಂ ॥ ೭೦ ॥

ಆಗಚ್ಛ ಚಾಪ ವರದ ದೇವಾಸುರಗಣಪ್ರಿಯ ।
ಶರಮಾವಾಹಯಿಷ್ಯಾಮಿ ಮೋಹನಂ ರಿಪುಮೋಹನಂ ॥ ೭೧ ॥

---

ವಾದ ಚಕ್ರಾಯುಧವೇ ಇಲ್ಲಿ ಬಂದು ಸಾನ್ನಿಧ್ಯಹೊಂದು. ತೇಜೋರೂಪಿಯಾಗಿಯೂ ದುರ್ಜಯವಾಗಿಯೂ, ಗಾಯತ್ರೀರೂಪಿಯಾಗಿಯೂ, ದೇವತೆಗಳಿಗೆ ತಾಯಿಯಾಗಿಯೂ, ಕಾಲರಾತ್ರಿರೂಪದಿಂದ ಭಯಂಕರವಾಗಿಯೂ ಇರುವ ಗದೆಯನ್ನು ಆವಾಹಿಸುತ್ತೇನೆ. ಎಲ್ಲಾ ಅಸುರರಿಗೂ ನಾಶಕಳಾದ ಕೌಮೋದಕಿಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ವೈಷ್ಣವಿಯಾದ ನೀನು ನಿರಪಾಯವಾದ ಗುಹೆಯಂತೆ ರಕ್ಷಕಳಾಗಿದ್ದೀಯೆ.

೬೮-೭೨. ಸಾವನ್ತವೆಂಬ ಲಾಂಗಲ (ನೇಗಿಲು) ವನ್ನು ಆವಾಹಿಸುತ್ತೇನೆ. ಎಲೈ ಲಾಂಗಲನೇ, ವ್ಯಾಹೃತಿರೂಪವಾದ ಭುವನತ್ರಯವನ್ನು ಕುರಿತು ಇಲ್ಲಿ ಬಾ ಸಾನ್ನಿಧ್ಯ ಹೊಂದು. ಸೌಧನ್ವನೆಂಬ ಮುಸಲಾಯುಧವನ್ನು ಆವಾಹಿಸುತ್ತೇನೆ. ದೈತ್ಯಸಮೂಹನಾಶಕನಾದ ಮುಸಲನೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಶತ್ರುನಾಶಕವಾದ ಶಾರ್ಙ್ಗವೆಂಬ ಧನುಸ್ಸನ್ನು ಆವಾಹಿಸುತ್ತೇನೆ. ವರಪ್ರದವಾಗಿಯೂ ದೇವಾಸುರಗಣಗಳಿಗೆ ಪ್ರಿಯನಾಗಿಯೂ ಇರುವ ಶಾರ್ಙ್ಗವೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಶತ್ರುಗಳಿಗೆ ಮೋಹಕವಾದ ಮೋಹನವೆಂಬ ಬಾಣವನ್ನು ಆವಾಹಿಸುತ್ತೇನೆ. ಶತ್ರುಬಲವನ್ನು ನಾಶಪಡಿಸಿದ ಮೋಹನವೇ, ಇಲ್ಲಿ ಬಾ, ಶತ್ರುಗಳ ಮೇಲೆ

ಏಹಿ ವಿದ್ಧಾರಿಬಲಜ ಗಚ್ಛಾರೀನ್ ಭುವನೇಶ್ವರ ।
ಚರ್ಮ ಚಾವಾಹಯಿಷ್ಯಾಮಿ ಖ್ಯಾತಮಾವರಣೇತಿ ಯತ್ ॥ ೭೨ ॥

ಚರ್ಮಾಭ್ಯೇಹಿ ವಿಶಾಲ ತ್ವಂ ಸರ್ವಸ್ಯಾವರಣಂ ಸ್ಮೃತಂ ।
ಖಡ್ಗಮಾವಾಹಯಿಷ್ಯಾಮಿ ನಂದಕಂ ನಾಮ ನಾಮತಃ ॥ ೭೩ ॥

ಏಹಿ ಖಡ್ಗ ಮಹಾಶೇಷದೈತ್ಯನಾಥಕುಲಾಂತಕ ।
ಅಹಮಾವಾಹಯಿಷ್ಯಾಮಿ ವನಮಾಲಾಂ ಸುಖಾವಹಾಂ ॥ ೭೪ ॥

ವನಮಾಲೇ ತ್ವಮಭ್ಯೇಹಿ ಬುದ್ಧಾಶೇಷಜಗತ್ರಯ ।
ಮಣಿಮಾವಾಹಯಿಷ್ಯಾಮಿ ಕೌಸ್ತುಭಂ ಕೇಶವಾಂಗಗಂ ॥ ೭೫ ॥

ಕೌಸ್ತುಭ ತ್ವಮಿಹಾಭ್ಯೇಹಿ ಮರೀಚಿವಿಕಚೋದ್ಭವ ।
ದೇವಮಾವಾಹಯಿಷ್ಯಾಮಿ ಹರಿಂ ಹಯಶಿರೋಧರಂ ॥ ೭೬ ॥

ಶಶಾಂಕಶತಸಂಕಾಶ ವೇದೋದ್ಧರಣನಿಶ್ಚಿತ ।
ಹಯಗ್ರೀವ ತ್ವಮಭ್ಯೇಹಿ ಶಂಖಚಕ್ರಗದಾಧರ ॥ ೭೭ ॥

---

ಹೊರಡು ಆವರಣವೆಂದು ಪ್ರಸಿದ್ಧಹೊಂದಿರುವ ಚರ್ಮ (ಗುರಾಣಿ) ವನ್ನು ಆವಾಹಿಸುತ್ತೇನೆ. ವಿಶಾಲವಾದ ಚರ್ಮಾಯುಧವೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಎಲ್ಲರಿಗೂ ನೀನೇ ರಕ್ಷಕನಾಗಿದ್ದೀಯೆ.

೭೩-೭೭ ನಂದಕವೆಂಬ ಅಭಿಧಾನವುಳ್ಳ ಖಡ್ಗವನ್ನು ಆವಾಹಿಸುತ್ತೇನೆ. ಎಲ್ಲಾ ದೈತ್ಯಾಧಿಪತಿಗಳ ವಂಶನಾಶಕನೇ, ಖಡ್ಗವೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು ಸುಖಕರಿಯಾದ ವನಮಾಲೆಯನ್ನು ಆವಾಹಿಸುತ್ತೇನೆ. ಜಗತ್ರಯ ವನ್ನೂ ತಿಳಿದಿರುವ ಎಲ್ಲೈ ವನಮಾಲೆಯೇ, ನೀನು ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಕೇಶವನ ಅಂಗವನ್ನು ಹೊಂದಿರುವ ಕೌಸ್ತುಭಮಣಿಯನ್ನು ಆವಾಹಿಸುತ್ತೇನೆ. ವಿಕಸಿತವಾದ ರಶ್ಮಿಪುಂಜವುಳ್ಳ ಕೌಸ್ತುಭವೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು ಹಯಶಿರೋಧಾರಿಯಾದ ಹರಿಯನ್ನು ಆವಾಹಿಸುತ್ತೇನೆ. ಚಂದ್ರರಾಶಿಯಂತೆ ಶುಭ್ರನಾಗಿಯೂ ವೇದೋದ್ಧಾರದಲ್ಲಿ ಬದ್ಧದೀಕ್ಷನಾಗಿಯೂ, ಶಂಖಚಕ್ರಗದಾಧರ ನಾಗಿಯೂ ಇರುವ ಹಯಗ್ರೀವನೇ, ವೇದಾಪಹರಣದಿಂದ ದುಃಖಿತನಾದ ಚತು ರ್ಮುಖನನ್ನೂ ಸಮಾಧಾನಪಡಿಸಿದವನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು.

ವೇದಾಹರಣದುಃಖಾರ್ತೇ ಸಮಾಶ್ವಸಿತಪದ್ಮಜ ।
ಆಹಮಾವಾಹಯಿಷ್ಯಾಮಿ ಋಗ್ವೇದಂ ಪದಭೂಷಿತಂ　　॥ ೭೮ ॥

ಋಗ್ವೇದ ತ್ವಮಿಹಾಭ್ಯೇಹಿ ಬ್ರಹ್ಮಮೂರ್ತೇ ವರಪ್ರದ ।
ಆಹಮಾವಾಹಯಿಷ್ಯಾಮಿ ಯಜುರ್ವೇದಮತಿಪ್ರಿಯಂ　　॥ ೭೯ ॥

ಯಜುರ್ವೇದ ತ್ವಮಭ್ಯೇಹಿ ದೇವೇಃಗಣನಾಯಕ ।
ಆಹಮಾವಾಹಯಿಷ್ಯಾಮಿ ವೇದಮಾಥರ್ವಣಂ ಶುಭಂ　　॥ ೮೦ ॥

ಆಗಚ್ಛಾಥರ್ವವೇದೇಹ ಸರ್ವಕರ್ಮಫಲಪ್ರದ ।
ದೇವಮಾವಾಹಯಿಷ್ಯಾಮಿ ಭೋಗಿಭೋಗಾಸನಸ್ಥಿತಂ　　॥ ೮೧ ॥

ಭೋಗಿಭೋಗಾಸನಾಸೀನ ಸಮಾಗಚ್ಛ ಜಗದ್ಗುರೋ ।
ದೇವಮಾವಾಹಯಿಷ್ಯಾಮಿ ಭೋಗಿಭೋಗಶಯಂ ಪ್ರಭುಂ　　॥ ೮೨ ॥

---

೭೮–೮೧. ಪದಗಳಿಂದ ಭೂಷಿತವಾದ ಋಗ್ವೇದವನ್ನು ಆವಾಹಿಸುತ್ತೇನೆ. ಬ್ರಹ್ಮಮೂರ್ತಿಯಾಗಿಯೂ, ವರಪ್ರದನಾಗಿಯೂ ಇರುವ ಋಗ್ವೇದವೇ ಇಲ್ಲಿ, ಬಂದು ಸಾನ್ನಿಧ್ಯ ಹೊಂದು. ಬಹಳ ಪ್ರಿಯವಾದ ಯಜುರ್ವೇದವನ್ನು ಆವಾಹಿಸುತ್ತೇನೆ. ಇಂದ್ರ ಗಣಗಳಿಗೆ ನಾಯಕನಾಗಿರುವ ಯಜುರ್ವೇದವೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಶುಭಕರವಾದ ಅಥರ್ವವೇದವನ್ನೂ ನಾನು ಆವಾಹಿಸುತ್ತೇನೆ. ಸರ್ವಕರ್ಮಗಳಲ್ಲಿಯೂ ಫಲಪ್ರದವಾದ ಅಥರ್ವವೇದವೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಸರ್ಪಾಸನನಾಗಿರುವ ಪರವಾಸುದೇವನನ್ನು ಆವಾಹಿಸುತ್ತೇನೆ. ಜಗದ್ಗುರುವೂ, ಸರ್ಪಾಸನನೂ ಆಗಿರುವ ಪ್ರಭುವೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೮೨–೮೫. ಲಕ್ಷ್ಮೀ ಸಹಾಯನಾಗಿಯೂ, ವರಪ್ರದನಾಗಿಯೂ, ಲೋಕಸಾಕ್ಷಿಯಾಗಿಯೂ ಇರುವ ಸರ್ಪಭೋಗಶಾಯಿಯಾದ ಪ್ರಭುವನ್ನು ಆವಾಹಿಸುತ್ತೇನೆ. ಭೋಗಿಭೋಗಶಾಯಿಯಾಗಿಯೂ, ಪುಂಡರೀಕಾಕ್ಷನಾಗಿಯೂ, ಲೋಕತ್ರಯನಾಥನಾಗಿಯೂ, ಗೋವಿಂದನಾಗಿಯೂ, ಮಧುಕೈಟಭನಾಶಕನಾಗಿಯೂ ಇರುವ ಲಕ್ಷ್ಮೀಪತಿಯೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ತ್ರಿವಿಕ್ರಮಾವತಾರಶಾಲಿಯಾದ ವಿಷ್ಣುವನ್ನು ಆವಾಹಿಸುತ್ತೇನೆ. ಎಲ್ಲಾ ಲೋಕಗಳನ್ನೂ ಅತಿಕ್ರಮಿಸಿ

ಲಕ್ಷ್ಮೀಸಹಾಯಂ ವರದಂ ಲೋಕಸಾಕ್ಷಿಣಮವ್ಯಯಂ ।
ಏಹ್ಯೇಹಿ ಪುಂಡರೀಕಾಕ್ಷ ಭೋಗಿಭೋಗಶಯಾಚ್ಯುತ ॥ ೮೩ ॥

ತ್ರೈಲೋಕ್ಯನಾಥ ಗೋವಿಂದ ಮಧುಕೈಟಭಸೂದನ ।
ದೇವಮಾವಾಹಯಿಷ್ಯಾಮಿ ವಿಷ್ಣುದೇವಂ ತ್ರಿವಿಕ್ರಮಂ ॥ ೮೪ ॥

ಸಮಸ್ತಭುವನಾತೀತ ಪಾದಾಕ್ರಾಂತಜಗತ್ತ್ರಯ ।
ತ್ರಿವಿಕ್ರಮ ತ್ವಮಭ್ಯೇಹಿ ದೈತ್ಯದೀನಾಕ್ಷಿವೀಕ್ಷಿತ ॥ ೮೫ ॥

ವಿಕಚೋತ್ಫುಲ್ಲನಯನೈಃ ತ್ರಿದಶೈಃ ಶತವೀಕ್ಷಿತ ।
ಅಹಮಾವಾಹಯಿಷ್ಯಾಮಿ ವಿಶ್ವರೂಪಧರಂ ವಿಭುಂ ॥ ೮೬ ॥

ತ್ವಸಂತಮನಿಶಂ ವಕ್ತ್ರೈಃ ಭೂತಗ್ರಾಮಮಶೇಷತಃ ।
ಸೃಜನ್ತಂ ಚ ಮಹಾರಾಜ ಸರ್ವಭೂತಾನ್ಯನೇಕಶಃ ॥ ೮೭ ॥

ಧಾರಯಂತಂ ಶರೀರೇಣ ಸರ್ವಂ ಜಗದಿದಂ ತಥಾ ।
ವಿಶ್ವರೂಪತ್ವಮಭ್ಯೇಹಿ ಸರ್ವಾಯುಧವಿಭೂಷಿತ ॥ ೮೮ ॥

---

ವೃದ್ಧಿ ಹೊಂದಿದವನೇ ಜಗತ್ರಯವನ್ನು ಪಾದದಿಂದ ಆಕ್ರಮಿಸಿದವನೇ ದೈತ್ಯರ ದೀನದೀನವಾದ ಕಣ್ಣುಗಳಿಂದ ನೋಡಲ್ಪಟ್ಟವನೇ ದೇವತೆಗಳಿಂದ ಸಂತೋಷದಿಂದ ಅರಳಿದ ಕಣ್ಣುಗಳಿಂದ ಅನೇಕ ಬಾರಿ ನೋಡಲ್ಪಟ್ಟವನೇ, ತ್ರೀವಿಕ್ರಮಮೂರ್ತಿಯೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೮೬-೮೯ ವಿಶ್ವರೂಪಿಯಾಗಿ ಯಾವಾಗಲೂ ಅನೇಕ ಮುಖಗಳಿಂದ ಸಿಟ್ಟು ಸುರು ಬಿಡುತ್ತಲೂ, ಅನೇಕ ವಿಧದಲ್ಲಿ ಪ್ರಾಣಿಗಳನ್ನು ಸೃಷ್ಟಿಸುತ್ತಲೂ ತನ್ನ ದೇಹದಿಂದ ಅನೇಕ ಪ್ರಾಣಿಗಳನ್ನೂ, ಜಗತ್ತನ್ನೂ ಧರಿಸಿಯೂ ಇರುವ ವಿಶ್ವರೂಪಿಯಾದ ಪ್ರಭುವನ್ನು ಆವಾಹಿಸುತ್ತೇನೆ. ಸರ್ವಾಯುಧಧಾರಿಯಾಗಿಯೂ, ಕಾರಣಭೂತವಾದ ಸರ್ವಾತ್ಮಕನಾಗಿ ನಾನಾ ವರ್ಣಗಳಿಗೆ ಧಾರಕನೂ, ಅಪಹಾರಕನೂ ಆಗಿಯೂ, ಎಲ್ಲಾ ಲೋಕಗಳನ್ನೂ ದೇಹದಲ್ಲಿ ಹೊಂದಿದವನಾಗಿಯೂ, ಜಗತ್ಕಾರಣಕ್ಕೂ ಕಾರಣರೂಪಿಯಾಗಿಯೂ; ಗಾಂಭೀರ್ಯಾತಿಶಯದಿಂದ ದುರ್ನಿರೀಕ್ಷನಾಗಿಯೂ

**ಸರ್ವಭೂತೇನ ರೂಪೇಣ ನಾನಾವರ್ಣಧರಾವಹ ।**
**ದೇಹಸ್ಥ ಶೇಷಭುವನ ಜಗತ್ಕಾರಣಕಾರಣ ॥ ೮೯ ॥**

**ದುರ್ನಿರೀಕ್ಷ್ಯಾತಿಗಂಭೀರ ಮಾಯಾದರ್ಶಿತವಿಗ್ರಹ ।**
**ದೇವಮಾವಾಹಯಿಷ್ಯಾಮಿ ಮತ್ಸ್ಯಂ ಸಲಿಲಗೋಚರಂ ॥ ೯೦ ॥**

**ಮತ್ಸ್ಯದೇವ ತ್ವಮಭ್ಯೇಹಿ ಲೋಕಜೀವಧರಾಚ್ಯುತ ।**
**ಹಂಸಮಾವಾಹಯಿಷ್ಯಾಮಿ ದೇವಂ ಜ್ಞಾನಪ್ರದಂ ವಿಭುಂ ॥ ೯೧ ॥**

**ಹಂಸ ಶೀಘ್ರಂ ತ್ವಮಭ್ಯೇಹಿ ಸರ್ವಾಜ್ಞಾನವಿನಾಶನ ।**
**ಕೂರ್ಮಮಾವಾಹಯಿಷ್ಯಾಮಿ ಧೃತಮಂದರಪರ್ವತಂ ॥ ೯೨ ॥**

**ಏಹ್ಯೇಹಿ ಭಗವನ್ ಕೂರ್ಮ ಶ್ರೀನೋತ್ಪತ್ತಿಕರಾಚ್ಯುತ ।**
**ದೇವಮಾವಾಹಯಿಷ್ಯಾಮಿ ಸ್ತ್ರೀರೂಪಂ ಧರ್ಮವಿಶ್ವರಂ ॥ ೯೩ ॥**

**ಸ್ತ್ರೀರೂಪಧಾರಿನ್ ಅಭ್ಯೇಹಿ ಸುರಸೋಮಪ್ರದಾಯಕ ।**
**ನರಮಾವಾಹಯಿಷ್ಯಾಮಿ ದೇವಂ ತಪಸಿ ನಿಷ್ಠಿತಂ ॥ ೯೪ ॥**

---

ವಿಚಿತ್ರ ಸ್ವಸಂಕಲ್ಪದಿಂದ ಅನೇಕ ದೇಹಗಳನ್ನು ತೋರಿಸುವವನಾಗಿಯೂ ಇರುವ ವಿಶ್ವರೂಪಿಯಾದ ಪರಮಾತ್ಮನೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೯೦-೯೪ ಜಲಪ್ರಪಂಚಗೋಚರನಾದ ಮತ್ಸ್ಯದೇವನನ್ನು ಆವಾಹಿಸುತ್ತೇನೆ. ಲೋಕದ ಜೀವಗಳೆಲ್ಲವನ್ನೂ ಧರಿಸಿರುವ ಮತ್ಸ್ಯಪ್ರಭುವೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಜ್ಞಾನಪ್ರದನಾದ ಹಂಸಾವತಾರಹೊಂದಿರುವ ಪ್ರಭುವನ್ನು ಆವಾಹಿಸುತ್ತೇನೆ ಸರ್ವಪ್ರಕಾರಾಜ್ಞಾನನಾಶಕನಾದ ಹಂಸಪ್ರಭುವೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಮಂದರಪರ್ವತವನ್ನೂ ಧರಿಸಿದ ಕೂರ್ಮರೂಪಿಯಾದ ಪರಮಾತ್ಮನನ್ನು ಆವಾಹಿಸುತ್ತೇನೆ. ಲಕ್ಷ್ಮಿಯ ಉತ್ಪತ್ತಿಗೂ ಕಾರಣನಾದ ಮಹಾತ್ಮನಾದ ಕೂರ್ಮನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಸ್ತ್ರೀರೂಪ ಹೊಂದಿದ ಧರ್ಮಸ್ವರೂಪನೇ ಆದ ಪ್ರಭುವನ್ನು ಆವಾಹಿಸುತ್ತೇನೆ. ದೇವತೆಗಳಿಗೆ ಸೋಮದಂತೆ ತೃಪ್ತಿಕರನಾದ ಅಮೃತವನ್ನು ಪ್ರದಾನಮಾಡಿದವನೇ, ಮೋಹಿನೀರೂಪಧಾರಿಯಾದ ಪ್ರಭುವೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ತಪಸ್ಸಿನಲ್ಲೇ ನಿರತನಾದ ನರರೂಪಿಯನ್ನು ಆವಾಹಿಸುತ್ತೇನೆ. ಧರ್ಮಸ್ವರೂಪನೂ ಜಗತ್ಪಾಲಕನೂ ಆದ ನರನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು.

ನರಾಭ್ಯೇಹಿ ಮಹಾಭಾಗ ಧರ್ಮಮೂರ್ತೇ ಜಗತ್ಪತೇ ।
ದೇವಮಾವಾಹಯಿಷ್ಯಾಮಿ ತಥಾ ನಾರಾಯಣಂ ಪ್ರಭುಂ ॥ ೯೫ ॥

ನಾರಾಯಣ ಸಮಭ್ಯೇಹಿ ಸರ್ವಪಾಪಹರಾವ್ಯಯ ।
ಹರಿಮಾವಾಹಯಿಷ್ಯಾಮಿ ದೇವೇಶಂ ಕನಕಪ್ರಭಂ ॥ ೯೬ ॥

ಹರೇ ದೇವ ತ್ವಮಭ್ಯೇಹಿ ಪರದರ್ಪವಿನಾಶಕ ।
ಕೃಷ್ಣಮಾವಾಹಯಿಷ್ಯಾಮಿ ಸಜಲಾಂಬುದಸನ್ನಿಭಂ ॥ ೯೭ ॥

ಕೃಷ್ಣಾಭ್ಯೇಹಿ ಮಹಾಭಾಗ ದೇವದೇವ ಜಗತ್ಪ್ರಿಯ ।
ದೇವಮಾವಾಹಯಿಷ್ಯಾಮಿ ದತ್ತಾತ್ರೇಯಂ ತಪೋನ್ವಿತಂ ॥ ೯೮ ॥

ದತ್ತಾತ್ರೇಯ ತ್ವಮಭ್ಯೇಹಿ ವೇದೋದ್ಧರಣತತ್ಪರ ।
ಅಹಮಾವಾಹಯಿಷ್ಯಾಮಿ ವಾಲ್ಮೀಕಿಂ ತಪಸಾಂನಿಧಿಂ ॥ ೯೯ ॥

ವಾಲ್ಮೀಕೇ ತ್ವಮಿಹಾಭ್ಯೇಹಿ ವೇದೋದ್ಧರಣತತ್ಪರ ।
ರಾಮಮಾವಾಹಯಿಷ್ಯಾಮಿ ಹತಕ್ಷತ್ರಿಯಮಂಡಲಂ ॥ ೧೦೦ ॥

---

೯೫-೯೮. ಪ್ರಭುವಾದ ನಾರಾಯಣನನ್ನು ಆವಾಹಿಸುತ್ತೇನೆ. ಸರ್ವಪಾಪ ನಾಶಕನೂ ಶಾಶ್ವತನೂ ಆದ ನಾರಾಯಣನೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು ಸುವರ್ಣಪ್ರಭೆಯುಳ್ಳ ದೇವನಾಯಕನಾದ ಹರಿಯನ್ನು ಆವಾಹಿಸುತ್ತೇನೆ ಶತ್ರು ದರ್ಪನಾಶಕನಾದ ಹರಿಯೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ನೀಲಮೇಘ ದಂತಿರುವ ಕೃಷ್ಣನನ್ನು ಆವಾಹಿಸುತ್ತೇನೆ. ದೇವಾದಿದೇವನಾಗಿಯೂ, ಜಗತ್ಪ್ರಿಯ ನಾಗಿಯೂ, ಇರುವ ಕೃಷ್ಣನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ತಪೋನಿರತನಾದ ದತ್ತಾತ್ರೇಯಮೂರ್ತಿಯನ್ನು ಆವಾಹಿಸುತ್ತೇನೆ. ವೇದೋದ್ಧಾರದಲ್ಲಿ ಆಸಕ್ತನಾದ ದತ್ತಾತ್ರೇಯನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೯೯-೧೦೩ ತಪೋನಿಧಿಯಾದ ವಾಲ್ಮೀಕಿಯನ್ನು ಆವಾಹಿಸುತ್ತೇನೆ. ವೇದೋದ್ಧಾರಕನಾದ ವಾಲ್ಮೀಕಿಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು ಕ್ಷತ್ರಿಯ ನಾಶಕನಾದ ಪರಶುರಾಮನನ್ನು ಆವಾಹಿಸುತ್ತೇನೆ. ಜಟಾಮಂಡಲದಿಂದ ದುರ್ನಿ ರೀಕ್ಷನಾದ ಭಾರ್ಗವನೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಜ್ವಲಿಸುತ್ತಿರುವ

ಭಾರ್ಗವಾಭ್ಯೇಹಿ ಮೇ ನಾಥ ಜಟಾಮಂಡಲದುರ್ದೃಶ ।
ಆವಾಹನಂ ಕರಿಷ್ಯಾಮಿ ಪರಶೋಃ ದೀಪ್ತತೇಜಸಃ　　॥ ೧೦೧ ॥

ಆಗಚ್ಛ ಪರಶೋ ಶೀಘ್ರಂ ಲಕ್ಷ್ಮೀಕೃತವಸುಂಧರ ।
ಪೃಥುಮಾವಾಹಯಿಷ್ಯಾಮಿ ಚಕ್ರವರ್ತಿನಮೂರ್ಜಿತಂ　　॥ ೧೦೨ ॥

ಪೃಥೋ ಶೀಘ್ರಂ ತ್ವಮಭ್ಯೇಹಿ ಪೃಥ್ವೀನಾಥ ಮಹಾಬಲ ।
ರಾಮಮಾವಾಹಯಿಷ್ಯಾಮಿ ಕೃತರಾಕ್ಷಸನಿಗ್ರಹಂ　　॥ ೧೦೩ ॥

ರಾಮ ಶೀಘ್ರಂ ತ್ವಮಭ್ಯೇಹಿ ಧರ್ಮಸೇತೋ ದುರಾಸದ ।
ಆಹಮಾವಾಹಯಿಷ್ಯಾಮಿ ಪ್ರದ್ಯುಮ್ನಂ ಭರತಂ ವಿಭುಂ　　॥ ೧೦೪ ॥

ಭರತ ತ್ವಮಿಹಾಭ್ಯೇಹಿ ಕೃತಗನ್ಧರ್ವನಿಗ್ರಹ ।
ಅಹಮಾವಾಹಯಿಷ್ಯಾಮಿ ಲಕ್ಷ್ಮಣಂ ರಿಪುನಾಶನಂ　　॥ ೧೦೫ ॥

ಲಕ್ಷ್ಮಣ ತ್ವಮಿಹಾಭ್ಯೇಹಿ ಮೇಘನಾದಾಸ್ತ್ರಭಾಸ್ಕರ ।
ಆಹಮಾವಾಹಯಿಷ್ಯಾಮಿ ಶತ್ರುಘ್ನಂ ದೀಪ್ತತೇಜಸಂ　　॥ ೧೦೬ ॥

ರಾಮನ ಕೊಡಲಿಯನ್ನು ಆವಾಹಿಸುತ್ತೇನೆ. ಭೂಮಂಡಲವನ್ನೇ ಲಕ್ಷ್ಮೀಕರಿಸಿದ ಪರಶುವೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಚಕ್ರವರ್ತಿಯೂ, ಬಲಶಾಲಿಯೂ ಆದ ಪೃಥುವನ್ನು ಆವಾಹಿಸುತ್ತೇನೆ ಪೃಥ್ವೀಪತಿಯಾದ ಪೃಥುವೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು ರಾಕ್ಷಸರೆಲ್ಲರನ್ನೂ ನಿಗ್ರಹಿಸಿದ ದಶರಥರಾಮನನ್ನು ಆವಾಹಿಸುತ್ತೇನೆ. ಧರ್ಮವ್ಯವಸ್ಥಾಪಕನೂ, ಅಜೇಯನೂ ಆದ ರಾಮನೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೧೦೪ ೧೦೬. ಪ್ರದ್ಯುಮ್ನರೂಪಿಯಾದ ಭರತನನ್ನು ಆವಾಹಿಸುತ್ತೇನೆ. ಗಂಧರ್ವನಿಗ್ರಹವನ್ನು ಮಾಡಿದ ಭರತನೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಶತ್ರುನಾಶಕನಾದ ಲಕ್ಷ್ಮಣನನ್ನು ಆವಾಹಿಸುತ್ತೇನೆ. ಮೇಘನಾದನ ಅಸ್ತ್ರಗಳಿಗೆ ಭಾಸ್ಕರನಂತೆ ದಾಹಕನಾದ ಲಕ್ಷ್ಮಣನೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ತೇಜಸ್ವಿಯಾದ ಶತ್ರುಘ್ನನನ್ನು ಆವಾಹಿಸುತ್ತೇನೆ. ಲವಣಾಸುರಸಂಹಾರಿಯಾದ ಶತ್ರುಘ್ನನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು. ವೇದಗಳನ್ನು ವಿಭಾಗಮಾಡಿದ ಜಗತ್ಪೂಜ್ಯ

ಶತ್ರುಘ್ನ ಶೀಘ್ರಮಭ್ಯೇಹಿ ಲವಣಾಸುರಮರ್ದನ ।
ವ್ಯಾಸಮಾವಾಹಯಿಷ್ಯಾಮಿ ವೇದವ್ಯಾಸಂ ಜಗದ್ಗುರುಂ ॥ ೧೦೭ ॥

ವೇದವ್ಯಾಸ ತ್ವಮಭ್ಯೇಹಿ ಸರ್ವಧರ್ಮಪ್ರದರ್ಶಕ ।
ಅಹಮಾವಾಹಯಿಷ್ಯಾಮಿ ಧರ್ಮಪುತ್ರಂ ಯುಧಿಷ್ಠಿರಂ ॥ ೧೦೮ ॥

ಯುಧಿಷ್ಠಿರ ತ್ವಮಭ್ಯೇಹಿ ಸರ್ವಧರ್ಮಭೃತಾಂ ವರ ।
ಅಹಮಾವಾಹಯಿಷ್ಯಾಮಿ ಭೀಮಂ ಮಾರುತಪುತ್ರಕಂ ॥ ೧೦೯ ॥

ಭೀಮಸೇನ ತ್ವಮಭ್ಯೇಹಿ ಶತ್ರುನಾಶ ತಮೋಹರ ।
ಅಹಮಾವಾಹಯಿಷ್ಯಾಮಿ ಪಾರ್ಥಂ ರಿಪುನಿಷೂದನಂ ॥ ೧೧೦ ॥

ಅರ್ಜುನಾಭ್ಯೇಹಿ ಮೇ ಶೀಘ್ರಂ ಲಕ್ಷ್ಮೀಕೃತವಸುಂಧರ ।
ಅಹಮಾವಾಹಯಿಷ್ಯಾಮಿ ನಕುಲಂ ರೂಪಶೋಭಿತಂ ॥ ೧೧೧ ॥

ನಕುಲ ತ್ವಮಿಹಾಭ್ಯೇಹಿ ಶಂಖಚರ್ಮಧರಾಚ್ಯುತ ।
ಅಹಮಾವಾಹಯಿಷ್ಯಾಮಿ ಸಹದೇವಂ ರಣಪ್ರಿಯಂ ॥ ೧೧೨ ॥

---

ನಾದ ವ್ಯಾಸಮುನಿಯನ್ನು ಆವಾಹಿಸುತ್ತೇನೆ. ಸರ್ವಧರ್ಮಪ್ರದರ್ಶಕನಾದ ವೇದ ವ್ಯಾಸಮುನಿಯೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೧೦೮–೧೧೧. ಧರ್ಮಪುತ್ರನಾದ ಯುಧಿಷ್ಠಿರನನ್ನು ಆವಾಹಿಸುತ್ತೇನೆ. ಧಾರ್ಮಿಕಾಗ್ರೇಸರನಾದ ಯುಧಿಷ್ಠಿರನೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು ವಾಯು ಪುತ್ರನಾದ ಭೀಮನನ್ನು ಆವಾಹಿಸುತ್ತೇನೆ. ಶತ್ರುನಾಶಕನಾಗಿಯೂ, ತಮೋಗುಣ ನಾಶಕನಾಗಿಯೂ ಇರುವ ಭೀಮಸೇನನೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಶತ್ರುಸಂಹಾರಿಯಾದ ಅರ್ಜುನನನ್ನು ಆವಾಹಿಸುತ್ತೇನೆ. ಭೂಮಿಯನ್ನೆ ತೃಣೀ ಕರಿಸಿದ ಅರ್ಜುನನೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಸುರೂಪಿಯಾದ ನಕುಲ ನನ್ನು ಆವಾಹಿಸುತ್ತೇನೆ. ಶಂಖ, ಗುರಾಣಿ ಇವನ್ನು ಧರಿಸಿರುವ ನಕುಲನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೧೧೨-೧೧೬. ಯುದ್ಧಪ್ರಿಯನಾದ ಸಹದೇವನನ್ನು ಆವಾಹಿಸುತ್ತೇನೆ. ಸುರೂಪವೆಂಬ ಧನದಿಂದ ಕೂಡಿರುವ ಸಹದೇವನೇ ಇಲ್ಲಿ ಬಂದು ಸಾನ್ನಿಧ್ಯ ಹೊಂದು.

**ಸಹದೇವ ತ್ವಮಭ್ಯೇಹಿ ರೂಪದ್ರವಿಣಸಂಯುತ ।**
**ಕೃಷ್ಣಾಮಾವಾಹಯಿಷ್ಯಾಮಿ ಸ್ವರ್ಗಲಕ್ಷ್ಮೀಂ ಮನೋಹರಾಂ ॥ ೧೧೩ ॥**

**ಯಾಜ್ಞಸೇನಿ ತ್ವಮಭ್ಯೇಹಿ ಲಕ್ಷ್ಮೀಕೃತವಸುಂಧರೇ ।**
**ಸೀತಾಮಾವಾಹಯಿಷ್ಯಾಮಿ ರಾಮಪತ್ನೀಂ ಯಶಸ್ವಿನೀಂ ॥ ೧೧೪ ॥**

**ಸೀತೇ ದೇವಿ ತ್ವಮಭ್ಯೇಹಿ ಮಹೀತಲಮುತ್ಥಿತೇ ।**
**ಅಹಮಾವಾಹಯಿಷ್ಯಾಮಿ ದೇವಕೀಂ ಕೃಷ್ಣಮಾತರಂ ॥ ೧೧೫ ॥**

**ದೇವಕಿ ತ್ವಂ ಸಮಭ್ಯೇಹಿ ದೇವಮಾತರ್ಜಗತ್ಪ್ರಿಯೆ ।**
**ಅಹಮಾವಾಹಯಿಷ್ಯಾಮಿ ಯಶೋದಾಂ ಜಗತಃ ಪ್ರಿಯಾಂ ॥ ೧೧೬ ॥**

**ಯಶೋದೆ ತ್ವಮಿಹಾಭ್ಯೇಹಿ ಸಂವರ್ಧಿತ ಜನಾರ್ದನೆ ।**
**ದೇವೀಮಾವಾಹಯಿಷ್ಯಾಮಿ ಏಕಾನಂಶೇತಿ ವಿಶ್ರುತಾಂ ॥ ೧೧೭ ॥**

**ಏಕಾನಂಶೇ ತ್ವಮಭ್ಯೇಹಿ ಕೃಷ್ಣರಕ್ಷಾರ್ಥಮುದ್ಯತೆ ।**
**ದೇವೀಮಾವಾಹಯಿಷ್ಯಾಮಿ ರುಕ್ಮಿಣೀಂ ಕೃಷ್ಣವಲ್ಲಭಾಂ ॥ ೧೧೮ ॥**

---

ಸ್ವರ್ಗಶೋಭೆಯಂತಿರುವ ರಮ್ಯಳಾದ ದ್ರೌಪದಿಯನ್ನು ಆವಾಹಿಸುತ್ತೇನೆ. ಭೂಮಂಡಲವನ್ನೇ ಸಾರ್ಥಕಗೊಳಿಸಿದ ಯಾಜ್ಞಸೇನಿಯೇ ಇಲ್ಲಿ, ಬಂದು ಸಾನ್ನಿಧ್ಯ ಹೊಂದು. ಯಶಸ್ವಿನಿಯಾದ ರಾಮಪತ್ನಿಯಾದ ಸೀತಾದೇವಿಯನ್ನು ಆವಾಹಿಸುತ್ತೇನೆ. ಭೂಮಿಯಿಂದ ಆವಿರ್ಭಾವ ಹೊಂದಿದ ಸೀತಾದೇವಿಯೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಕೃಷ್ಣನ ತಾಯಿಯಾದ ದೇವಕಿಯನ್ನು ಆವಾಹಿಸುತ್ತೇನೆ. ಕೃಷ್ಣನಿಗೆ ತಾಯಿಯಾಗಿಯೂ, ಜಗತ್ಪ್ರಿಯಳಾಗಿಯೂ ಇರುವ ದೇವಕಿಯೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು ಜಗತ್ಪ್ರಿಯಳಾದ ಯಶೋದಾದೇವಿಯನ್ನು ಆವಾಹಿಸುತ್ತೇನೆ ಜನಾರ್ಧನನನ್ನು ಅಭಿವೃದ್ಧಿಗೊಳಿಸಿದ ಯಶೋದಾದೇವಿಯೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು.

೧೧೭-೧೨೦. ಏಕಾನಾಂಶಿ ಎಂದು ಪ್ರಸಿದ್ಧಳಾದ ದೇವಿಯನ್ನು ಆವಾಹಿಸುತ್ತೇನೆ. ಕೃಷ್ಣನ ರಕ್ಷಣೆಗಾಗಿ ಪ್ರಯತ್ನಿಸಿದ ಏಕಾನಾಂಶೆಯೇ, ಇಲ್ಲಿ ಬಂದು ಸಾನ್ನಿಧ್ಯ ಹೊಂದು. ಕೃಷ್ಣನ ಪ್ರಿಯಳಾದ ರುಕ್ಮಿಣೀದೇವಿಯನ್ನು ಆವಾಹಿಸುತ್ತೇನೆ. ಜಗತ್ತಿನಲ್ಲಿಯೇ ಮುಖ್ಯಸುಂದರಿಯಾದ ರುಕ್ಮಿಣಿಯೇ, ಇಲ್ಲಿ ಬಂದು ಸಾನ್ನಿಧ್ಯ

**ರುಕ್ಮಿಣಿ ತ್ವಮಿಹಾಭ್ಯೇಹಿ ಜಗತಾಮೇಕಸುಂದರಿ ।**
**ದೇವೀಮಾವಾಹಯಿಷ್ಯಾಮಿ ಸತ್ಯಭಾಮಾಂ ಮನೋಹರಾಂ ॥ ೧೧೯ ॥**

**ಸತ್ಯಭಾಮೆ ತ್ವಮಭ್ಯೇಹಿ ದೇವಿ ಕೇಶವವಲ್ಲಭೆ ।**
**ದೇವೀಸ್ತ್ವಾವಾಹಯಿಷ್ಯಾಮಿ ಕೃಷ್ಣಪತ್ನೀರಹಂ ಶುಭಾಃ ॥ ೧೨೦ ॥**

**ದೇವ್ಯಃ ಸರ್ವಾಃ ಸಮಾಯಾನ್ತು ಗಾಂಧಾರೀಪ್ರಮುಖಾಸ್ತ್ವಿಹ ।**
**ರಾಮಮಾವಾಹಯಿಷ್ಯಾಮಿ ಮದವಿಭ್ರಾಂತಲೋಚನಂ ॥ ೧೨೧ ॥**

**ಕುಂಡಲೈಕಧರಂ ಶಾಂತಂ ವನಮಾಲಾವಿಭೂಷಿತಂ ।**
**ಏಹಿ ರಾಮ ಮಹಾಭಾಗ ರೇವತೀದಯಿತಾಚ್ಯುತ ॥ ೧೨೨ ॥**

**ಹತಪ್ರಲಂಬ ಸೀರಾಗ್ರವ್ಯಾಕೃಷ್ಟಯಮುನೋದಕ ।**
**ಕೃಷ್ಣಮಾವಾಹಯಿಷ್ಯಾಮಿ ತೋಯಪೂರ್ಣಾಮ್ಬುದಚ್ಛವಿಂ ॥ ೧೨೩ ॥**

**ಚಾಣೂರಬಲದರ್ಪಘ್ನಂ ಕಂಸಾಸುರವಿನಾಶನಂ ।**
**ಏಹಿ ಕೃಷ್ಣ ಮಹಾಭಾಗ ಲಕ್ಷ್ಮೀಕೃತವಸುಂಧರ ॥ ೧೨೪ ॥**

---

ಹೊಂದು. ರಮಣೀಯಳಾದ ಸತ್ಯಭಾಮಾದೇವಿಯನ್ನು ಆವಾಹಿಸುತ್ತೇನೆ. ಕೇಶವನ ದಯಿತೆಯಾದ ಸತ್ಯಭಾಮಾದೇವಿಯೇ, ಇಲ್ಲಿ ಬಂದು ಸಾನ್ನಿಧ್ಯಹೊಂದು. ಕೃಷ್ಣನ ಪ್ರಿಯಪತ್ನಿಯರಾದ ಇತರ ದೇವಿಗಳನ್ನೂ ಆವಾಹಿಸುತ್ತೇನೆ. ಗಾಂಧಾರಿಯೇ ಮೊದಲಾದ ಎಲ್ಲಾ ಕೃಷ್ಣಪತ್ನಿಯರೂ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ.

೧೨೧-೧೨೬. ಮದದಿಂದ ತಿರುಗುತ್ತಿರುವ ಕಣ್ಣುಗಳುಳ್ಳ ಕುಂಡಲಧಾರಿಯಾದ ವನಮಾಲಾಭೂಷಿತನೂ ಶಾಂತನೂ ಆದ ಬಲರಾಮನನ್ನು ಆವಾಹಿಸುತ್ತೇನೆ. ರೇವತಿಯ ಪ್ರಿಯನಾಗಿಯೂ, ಪ್ರಲಮ್ಬಾಸುರ ನಾಶಕನಾಗಿಯೂ ನೇಗಿಲಿನ ಅಗ್ರಭಾಗದಿಂದ ಯಮುನಾನದಿಯ ಪ್ರವಾಹವನ್ನು ಆಕರ್ಷಿಸಿದವನಾದ ನೀನು ಇಲ್ಲಿ ಬಂದು ಸಾನ್ನಿಧ್ಯಹೊಂದು. ನೀಲಮೇಘದಂತೆ ದೇಹಕಾಂತಿಯಿಂದ ಕೂಡಿಯೂ, ಚಾಣೂರನ ಬಲವನ್ನು ನಾಶಪಡಿಸಿ ಕಂಸನನ್ನೂ ಸಂಹರಿಸಿದ ಕೃಷ್ಣನನ್ನು ಆವಾಹಿಸುತ್ತೇನೆ ಭೂಮಂಡಲವನ್ನೇ ಕಟಾಕ್ಷಿಸಿದವನೂ, ದಾನವಾಗ್ರೇಸರರನ್ನು ನಾಶಪಡಿಸಿಯೂ ಗೋವರ್ಧನ ಪರ್ವತವನ್ನೇ ಉದ್ಧರಿಸಿಯೂ ಇರುವ

ನಿರಸ್ತದಾನವಶ್ರೇಷ್ಠ ಧೃತಗೋವರ್ಧನಾಚಲ ।
ಅಹಮಾವಹಯಿಷ್ಯಾಮಿ ಪ್ರದ್ಯುಮ್ನಂ ಮಕರಧ್ವಜಂ ॥ ೧೨೫ ॥

ದೇವಾರಿಶಂಬರಪ್ರಾಣತಸ್ಕರಂ ರತಿವಲ್ಲಭಂ ।
ಪ್ರದ್ಯುಮ್ನ ತ್ವಮಿಹಾಭ್ಯೇಹಿ ಪರಸೈನ್ಯವಿನಾಶನ ॥ ೧೨೬ ॥

ಅಹಮಾವಾಹಯಿಷ್ಯಾಮಿ ಅನಿರುದ್ಧಂ ಜಗದ್ಗುರುಂ ।
ಬಾಣಾಸುರ ಮಹಾಸೈನ್ಯ ಸಮುದ್ರ ಬಡಬಾನಲ ॥ ೧೨೭ ॥

ಅನಿರುದ್ಧ ತ್ವಮಭ್ಯೇಹಿ ಮಹಾಬಲಪರಾಕ್ರಮ ।
ಖಡ್ಗಪಾಣೇ ಮಹಾಭಾಗ ಉಷಾಹೃದಯವರ್ಧನ ॥ ೧೨೮ ॥

ಸಾಂಬಮಾವಾಹಯಿಷ್ಯಾಮಿ ಗದಾಪಾಣಿಂ ಮಹಾಬಲಂ ।
ಏಹಿ ಸಾಂಬ ಮಹಾಭಾಗ ನಾಶಿತಾಶೇಷದಾನವ ॥ ೧೨೯ ॥

ಅಹಮಾವಾಹಯಿಷ್ಯಾಮಿ ಯುಯುಧಾನಂ ಬಲೋತ್ಕಟಂ ।
ಯುಯುಧಾನ ತ್ವಮಭ್ಯೇಹಿ ದೀರ್ಘಬಾಹೋsರಿಮರ್ದನ ॥ ೧೩೦ ॥

---

ಮಹಾಮಹಿಮನಾದ ಕೃಷ್ಣನೇ, ಇಲ್ಲಿ ಬಂದು ಸಾನ್ನಿಧ್ಯಹೊಂದು. ದೇವಶತ್ರುವಾದ ಶಂಬರಾಸುರನನ್ನು ನಾಶಪಡಿಸಿದವನೂ, ರತೀದೇವಿಯ ಪ್ರಿಯನೂ ಮಕರಸಂಬಂಧದಿಂದ ಕಾಂತಿಶಾಲಿಯೂ ಆದ ಪ್ರದ್ಯುಮ್ನನನ್ನು ಆವಾಹಿಸುತ್ತೇನೆ. ಶತ್ರುಸೈನ್ಯನಾಶಕನಾದ ಪ್ರದ್ಯುಮ್ನನೇ, ಇಲ್ಲಿ ಬಂದು ಸಾನ್ನಿಧ್ಯಹೊಂದು.

೧೨೭–೧೩೨. ಜಗದ್ಗುರುವಾದ ಅನಿರುದ್ಧನನ್ನು ಆವಾಹಿಸುತ್ತೇನೆ. ಬಾಣಾಸುರನ ಸೈನ್ಯಸಮುದ್ರಕ್ಕೆ ಬಡಬಾನಲದಂತೆಯೂ ಮಹಾ ಪರಾಕ್ರಮಿಯೂ ಆಗಿರುವ ಮತ್ತು ಖಡ್ಗಧಾರಿಯೂ ಉಷಾಹೃದಯಾನಂದಕರನೂ ಆಗಿರುವ ಅನಿರುದ್ಧನೇ, ಇಲ್ಲಿ ಬಂದು ಸಾನ್ನಿಧ್ಯಹೊಂದು. ಗದಾಪಾಣಿಯಾಗಿಯೂ ಮಹಾಬಲನಾಗಿಯೂ ಇರುವ ಸಾಂಬನನ್ನು ಆವಾಹಿಸುತ್ತೇನೆ. ಎಲ್ಲಾ ದಾನವರನ್ನೂ ನಾಶಪಡಿಸಿದ ಮಹಾಮಹಿಮನಾದ ಸಾಂಬನೇ, ಇಲ್ಲಿ ಬಂದು ಸಾನ್ನಿಧ್ಯಹೊಂದು. ಬಲಶಾಲಿಯಾದ ಯುಯುಧಾನನನ್ನು ಆವಾಹಿಸುತ್ತೇನೆ. ದೀರ್ಘಬಾಹುವಾಗಿಯೂ ಶತ್ರುನಾಶಕ

ಆಹವಾವಾಹಯಿಷ್ಯಾಮಿ ಸೌಭದ್ರಮಪರಾಜಿತಂ ।
ವಸುಭದ್ರಂ ಚ ಧರ್ಮಜ್ಞಂ ನೀಲಾಂಬರಧರಾವುಭೌ ॥ ೧೩೦ ॥

ವಾಸುದೇವಪ್ರತೀಹಾರೌ ಪ್ರಾಪ್ತಹಸ್ತೌ ಸುಲೋಚನೌ ।
ತಪ್ತಜಾಂಬೂನದಾಕಾರೌ ಮಹಾಬಲಪರಾಕ್ರಮೌ ॥ ೧೩೨ ॥

ಸುಭದ್ರ ಶೀಘ್ರಮಾಗಚ್ಛ ಪೂರ್ವದ್ವಾರಸ್ಯ ವಾಮತಃ ।
ಗಣೈಃ ಸಾನುಚರೈಃ ಸಾರ್ಧಂ ಭವಸನ್ನಿಹಿತಃ ಸದಾ ॥ ೧೩೩ ॥

ಆಹವಾವಾಹಯಿಷ್ಯಾಮಿ ತಥಾಷಾಢಂ ಬಲಾನ್ವಿತಂ ।
ಯಜ್ಞಶಾತ್ರಂ ಚ ಧರ್ಮಜ್ಞಂ ಪೀತಾಂಬರಧರಾವುಭೌ ॥ ೧೩೪ ॥

ನೀಲಜೀಮೂತಸಂಕಾಶೌ ತಥಾ ಮುದ್ಗರಧಾರಿಣೌ ।
ಸಂಕರ್ಷಣಪ್ರತೀಹಾರೌ ಚಾರುರೂಪೌ ಮನೋಹರೌ ॥ ೧೩೫ ॥

---

ನಾಗಿಯೂ ಇರುವ ಯುಯುಧಾನನೇ ಇಲ್ಲಿ ಬಂದು ಸಾನ್ನಿಧ್ಯಹೊಂದು ಅಜೇಯನಾದ ಸೌಭದ್ರನನ್ನೂ ಧರ್ಮಜ್ಞನಾದ ವಸುಭದ್ರನನ್ನೂ ಆವಾಹಿಸುತ್ತೇನೆ. ನೀಲವಸ್ತ್ರಧಾರಿಗಳಾದ ಇಬ್ಬರೂ ಇಲ್ಲಿ ಬಂದು ಸಾನ್ನಿಧ್ಯಹೊಂದಲಿ.

೧೩೩–೧೩೪. ಸಿದ್ಧಹಸ್ತರಾಗಿಯೂ, ಸುಲೋಚನರಾಗಿಯೂ ಇರುವ ಪರಾಕ್ರಮಶಾಲಿಗಳೂ, ಚಿನ್ನದಂತೆ ಜ್ವಲಿಸುವ ಆಕಾರವುಳ್ಳವರೂ ಆದ ವಾಸುದೇವನ ಪ್ರತೀಹಾರಿಗಳೂ ಅವರಲ್ಲಿ ಪೂರ್ವದ್ವಾರಕ್ಕೆ ಎಡಭಾಗದಲ್ಲಿ ಸುಭದ್ರನೇ, ನೀನು ಸನ್ನಿಹಿತನಾಗು. ನಿನ್ನ ಅನುಚರರಾದ ಗಣಗಳೊಡನೆ ಯಾವಾಗಲೂ ಇಲ್ಲಿ ಸನ್ನಿಹಿತನಾಗಿರಬೇಕು. ಹಾಗೆಯೇ ಬಲಶಾಲಿಯಾದ ಆಷಾಢನನ್ನೂ ಧರ್ಮಜ್ಞನಾದ ಯಜ್ಞಶಾತನನ್ನೂ ಆವಾಹಿಸುತ್ತೇನೆ. ಪೀತಾಂಬರಧಾರಿಗಳೂ, ಕೃಷ್ಣಮೇಘದಂತಿರುವವರೂ, ಮುದ್ಗರಾಯುಧಧಾರಿಗಳೂ.

೧೩೫–೧೩೬. ರಮ್ಯರೂಪರೂ ಸಂಕರ್ಷಣಪ್ರತೀಹಾರರೂ ಆದ ಅವರುಗಳಲ್ಲಿ ಆಷಾಢನೇ, ನೀನು ದಕ್ಷಿಣದ್ವಾರದ ಎಡಭಾಗದಲ್ಲಿ ನಿನ್ನ ಅನುಚರರಾದ

ಆಷಾಢ ತ್ವಮಿಹಾಗಚ್ಛ ದಕ್ಷಿಣದ್ವಾರವಾಮತಃ ।
ಗಣೈಃ ಸಾನುಚರೈಃ ಸಾರ್ಧಂ ಭವ ಸನ್ನಿಹಿತಃ ಸದಾ ॥ ೧೩೬ ॥

ಯಜ್ಞತಾತ ತ್ವಮಭ್ಯೇಹಿ ದ್ವಾರದಕ್ಷಿಣತೋ ಭವ ।
ಗಣೈಃ ಸಾನುಚರೈಃ ಸಾರ್ಧಂ ಭವ ಸನ್ನಿಹಿತಃ ಸದಾ ॥ ೧೩೭ ॥

ಜಯಮಾವಾಹಯಿಷ್ಯಾಮಿ ದೀಪ್ತತೇಜಸಮಚ್ಯುತಂ ।
ವಿಜಯಂ ಚ ವಿಶಾಲಂ ಚ ಪಾಟಲಾಂಬರಧಾರಿಣೌ ॥ ೧೩೮ ॥

ಶಶಾಙ್ಕಾಂಶುಪ್ರತೀಕಾಶೌ ತಥೋಭೌ ಖಡ್ಗಧಾರಿಣೌ ।
ಪ್ರದ್ಯುಮ್ನಸ್ಯ ಪ್ರತೀಹಾರೌ ಕಾಮದೇವೌ ಸುವರ್ಚಸೌ ॥ ೧೩೯ ॥

ಜಯ ಶೀಘ್ರಂ ತ್ವಮಭ್ಯೇಹಿ ಪಶ್ಚಿಮದ್ವಾರವಾಮತಃ ।
ಗಣೈಃ ಸಾನುಚರೈಃ ಸಾರ್ಧಂ ಭವ ಸನ್ನಿಹಿತಃ ಸದಾ ॥ ೧೪೦ ॥

ವಿಜಯ ತ್ವಮಿಹಾಭ್ಯೇಹಿ ದ್ವಾರದಕ್ಷಿಣತೋ ಭವ ।
ಗಣೈಃ ಸಾನುಚರೈಃ ಸಾರ್ಧಂ ಭವ ಸನ್ನಿಹಿತಃ ಸದಾ ॥ ೧೪೧ ॥

---

ಗಣಗಳೊಡನೆ ಯಾವಾಗಲೂ ಸನ್ನಿಹಿತನಾಗಿರು. ಯಜ್ಞತಾತನೇ, ನೀನು ದ್ವಾರದ ಬಲಭಾಗದಲ್ಲಿ ಬಾ, ನಿನ್ನ ಅನುಚರರಾದ ಎಲ್ಲಾ ಗಣಗಳೊಡನೆ ಯಾವಾಗಲೂ ಸನ್ನಿಹಿತನಾಗಿರು.

೧೩೮–೧೪೧. ಮಹಾತೇಜಸ್ವಿಯಾದ ಜಯ, ಮತ್ತು ವಿಶಾಲಹೃದಯನಾದ ವಿಜಯ, ಪಾಟಲವಸ್ತ್ರಧಾರಿಗಳೂ, ಚಂದ್ರನಂತೆ ಶುಭ್ರರೂ, ಖಡ್ಗಧಾರಿಗಳೂ, ವರ್ಚಸ್ವಿಗಳೂ, ರಮಣೀಯರೂ, ಆಗಿರುವ ಪ್ರದ್ಯುಮ್ನನ ಈ ಪ್ರತೀಹಾರಿಗಳಿಬ್ಬರನ್ನೂ ಆಹ್ವಾನಿಸುತ್ತೇನೆ. ಎಲೈ ಜಯನೇ, ಪಶ್ಚಿಮದ್ವಾರದ ಎಡಭಾಗಕ್ಕೆ ನೀನು ಬಂದು ಸಾನ್ನಿಧ್ಯ ಹೊಂದು. ನಿನ್ನ ಅನುಚರರಾದ ಗಣಗಳೂ ನಿನ್ನೊಡನೆ ಬಂದು ಸರ್ವದಾ ಸಾನ್ನಿಧ್ಯ ಹೊಂದಲಿ. ವಿಜಯನೇ, ದ್ವಾರದ ಬಲಭಾಗದಲ್ಲಿ ನಿನ್ನ ಅನುಚರರಾದ ಗಣಗಳೊಡನೆ ನೀನೂ ಸಾನ್ನಿಧ್ಯ ಹೊಂದು

ಅಹಮಾವಾಹಯಿಷ್ಯಾಮಿ ತಥಾ ಮೋದಂ ಜಗತ್ಪ್ರಿಯಂ ।
ಪ್ರಮೋದಂ ಚ ಮಹಾವೀರ್ಯಂ ಶ್ವೇತಾಂಬರಧರಾವುಭೌ ॥ ೧೪೨ ॥

ಸಿಂದೂರಾರುಣಸಂಕಾಶೌ ಶಕ್ತಿಹಸ್ತೌ ಬಲೋತ್ಕಟೌ ।
ಅನಿರುದ್ಧಪ್ರತೀಹಾರೌ ಮಹಾಬಲಪರಾಕ್ರಮೌ ॥ ೧೪೩ ॥

ಆಮೋದ ಶೀಘ್ರಮಭ್ಯೇಹಿ ದ್ವಾರದಕ್ಷಿಣತೋ ಭವ ।
ಗಣೈಃ ಸಾನುಚರೈಃ ಸಾರ್ಧಂ ಭವ ಸನ್ನಿಹಿತಃ ಸದಾ ॥ ೧೪೪ ॥

ಸರ್ವಾನಾವಾಹಯಿಷ್ಯಾಮಿ ವಾಸುದೇವಗಣಾನಹಂ ।
ವಾಸುದೇವಸಮಾಕಾರಾನ್ವಾಸುದೇವಪರಾಕ್ರಮಾನ್ ॥ ೧೪೫ ॥

ಪ್ರದ್ಯುಮ್ನಸ್ಯ ಸಮಾಕಾರಾನ್ ಪ್ರದ್ಯುಮ್ನಾಭಪರಾಕ್ರಮಾನ್ ।
ಪ್ರದ್ಯುಮ್ನಸ್ಯ ಗಣಾಃ ಶೀಘ್ರಮಾಯಾಂತು ಭುವನೇಶ್ವರಾಃ ॥ ೧೪೬ ॥

---

೧೪೨-೧೪೪. ಹಾಗೆಯೇ ಜಗತ್ಪ್ರಿಯನಾದ ಮೋದನನ್ನೂ, ಮಹಾಪರಾಕ್ರಮಿಯಾದ ಪ್ರಮೋದನನ್ನೂ ಶುಕ್ಲಾಂಬರಧಾರಿಗಳೂ, ಸಿಂದೂರದಂತೆ ಅರುಣವರ್ಣವುಳ್ಳವರೂ, ಶಕ್ತಿಪಾಣಿಗಳೂ, ಬಲಿಷ್ಠರೂ ಆದ ಅನಿರುದ್ಧನ ಪ್ರತೀಹಾರಿಬ್ಬರನ್ನೂ ಆವಾಹಿಸುತ್ತೇನೆ. ಆಮೋದನೇ, ದ್ವಾರದ ದಕ್ಷಿಣಭಾಗದಲ್ಲಿ ನಿನ್ನ ಅನುಚರರಾದ ಗಣಗಳೊಡನೆ ಬಂದು ಸನ್ನಿಹಿತನಾಗು.

೧೪೫-೧೪೬. ವಾಸುದೇವನಿಗೆ ಸಮಾನವಾದ ಆಕಾರ ಮತ್ತು ಪರಾಕ್ರಮಗಳಿಂದ ಕೂಡಿದ ವಾಸುದೇವನ ಪರಿವಾರಗಣವೆಲ್ಲವನ್ನೂ ಆವಾಹಿಸುತ್ತೇನೆ. ಹಾಗೆಯೇ ಪ್ರದುಮ್ನನಿಗೆ ಸಮಾನವಾದ ಆಕಾರ ಮತ್ತು ಪರಾಕ್ರಮಗಳಿಂದ ಕೂಡಿದ ಪ್ರದ್ಯುಮ್ನಗಣಗಳನ್ನೂ ಆವಾಹಿಸುತ್ತೇನೆ. ಎಲ್ಲಾ ಇಷ್ಟಾರ್ಥಗಳನ್ನು ಕೊಡುವವ

ಸರ್ವಕಾಮಪ್ರದಾ ವೀರಾಃ ಸರ್ವೇಶಾಃ ಸರ್ವಶಕ್ತಯಃ ।
ಸರ್ವಾನಾವಾಹಯಿಷ್ಯಾಮಿ ಅನಿರುದ್ಧಗಣಾನಹಂ ॥ ೧೪೭ ॥

ಅನಿರುದ್ಧಸಮಾಕಾರಾನನಿರುದ್ಧಪರಾಕ್ರಮಾನ್ ।
ಅನಿರುದ್ಧಗಣಾಃ ಶೀಘ್ರಮಾಯಾನ್ತು ಭುವನೇಶ್ವರಾಃ ॥ ೧೪೮ ॥

ಸರ್ವಕಾಮಪ್ರದಾವೀರಾಃ ಸರ್ವೇಶಾಃ ಸರ್ವಶಕ್ತಯಃ ।
ಪ್ರಾದುರ್ಭಾವಗತಸ್ಯೇವ ವಿಷ್ಣೋರಮಿತತೇಜಸಃ ॥ ೧೪೯ ॥

ನೋಕ್ತಮಾವಾಹನಂ ಯತ್ರ ವಾಸುದೇವೋಕ್ತಮಂಜಸಾ ।
ಕಾರ್ಯಮಾವಾಹನಂ ತತ್ರ ಸರ್ವಗಸ್ಯ ಮಹಾತ್ಮನಃ ।
ಅಥವಾ ವಿಷ್ಣುರೂಪೋಕ್ತಮೇತತ್ಸಾರಂ ತವೇರಿತಂ ॥ ೧೫೦ ॥

---

ರಾಗಿಯೂ, ಸರ್ವಶಕ್ತರೂ, ವೀರರೂ ಆಗಿರುವ ಪ್ರದ್ಯುಮ್ನಗಣಗಳೆಲ್ಲರೂ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ. ಅನಿರುದ್ಧನಿಗೆ ಸಮಾನವಾದ ಆಕಾರ, ಪರಾಕ್ರಮಗಳನ್ನುಳ್ಳ ಅನಿರುದ್ಧಗಣಗಳನ್ನೂ ಆವಾಹಿಸುತ್ತೇನೆ. ಭುವನೇಶ್ವರರಾದ ಆ ಅನಿರುದ್ಧಗಣಗಳೆಲ್ಲರೂ ಜಾಗ್ರತೆಯಾಗಿ ಇಲ್ಲಿ ಬಂದು ಸಾನ್ನಿಧ್ಯ ಹೊಂದಲಿ.

೧೪೯–೫೫೧. ಇವರೆಲ್ಲರೂ ಸರ್ವಮನೋರಥಪ್ರದರಾಗಿಯೂ, ಸರ್ವಶಕ್ತರಾಗಿಯೂ, ಅವತಾರಹೊಂದಿರುವ ವಿಷ್ಣುವಿನಂತೆಯೇ ಮಹಾತೇಜಸ್ವಿಗಳೂ, ಸರ್ವಪ್ರಭುಗಳೂ ಆಗಿರುತ್ತಾರೆ. ಯಾವ ದೇವತೆಗೆ ಆವಾಹನವನ್ನು ಇಲ್ಲಿ ಬೇರೆಯಾಗಿ ಹೇಳಿಲ್ಲವೋ ಅಂತಹ ದೇವತೆಗೆ ವಾಸುದೇವೋಕ್ತ ಆವಾಹನಕ್ರಮದಿಂದಲೇ ಆಹ್ವಾನಕೊಡಬೇಕು. ವಾಸುದೇವನೇ ಸರ್ವದೇವವ್ಯಾಪಕನಾದುದರಿಂದ ಅದು ಸಮಂಜಸವೇ ಆಗುತ್ತದೆ. ಅಥವಾ ಈ ರೂಪಗಳೆಲ್ಲವೂ ನಾನಾರೂಪನಾದ ವಿಷ್ಣುವಿನ ರೂಪವೆಂದೇ ನಿನಗೆ ಹೇಳಿದಂತಾಗುತ್ತದೆ. ಆವಾಹನದಲ್ಲಿ ಹೇಳಿರುವ

ಆವಾಹನೇ ಯೇ ಕಥಿತಾಸ್ತು ಮಂತ್ರಾಃ
ಜ್ಞೇಯಾಸ್ತ ಏವೇಹ ವಿಬೋಧನೇऽಪಿ ।
ಆವಾಹನೇ ತತ್ರ ವಿಬೋಧನೇ ಚ
ಬುಧ್ಯೈಃ ಪ್ರಯೋಜ್ಯಂ ಯದುವಂಶನಾಥ ॥ ೧೫೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೇಷಸರ್ವದೇವಾವಾಹನವರ್ಣನೋ ನಾಮ
ಷಡುತ್ತರಶತತಮೋऽಧ್ಯಾಯಃ

---

ಮಂತ್ರಗಳನ್ನೇ ವಿಬೋಧನದಲ್ಲಿಯೂ ಉಪಯೋಗಿಸಬೇಕು. ಆವಾಹನ, ವಿಬೋಧನಗಳೆರಡರಲ್ಲೂ ಈ ಮಂತ್ರಗಳೇ ಉಪಯೋಗಿಸಲ್ಪಡುತ್ತವೆಂದೂ ತಿಳಿಯಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಶೇಷಸರ್ವದೇವಾವಾಹನವರ್ಣನವೆಂಬ
ನೂರ ಆರನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಸಪ್ತೋತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

ಪ್ರೋಕ್ತೋ ವಿಬೋಧನೇ ವೀರ ಮಂತ್ರೋ ಹಿ ನ ದಿವೌಕಸಾಂ ।
ವಾಸುದೇವಸ್ಯ ವಕ್ಷ್ಯಾಮಿ ತವ ರಾಜನ್ವಿಬೋಧನಂ ॥ ೧ ॥

ದೇವಂ ವಿಬೋಧಯಿಷ್ಯಾಮಿ ವಾಸುದೇವಮಜಂ ವಿಭುಂ ।
ಅನಾದಿಮಧ್ಯಪರ್ಯಂತಂ ಮಹಾಬಲಪರಾಕ್ರಮಂ ॥ ೨ ॥

ಅನಂತಂ ಸರ್ವಗಂ ನಾಥಂ ಮಹದ್ಭ್ಯೋಽಪಿ ಮಹತ್ತರಂ ।
ಸೂಕ್ಷ್ಮಾತಿಸೂಕ್ಷ್ಮಂ ದೂರಸ್ಥಂ ಸನ್ನಿಕರ್ಷಗತಂ ತಥಾ ॥ ೩ ॥

---

### ನೂರ ಏಳನೆಯ ಅಧ್ಯಾಯ.

೧-೪ ಮಾರ್ಕಂಡೇಯರು ಹೇಳುತ್ತಾರೆ :—ಎಲೈ ದೊರೆಯೇ, ದೇವತೆಗಳ ವಿಬೋಧನಕ್ಕೆ ಉಪಯುಕ್ತವಾದ ಮಂತ್ರವನ್ನು ನಿನಗೆ ಹೇಳಿಲ್ಲ. ವಾಸುದೇವನ ವಿಬೋಧನಕ್ಕೆ ಉಪಯುಕ್ತವಾಗುವ ಮಂತ್ರವನ್ನು ಈಗ ಹೇಳುತ್ತೇನೆ ಕೇಳು. ಜನ್ಮರಹಿತನಾಗಿಯೂ, ನಿಗ್ರಹಾನುಗ್ರಹಸಮರ್ಥನಾಗಿಯೂ, ಆದಿಮಧ್ಯಾಂತ ರಹಿತನಾಗಿಯೂ, ಮಹಾಬಲ ಮತ್ತು ಪರಾಕ್ರಮಶಾಲಿಯಾಗಿಯೂ, ಅಪರಿಚ್ಛೇದ್ಯ ನಾಗಿಯೂ, ಸರ್ವವ್ಯಾಪಕನಾಗಿಯೂ, ರಕ್ಷಕನಾಗಿಯೂ, ಬೃಹದ್ವಸ್ತುಗಳಿಗಿಂತಲೂ ಅತಿ ಬೃಹತ್ತರನಾಗಿಯೂ, ಸೂಕ್ಷ್ಮವಸ್ತುಗಳಿಗಿಂತಲೂ ಅತಿಸೂಕ್ಷ್ಮನಾಗಿಯೂ,

**ನಾರಾಯಣಂ ಮೃದುಕರಂ ದೇವಂ ಶಾರ್ಙ್ಗಧನುರ್ಧರಂ ।**
**ಅತಸೀಕುಸುಮಶ್ಯಾಮಂ ಪೀತವಾಸಸಮಚ್ಯುತಂ ॥ ೪ ॥**

**ವಿಬುದ್ಧಃ ಪುಂಡರೀಕಾಕ್ಷಃ ಶರಣಾಗತವತ್ಸಲಃ ।**
**ಸಂಸಾರಸರಸೀಮಗ್ನಭಗ್ನನಾಗಕೃತಕೃಪ ॥ ೫ ॥**

**ಚಕ್ರಪರ್ಯಂತಚ್ಛಿನ್ನಾಗ್ರ ದುಃಸ್ವಪ್ನಗ್ರಾಹದುರ್ಧರ ।**
**ಸಂಸೇವಿತಮಹಾಯೋಗನಿದ್ರಾಸನ್ಮೀಲಿತೇಕ್ಷಣ ॥ ೬ ॥**

**ಶೇಷಾಹಿಭೋಗಪರ್ಯಂತವಿಸ್ತೀರ್ಣಶಯನಾಚ್ಯುತ ।**
**ತತ್ಫಣಾವಲಿರತ್ನಾಂಶು ವಿತಾನಕೃತೋತ್ತರ ॥ ೭ ॥**

**ಲಕ್ಷ್ಮೀಸಂವಾಹ್ಯಮಾನಾಂಘ್ರಿಕಮಲದ್ವಯರಾಜಿತ ।**
**ನಿರ್ಣಾಶಿತಮಹಾದೈತ್ಯ ಕೃತಕ್ಷೇಮಜಗತ್ತ್ರಯ ॥ ೮ ॥**

---

ದೂರದಲ್ಲಿಯೂ, ಸಮೀಪದಲ್ಲಿಯೂ, ಇರುವವನಾಗಿಯೂ, ನಾರಾಯಣ ಶಬ್ದವಾಚ್ಯನಾಗಿಯೂ, ಸುಕುಮಾರಕರನಾಗಿಯೂ, ಶಾರ್ಙವೆಂಬ ಧನುಸ್ಸನ್ನು ಧರಿಸಿಯೂ ಅಗಸೆಯ ಹೂವಿನಂತಹ ಶ್ಯಾಮವರ್ಣವುಳ್ಳವನಾಗಿಯೂ, ಪೀತಾಂಬರಧಾರಿಯಾಗಿಯೂ, ಇರುವ ವಾಸುದೇವನನ್ನು ಎಚ್ಚರಗೊಳಿಸುತ್ತೇನೆ. ಶರಣಾಗತರಲ್ಲಿ ವಾತ್ಸಲ್ಯವುಳ್ಳ ಪುಂಡರೀಕಾಕ್ಷನು ಎಚ್ಚರಗೊಂಡಿದ್ದಾನೆ.

೫-೮. ಸಂಸಾರಸದೃಶವಾದ ಸರೋವರದಲ್ಲಿ ಸಿಕ್ಕಿ ಭಂಗ ಹೊಂದಿದ ಗಜೇಂದ್ರನಲ್ಲಿ ದಯೆತೋರಿದವನೇ, ಚಕ್ರಾಯುಧದ ಅಗ್ರಭಾಗದಿಂದ ಕತ್ತರಿಸಲ್ಪಟ್ಟ ದುಃಸ್ವಪ್ನದಂತಿದ್ದ ಗ್ರಾಹವುಳ್ಳವನೇ, ಮಹಾಯೋಗ ನಿದ್ರಾಸೇವನೆಯಿಂದ ನೇತ್ರನಿಮೀಲನ ಹೊಂದಿರುವವನೇ, ಶೇಷನೆಂಬ ಸರ್ಪದ ದೇಹದಲ್ಲಿ ವಿಸ್ತಾರವಾಗಿಯೂ, ದೀರ್ಘವಾಗಿಯೂ ಇರುವ ಶಯನವುಳ್ಳವನೇ, ಅದರ ಹೆಡೆಗಳ ಸಮೂಹದಲ್ಲಿರುವ ರತ್ನಕಿರಣಗಳಿಂದಲೇ ಹೊದ್ದಿಕೆಯನ್ನು ಹೊಂದಿರುವವನೇ, ಲಕ್ಷ್ಮಿಯಿಂದ ಸೇವಿಸಲ್ಪಡುತ್ತಿರುವ ಪಾದಕಮಲಯುಗ್ಮದಿಂದ ಶೋಭಿಸುತ್ತಿರುವವನೇ, ದೈತ್ಯರನ್ನು ನಿರ್ನಾಮಮಾಡಿದವನೇ, ಜಗತ್ತ್ರಯಕ್ಕೂ ಕ್ಷೇಮಚಿಂತಕನೇ.

ಶೀತಾಂಶುರಶ್ಮಿಜಾಲಾಭ ದುಗ್ಧಾಂಭೋಧಿಶಯಾಚ್ಯುತ ।
ಭಕ್ತಾನಾಂ ನರಕಶ್ವಭ್ರನಿಪಾತಭಯನಾಶನ ॥ ೯ ॥

ತೇಷಾಂ ಸ್ವರ್ಲೋಕಗಮನದತ್ತಹಸ್ತಾವಲಂಬನ ।
ಸಂಸಾರಸಾಗರೋತ್ತಾರ ಮಹಾಪೋತ ಜನಾರ್ದನ ॥ ೧೦ ॥

ನಾಮಗ್ರಹಣಮಾತ್ರೇಣ ಘನಾವಕ್ಷಯಕಾರಕ ।
ಸ್ಮೃತಿಮಾತ್ರಕೃತಾಶೇಷ ಮನೋರಥ ಮಹಾಫಲ ॥ ೧೧ ॥

ತ್ರಿವಿಕ್ರಮಕ್ರಮಾಕ್ರಾಂತ ಬ್ರಹ್ಮಾಂಡೋತ್ತರಮಂಡಪ ।
ಬಾಲೇಂದುಕಲ್ಪದಂಷ್ಟ್ರಾಗ್ರಲೀಲೋದ್ಧೃತವಸುಂಧರ ॥ ೧೨ ॥

ಏತೇ ವಿಬೋಧಯಂತಿ ತ್ವಾಂ ದೇವಾಃ ಸೇನ್ದ್ರಪುರೋಗಮಾಃ ।
ಋಷಯಶ್ಚ ಮಹಾಭಾಗಾಃ ತ್ರೈಲೋಕ್ಯಾಮಲದರ್ಶಿನಃ ॥ ೧೩ ॥

ವಿಬೋಧಯತಿ ದೇವ ತ್ವಾಂ ಬ್ರಹ್ಮಾ ಶುಭಚತುರ್ಮುಖಃ ।
ಯಜುರ್ವೇದೋ ಗದಾಭಿಸ್ತು ಗೀರ್ಭಿರ್ದೇವವರಾಚ್ಯುತ ॥ ೧೪ ॥

---

೯-೧೨. ಚಂದ್ರನ ಕಿರಣಸಮೂಹಗಳಂತಿರುವ ಕ್ಷೀರಸಮುದ್ರದಲ್ಲಿ ಶಯಿಸಿ ಸಿರುವವನೇ, ಭಕ್ತರಿಗೆ ನರಕವೆಂಬ ಗರ್ತಪಾತ ಭಯವಿರದಂತೆ ರಕ್ಷಕನಾಗಿರುವವನೇ, ಇವರಿಗೆ ಸ್ವರ್ಗಲೋಕ ಗಮನಕಾಲದಲ್ಲಿ, ಹಸ್ತಾವಲಂಬನ ಕೊಡುವವನೇ. ಸಂಸಾರ ವೆಂಬ ಸಾಗರವನ್ನು ದಾಟುವ ದೊಡ್ಡ ನೌಕೆಯೇ, ಜನಾರ್ಧನಮೂರ್ತಿಯೇ, ನಾಮಗ್ರಹಣಮಾತ್ರದಿಂದ ಭಕ್ತಪಾಪನಾಶಕನೇ, ಸ್ಮರಣೆಮಾತ್ರದಿಂದ ಎಲ್ಲಾ ಮನೋರಥಗಳನ್ನೂ ಸಫಲಮಾಡುವವನೇ. ತ್ರಿವಿಕ್ರಮಾವತಾರ ಕಾಲದಲ್ಲಿ ಪಾದ ದಿಂದ ಬ್ರಹ್ಮಾಂಡದ ಉತ್ತರಭಾಗದಲ್ಲಿಯೂ ವ್ಯಾಪಿಸಿದವನೆ, ಬಾಲಚಂದ್ರನಂತಿರುವ ಕೋರದಾಡೆಗಳ ತುದಿಯಿಂದ ಲೀಲಾಮಾತ್ರದಿಂದ ಭೂಮಂಡಲವನ್ನುದ್ಧರಿಸಿದವನೇ,

೧೩-೧೫. ಇಂದ್ರನೇ ಮೊದಲಾದ ಈ ದೇವತೆಗಳೆಲ್ಲರೂ ನಿನ್ನನ್ನು ಎಚ್ಚರಿಸುತ್ತಿದ್ದಾರೆ. ಮೂರು ಲೋಕದಲ್ಲಿಯೂ ನಿರ್ಮಲಜ್ಞಾನರಾದ ಮಹರ್ಷಿಗಳೂ, ಚತುರ್ಮುಖನಾದ ಬ್ರಹ್ಮದೇವನೂ, ಗದಾಮಂತ್ರಗಳಿಂದ ಯಜುರ್ವೇದವೂ ನಿನ್ನನ್ನು ಎಚ್ಚರಿಸುತ್ತಿರುವರು. ದೇವಶತ್ರುನಾಶಕನಾಗಿಯೂ, ಜಗತ್ಪತಿ,

**ತ್ಯಜ ವಿಬುಧಗಣಾರಿಸೂದನಾದ್ಯ ನಿದ್ರಾಂ**
**ಭವ ಭುವನಪತೇಽಘಸಂಚಯಾಪಹೋಮೇ ।**
**ತ್ವಯಿ ಭವತಿ ಹಿ ಯಸ್ಯ ನಾಥ ಭಕ್ತಿರುಗ್ರಾ**
**ಗತಿರತಿಶಯಿನೀ ತು ತಸ್ಯ ದೈವತೇಭ್ಯಃ ॥ ೧೫ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ವಾಸುದೇವವಿಬೋಧನೋ ನಾಮ ಸಪ್ತೋತ್ತರಶತತಮೋಽಧ್ಯಾಯಃ**

---

ಯಾಗಿಯೂ, ಪಾಪನಾಶಕನಾಗಿಯೂ ಇರುವ ನೀನು ನಿದ್ರೆಯನ್ನು ತ್ಯಜಿಸಿ ಎಚ್ಚರಿಕೆಯನ್ನು ಹೊಂದು. ನಿನ್ನಲ್ಲಿ ಯಾರಿಗೆ ಉಗ್ರವಾದ ಭಕ್ತಿಯುಂಟಾಗುವುದೋ ಅವರಿಗೆ ದೇವತೆಗಳಿಗಿಂತಲೂ ಉತ್ಕೃಷ್ಟವಾದ ಗತಿಯುಂಟಾಗುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ವಾಸುದೇವ ವಿಬೋಧನವೆಂಬ ನೂರಏಳನೆಯ ಅಧ್ಯಾಯ ಮುಗಿದಿದೆ.



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಅಷ್ಟೋತ್ತರಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

**ಭಗವನ್ ಸರ್ವದೇವಾನಾಂ ಮೂರ್ತಯಃ ಪರಿಕೀರ್ತಿತಾಃ ।**
**ಪಂಚಭೂತಮಯಾ ಯಸ್ಮಾತ್ತಸ್ಮಾತ್ತೇಷಾಂ ಭೃಗೂತ್ತಮ ॥ ೧ ॥**

**ಆವಾಹನವಿಧಿಃ ಪ್ರೋಕ್ತೋ ಯತ್ತದ್ಯುಕ್ತತಮಂ ಮತಂ ।**
**ಆವಾಹಿತಾಃ ಸಮಾಯಾಂತಿ ಯತ್ರ ತಾವಮಾವಸಾಯಿತಾಂ ॥ ೨ ॥**

**ಆಶ್ರಿತ್ಯ ಮಹಿಮಾಂ ಪ್ರಾಪ್ತಿಂ ಲಘಿಮಾಂ ಚ ತಥಾ ಸುರಾಃ ।**
**ವಿಷ್ಣುಃ ಸರ್ವಗತೋ ದೇವೋ ಮಹದ್ಭ್ಯೋಽಪಿ ಮಹತ್ತರಃ ॥ ೩ ॥**

---

### ನೂರ ಎಂಟನೆಯ ಅಧ್ಯಾಯ.

೧-೬. ವಜ್ರನು ಪ್ರಶ್ನೆಮಾಡುತ್ತಾನೆ :—ಪೂಜ್ಯರೇ ಎಲ್ಲಾದೇವತೆಗಳಿಗೂ ಯಾವಯಾವ ಮೂರ್ತಿಗಳನ್ನು ಹೇಳಿರುವಿರೋ ಅಂತಹ ದೇವತೆಗಳ ಮೂರ್ತಿಗಳೆಲ್ಲವೂ ಪಂಚಭೂತಮಯವಾದುದು. ಆದುದರಿಂದಲೇ ಅಲ್ಲಿ ದೇವತೆಗಳ ಸಾನ್ನಿಧ್ಯಕ್ಕಾಗಿ ತಾವು ಅಪ್ಪಣೆ ಕೊಡಿಸಿದ ಆವಾಹನವಿಧಿಯು ಯುಕ್ತವಾಗಿ ತೋರುತ್ತದೆ. ಆವಾಹಿತರಾದ ದೇವತೆಗಳು ಮಹಿಮಾ, ಲಘಿಮಾ, ಪ್ರಾಪ್ತಿ ಇಂತಹ ಐಶ್ವರ್ಯ ಹೊಂದಿರುವುದರಿಂದ ವಿಗ್ರಹಗಳಲ್ಲಿ ಸಾನ್ನಿಧ್ಯ ಹೊಂದಬಹುದು. ಪೂಜಾವಿಧಿಗಳಿಂದ ಇಷ್ಟಪ್ರಾಪ್ತಿಗೆ ಕಾರಣರೂ ಆಗಬಹುದು. ಆದರೆ ವಿಷ್ಣುವು ತಾನೇ ಸ್ವತಃ ಸರ್ವಗತನೂ ಬೃಹದ್ವಸ್ತುವಿಗಿಂತಲೂ ಬೃಹತ್ತರನೂ, ಸೂಕ್ಷ್ಮವಸ್ತು

ಸೂಕ್ಷ್ಮೇಭ್ಯಶ್ಚಾತಿಸೂಕ್ಷ್ಮಶ್ಚ ಸರ್ವವ್ಯಾಪೀ ಜಗನ್ಮಯಃ ।
ನಾಸ್ತಿ ಕಿಂಚಿಜ್ಜಗತ್ಯಸ್ಮಿನ್ಯತ್ರ ನಾಸ್ತಿ ಜನಾರ್ದನಃ ॥ ೪ ॥

ಸದಸಚ್ಚ ಮಹಾಭಾಗ ತೇನ ವ್ಯಾಪ್ತಂ ಮಹಾತ್ಮನಾ ।
ಆವಾಹನೇನ ಕಿಂ ಕಾರ್ಯಂ ತಸ್ಯ ಸರ್ವಗತಸ್ಯ ತು ॥ ೫ ॥

ಮಹೇಂದ್ರಿಯ ಮಹಾಭಾಗ ಸರ್ವತ್ರ ಪರಿಪಠ್ಯತೇ ।
ಏತನ್ಮೇ ಸಂಶಯಂ ಛಿನ್ಧಿ ತ್ವಂ ಹಿ ಸರ್ವವಿದುಚ್ಯಸೇ ॥ ೬ ॥

॥ ಮಾರ್ಕಂಡೇಯ ಉವಾಚ ॥

ಸರ್ವದೇವಗಣಾ ಯದ್ವದ್ವಜ್ರ ಪಿಂಡಿತಮೂರ್ತಯಃ ।
ಪ್ರಾದುರ್ಭಾವಗತೋಽಪ್ಯೇವಂ ದೇವೋ ಮಧುನಿಷೂದನಃ ॥ ೭ ॥

ಪಂಚಭೂತಯುತಾ ಮೂರ್ತಿಃ ಸರ್ವಾ ಭವತಿ ಮಂಡಿತಾ ।
ಅದ್ಯಂತಮಧ್ಯಸಂಯುಕ್ತಾ ಸರ್ವಸ್ಯೈವ ಯದೂತ್ತಮ ॥ ೮ ॥

---

ಗಳಿಗಿಂತಲೂ ಅತಿ ಸೂಕ್ಷ್ಮನೂ, ಸರ್ವವ್ಯಾಪಿಯೂ, ಜಗನ್ಮಯನೂ ಆಗಿರುತ್ತಾನೆ. ಈ ಜಗತ್ತಿನಲ್ಲಿ ಆ ಜನಾರ್ಧನನು ಇಲ್ಲದಿರುವ ಪ್ರದೇಶವೇ ಇಲ್ಲ. ಸದಸದ್ವಸ್ತುಗಳೆಲ್ಲವೂ ಆವನಿಂದ ವ್ಯಾಪ್ತವಾಗಿಯೇ ಇವೆ. ಹೀಗಿರುವಾಗ ಸರ್ವಗತನಾದ ವಿಷ್ಣುವಿಗೆ ವಿಗ್ರಹವಿಶೇಷದಲ್ಲಿ ಆವಾಹನದಿಂದ ಫಲವೇನು? ಮಹೇಂದ್ರಿಯರೂ ಮಹಾಮಹಿಮರೂ ಆದ ತಾವು ಸರ್ವವಿಷಯದಲ್ಲೂ ಪರಿಶ್ರಮ ಹೊಂದಿರುವಿರಿ. ನನ್ನ ಈ ಸಂಶಯವನ್ನು ಸರ್ವಜ್ಞರಾದ ತಾವೇ ಹೋಗಲಾಡಿಸಬೇಕು. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ :—

೭–೧೨ ಎಲೈ ವಜ್ರನೇ, ಎಲ್ಲಾ ದೇವತೆಗಳೂ ಹೇಗೆ ಪಂಚಭೂತಗಳಿಂದ ಕೂಡಿದ ದೇಹವುಳ್ಳವರೋ ಹಾಗೆಯೇ ಅರ್ಚಾರೂಪದಿಂದ ಮಧುಸೂದನನೂ, ಪಂಚಭೂತಗಳಿಂದ ಕೂಡಿದ ದೇಹವುಳ್ಳವನೇ, ಪಂಚಭೂತಮಯನಾದ ಮೂರ್ತಿಯೆಲ್ಲವೂ ರಮ್ಯವಾಗಿ ತೋರಿಬರುತ್ತದೆ. ಇಂತಹ ಮೂರ್ತಿಯು ಎಲ್ಲರಿಗೂ ಆದ್ಯಂತಮಧ್ಯಯುಕ್ತವೇ ಆಗಿರುತ್ತದೆ. ದೇವಗಣಗಳು ಹೇಗೆ ಆವಾಹಿತರಾಗಿಯೇ

ಪ್ರಾದುರ್ಭಾವಗತೋ ವಿಷ್ಣುರ್ಯಥಾ ದೇವಗಣಸ್ತಥಾ ।
ಆವಾಹಿತಃ ಸನ್ನಿಹಿತೋ ಭವತೀತಿ ವಿನಿಶ್ಚಯಃ　　॥ ೯ ॥

ದೇವಸ್ಯ ದ್ವಿವಿಧಾ ಮೂರ್ತಿಃ ಪರಾ ಚೈವ ತಥಾಪರಾ ।
ಪರಾಯಾಃ ಪೌರುಷೀ ಮೂರ್ತಿಃ ಪಂಚಭೂತವಿರಾಜಿತಾ　　॥ ೧೦ ॥

ತಯಾ ಸಮೂರ್ತಿರ್ಭವತಿ ಸರ್ವಗಃ ಪರಮೇಶ್ವರಃ ।
ಪುರುಷೇಣ ವಿನಾ ಲೋಕೇ ನ ಕಿಂಚಿದಿಹ ವಿದ್ಯತೇ　　॥ ೧೧ ॥

ಅನಾದಿಮಧ್ಯನಿಧನಸ್ತ್ವಪ್ರಮೇಯತನುಸ್ತಥಾ ।
ಸರ್ವೇಂದ್ರಿಯಮನಾಃ ಶಕ್ತಿಃ ಸರ್ವತಃ ಸ ತಥಾ ನೃಪ　　॥ ೧೨ ॥

ಪ್ರಾದುರ್ಭಾವಗತಸ್ಯಾಪಿ ತಸ್ಯ ಯಾ ಸರ್ವಶಕ್ತಿತಾ ।
ಇಚ್ಛಾತಃ ಸಾ ವಿನಿರ್ದಿಷ್ಟಾ ನ ತ್ವೇಷಾ ನಿಚ್ಛತೋ ನೃಪ　　॥ ೧೩ ॥

ಪುರುಷತ್ವೇಽಪ್ಯನಂತಸ್ಯ ಯಾ ರಾಜನ್ ಸರ್ವಶಕ್ತಿತಾ ।
ನಿಸರ್ಗಸಿದ್ಧಾ ಸಾ ಜ್ಞೇಯಾ ಸದಾ ಸರ್ವತ್ರ ಯಾದವ　　॥ ೧೪ ॥

---

ಅರ್ಚಾವಿಗ್ರಹದಲ್ಲಿ ಸನ್ನಿಹಿತರಾಗುವರೋ. ಅರ್ಚಾರೂಪದಿಂದ ಪ್ರಾದುರ್ಭಾವ ಹೊಂದಿದ ವಿಷ್ಣುವೂ ಹಾಗೆಯೇ. ಆದರೆ ಪ್ರಭುವಾದ ವಿಷ್ಣುವಿಗೆ ಪರಾ, ಅಪರಾ ಎಂದು ಎರಡು ವಿಧವಾದ ಮೂರ್ತಿ ಇರುತ್ತದೆ. ಪರಮೂರ್ತಿಗಿಂತ ಬೇರೆಯಾದ ಪುರುಷ ನಿರ್ಮಿತವಾದ ಅರ್ಚಾಮೂರ್ತಿಯು ಪಂಚಭೂತಮಯವಾಗಿಯೇ ಪ್ರಕಾಶಿಸುತ್ತದೆ ಸರ್ವಗತನಾದ ಪರಮೇಶ್ವರನು (ಸ್ವಶಕ್ತಿಯಿಂದ ಸರ್ವವ್ಯಾಪಕನಾಗಿದ್ದರೂ) ಅರ್ಚಾಮೂರ್ತಿಯ ರೂಪದಿಂದಲೇ ತಾನೂ ಮೂರ್ತಿಮತ್ತಾಗಿ ಆಗುತ್ತಾನೆ. ಅಮೂರ್ತವಾದ ಯಾವ ವಸ್ತುವೂ ಪುರುಷಪ್ರಯತ್ನವಿಲ್ಲದೆ ಮೂರ್ತಿಮತ್ತಾಗಿ ಆಗಲು ಲೋಕದಲ್ಲಿ ಸಾಧ್ಯವಿಲ್ಲ. ಅರ್ಚಾರೂಪದಿಂದ ಮೂರ್ತಿಮತ್ತಾಗಿ ನಿಂತ ಪರಮಾತ್ಮನು ಅನಾದಿಮಧ್ಯನಿಧನನೂ, ಅಮೇಯತನುವೂ ಆಗಿಯೇ ಇರುತ್ತಾನೆ. (ಸ್ವಭಾವಪ್ರಚ್ಯುತಿ ಇಲ್ಲವೆಂದು ತಾತ್ಪರ್ಯ) ಸರ್ವೇಂದ್ರಿಯ ಸಾಮರ್ಥ್ಯವುಳ್ಳ ಮನಸ್ಸು, ಸರ್ವವಿಧವಾದ ಶಕ್ತಿ, ಎಲ್ಲವೂ ಸ್ವಾಭಾವಿಕವಾದಂತೆಯೇ ಇರುತ್ತದೆ

೧೪-೧೭. ಅವನ ಸ್ವಾಭಾವಿಕವಾದ ಸರ್ವಶಕ್ತತೆಯು ಅರ್ಚಾರೂಪದಿಂದ ಆವಿರ್ಭಾವ ಹೊಂದಿದಾಗಲೂ, ಅವನಿಗೆ ಇಚ್ಛೆ ಇದ್ದಲ್ಲಿ ಉಂಟಾಗುತ್ತದೆ. ಇಚ್ಛೆ

ಆವಾಹನಮಥಾಪ್ಯತ್ರ ಕ್ರಿಯತೇ ಯಜ್ಞಗತ್ಪತೇಃ ।
ನಿತ್ಯಂ ಸನ್ನಿಹಿತಸ್ಯಾಪಿ ಸರ್ವತ್ರ ಪರಮೇಷ್ಠಿನಃ ॥ ೧೫ ॥

ಕೇವಲಂ ಕಾರಣಂ ತತ್ರ ಮನಸಸ್ತುಷ್ಟಿಕಾರಣಂ ।
ಆವಾಹಿತೋ ಮಯಾ ದೇವಃ ಸ್ಥಾನೇ ಸನ್ನಿಹಿತೋಽಪಿ ಚ ॥ ೧೬ ॥

ಆವಾಹನಂ ಸ್ವತೃಪ್ತ್ಯರ್ಥಂ ಪುರುಷಸ್ಯ ಯಥಾಸ್ಥಿತಂ ।
ತಥಾಪ್ಯರ್ಚಾ ಮಹಾಭಾಗ ಸ್ವತುಷ್ಟ್ಯರ್ಥಂ ಪ್ರಯೋಜನಂ ॥ ೧೭ ॥

ನಿತ್ಯತೃಪ್ತಸ್ಯ ಕಿಂ ತಸ್ಯ ಕಾರ್ಯಂ ಭವತಿ ಚಾರ್ಚಯಾ ॥ ೧೮ ॥

---

ಇಲ್ಲದಿದ್ದರೆ ಇಲ್ಲ. ಅನಂತ ಸ್ವರೂಪನಾದ ಭಗವಂತನು ಪುರುಷರೂಪದಿಂದ ಅವತರಿಸಿದಾಗಲೂ, ಅವನ ಸರ್ವಶಕ್ತತೆಯು ಹೇಗೆ ಸ್ವಾಭಾವಿಕವೋ ಹಾಗೆಯೇ ಎಲ್ಲಾ ರೂಪಗಳಲ್ಲಿಯೂ, ಎಲ್ಲಾ ಕಾಲದಲ್ಲಿಯೂ ಅವನ ಸರ್ವಶಕ್ತತೆಯೂ ಸ್ವಾಭಾವಿಕವೆಂದೇ ತಿಳಿಯಬೇಕು. ಹೀಗಿದ್ದರೂ ಜಗತ್ಪತಿಯಾದ ಪರಮಾತ್ಮನಿಗೆ ಸರ್ವವ್ಯಾಪಕತ್ವ ಸಿದ್ಧವಾಗಿರುವುದರಿಂದ ಅರ್ಚಾರೂಪವಾದ ವಿಗ್ರಹವಿಶೇಷದಲ್ಲಿ ನಿತ್ಯವೂ ಸನ್ನಿಹಿತವಾಗಿರುವ ಅವನಿಗೆ ಆವಾಹನೆಯು ಏತಕ್ಕೆ ಎಂದು ವಿಚಾರ ಬಂದಲ್ಲಿ ಪೂಜಕನ ಮನಸ್ತುಷ್ಟಿಯೇ ಈ ಆವಾಹನೆಗೆ ಕಾರಣವೆಂದು ತಿಳಿಯಬೇಕು ಪೂಜಕನಾದ ಭಕ್ತನು ನನ್ನಿಂದ ಆವಾಹಿಸಲ್ಪಟ್ಟ ಪರಮಾತ್ಮನು ನಿಜವಾಗಿಯೂ ಇಲ್ಲಿ ಸನ್ನಿಹಿತನಾಗಿದ್ದಾನೆ, ಎಂದು ತಿಳಿಯುತ್ತಾನೆ. (ಇದು ಅವನ ಭಕ್ತಿಯ ದೃಢತೆಗೆ ಕಾರಣವಾದ ಮಹಾವಿಶ್ವಾಸಕ್ಕೆ ಕಾರಣವಾಗುತ್ತದೆ) ಭಕ್ತನಾದವನು ಯಥಾವಿಧಿಯಾಗಿ ಮಾಡುವ ಆವಾಹನವು ತನ್ನ ಮನಃ ಪ್ರೀತಿಗಾಗಿಯೇ ಹೇಗೆ ಆಗುತ್ತದೆಯೋ ಹಾಗೆಯೇ ಅರ್ಚೆಯಲ್ಲಿ ಉಂಟಾಗುವ ಭಗವಂತನ ಪೂರ್ಣಸಾನ್ನಿಧ್ಯವೂ ಸಹ ಭಗವಂತನ ಪ್ರೀತಿಗಾಗಿಯೇ ಆಗುತ್ತವೆ. (ಭಕ್ತರು ತನ್ನನ್ನು ಸನ್ನಿಹಿತನನ್ನಾಗಿ ತಿಳಿದು ಭಕ್ತ್ಯತಿಶಯದಿಂದ ಸಂತೋಷಪಡಲಿ, ಎಂದು ಭಕ್ತರಿಗುಂಟಾದ ಸಂತೋಷವೆಂಬ ಫಲದಿಂದ ತಾನೂ ಸಂತುಷ್ಟನಾಗುವುದೇ ಪರಮಾತ್ಮನಿಗೆ ಉಂಟಾಗುವ ಫಲವೆಂದು ತಾತ್ಪರ್ಯ)

೧೮–೨೦. ಈ ರೀತಿ ಭಕ್ತರ ಸಂತೋಷವೇ ಫಲವಾಗದೆ ಇದ್ದಲ್ಲಿ ನಿತ್ಯತೃಪ್ತನಾದ ಪರಮಾತ್ಮನಿಗೆ ಅರ್ಚಾಸಾನ್ನಿಧ್ಯದಿಂದ ಫಲವೇನು ? (ಆದುದರಿಂದ

ಕೇವಲಂ ಭಕ್ತತುಷ್ಟ್ಯರ್ಥಂ ಸ ಭಕ್ತೇಭ್ಯಃ ಪ್ರತೀಚ್ಛತಿ ।
ಯೋಽಸಾವರ್ಚಯತೇ ದೇವಂ ಯತ್ರ ದೇವೋಽರ್ಚ್ಯತೇ ಬುಧೈಃ ॥ ೧೯ ॥

ಅಭ್ಯರ್ಚ್ಯತೇ ಚ ಯೈರ್ಭಾವೈಃ ಸರ್ವಂ ತದ್ವಿದ್ಧಿ ತನ್ಮಯಂ ।
ತಸ್ಯಾರ್ಚಾಕರಣಂ ವಿದ್ಧಿ ಕರ್ತೃಪ್ರೀತಿಪ್ರಯೋಜನಂ ॥ ೨೦ ॥

ಜ್ಞೇಯಂ ತಥೈವ ಚಾತ್ಮಾನಂ ತಸ್ಯ ಸರ್ವಗತಸ್ಯ ತು ।
ಅನಾದಿಕಾರಣಂ ತೇನ ನಿತ್ಯತೃಪ್ತೇನ ಯಾದವ ॥ ೨೧ ॥

ಅನುಗ್ರಹಾರ್ಥಂ ಭಕ್ತಾನಾಂ ಚಾತ್ಮನಃ ಸಂಪ್ರವರ್ತಿತಂ ।
ಅಶರೀರಃ ಶರೀರಸ್ಥೋ ಯಥಾ ಭವತಿ ಭೂಪತೇ ॥ ೨೨ ॥

ಭಕ್ತಲಕ್ಷಣಬೋಧಾರ್ಥಂ ತಥೈವಾವಾಹ್ಯತೇಽಪ್ಯಸೌ ।
ಅನಾಕಾರಂ ಮಹಾರಾಜ ಲಕ್ಷ್ಯಬಂಧಸ್ತು ದುಷ್ಕರಃ ॥ ೨೩ ॥

---

ಆಪ್ತಕಾಮನಾಗಿದ್ದರೂ ವಾತ್ಸಲ್ಯದಿಂದ ಭಕ್ತರನ್ನು ಸಂತೋಷಪಡಿಸುವ ಸಂಕಲ್ಪ ಹೊಂದಿಯೇ ಅರ್ಚೆಯಲ್ಲಿ ಸನ್ನಿಹಿತನಾಗುತ್ತಾನೆ ಎಂದು ತಾತ್ಪರ್ಯ.) ಕೇವಲ ಭಕ್ತನಿಗೆ ಸಂತೋಷ ಉಂಟುಮಾಡುವ ಉದ್ದೇಶದಿಂದಲೇ ಅರ್ಚೆಯಲ್ಲಿ ಸಾನ್ನಿಧ್ಯ ಹೊಂದಿ ಭಕ್ತರ ಪೂಜಾದಿಗಳನ್ನು ನಿರೀಕ್ಷಿಸುತ್ತಾನೆ. ಯಾವನೊಬ್ಬನು ಪರಮಾತ್ಮನನ್ನು ಪೂಜಿಸುತ್ತಾನೆಯೋ ಪರಮಾತ್ಮನೂ ಯಾವ ಜ್ಞಾನಿಗಳಾದ ಭಕ್ತರಿಂದ ಪೂಜೆಯನ್ನು ಕೈಗೊಳ್ಳುತ್ತಾನೆಯೋ ಈ ವಿಧವಾದ ಪೂಜ್ಯಪೂಜಕಭಾವವು ಪೂಜ್ಯನ ಚಿತ್ತವೃತ್ತಿಗೆ ಅನುಗುಣವಾದ ಚಿತ್ತವೃತ್ತಿಯನ್ನು ಪೂಜಕನಲ್ಲಿಯೂ ಉಂಟುಮಾಡಿ ಸಂತೋಷಮಯವಾಗಿ ಪರ್ಯವಸಾನ ಹೊಂದುತ್ತದೆ. ಆದುದರಿಂದ ಅಂತಹ ಪರಮಾತ್ಮನ ಅರ್ಚಾರೂಪದ ಸಾನ್ನಿಧ್ಯವು ಕರ್ತೃವಾದ ಭಕ್ತನ ಪ್ರೀತಿಯನ್ನೇ ಮುಖ್ಯಫಲವನ್ನಾಗಿ ಅವಲಂಬಿಸುತ್ತದೆ.

೨೧-೨೪. ಸರ್ವಗತನಾದ ಪರಮಾತ್ಮನಿಗೂ ಭಕ್ತನನ್ನು ಪ್ರೀತಿಪಡಿಸಬೇಕೆಂಬ ಫಲವೇ ಅನ್ವಯಿಸುತ್ತದೆ. ಭಕ್ತನಿಗೆ ಭಗವಂತನಲ್ಲಿ ಉಂಟಾಗುವ ಪ್ರೀತಿಯೇ ಫಲ. ಭಗವಂತನಿಗೆ ಸ್ವವಿಷಯಭಕ್ತಿಯಿಂದ ಭಕ್ತನು ಸಂತುಷ್ಟನಾಗುವುದೇ ಫಲವೆಂದು ತಾತ್ಪರ್ಯ.) ಭಗವಂತನು ಅನಾದಿಕಾರಣರೂಪಿಯಾಗಿದ್ದಾನೆ. (ಎಲ್ಲಾ ವಸ್ತುವಿಗೂ ಕಾರಣನಾದಂತೆ ಭಕ್ತಪ್ರೀತಿಗೂ ಕಾರಣನಾಗುವಿಕೆಯು

**ಸಾಕಾರೈರ್ಲಕ್ಷ್ಯಬಂಧಸ್ತು ಕರ್ತುಂ ವೈ ಶಕ್ಯತೇ ಸುಖಂ ।**
**ವಿಧಿವಚ್ಚ ತಥಾಕಾರಃ ಪ್ರಾದುರ್ಭಾವಗತಸ್ಯ ಹಿ ॥ ೨೪ ॥**

**ಮಯೋಕ್ತೋ ರಾಜಶಾರ್ದೂಲ ಪುರಸ್ತಾದೇವ ಶಾಸ್ತ್ರತಃ ।**
**ಭಾವೋ ಭವತಿ ಯೋ ಯಸ್ಮಿನ್ಭಾವನಾಯಾಂ ಭವೇನ್ನರಃ ॥ ೨೫ ॥**

**ತತ್ರೈವ ಭಾವನಾನೇನ ಕಾರ್ಯಾ ಚಾರ್ಚಾ ಚ ಯಾದವ ।**
**ಆದೌ ಕೃತ್ವಾ ಮಹಾಭಾಗ ಸಾಕಾರೇ ಲಕ್ಷ್ಯಬಂಧನಂ ॥ ೨೬ ॥**

**ತತಃ ಸಮರ್ಥೋ ಭವತಿ ಶೂನ್ಯೇ ಧ್ಯಾನೇ ನರೋತ್ತಮ ।**
**ಏವಮಾವಾಹನಂ ತಸ್ಯ ತಥಾ ಪೂಜಾ ಚ ಯಾದವ ॥ ೨೭ ॥**

---

ಅವನಿಗೆ ಅಧಿಕಾರಪ್ರಾಪ್ತವೆಂದು ಭಾವ.) ಆದುದರಿಂದ ನಿತ್ಯತೃಪ್ತನಾದ ಅವನು ಭಕ್ತರಲ್ಲಿ ಅನುಗ್ರಹಹೊಂದಿಯೇ ಅರ್ಚೆಯಲ್ಲಿ ಸಾನ್ನಿಧ್ಯಹೊಂದುವ ಸಂಪ್ರದಾಯವನ್ನು ನಿದರ್ಶಿಸುತ್ತಾನೆ. ಅಶರೀರವಾದ ವಸ್ತುಗಳು ಶರೀರವನ್ನು ಹೊಂದಿದಲ್ಲಿ ಹೇಗೆ ಸ್ವರೂಪಜ್ಞಾನವು ಸುಲಭವಾಗಿ ಉಂಟಾಗುತ್ತದೆಯೋ ಹಾಗೆಯೇ ಪ್ರಾಕೃತ ಶರೀರವಿಲ್ಲದ ಪರಮಾತ್ಮನೂ ವಿಗ್ರಹವಿಶೇಷದಲ್ಲಿ ಆವಾಹಿಸಲ್ಪಟ್ಟಲ್ಲಿ ವಿಗ್ರಹದ ಶರೀರದಿಂದಲೇ ತಾನೂ ತೋರ್ಪಡಿಸಿಕೊಂಡು ಭಕ್ತರಿಗೆ ಸ್ವರೂಪವು ಸುಖವಾಗಿ ಗ್ರಹಣವಾಗಲು ಸೌಕರ್ಯವಾಗುತ್ತದೆ ನಿರಾಕಾರವಾದ ವಸ್ತುವನ್ನು ಮನಸ್ಸಿನಲ್ಲಿ ಧರಿಸಲು ಸಾಧ್ಯವಿಲ್ಲ. ಸಾಕಾರವಾಗಿದ್ದಲ್ಲಿ ಅದರ ಧಾರಣವು ಸುಖವಾಗಿ ಉಂಟಾಗುತ್ತದೆ ಅರ್ಚಾವಿಗ್ರಹದಲ್ಲಿ ಪ್ರಾದುರ್ಭಾವಹೊಂದುವ ಪರಮಾತ್ಮನ ಅಂತಹ ಆಕಾರಗಳೂ ಶಾಸ್ತ್ರವಿಧಿಗೆ ಅನುಗುಣವಾಗಿಯೇ ತಿಳಿಯಲ್ಪಡುತ್ತವೆ. ಶಾಸ್ತ್ರೋಕ್ತವಾದ ಅಂತಹ ಆಕಾರವಿಶೇಷಗಳನ್ನು ಮೊದಲು ನಾನು ಹೇಳಿರುತ್ತೇನೆ.

೨೫-೨೮. ಯಾವ ಮನುಷ್ಯನು ಪರಮಾತ್ಮನ ಎಂತಹ ಆಕಾರವನ್ನು ಪ್ರೀತಿಸುತ್ತಾನೆಯೋ ಅವನಿಗೆ ಆ ಆಕಾರದಲ್ಲಿಯೇ ಭಕ್ತಿಯುಂಟಾಗುತ್ತದೆ. ಅಂತಹ ಭಕ್ತಿಗಾಗಿಯೇ ಅದಕ್ಕೆ ತಕ್ಕ ತಕ್ಕ ಆಕಾರವುಳ್ಳ ಅರ್ಚಾವಿಗ್ರವನ್ನೂ ಪ್ರತಿಷ್ಠಿಸಬೇಕಾಗುತ್ತದೆ. ಇಂತಹ ಸಾಕಾರವಾದ ಪರಮಾತ್ಮನ ಸ್ವರೂಪದಲ್ಲಿ ಮನೋದಾರ್ಢ್ಯವನ್ನು ಮೊದಲು ಹೊಂದಿದ ಭಕ್ತನಿಗೆ ನಿರಾಕಾರವಾದ ಅಂತಹ ಪರಮಾತ್ಮನ ಧ್ಯಾನದಲ್ಲಿ ಸಾಮರ್ಥ್ಯವುಂಟಾಗುತ್ತದೆ. ಈರೀತಿ ಶಾಸ್ತ್ರೋಕ್ತವಾದ ಆವಾಹನ, ಪೂಜೆ ಎಲ್ಲವನ್ನೂ ಜ್ಞಾನಿಗಳಾದ ಭಕ್ತರು ಪ್ರಯತ್ನಿಸಿ ಮಾಡುತ್ತಾರೆ. ಇದೆಲ್ಲವೂ ಭಕ್ತರಿಗೆ ಉಂಟಾಗುವ ಆತ್ಮೋಜ್ಜೀವನವನ್ನೇ ಫಲವನ್ನಾಗಿ ಉದ್ದೇಶಿಸಿ ನಡೆಯು

ಪ್ರಬುದ್ಧ್ಯೈಃ ಕ್ರಿಯತೇ ಯತ್ನಾದಾತ್ಮಾನುಗ್ರಹಕಾರಣಂ ।
ನಿತ್ಯತೃಪ್ತೋ ನ ತೃಪ್ತ್ಯರ್ಥಮುಪಹಾರಂ ಪ್ರತೀಚ್ಛತಿ || ೨೮ ||

ಪ್ರತೀಚ್ಛತಿ ಮಹಾರಾಜ ಭಕ್ತಾನುಗ್ರಹಕಾರಕಃ ।
ಮೋಕ್ಷಪ್ರಾಪ್ತಾವುಭಾ ವೇತೌ ತ್ವಯಾ ಜ್ಞೇಯೌ ಮಹಾಭುಜ || ೨೯ ||

ಜ್ಞಾನಮಾರ್ಗಃ ಕ್ರಿಯಾಮಾರ್ಗಃ ಕೃತೋ ಯಶ್ಚ ನಿರಾಶಿಷಃ ।
ವಜ್ರಬಂಧಾಯ ಭವತಿ ಸಕಾಮೇನ ಕ್ರಿಯಾ ಕೃತಾ ।
ನಿಷ್ಕಾಮೇನ ಕೃತಾ ಸೈವ ಮೋಕ್ಷಾಯೈವ ವಿಧೀಯತೇ || ೩೦ ||

ಆವಾಹಿತಾಃ ಸನ್ನಿಹಿತಾಸ್ತಥೈವ
ಭವನ್ತ್ಯವಶ್ಯಂ ನೃಪ ಮಂತ್ರಯುಕ್ತಾಃ ।
ಸ್ವತುಷ್ಟಯೇ ದೇವವರಸ್ಯ ವಿಷ್ಣೋ
ರಾವಾಹನಂ ವಜ್ರ ಬುಧೈಃ ಪ್ರದಿಷ್ಟಂ || ೩೧ ||

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಆವಾಹನಪ್ರಯೋಜನವರ್ಣನೋ ನಾಮ ಅಷ್ಟೋತ್ತರಶತತಮೋಽಧ್ಯಾಯಃ**

---

ಯುತ್ತದೆ. ನಿತ್ಯತೃಪ್ತನಾದ ಪರಮಾತ್ಮನು ಪೂಜೋಪಚಾರಾದಿಗಳಿಂದ ಯಾವ ತೃಪ್ತಿಯನ್ನೂ ನಿರೀಕ್ಷಿಸುವ ಸಂಭವವಿಲ್ಲ.

೨೯-೩೧. ಅರ್ಚಾರೂಪದಿಂದ ಸಾನ್ನಿಧ್ಯಹೊಂದಿ ಉಪಚಾರಾದಿಗಳನ್ನು ನಿರೀಕ್ಷಿಸುವುದೂ ಸಹ ಭಕ್ತರ ಅನುಗ್ರಹಕ್ಕಾಗಿಯೇ. ಜ್ಞಾನಮಾರ್ಗ ಕ್ರಿಯಾ ಮಾರ್ಗಗಳೆಂಬ ಎರಡು ಮಾರ್ಗಗಳೂ. ಐಹಿಕಫಲನಿರಪೇಕ್ಷರಾದವರಿಗೆ ಮೋಕ್ಷ ಪ್ರಾಪ್ತಿಗೆ ಸಾಧಕವಾಗುತ್ತವೆಂಬುದನ್ನು ನೀನು ತಿಳಿಯಬೇಕು ಈ ವಿಧವಾದ ಕ್ರಿಯಾಮಾರ್ಗವು ಐಹಿಕ ಫಲಾಪೇಕ್ಷೆಯಿಂದ ಆಚರಿಸಲ್ಪಟ್ಟಲ್ಲಿ ದೃಢವಾದ ಸಂಸಾರ ಬಂಧಕ್ಕೇ ಕಾರಣವಾಗುತ್ತದೆ. ಐಹಿಕ ಫಲಾಪೇಕ್ಷೆ ಇಲ್ಲದೆ ಪರಮಾತ್ಮನ ಪ್ರೀತಿ ಗಾಗಿಯೇ ಆಚರಿಸಲ್ಪಟ್ಟಲ್ಲಿ ಮೋಕ್ಷಪ್ರಾಪ್ತಿಗೇ ಕಾರಣವಾಗುತ್ತದೆ. ದೊರೆಯೇ ಮಂತ್ರಪೂರ್ವಕವಾಗಿ ಆವಾಹಿತರಾದ ದೇವತೆಗಳು ಆಗಲೇ ಅರ್ಚೆಯಲ್ಲಿ ಸಾನ್ನಿಧ್ಯ ಹೊಂದಿಯೇ ಹೊಂದುತ್ತಾರೆ. ಆದುದರಿಂದ ದೇವಶ್ರೇಷ್ಠನಾದ ವಿಷ್ಣುವಿನ ಆವಾಹ ನವೂ ಭಕ್ತರ ತುಷ್ಟಿಗಾಗಿಯೇ ಎಂದು ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದದಲ್ಲಿ ಆವಾಹನಪ್ರಯೋಜನವರ್ಣನವೆಂಬ ನೂರ ಎಂಟನೆಯ ಅಧ್ಯಾಯ ಮುಗಿದುದು.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ನವೋತ್ತರಶತತಮೋಽಧ್ಯಾಯಃ ||

|| ವಜ್ರ ಉವಾಚ ||

ಗದ್ಯ— ಭಗವನ್ ಹೋಮವಿಧಿಮಾಚಕ್ಷ್ವ | ತಮುವಾಚ ಭಗವಾನ್ ಮಾರ್ಕಂಡೇಯಃ | ಅಧಿವಾಸಿತೇ ಭಗವತ್ಯಗ್ನಿಂ ಪ್ರಜ್ವಾಲ್ಯ ಪರಿಸ-ಮೂಹ್ಯಾಜ್ಯೇನ ವಿಲೀನೇನ ಉತ್ಸವೇನ ರಕ್ಷೋಘ್ನಮನ್ತ್ರಾಜ್ಯ-ಭಾಗಾನಂತರಂ ಪ್ರಾಗುಕ್ತಂ ಹುತ್ವಾ ವಕ್ಷ್ಯಮಾಣೈರ್ನಾಮಭಿಃ ಸ್ವಾಹಾನ್ತೈಃ ಚತುರ್ಥೀಪ್ರಯುಕ್ತೈಃ ಯವತಿಲಸಿದ್ಧಾರ್ಥಾನೇಕೈ-ಕೇನ ನಾಮ್ನಾ ಅಷ್ಟೌ ವಾ ಅಷ್ಟಾವಿಂಶತಿಂ ಅಷ್ಟೋತ್ತರಶತಂ ವಾಜ್ಯಾಹುತೀಃ ಜುಹುಯಾತ್ ||

---

### ನೂರ ಒಂಭತ್ತನೆಯ ಅಧ್ಯಾಯ.

ವಜ್ರನು ಪ್ರಶ್ನೆ ಮಾಡುತ್ತಾನೆ :—ಪೂಜ್ಯರೇ ಹೋಮವಿಧಿಯನ್ನು ಅಪ್ಪಣೆ ಕೊಡಿಸಬೇಕು ಇದಕ್ಕೆ ಉತ್ತರವಾಗಿ ಪೂಜ್ಯರಾದ ಮಾರ್ಕಂಡೇಯರು ಹೇಳುತ್ತಾರೆ—ಭಗವಂತನಿಗೆ ಅಧಿವಾಸನವಿಧಿಯು ನೆರವೇರಿದನಂತರ ಅಗ್ನಿಯನ್ನು ಪ್ರತಿಷ್ಠಿಸಿ ಜ್ವಲಿಸಿ ಪರಿಸ್ತರಣಾದಿಗಳಿಂದ ಸಂಸ್ಕರಿಸಿ, ಕರಗಿದ ಆಜ್ಯದಿಂದ ಉತ್ಸವ ವಿಧಿಗೆ ತಕ್ಕ ರಕ್ಷೋಘ್ನಮಂತ್ರ ಆಜ್ಯಭಾಗ ಇವುಗಳ ಅನಂತರ ಹಿಂದೆ ಹೇಳಿರುವ ಹೋಮವನ್ನು ಮಾಡಿ ಮುಂದೆ ಹೇಳುವ ಚತುರ್ಥೀವಿಭಕ್ತ್ಯಂತವಾದ ಆಯಾಯ ನಾಮಗಳಿಗೆ ಸ್ವಾಹಾಶಬ್ದವನ್ನು ಕೊನೆಯಲ್ಲಿ ಸೇರಿಸಿ ಯವ, ತಿಲ ಬಿಳಿಯಸಾಸವೆ ಇವುಗಳಿಂದ ಒಂದೊಂದು ನಾಮವನ್ನುಚ್ಚರಿಸಿ ಎಂಟು ಅಥವಾ ಇಪ್ಪತ್ತೆಂಟು ಅಥವಾ ನೂರ ಎಂಟುಬಾರಿ ಆಜ್ಯಾಹುತಿಯನ್ನು ಮಾಡಬೇಕು. ಆ ನಾಮಗಳಾವುವೆಂದರೆ—

ಓಂ ನಮೋ ಭಗವತೇ ವಾಸುದೇವಾಯ । ಓಂ ನಮೋ ಭಗವತೇ ಸಂಕ-
ರ್ಷಣಾಯ । ಓಂ ನಮೋ ಭಗವತೇ ಪ್ರದ್ಯುಮ್ನಾಯ । ಓಂ ನಮೋ
ಭಗವತೇ ಅನಿರುದ್ಧಾಯ । ಓಂ ನಮೋ ಭಗವತೇ ಪುರುಷಾಯ ।
ಓಂ ನಮೋ ಭಗವತೇ ಸತ್ಯಾಯ । ಓಂ ನಮೋ ಭಗವತೇ ಅಚ್ಯು-
ತಾಯ । ಓಂ ನಮಃ ಶ್ರಿಯೈ । ಓಂ ನಮಃ ಕಾಲರಾತ್ರ್ಯೈ । ಓಂ
ನಮಃ ಸೃಷ್ಟ್ಯೈ । ಓಂ ನಮಃ ಗರುಡಾಯ । ಓಂ ನಮಸ್ತಾಲಾಯ ।
ಓಂ ನಮೋ ಮಕರಾಯ । ಓಂ ನಮೋ ಋಷ್ಯಾಯ । ಓಂ
ನಮೋಽನನ್ತಾಯ । ಓಂ ನಮಃ ಕೌಸ್ತುಭಾಯ । ಓಂ ನಮೋ
ವನಮಾಲಾಯೈ । ಓಂ ನಮಃ ಪೃಥಿವ್ಯೈ । ಓಂ ನಮಃ ಶಂಖಾಯ ।
ಓಂ ನಮಃ ಪದ್ಮಾಯ । ಓಂ ನಮಃ ಗದಾಯೈ । ಓಂ ನಮಃ
ಚಕ್ರಾಯ ಓಂ ನಮೋ ಹಲಾಯ । ಓಂ ನಮೋ ಮುಸಲಾಯ। ಓಂ
ನಮುಶ್ಚಾಪಾಯ । ಓಂ ನಮುಶ್ಚರ್ಮಣೇ । ಓಂ ನಮಃ ಖಡ್ಗಾಯ ।
ಓಂ ನಮಃ ಸುಭದ್ರಾಯ । ಓಂ ನಮೋ ವಸುಭದ್ರಾಯ ಓಂ ನಮ
ಆಷಾಢಾಯ । ಓಂ ನಮೋ ಯಜ್ಞಕಾತಾಯ । ಓಂ ನಮೋ
ಜಯಾಯ । ಓಂ ನಮೋ ವಿಜಯಾಯ । ಓಂ ನಮ ಆಮೋದಾಯ ।
ಓಂ ನಮಃ ಪ್ರಮೋದಾಯ । ತತೋ ವ್ಯಾಹೃತಿಹೋಮಃ ಕಾರ್ಯಃ ।
ತತೋಗಾಯತ್ರ್ಯಾ ಹೋಮಂ ಕುರ್ಯಾತ್ ।

ತತಸ್ತದ್ವಿಷ್ಣೋಃ ಪರಮಂಪದಮಿತ್ಯನಯಾ ತತೋ ವೈಷ್ಣವಗಾಯತ್ರ್ಯಾ ।
ತತೋ ಯುಂಜತೇ ಮನ ಇತ್ಯನುವಾಕೇನ । ತತಃ ಪುರುಷಸೂಕ್ತೇನ।
ತತೋ ರಥೇ ಅಕ್ಷೇಷ್ವಿತಿ ಋಕ್ಚತುಷ್ಟಯೇನ ತತಶ್ಚಮಕಷಟ್ಕೇನ ।

---

ಈ ಮಂತ್ರಗಳಿಂದ ಸಂಖ್ಯಾಕ್ರಮಕ್ಕೆ ತಕ್ಕಂತೆ ಹೋಮಮಾಡಿದನಂತರ ವ್ಯಾಹೃತಿಹೋಮವನ್ನು ಮಾಡಬೇಕು. ಅನಂತರ ಗಾಯತ್ರಿಯಿಂದ ಹೋಮ ಮಾಡಬೇಕು.

ಅನಂತರ ತದ್ವಿಷ್ಣೋಃ ಪರಮಂ ಪದಂ ಎಂಬ ಋಕ್ಕಿನಿಂದಲೂ ಅನಂತರ ವಿಷ್ಣುಗಾಯಿತ್ರಿಯಿಂದಲೂ, ಅನಂತರ ಯುಂಜತೇಮನಃ ಎಂಬ ಅನುವಾಕದಿಂದಲೂ, ಅನಂತರ ಪುರುಷಸೂಕ್ತದಿಂದಲೂ, ಅನಂತರ ರಥೇ ಅಕ್ಷೇಷು ಎಂಬ ನಾಲ್ಕು ಋಕ್ಕು ಗಳಿಂದಲೂ, ಅನಂತರ ಚಮಕದ ಆರುಋಕ್ಕಿನಿಂದ, ಅನಂತರ ಆಜ್ಯ(ಸೂಕ್ತ)ದಿಂದ

ತತಸ್ತ್ವಾಜ್ಯೇನ ಸಂವತ್ಸರಾದೇವಾದಿಹೋಮ ಪೂರ್ವಕೇಣ ಕರ್ಮ-
ಣೋತ್ತರತಂತ್ರಂ ಸಮಾಪಯೇತ್ ॥

ವಿಷ್ಣೋಃ ಪ್ರತಿಷ್ಠಾಕರಣೇ ಹೋಮ ಏಷ ಪ್ರಕೀರ್ತಿತಃ ।
ಅನ್ಯಾಸಾಂ ದೇವತಾನಾಂ ಚ ತಲ್ಲಿಂಗೈರ್ಜುಹುಯಾದ್ಧವಿಃ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಹೋಮವಿಧಿವರ್ಣನೋ ನಾಮ
ನವೋತ್ತರಶತತಮೋಽಧ್ಯಾಯಃ

---

ಸಂವತ್ಸರದಿಂದ ಮೊದಲು ಆದಿಹೋಮಪೂರ್ವಕವಾದ ಆಯಾಯ ಕರ್ಮದಿಂದ ಉತ್ತರವ್ಯಾಪಾರವನ್ನು ಮುಗಿಸಬೇಕು. ವಿಷ್ಣುಮೂರ್ತಿಯ ಪ್ರತಿಷ್ಠಾಕಾಲದಲ್ಲಿ ಈ ಹೋಮವಿಧಿಯು ಹೇಳಲ್ಪಟ್ಟಿದೆ. ಇತರ ದೇವತೆಗಳ ಪ್ರತಿಷ್ಠೆಯಲ್ಲಿ ಆಯಾಯ ದೇವತೆಗಳ ನಾಮಗಳಿಂದಲೇ ಆಜ್ಯಹೋಮಮಾಡಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಹೋಮವಿಧಿವರ್ಣನವೆಂಬ
ನೂರ ಒಂಭತ್ತನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ದಶೋತ್ತರಶತತಮೋಽಧ್ಯಾಯಃ ||

### || ಮಾರ್ಕಂಡೇಯ ಉವಾಚ ||

**ಗದ್ಯ — ಅಥ ಪ್ರತಿಷ್ಠಾದಿವಸೇ ಪ್ರಾಪ್ತೇ ಶಂಖಪಟಹತೂರ್ಯೈಃ ಶ್ರೀ ಭಗವಂತಂ ವಿಬೋಧಯೇತ್ । ವಿಬೋಧನಮಂತ್ರಂ ಪಠೇತ್ । ತತಃ ಕಲ್ಪ[1]ಕೋಟಿ ಮೂರ್ತಿಧರೋರ್ಧ್ವಬಾಹುಃ ಕಲಶಧರಃ ಸ್ಥಪತಿಶ್ಚ ಅತ್ರ ಭಗವಾನ್ ಯಶ್ಚೇಹ ಭಗವಾನಿತಿ ಮಂತ್ರೇಣ ದೇವಾಗಾರಂ ಪ್ರವಿಶೇಯುಃ। ತತಃ ಪಂಚಗವ್ಯಮಿಶ್ರಸರ್ವೌಷಧೀಃ ಸರ್ವಗಂಧಾನ್ ಸರ್ವರತ್ನಾನಿ । ಸುವರ್ಣಂ ಚ ಪಿಂಡಿಕಾಶ್ವಭ್ರೇ ನಿಖನೇತ್ । ತತ್ರ ಚ ಮಂತ್ರಾ ಭವಂತಿ ಮಹಾಭಾಗಃ । ಭಾಸಃ । ತ್ರಿಸುವರ್ಣಃ । ಭಾರುಣ್ಡಂ।**

---

### ನೂರ ಹತ್ತನೆಯ ಅಧ್ಯಾಯ.

ಮಾರ್ಕಂಡೇಯರು ಹೇಳುತ್ತಾರೆ. ಅನಂತರ ಪ್ರತಿಷ್ಠೆಯ ದಿವಸದಲ್ಲಿ ಶಂಖ ಪಟಹ ವಾದ್ಯಾದಿಗಳಿಂದ ಅಧಿವಾಸಿತನಾಗಿರುವ ಭಗವಂತನನ್ನು ಎಚ್ಚರಗೊಳಿಸ ಬೇಕು. ವಿಬೋಧನ ಮಂತ್ರಗಳನ್ನು ಪಠಿಸಬೇಕು. ಅನಂತರ ಕಲ್ಪಕನಿಂದ ಉಕ್ತವಾದ ಮೂರ್ತಿಯನ್ನು ಧರಿಸಿರುವ ಸಾತ್ವತ, ಅರ್ಘ್ಯಬಾಹು, ಕಲಶಧರ, ಸ್ಥಪತಿ ಇವರು ಅತ್ರ ಭಗವಾನ್ ಎಂಬ ಮಂತ್ರವನ್ನು ಪಠಿಸುತ್ತಾ ದೇವಗೃಹಕ್ಕೆ ಪ್ರವೇಶಿಸಬೇಕು. ಅನಂತರ ಪಂಚಗವ್ಯಮಿಶ್ರವಾದ ಸರ್ವೌಷಧಿಗಳನ್ನೂ, ಸರ್ವಗಂಧದ್ರವ್ಯಗಳನ್ನೂ, ಸರ್ವರತ್ನಗಳನ್ನೂ, ಸುವರ್ಣವನ್ನೂ ಸಹ ಪ್ರತಿಮೆಯ ಪಾದಪೀಠಕ್ಕಾಗಿ ಮಾಡಿರುವ

---

1 ಇಲ್ಲಿ ಪಾಠವು ಅಶುದ್ಧವಾಗಿದೆ. ಕಲ್ಪಕೋಕ್ತಮೂರ್ತಿಧರೋಽರ್ಘ್ಯಬಾಹುಃ ಎಂಬ ಶುದ್ಧ ಪಾಠವನ್ನು ಊಹಿಸಿ ಅರ್ಥ ಬರೆಯಲಾಗಿದೆ.

ಮೃತ್ಯುಲಾಂಗೂಲಂ । ಸ್ವಸ್ತಿನ ಇಂದ್ರಃ । ದ್ವಾದಶಾಧ್ಯಾತ್ಮಂ । ಆತ್ಮವ್ಯೂಹಂ ಚ ॥

ತತಃ ಸಾಂವತ್ಸರೋದ್ದಿಷ್ಟಕಾಲೇ ಭಗವಂತಂ ಸುಸಮಂ ಸುದೃಷ್ಟಿ ಪಿಠಿಕಾಯಾಂ ಧ್ರುವಾದ್ಯೌರಿತಿ ನಿಶ್ಚಲಮನೇನೈವ ಮಂತ್ರೇಣ ಕುರ್ಯಾತ್ । ನಾಮಚಾಸ್ಯೋದೀರಯೇತ್ । ಪ್ರತಿಷ್ಠಾಸಾಮ ಚ ಪಠೇತ್ । ಸರ್ವಶ್ಚ ಜನೋ ಲಾಜಾಕುಸುಮೋತ್ಕರೇಣ ಜಯಶಬ್ದೇನ ಕೋಲಾಹಲಂ ಕುರ್ಯಾತ್ । ವಾದಿತ್ರಾಣಿ ವಾದಯೇತ್ । ಓಂ ನಮೋ ಭಗವತೇ ವಾಸುದೇವಾಯೇತ್ಯುದೀರಯೇತ್ ॥

ಬ್ರಹ್ಮಸೂಕ್ತಂ ಚ ಪಠೇತ್ । ಅಗ್ನೇರಾಯುರಸೀತಿ ಜೀವದಾನಂ ಕುರ್ಯಾತ್। ಕಲ್ಪಕಶ್ಚ ಕಲಶಪಾಣಿಃ ಪಠೇತ್ ।

---

ಹಳ್ಳದಲ್ಲಿ ನೆಟ್ಟು ಮುಚ್ಚಬೇಕು. ಆಗ ಈ ಮಂತ್ರಗಳನ್ನು ಉಪಯೋಗಿಸಬೇಕು. ಮಹಾಭಾಗ, ಭಾಸ, ತ್ರಿಸುಪರ್ಣ, ಭಾರುಂಡ (ಸಾಮ) ಮೃತ್ಯುಲಾಂಗೂಲ, ಸ್ವಸ್ತಿನ ಇಂದ್ರಃ, ದ್ವಾದಶಾಧ್ಯಾತ್ಮ, ಆತ್ಮವ್ಯೂಹ,

ಅನಂತರ ಜ್ಯೋತಿಷಿಕನಿಂದ ನಿರ್ದಿಷ್ಟವಾದ ಶುಭಸಮಯದಲ್ಲಿ ಭಗವಂತನ ವಿಗ್ರಹವನ್ನು ಸಮವಾಗಿಯೂ, ಸುದೃಷ್ಟಿಯಿಂದ ಕೂಡಿಯೂ, ಇರುವಂತೆ ಧ್ರುವಾ ದ್ಯೌಃ ಎಂಬ ಮಂತ್ರದಿಂದ ಸ್ಥಾಪಿಸಿ ಆ ಮಂತ್ರದಿಂದಲೇ ನಿಶ್ಚಲವಾಗಿರುವವಂತೆ ಭದ್ರ ಪಡಿಸಬೇಕು. ಮೂರ್ತಿಯ ನಾಮಧೇಯವನ್ನೂ ಉಚ್ಚರಿಸಬೇಕು. ಪ್ರತಿಷ್ಠಾಸಾಮ ವನ್ನೂ ಗಾನಮಾಡಬೇಕು. ಎಲ್ಲಾ ಜನರೂ ಹೂವುಗಳಿಂದ ಕೂಡಿದ ಅರಳುಗಳನ್ನು ಎರಚುತ್ತಾ ಜಯಶಬ್ದವನ್ನುಚ್ಚರಿಸುತ್ತಾ ಘೋಷಣೆ ಮಾಡಬೇಕು. ವಾದ್ಯಗಳನ್ನೂ ವಾದಿಸಬೇಕು ಓಂ ನಮೋ ಭಗವತೇ ವಾಸುದೇವಾಯ ಎಂದು ಉಚ್ಚರಿಸಬೇಕು.

ಓಂ ಪ್ರತಿಷ್ಠಿತೋಸಿ ಭಗವನ್ ಸುಪ್ರತಿಷ್ಠಾ ಭವತ್ವಿಯಂ ।
ಸಾನ್ನಿಧ್ಯಂ ಪ್ರತಿಪದ್ಯಸ್ವ ಯಜಮಾನಾಭಿವೃದ್ಧಯೇ ।
ಶನ್ನೋಸ್ತು ದ್ವಿಪದೇ ನಿತ್ಯಂ ಶನ್ನಶ್ಚಾಸ್ತು ಚತುಷ್ಪದೇ ।
ಶನ್ನೋಽಸ್ತು ಸರ್ವಲೋಕಸ್ಯ ಶನ್ನೋ ರಾಜ್ಞಸ್ತಥೈವ ಚ ।
ಯಜಮಾನಃ ಸಭೃತ್ಯೋ ಯೋ ಸಪುತ್ರಪಶುಬಾಂಧವಃ ।
ರಕ್ಷ್ಯೋ ಭಗವತಾ ನಿತ್ಯಂ ದೇಶಶ್ಚಾಯಂ ನಮೋಽಸ್ತುತೇ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಭಗವದ್ವಿಬೋಧನಮಂತ್ರವರ್ಣನೋ ನಾಮ
ದಶೋತ್ತರಶತತಮೋಽಧ್ಯಾಯಃ

---

ಬ್ರಹ್ಮಸೂಕ್ತವನ್ನೂ ಪಠಿಸಬೇಕು. ಅಗ್ನೇರಾಯುರಸಿ ಎಂಬ ಮಂತ್ರದಿಂದ ಪ್ರಾಣಪ್ರತಿಷ್ಠೆ ಮಾಡಬೇಕು. ಕಲ್ಪಕನೂ ಸಹ ಕಲಶಪಾಣಿಯಾಗಿ ಮಂತ್ರವನ್ನು ಪಠಿಸಬೇಕು. ಪೂಜ್ಯನಾದ ಪರಮಾತ್ಮನೇ ನೀನು ಪ್ರತಿಷ್ಠೆ ಹೊಂದಿದ್ದೀಯೆ. ಈ ಪ್ರತಿಷ್ಠೆಯು ಮಂಗಳಪ್ರದವಾಗಲಿ. ಯಜಮಾನನ ಅಭಿವೃದ್ಧಿಗಾಗಿ ನೀನು ಇಲ್ಲಿ ಸಾನ್ನಿಧ್ಯ ಹೊಂದು. ದ್ವಿಪಾತ್ಪ್ರಾಣಿಗಳಿಗೂ ಚತುಷ್ಪಾತ್ಪ್ರಾಣಿಗಳಿಗೂ ಸುಖವುಂಟಾಗಲಿ. ಎಲ್ಲಾ ಲೋಕಕ್ಕೂ ರಾಜನಿಗೂ ಸುಖವುಂಟಾಗಲಿ. ಪುತ್ರ, ಪಶು, ಬಾಂಧವ, ಭೃತ್ಯರೊಡಗೂಡಿರುವ ಈ ಯಜಮಾನನು ಪೂಜ್ಯನಾದ ನಿನ್ನಿಂದ ಯಾವಾಗಲೂ ರಕ್ಷಿಸಲ್ಪಡಬೇಕು. ಈ ದೇಶವೂ ನಿನ್ನಿಂದ ರಕ್ಷಿಸಲ್ಪಡಬೇಕು. ನಿನಗೆ ನಮಸ್ಕಾರಗಳು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಭಗವದ್ವಿಬೋಧನ ಮಂತ್ರವರ್ಣನವೆಂಬ
ನೂರ ಹತ್ತನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

|| ಏಕಾದಶೋತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

ಗದ್ಯ— ಅಥ ಪ್ರತಿಷ್ಠಿತಸ್ಯ ಭಗವತೋ ಬೃಹತ್ಸ್ನಾಪನಮಾರಭೇತ್ । ತತೋ ಗಾಯತ್ರೀಂ ಪಠೇತ್। ಇಷೇತ್ವೇತ್ಯನೇನ ಪಠದ್ಗ್ರಹಂ ದದ್ಯಾತ್ । ವೈಷ್ಣವಗಾಯತ್ರ್ಯಾ ಪಾದುಕೇ। ಭೂಮ್ಯಾವೃತ್ವಾಯನೋಽಸೀತಿ ಮೃದಂ। ಶನ್ನಆಪ ಇತ್ಯರ್ಹಣಂ। ದೇವೇಭ್ಯೋ ವನಸ್ಪತ ಇತಿ ದಂತಕಾಷ್ಠಂ । ಯಾಮಾಲಿಖೇತಿ ಜಿಹ್ವಾನಿರ್ಲೇಖನಂ । ಆಪೋಹಿಷ್ಠೇತ್ಯಾಚಮನಂ। ಪಾತ್ರೇಣಾರ್ಘ್ಯಂ। ಯುವಾಸುವಾಸಾ ಇತಿ ಸ್ನಾನಶಾಟಕಂ । ಧ್ರುವಾದ್ಯೌರಿತ್ಯಾಸನಂ । ಪ್ರತಿಷ್ಠಾಸಾಮ್ನಾ ಪಾದಪೀಠಂ

---

### ನೂರ ಹನ್ನೊಂದನೆಯ ಅಧ್ಯಾಯ

ಮಾರ್ಕಂಡೇಯರು ಹೇಳುತ್ತಾರೆ— ಅನಂತರ ಪ್ರತಿಷ್ಠಿತನಾದ ಭಗವಂತನಿಗೆ ಬೃಹತ್ಸ್ನಾಪನವನ್ನು ಪ್ರಾರಂಭಿಸಬೇಕು ಅನಂತರ ಗಾಯತ್ರಿಯನ್ನು ಪಠಿಸಬೇಕು. ಇಷೇತ್ವಾ ಎಂಬ ಮಂತ್ರದಿಂದ ಪೀಕದಾನಿಯನ್ನು ಅರ್ಪಿಸಬೇಕು ವಿಷ್ಣುಗಾಯತ್ರಿಯಿಂದ ಪಾದುಕೆಗಳನ್ನೂ, ಭೂಮ್ಯಾವೃತ್ವಾ ಎಂಬ ಮಂತ್ರದಿಂದ ಮೃತ್ತಿಕೆಯನ್ನೂ, ಶನ್ನ ಆಪಃ ಎಂಬ ಮಂತ್ರದಿಂದ ಅರ್ಹಣೋದಕವನ್ನೂ, ದೇವೇಭ್ಯೋ ವನಸ್ಪತೇ ಎಂಬ ಮಂತ್ರದಿಂದ ದಂತಕಾಷ್ಠವನ್ನೂ, ಯಾಮಾಲಿಖ ಎಂಬ ಮಂತ್ರದಿಂದ ನಾಲಗೆಯನ್ನು ಶುದ್ಧಿಗೊಳಿಸುವ ಕಾಷ್ಠವನ್ನೂ, ಆಪೋಹಿಷ್ಠಾ ಎಂಬ ಮಂತ್ರದಿಂದ ಆಚಮನವನ್ನೂ. ಪಾತ್ರದಿಂದ ಅರ್ಘ್ಯವನ್ನೂ, ಯುವಾಸು

**ಕನಿಕ್ರದೇತಿ ಬೀಜಪಾತ್ರಂ । ತೇಜೋಽಶುಕ್ರಮಸೀತಿ ದೀಪಂ । ಮುಖಾದಿಂದ್ರೇಶ್ಯಾದರ್ಶಂ । ತೇಥೈವ ಮುಖಾಲೇಪಃ । ರೋಧ್ರಂ । ತ್ವೈಕ್ ಕೋಲಮಜ್ಜಾ ವಚಾ । ಕುಷ್ಠಂ । ನೀಲೋತ್ಪಲಾನಿ ಕುಂಕುಮಂ ಚೇತಿ ಮುಖಾಲೇಪಃ ।**

**ಸಹಸ್ರಶೀರ್ಷೇತಿ ತೈಲಂ ಭದ್ರಂ ಕರ್ಣೇಭಿರಿತ್ಯನೇನೋದ್ವರ್ತನಂ । ಸುಪ್ರತೀಕೇನ ಚಮುಸಾ ಸ್ನಾನಂ । ಋಷಭೇನ ನಿಷ್ಪಂಸನಸ್ನಾನಂ । ಘೃತವತೀತಿ ಘೃತಸ್ನಾನಂ ದಧಿಕ್ರಾವ್ಣ ಇತಿ ದಧ್ನಾ । ಪಯಸ್ವತೀತಿ ಪಯಸಾ। ಗಂಧದ್ವಾರೇತಿ ಗೋಮಯೇನ। ಗಾಯತ್ರ್ಯಾ ಗೋಮೂತ್ರೇಣ । ಅಘಮರ್ಷಣೇನ ಪಂಚಗವ್ಯೇನ । ಧ್ರುವಾದ್ಯೌರಿತಿ ಧ್ರುವಂ ನಿಷ್ಪಂಸನೇನ। ಮಧುವಾತಾ ಋತಾಯತ ಇತಿ ಮಧುನಾ ಸುಪ್ರತೀ-**

---

ವಾಸಾಃ ಎಂಬ ಮಂತ್ರದಿಂದ ಸ್ನಾನಶಾಟಿಯನ್ನೂ ಧ್ರುವಾದ್ಯೌಃ ಎಂದು ಆಸನವನ್ನೂ ಪ್ರತಿಷ್ಠಾಸಾಮದಿಂದ ಪಾದಪೀಠವನ್ನೂ, ಕನಿಕ್ರದ ಎಂಬ ಮಂತ್ರದಿಂದ ಬೀಜಪಾತ್ರೆಯನ್ನೂ, ತೇಜೋಽಶುಕ್ರಮಸಿ ಎನ್ನುವ ಮಂತ್ರದಿಂದ ದೀಪವನ್ನೂ, ಮುಖಾದಿಂದ್ರ ಎಂಬ ಮಂತ್ರದಿಂದ ಕನ್ನಡಿಯನ್ನೂ ಅರ್ಪಿಸಬೇಕು. ಆ ಮಂತ್ರದಿಂದಲೇ ಮುಖಲೇಪವನ್ನೂ ಅರ್ಪಿಸಬೇಕು. ಲೋಧ್ರ, ಹಿಪ್ಪಲಿ, ಬಜೆ, ಚಂಗಲ್‌ಕೋಷ್ಠ, ಕಪ್ಪುನೈದಿಲೆ, ಕುಂಕುಮ ಕೇಸರಿ ಇವುಗಳಿಗೆ ಮುಖಲೇಪವೆಂದು ಹೆಸರು.

ಸಹಸ್ರಶೀರ್ಷಾ ಎಂಬ ಮಂತ್ರದಿಂದ ತೈಲವನ್ನೂ, ಭದ್ರಂ ಕರ್ಣೇಭಿಃ ಎಂಬುದರಿಂದ ಉದ್ವರ್ತನ ಚೂರ್ಣವನ್ನೂ, ಸುಪ್ರತೀಕೇನ ಚಮುಸಾ ಎಂಬುವ ಮಂತ್ರದಿಂದ ಸ್ನಾನವನ್ನೂ, ಋಷಭೇನ ಎಂಬ ಮಂತ್ರದಿಂದ ನಿಷ್ಪಂಸನಸ್ನಾನವನ್ನೂ, ಘೃತವತೀ ಎಂಬುದರಿಂದ ಘೃತಸ್ನಾನವನ್ನೂ, ದಧಿಕ್ರಾವ್ಣ ಎಂಬುದರಿಂದ ದಧಿಸ್ನಾನವನ್ನೂ, ಪಯಸ್ವತೀ ಎಂಬ ಮಂತ್ರದಿಂದ ಕ್ಷೀರವನ್ನೂ, ಗಂಧದ್ವಾರಾ ಎಂಬುವದರಿಂದ ಗೋಮಯವನ್ನೂ, ಗಾಯತ್ರಿಯಿಂದ ಗೋಮೂತ್ರವನ್ನೂ, ಅಘಮರ್ಷಣದಿಂದ ಪಂಚಗವ್ಯವನ್ನೂ, ಧ್ರುವಾದ್ಯೌಃ ಎಂಬುದರಿಂದ ಆಸನವನ್ನೂ ಮಧುವಾತಾ ಎಂಬ ಮಂತ್ರದಿಂದ ಜೇನನ್ನೂ, ಸುಪ್ರತೀಕೇನ ಎಂಬ ಮಂತ್ರದಿಂದ ಕಬ್ಬಿನರಸವನ್ನೂ, ಭೌಮೇನ ಎಂಬ ಮಂತ್ರದಿಂದ ಗುಡೋದಕವನ್ನೂ, ಅಥರ್ವಶಿರೋ ಮಂತ್ರದಿಂದ ಶರ್ಕರೋದಕವನ್ನೂ, ವಾಮದೇವೇನ ಎಂಬ ಮಂತ್ರದಿಂದ ನದಿಯ

ಕೇನೇತಿ ಇಕ್ಷುರಸೇನ । ಭೌಮೇನ ಗುಡೋದಕೇನ । ಅಥರ್ವಶಿರಸಾ ಶರ್ಕರೋದಕೇನ । ವಾಮದೇವೇನೇತಿ ನದ್ಯುಭಯಕೂಲಮೃದಾ । ಶಾಂತಾದ್ಯೌರಿತಿ ಸಂಗಮಮೃದಾ । ಪ್ರಾಣಸೂಕ್ತೇನ ಸರೋಮೃದಾ । ವಾರಾಹೇಣೇತಿ ವರಾಹೋದ್ಧೃತಮೃದಾ । ವಾಮದೇವೇನೇತಿ ಗಜದಂತಮೃದಾ । ವೃಷಭೇಣೇತಿ ವೃಷಭ ಶೃಂಗೋದ್ಧೃತಮೃದಾ । ಅಶ್ವಕ್ರಾಂತೇತಿ ಸರ್ವಾಭಿಃ ॥

ಭಾರುಂದೇನೇತ್ಯಾಮಲಕೈಃ। ಕರ್ಣೇನೇತಿ ಲೋಧ್ರೇಣ। ಜ್ಯೇಷ್ಠಸಾಮ್ನೇತಿ ಕಾಲೇಯಕೇನ । ಬೃಹತ್ಸಾಮ್ನೇತಿ ಬೀಜಪೂರಕೇಣ । ಕೃಷ್ಣಾಜಿನೇನೇತಿ ವರ್ಣಕಸ್ನಾನೀಯೇನ । ಅಗ್ನ ಆಯುರಸೀತಿ ತಗರೇಣ । ಶ್ರೀಸೂಕ್ತೇನೇತಿ ಪ್ರಿಯಂಗುನಾ । ವಿಷ್ಣೋರರಾಟಮಸೀತಿ ಸಿದ್ಧಾರ್ಥಕೈಃ । ಕೃಷ್ಣಮಣಿನೇತಿ ಕೃಷ್ಣೇನ। ಶಿರಿಂಭಿಟೇನೇತಿ ಕುಶೋದಕೇನ। ಯಾ ಓಷಧಯ ಇತಿ ಸರ್ವೌಷಧೀಭಿಃ। ಆ ಬ್ರಹ್ಮನ್ ಬ್ರಾಹ್ಮಣ ಇತಿ ಬೀಜೈಃ । ಪುಷ್ಪವತೀತಿ ಪುಷ್ಪೈಃ ॥

---

ಎರಡು ದಡಗಳ ಮೃತ್ತಿಕೆಯನ್ನೂ, ಶಾಂತಾದ್ಯೌಃ ಎಂಬ ಮಂತ್ರದಿಂದ ನದೀಸಂಗಮ ಮೃತ್ತಿಕೆಯನ್ನೂ, ಪ್ರಾಣಸೂಕ್ತದಿಂದ ಸರೋವರದ ಮೃತ್ತಿಕೆಯನ್ನೂ, ವಾರಾಹೇಣ ಎಂಬ ಮಂತ್ರದಿಂದ ವರಾಹದಿಂದ ಉದ್ಧರಿಸಲ್ಪಟ್ಟ ಮೃತ್ತಿಕೆಯನ್ನೂ, ವಾಮದೇವೇನ ಎಂಬುದರಿಂದ ಆನೆಯ ಕೊಂಬಿನಿಂದ ಉದ್ಧರಿಸಲ್ಪಟ್ಟ ಮೃತ್ತಿಕೆಯನ್ನೂ, ವೃಷಭೇಣ ಎಂಬುವ ಮಂತ್ರದಿಂದ ಎತ್ತಿನಕೊಂಬಿನ ಮೃತ್ತಿಕೆಯನ್ನೂ, ಅಶ್ವಕ್ರಾಂತೆ ಎಂಬ ಮಂತ್ರದಿಂದ ಎಲ್ಲಾ ಮೃತ್ತಿಕೆಗಳನ್ನೂ, ಭಾರುಂದೇನ ಎಂಬ ಮಂತ್ರದಿಂದ ಆಮಲಕ (ನೆಲ್ಲಿ) ವನ್ನೂ, ವಿಕರ್ಣೇನ ಎಂಬುವುದರಿಂದ ಲೋಧ್ರವನ್ನೂ ,ಜ್ಯೇಷ್ಠ ಸಾಮ್ನಾ ಎಂಬುವುದರಿಂದ ಹಾಲುಮಡ್ಡಿಯನ್ನೂ, ಬೃಹತ್ಸಾಮ್ನಾ ಎಂಬುವುದರಿಂದ ಮಾದಳದ ಹಣ್ಣನ್ನೂ, ಕೃಷ್ಣಾಜಿನೇನ ಎಂಬುವುದರಿಂದ ಬಣ್ಣದ ಸ್ನಾನೀಯ ಚೂರ್ಣವನ್ನೂ, ಅಗ್ರ ಆಯುರಸಿ ಎಂಬುವುದರಿಂದ ತಗರವನ್ನೂ. ಶ್ರೀಸೂಕ್ತೇನ ಎಂಬುವುದರಿಂದ ಪ್ರೇಂಕಣಗಿಡವನ್ನೂ, ವಿಷ್ಣೋರರಾಟಮಸಿ ಎಂಬುವುದರಿಂದ ಬಿಳಿಯಸಾಸವೆಯನ್ನೂ, ಕೃಷ್ಣಮಣಿನಾ ಎಂಬುವುದರಿಂದ ಕರಿಯ ಸಾಸವೆಯನ್ನೂ, ಶಿರಿಂಭಿಟೇನ ಎಂಬ ಮಂತ್ರದಿಂದ ಶುದ್ಧೋದಕವನ್ನೂ, ಯಾಓಷಧಯಃ ಎಂಬುವುದರಿಂದ ಸರ್ವೌಷಧಿಗಳನ್ನೂ, ಆಬ್ರಹ್ಮನ್ಬ್ರಾಹ್ಮಣ ಎಂಬುವುದರಿಂದ ಬೀಜಗಳನ್ನೂ ಪುಷ್ಪವತೀ ಎಂಬ ಮಂತ್ರದಿಂದ ಹೂವುಗಳನ್ನೂ ಅರ್ಪಿಸಬೇಕು.

ವನಸ್ಪತೇ ವೀಡ್ವಂಗ ಇತಿ ವನಸ್ಪತಿಕಲಾಪೈಃ । ಪುಷ್ಪವತೀತಿ ಫಲೈಃ । ಆಶುಃ ಶಿಶಾನ ಇತಿ ರತ್ನೈಃ । ಗಂಧದ್ವಾರೇತಿ ಗನ್ಧೈಃ । ಓಂಕಾರ ನಮಸ್ಕಾರ ಪವಿತ್ರೈಃ ಶಿರಃಸ್ನಾನೌಷಧೀಭಿಃ ಯಥಾ ಕುಷ್ಠಂ, ರೋಧ್ರಂ ಮುಸ್ತಾಃ, ವಚಾ, ಸರ್ಷಪಾಃ, ಜಯಂತೀ, ವಿಷ್ಣುಕ್ರಾಂತಾ, ಪುನರ್ನವಾ, ಬ್ರಾಹ್ಮೀ, ತಗರಂ, ಅತಿಬಲಾ, ನವಬಲಾ, ನಾಗಬಲಾ, ತ್ವಕ್ಪತ್ರಂ, ಅಗುರುವಾಲುಕಂ, ಹರೇಣುಕಂ, ಲವಙ್ಗಂ, ಅಗುರಂ, ಉಶೀರಂ, ನಾಲಿಕಾಚೂರ್ಣಕಂ, ದ್ವೇಹರಿದ್ರೇ ಇತಿ । ಏವಂ ಸ್ನಾನಸ್ಯ ಕಲಶದಾನಂ ಭವತಿ ॥

ತತ್ರಾದಾವೇವ ಓಂಕಾರ ನಮಸ್ಕಾರ ಪವಿತ್ರಾಭಿಃ ಜ್ಞಾತ್ವಾ ದಶಾಧ್ಯಾತ್ಮ-ವೃತ್ತಿಪಿಂಡಮಾಧುರ್ಯೈಃ ಸಾತ್ವತೋದದ್ಯಾತ್ । ತತಃ ಸಾಮವಿತ್ ಮಹಾವಾಮದೇವಲಕ್ಷರಥಂತರ ಶಾಕ್ವರಭಾರುಂಡ ಬೃಹತ್ಸಾಮಭಿಃ ।

---

ವನಸ್ಪತೇ ವೀಡ್ವಂಗ ಎಂಬ ಮಂತ್ರದಿಂದ ವನಸ್ಪತಿಗಳಿಂದಲೂ, ಪುಷ್ಪವತೀ ಮಂತ್ರದಿಂದ ಫಲಗಳಿಂದಲೂ, ಆಶುಃ ಶಿಶಾನ ಎಂಬ ಮಂತ್ರದಿಂದ ರತ್ನಗಳಿಂದಲೂ ಗಂಧದ್ವಾರಾ ಎಂಬುದರಿಂದ ಗಂಧಗಳಿಂದಲೂ, ಓಂಕಾರ ನಮಸ್ಕಾರಗಳಿಂದ ಪವಿತ್ರಗಳಾದ ಶಿರಃಸ್ನಾನಕ್ಕೆ ತಕ್ಕ ಓಷಧಿವಿಶೇಷಗಳಿಂದಲೂ ಅಭಿಷೇಕ ಮಾಡಬೇಕು. ಆ ಓಷಧಿಗಳೂ ಸಹ ಚಂಗಲ್‌ಕೋಷ್ಠ, ಲೋಧ್ರ, ಕೊನ್ನಾರೆ, ಬಜೆ, ಸಾಸವೆ, ವೈಜಯಂತಿಕಾ ಎಂಬ ತಕ್ಕಿಲೆಗಿಡ, ವಿಷ್ಣುಕ್ರಾಂತಾ, ಕೊಮ್ಮೆಗಿಡ, ಹೊನಗೊನ್ನೆ, ತಗರದಗಿಡ, ಅತಿಬಲಾ, ನವಬಲಾ, ಬೋಳಂಗಡಲೆ, ದಾಲ್ಚಿನ್ನಿ, ಅಗರುಗಿಡದ ಚೂರ್ಣ, ರೇಣುಕವೆಂಬ ಗಂಧಿಗರಸನಗು, ಲವಂಗ, ಮಲ್ಲಿಗೆಯ ವಾಸನೆಯುಳ್ಳ ಅಗುರು, ಲಾಮಂಚ, ನಾಲಿಕಾಚೂರ್ಣಕಂ, ಮರದರಶಿನ ಛಾಯಾ ಅರಶಿನ ಇವೆಲ್ಲವೂ ಶಿರಃಸ್ನಾನದ ಓಷಧಿಗಳು. ಈ ವಿಧವಾದ ಸ್ನಾನಕ್ಕೆ ಆಯಾಯ ಕಲಶದಾನವೂ ನಡೆಯಬೇಕು.

ಈ ಸಂದರ್ಭದಲ್ಲಿ ಸಾತ್ವತನು ಮೊದಲೇ ದಶಾದ್ಯಾತ್ಮ ವೃತ್ತಿಪಿಂಡ ಮಾಧುರಾದಿ ಮಂತ್ರಗಳಿಂದ ಆಯಾಯ ವಸ್ತುಗಳನ್ನು ಪರಿಶೀಲಿಸಿ ಸಮರ್ಪಿಸಬೇಕು, ಎಲ್ಲಾ ವಸ್ತುಗಳೂ ಓಂಕಾರ ನಮಸ್ಕಾರಾದಿಗಳಿಂದ ಪವಿತ್ರಗಳಾಗಿರಬೇಕು ಅನಂತರ ಸಾಮವೇದಿಯು, ಮಹಾಸಾಮದಿಂದ, ಲಕ್ಷರಥನ್ತರ ಶಾಕ್ವರ ಭಾರುಂಡ ಬೃಹತ್ಸಾಮಗಳನ್ನು ಪಠಿಸಬೇಕು ಅಥರ್ವವೇದಿಯು ಅಥರ್ವಶಿರಾ: ಪ್ರತ್ಯಂಗಿರ: ಶಂಖಮಣಿ

ಅಥರ್ವವಿತ್ ಅಥರ್ವಶಿರಾಃ ಪ್ರತ್ಯಂಗಿರಃ ಶಂಖಮಣಿ ಪ್ರಾಣಸೂಕ್ತ-
ಮಣಿ ಪ್ರತಿಸರಮಣಿಭಿಃ । ಋಗ್ವೇದವಿತ್ ಗಾಯತ್ರೀ ಸಾವಿತ್ರೀ
ಗೋಸೂಕ್ತೈಶ್ಚ ಸೂರ್ಯಸೂಕ್ತ ಪುರುಷಸೂಕ್ತ ಶ್ರೀಸೂಕ್ತೈ-
ರ್ಯಜುರ್ವೇದವಿತ್ । ಕೃಷ್ಣಾಜಿನ ಚಮಕಷಟ್ಕ ಷಡೃತು ಕೂಶ್ಮಾಂಡ
ರುದ್ರದ್ರವಿಣೈಃ । ತತಃ ಸ್ವಶಕ್ತ್ಯಾ ಕಲಶಸಹಸ್ರ, ಕಲಶಾಷ್ಟಶತ
ಪಂಚವಾ ಶತಾನಿ, ಚತ್ವಾರಿವಾ, ಶತಮಷ್ಟಾಧಿಕಂ ವಾ ಅಷ್ಟಾವಿಂಶ-
ತಿರ್ವಾ ಷ್ಟೌವಾ ಸ್ವರ್ಚಿತಾನ್ವನಸ್ಪತಿಕಲಾಪಗರ್ಭಾನ್ ಶಂಖಧ್ವನಿಸ್ವನೇನ
ವಾದ್ಯಶಬ್ದೇನ ಜಯಜಯಕಾರವಂದಿಶಬ್ದೇನ ಪ್ರಸುಭಗಾನರ್ತಿತೇನ
ದೇಯಾಃ ॥

ತತಃ ಪವಿತ್ರೇಣೋಪಕಲಶಾನ್ ವಿಶ್ರಾವ್ಯ ವೇದ್ಯಾಂ ಕ್ಷಿಪೇತ್ । ಘೃತವ-
ತೀತಿ ಘೃತಾವೇಕ್ಷಾಂ ದದ್ಯಾತ್ । ಸಹಸ್ರಶೀರ್ಷೇಣ ಶಿಖಂಡೋದ
ಗ್ರಹಣ ಶಾಟಕಂ ದದ್ಯಾತ್ । ಯುವಾಸುವಾಸ ಇತಿ ಪ್ರತಿನಿವಸನ-
ಶಾಟಕಂ । ಇದಮಾಪಃ ಪ್ರವಹತ ಇತ್ಯಾಚಮನೀಯಂ । ತತೋ

---

ಪ್ರಾಣಸೂಕ್ತಮಣಿ ಪ್ರತಿಸರಮಣಿಗಳಿಂದ ಪಾರಾಯಣಮಾಡಬೇಕು ಋಗ್ವೇದಿಯು ಗಾಯತ್ರೀ ಸೂರ್ಯಸೂಕ್ತ ಸಾವಿತ್ರೀಸೂಕ್ತ ಗೋಸೂಕ್ತಗಳನ್ನೂ ಯಜುರ್ವೇದಿಯು ಸೂರ್ಯಸೂಕ್ತ ಪುರುಷಸೂಕ್ತ ಶ್ರೀಸೂಕ್ತಗಳನ್ನೂ ಪಾರಾಯಣ ಮಾಡಬೇಕು. ಕೃಷ್ಣಾಜಿನ ಚಮಕಷಟ್ಕ ಷಡೃತು. ಕೂಶ್ಮಾಂಡ ರುದ್ರ ದ್ರವಿಣಮಂತ್ರಗಳಿಂದ ಪಾರಾಯಣಮಾಡಬೇಕು ಅನಂತರ ತನ್ನಶಕ್ತಿಗೆ ತಕ್ಕಂತೆ ಕಲಶಸಹಸ್ರ ಅಥವಾ ಎಂಟುನೂರು, ಐದುನೂರು, ನಾಲ್ಕುನೂರು, ನೂರಎಂಟು, ಇಪ್ಪತೆಂಟು, ಎಂಟು ಸಂಖ್ಯೆಯಲ್ಲಿ ಯಾವುದಾದರೊಂದು ಪರಿಮಿತಗಳಾದ ಕಲಶಗಳನ್ನು ವನಸ್ಪತಿ ಕಲಾಪಗಳೊಡನೆ ಚನ್ನಾಗಿ ಪೂಜಿಸಿ ಶಂಖಧ್ವನಿ ವಾದ್ಯಶಬ್ದ ವಂದಿಗಳ ಜಯಕಾರ ಶಬ್ದಗಳೊಡನೆ ಸಂತೋಷದಿಂದ ನರ್ತನಮಾಡುತ್ತಾ ಕೊಡಬೇಕು.

ಅನಂತರ ಉಪಕಲಶಗಳನ್ನೆಲ್ಲಾ ಪವಿತ್ರದಿಂದ ಉದ್ವಾಸನಮಾಡಿ ವೇದಿಯಲ್ಲಿ ಹಾಕಬೇಕು. ಘೃತವತೀ ಎಂಬಮಂತ್ರದಿಂದ ಆಜ್ಯಾವೇಕ್ಷಣವನ್ನು ದರ್ಶಿಸಬೇಕು ಸಹಸ್ರಶೀರ್ಷಾ ಎಂಬಮಂತ್ರದಿಂದ ತಲೆಯೊರಸಿಕೊಳ್ಳುವ ವಸ್ತ್ರವನ್ನು ಅರ್ಪಿಸ ಬೇಕು. ಯುವಾಸುವಾಸ ಎಂಬ ಮಂತ್ರದಿಂದ ಉಡುವ ವಸ್ತ್ರವನ್ನು ಅರ್ಪಿಸಬೇಕು ಇದಮಾಪ: ಎಂಬಮಂತ್ರದಿಂದ ಆಚಮನೀಯವನ್ನು ಅರ್ಪಿಸಬೇಕು. ಅನಂತರ

ಜಾನುಭ್ಯಾಂ ಪಾಣಿಭ್ಯಾಂ ಶಿರಸಾ ಚ ನಮಸ್ಕಾರಂ ಕುರ್ಯಾತ್ ।
ಬೃಹತ್ಸ್ನಪನಮೇತದ್ಧಿ ಯಃ ಕರೋತಿ ನರೋ ಹರೇಃ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕೇ ಮಹೀಯತೇ ।

ನ ಕೇವಲಂ ಪ್ರತಿಷ್ಠಾಯಾಂ ಸರ್ವದೈವಂ ಸಮಾಚರೇತ್ ।
ಶಾಂತಿದಂ ಪೌಷ್ಟಿಕಂ ಕಾಮ್ಯಂ ಬೃಹತ್ಸ್ನಪನಮುತ್ತಮಂ ॥
ದಿವ್ಯಾಂತರಿಕ್ಷಭೌಮಾನಾಮುತ್ಪಾತಾನಾಂ ಸಮುದ್ಭವೇ ।
ದೇವದೇವಸ್ಯ ರಾಜೇಂದ್ರ ಬೃಹತ್ಸ್ನಪನಮಾಚರೇತ್ ॥
ನಾಸ್ತಿ ಲೋಕೇ ಸಮುತ್ಪಾತೋ ಯೋಽಸ್ಯನೇನ ನ ಶಾಮ್ಯತಿ ।
ಆರೋಗ್ಯಕಾಮಃ ಶ್ರೀಕಾಮೋ ಮೋಕ್ಷಕಾಮಶ್ಚ ಬಂಧನಾತ್ ॥
ಸೌಭಾಗ್ಯಶಾಂತಿಕಾಮಶ್ಚ ಬೃಹತ್ಸ್ನಪನಮಾಚರೇತ್ ।

---

ಮಂಡಿಗಳನ್ನು ಊರಿ ಕೈಗಳಿಂದಲೂ ಶಿರಸ್ಸಿನಿಂದಲೂ ಸಾಷ್ಟಾಂಗನಮಸ್ಕಾರಮಾಡಬೇಕು. ಈ ವಿಧವಾದ ಬೃಹತ್‌ಸ್ನಪನವನ್ನು ಯಾವನೊಬ್ಬನು ಹರಿಗೆ ಅರ್ಪಿಸುತ್ತಾನೆಯೋ ಅವನು ಎಲ್ಲಾ ಪಾಪಗಳನ್ನೂ ನೀಗಿಕೊಂಡು ವಿಷ್ಣುಲೋಕವನ್ನು ಹೊಂದಿ ಮಹಿಮಾಶಾಲಿಯಾಗುತ್ತಾನೆ.

ಈ ಬೃಹತ್ಸ್ನಪನವು ಶಾಂತಿಪ್ರದವೂ ಪುಷ್ಟಿದಾಯಕವೂ ಮನೋರಥಕ್ಕೆ ತಕ್ಕಂತೆ ಕಾಮ್ಯವೂ ಆಗಿರುವುದರಿಂದ ಇದನ್ನು ಪ್ರತಿಷ್ಠಾಕಾಲದಲ್ಲಿ ಮಾತ್ರವೇ ಮಾಡಬೇಕೆಂಬನಿಯಮವಿಲ್ಲ. ಎಲ್ಲಾ ಕಾಲದಲ್ಲಿಯೂ ಮಾಡಬಹುದು. ದಿವ್ಯಅನ್ತರಿಕ್ಷ ಭೌಮ ಎಂಬ ಉತ್ಪಾತಗಳುಂಟಾದಾಗಲೂ ಪರಮಾತ್ಮನಿಗೆ ಈ ಬೃಹತ್ಸ್ನಪನ ಮಾಡಬೇಕು ಇದರಿಂದ ಶಾಂತವಾಗದಿರುವ ಉತ್ಪಾತವಾವುದೂ ಲೋಕದಲ್ಲಿಲ್ಲ. ಇದಲ್ಲದೆ ಕಾಮನಾನುಗುಣವಾಗಿ ಅಂದರೆ ಆರೋಗ್ಯಕಾಮನೂ ಸಂಪತ್ಕಾಮನೂ ಭವಬಂಧನದಿಂದ ನಿವೃತ್ತಿ ಹೊಂದಬೇಕೆಂಬ ಮೋಕ್ಷಕಾಮನೂ ಸೌಭಾಗ್ಯ ಶಾಂತಿಕಾಮನೂ ಸಹ ತನ್ನ ಮನೋರಥಸಿದ್ಧಿಗಾಗಿ ಈ ಬೃಹತ್ಸ್ನಪನವನ್ನೂ ಮಾಡಬೇಕು ವಿದ್ಯಾರ್ಥಿಯಾದವನು ಇದರಿಂದ ವಿದ್ಯೆಯನ್ನು ಹೊಂದುತ್ತಾನೆ. ಪುತ್ರಕಾಮನಾದವನು ಪುತ್ರರನ್ನು

**ವಿದ್ಯಾರ್ಥೀ ಪ್ರಾಪ್ನುಯಾದ್ವಿದ್ಯಾಂ ಪುತ್ರಕಾಮಸ್ತಥಾತ್ಮಜಾನ್ ||**
**ಪ್ರಿಯಾಶ್ಚ ಮುಖ್ಯಾಃ ಪ್ರಾಪ್ನೋತಿ ಯೋಷ್ಚ ಕಾಮಯತೇ ಯದಿ |**
**ಅಕಾಮಕಾಮಃ ಪ್ರಾಪ್ನೋತಿ ತದ್ವಿಷ್ಣೋಃ ಪರಮಂ ಪದಂ ||**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಬೃಹತ್ಸ್ನಪನಪ್ರಶಂಸಾವರ್ಣನೋ ನಾಮ ಏಕಾದಶೋತ್ತರ ಶತತಮೋಽಧ್ಯಾಯಃ**

---

ಹೊಂದುತ್ತಾನೆ. ವಿಷಯಾಭಿಲಾಷೆ ಇದ್ದಲ್ಲಿ ತನಗೆ ಅಭಿಮತರಾದ ಉತ್ತಮ ಸ್ತ್ರೀಯರನ್ನೂ ಹೊಂದುತ್ತಾನೆ. ಯಾವ ಮನೋರಥವೂ ಇಲ್ಲದೆ ನಿಷ್ಕಾಮನಾಗಿ ಪರಮಾತ್ಮನ ಪ್ರೀತಿಗಾಗಿಯೇ ಆಚರಿಸಿದಲ್ಲಿ ಮಹಾವಿಷ್ಣುವಿನ ಪರಮ ಪದವನ್ನೇ ಹೊಂದುತ್ತಾನೆ.

ಇಲ್ಲಿಗೆ ಶ್ರೀವಿಷ್ಣು ಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದದಲ್ಲಿ ಬ್ರಹತ್ಸ್ನಪನ ಪ್ರಶಂಸಾವರ್ಣನವೆಂಬ ನೂರ ಹನ್ನೊಂದನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ದ್ವಾದಶೋತ್ತರಶತತಮೋಽಧ್ಯಾಯಃ ||

### || ಮಾರ್ಕಂಡೇಯ ಉವಾಚ ||

**ಗದ್ಯ— ಸ್ನಾತಂ ಶ್ರೀಭಗವಂತಂ ಸಮರ್ಚಯೇತ್ । ಚಂದನಬಹುಲ- ನಿರ್ಯಾಸಜಾತೀಫಲಮೃಗಮದಕರ್ಪೂರಾಣಿ ಸಮಸ್ತಾನಿ ವ್ಯಸ್ತಾನಿ ವಾ ಅನುಲೇಪನಂ ಕುರ್ಯಾತ್ । ಗಂಧದ್ವಾರೇತಿ ಶ್ರೀಭಗವಂತ- ಮನುಲಿಂಪೇತ್ । ವಾಯುರಪ್ರೇಗಾ ಇತಿ ತಾಲವೃಂತಂ ನಿವೇದ- ಯೇತ್ । ವಾತ ಆವಾತಭೇಷಜಮಿತಿ ವೀಜಯೇತ್, ಸಾವಿತ್ರಾಣಿ ಸಾವಿತ್ರಸ್ಯೇತಿ ಚಾಮರಂನಿವೇದಯೇತ್, ಶ್ರೀವಿಷ್ಣುಗಾಯತ್ರ್ಯಾ**

---

### ನೂರ ಹನ್ನೆರಡನೆಯ ಅಧ್ಯಾಯ.

ಬೃಹತ್ಸ್ನಪನದಿಂದ ಸ್ನಾನವಾದ ನಂತರ ಶ್ರೀಭಗವಂತನನ್ನು ಅರ್ಚಿಸಬೇಕು. ಚಂದನದಿಂದ ಪ್ರಚುರವಾದ ಹಾಲುಮಡ್ಡಿ ಮೊದಲಾದ ಸುಗಂಧ ದ್ರವ್ಯ, ಜಾಜೀ ಕಾಯಿ. ಕಸ್ತೂರಿ, ಪಚ್ಚೆಕರ್ಪೂರ ಇವುಗಳನ್ನು ಒಟ್ಟಾಗಿಯಾಗಲಿ, ಬೇರೆ ಬೇರೆ ಯಾಗಲಿ ಸಂಸ್ಕರಿಸಿ ಅನುಲೇಪಿಸಬೇಕು. ಗಂಧದ್ವಾರಾ ಎಂಬ ಮಂತ್ರವನ್ನು ಅನುಲೇಪನದಲ್ಲಿ ಉಪಯೋಗಿಸಬೇಕು. ವಾಯುರಪ್ರೇಗಾ ಎಂಬ ಮಂತ್ರದಿಂದ ಬೀಸಣಿಗೆಯನ್ನೂ ಅರ್ಪಿಸಿ, ವಾತಆವಾತ ಭೇಷಜಂ ಎಂಬ ಮಂತ್ರದಿಂದ ಬೀಸ

ಬೀಜಾನಿ ನಿವೇದಯೇತ್। ಯುವಾಸುವಾಸಇತಿ ಮಹಾರ್ಹೈಃ ವಸ್ತ್ರೈಃ ಶ್ರೀಭಗವಂತಮಾಚ್ಛಾದಯೇತ್ । ನೋಪಭುಕ್ತೈರ್ನನೀಲೈಃ ಹಿರಣ್ಯ ವರ್ಣೈರಾಭರಣೈರರ್ಚಯೇತ್ । ಕಙ್ಕತೋನಕಙ್ಕತ ಇತಿ ಕಙ್ಕತೇನ ಇಂದ್ರಾವಿಶ್ವೇತಿ ಕಙ್ಕತೇನ ದೂಷ್ಯಾದೂಶಿರಸಿ ಪ್ರತಿಸಂಖ್ಯಾ ಅಂಜನ-ಮಣಿನಾಪ್ರಾಜನೇನ ಆತ್ಮವ್ಯೂಹೇನ ಕೂರ್ಚಪ್ರಸಾದನೇನ ಪುಷ್ಪ ವತೀತಿ ಪುಷ್ಪೈಃ ಗ್ರಥಿತೈರಗ್ರಥಿತೈಶ್ಚ ॥

ಪ್ರಜಾಪತೇ ನತ್ವದೇತಾನ್ಯ ಇತಿ ಪಟವಾಸೇನ । ಅಗ್ನಿರ್ಮೂರ್ಧೇತಿ ದೀಪೇನ । ಧೂರಸಿಧೂರ್ವಮಿತಿ ಧೂಪೇನ । ಅಭಿತ್ವಾ ಶೂರನೋ-ನುಮ ಇತಿ ಛತ್ರೇಣ । ವಿಷ್ಣುಗಾಯತ್ರ್ಯಾ ಉಪಾನದ್ಭ್ಯಾಂ । ಇದಂ ವಿಷ್ಣುರ್ವಿಚಕ್ರಮೇ ಇತಿ ಯಾನೇನ ತೇನೈವ ಪ್ರವಹಣೇನ ।

---

ಬೇಕು. ಸಾವಿತ್ರಾಣಿ ಸಾವಿತ್ರಸ್ಯ ಎಂಬ ಮಂತ್ರದಿಂದ ಚಾಮರವನ್ನೂ, ಶ್ರೀವಿಷ್ಣು ಗಾಯತ್ರಿಯಿಂದ ಬೀಜಗಳನ್ನೂ ನಿವೇದಿಸಬೇಕು. ಯುವಾ ಸುವಾಸ ಎಂಬ ಮಂತ್ರದಿಂದ ಮಹಾರ್ಘವಾದ ವಸ್ತ್ರಗಳಿಂದ ಶ್ರೀಭಗವಂತನನ್ನು ಆಚ್ಛಾದಿಸಬೇಕು. ಅನುಭವಿಸದಿರುವ ಮತ್ತು ನೀಲವರ್ಣವಿಲ್ಲದಿರುವ ಹಿರಣ್ಯ ವರ್ಣದಂತಿರುವ ಆಭ ರಣಗಳಿಂದ ಪೂಜಿಸಬೇಕು. ಕಙ್ಕತೋ ನ ಕಙ್ಕತ ಇತಿ ಮಂತ್ರದಿಂದ ಶಿಕ್ಕಟ್ಟಿಗೆ ಯಿಂದಲೂ, ಇನ್ದ್ರಾವಿಶ್ವಾ ಎಂಬುವದರಿಂದ ಬಾಚಣಿಗೆಯಿಂದಲೂ ದೂಷ್ಯಾದ್ದೂಷ್ಯ ವೆಂಬ ಮಂತ್ರದಿಂದ ತಲೆಯನ್ನು ಬಾಚಬೇಕು. ಅಂಜನಮಣಿಯಿಂದ ಪ್ರಕಾಶ ಗೊಳಿಸಿ, ಆತ್ಮವ್ಯೂಹ ಮಂತ್ರದಿಂದ ಮುಖರೋಮಾದಿಗಳನ್ನು ಶೋಧಿಸಿ ಪುಷ್ಪವತೀ ಎಂಬ ಮಂತ್ರದಿಂದ ಕಟ್ಟಿದ ಮತ್ತು ಬಿಡಿಯಾದ ಪುಷ್ಪಗಳನ್ನೂ ಅರ್ಪಿಸಬೇಕು.

ಪ್ರಜಾಪತೇನತ್ವದೇತಾನ್ಯ ಎಂಬ ಮಂತ್ರದಿಂದ ಪಟವಾಸಚೂರ್ಣವನ್ನೂ ಅಗ್ನಿರ್ಮೂರ್ಧಾ ಎಂಬ ಮಂತ್ರದಿಂದ ದೀಪವನ್ನೂ, ಧೂರಸಿ ಎಂಬ ಮಂತ್ರದಿಂದ ಧೂಪವನ್ನೂ, ಅಭಿತ್ವಾಶೂರ ಎಂಬ ಮಂತ್ರದಿಂದ ಛತ್ರವನ್ನೂ, ವಿಷ್ಣುಗಾಯತ್ರಿ ಯಿಂದ ಪಾದುಕೆಯನ್ನೂ ಅರ್ಪಿಸಬೇಕು. ಇದಂ ವಿಷ್ಣುಃ ಎಂಬ ಮಂತ್ರದಿಂದ ಯಾನವನ್ನೂ, ಅದೇ ಮಂತ್ರದಿಂದ ರಥವೇ ಮೊದಲಾದ ಯಾನವಿಶೇಷವನ್ನೂ,

ಕೇತುಂ ಕೃಣ್ವನ್ನಿತಿ ಧ್ವಜೈಃ। ತೇನೈವಪತಾಕಾಭಿಃ। ತತಃ ಸ್ತೋತ್ರೈಃ
ಶ್ರೀಭಗವಂತಮರ್ಚಯೇತ್ । ತತೋ ಅಗ್ನಿರ್ಮೂರ್ಧೇತಿ ಸರ್ವ.
ಭೋಗಪೂರಣಾರ್ಥೀಯ ಮಾತ್ರಯಾ । ತತಃ ತಂತ್ರೀವಾದ್ಯೈಃ ।
ತತಃ ಶಂಖಪಟಹಭೇರೀನಿನದೈಃ ಶುಭಗಾನೇನವೇತಿ ॥

ಪದ್ಯ ॥ ಅನೇನ ವಿಧಿನಾ ಭೋಗೈಃ ಸಮಭ್ಯರ್ಚ್ಯ ಜನಾರ್ದನಂ ।
ಸರ್ವಾನ್ಕಾಮಾನವಾಪ್ನೋತಿ ವಿಷ್ಣುಲೋಕಂ ಚ ಗಚ್ಛತಿ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಭೋಗದಾನವರ್ಣನೋ ನಾಮ
ದ್ವಾದಶೋತ್ತರಶತತಮೋಽಧ್ಯಾಯಃ

---

ಕೇತುಂಕೃಣ್ವ ಎಂಬ ಮಂತ್ರದಿಂದ ಧ್ವಜವನ್ನೂ, ಅದೇ ಮಂತ್ರದಿಂದ ಪತಾಕೆಗಳನ್ನೂ ಅರ್ಪಿಸಬೇಕು. ಅನಂತರ ಸ್ತೋತ್ರಗಳಿಂದ ಭಗವಂತನನ್ನು ಪೂಜಿಸಬೇಕು. ಅನಂತರ ಅಗ್ನಿರ್ಮೂರ್ಧಾ ಎಂಬ ಮಂತ್ರದಿಂದ ಸರ್ವಭೋಗಪೂರಣಾರ್ಥವಾದ ಮಾತ್ರಾದಾನದಿಂದಲೂ, ಅನಂತರ ತಂತೀವಾದ್ಯದಿಂದಲೂ, ಶಂಖಪಟಹಭೇರೀ ವಾದ್ಯಗಳಿಂದಲಾಗಲಿ ಒಳ್ಳೆಯ ಗಾನದಿಂದಲಾಗಲಿ ಪೂಜಿಸಬೇಕು. ಈ ವಿಧಿಯಂತೆ ಎಲ್ಲಾ ಭೋಗಗಳಿಂದಲೂ, ಭಗವಂತನನ್ನು ಪೂಜಿಸಿದವನು ಎಲ್ಲಾ ಮನೋರಥಗಳನ್ನೂ ಹೊಂದುತ್ತಾನೆ. ವಿಷ್ಣುಲೋಕವನ್ನೂ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಭೋಗದಾನವರ್ಣನವೆಂಬ
ನೂರ ಹನ್ನೆರಡನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ತ್ರಯೋದಶೋತ್ತರಶತತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಗದ್ಯ— ಅಥ ಮಧುಪರ್ಕೇಣ ಶ್ರೀಭಗವನ್ತಮಭ್ಯರ್ಚಯೇತ್ | ಹಿರಣ್ಯ-ವರ್ಣೇತ್ಯರ್ಘಾಂ ದದ್ಯಾತ್ | ದಧಿಕ್ರಾವ್ಣೇತಿ ದಧಿ | ಘೃತವತೀತಿ ಘೃತಂ | ಮಧುವಾತಾ ಋತಾಯತ ಇತಿ ಮಧು | ತ್ರಿಸುಪರ್ಣೇನ ಸಂಯೋಜ್ಯ ಸಾವಿತ್ರೇಣ ನಿಯೋಜಯೇತ್ | ಆಪೋಹಿಷ್ಠೇತಿ ತರ್ಪಣಂ ದದ್ಯಾತ್ | ವಾತ ಆವಾತು ಭೇಷಜಮಿತಿ ನಿಷ್ಪುಂಸನಂ**

---

### ನೂರ ಹದಿಮೂರನೆಯ ಅಧ್ಯಾಯ

ಮಾರ್ಕಂಡೇಯರು ಹೇಳುತ್ತಾರೆ. ಅನಂತರ ಮಧುಪರ್ಕದಿಂದ ಶ್ರೀಭಗವಂತನನ್ನು ಪೂಜಿಸಬೇಕು. ಹಿರಣ್ಯವರ್ಣಾ ಎಂಬ ಮಂತ್ರದಿಂದ ಅರ್ಘ್ಯೋದಕವನ್ನೂ, ಅರ್ಪಿಸಬೇಕು. ದಧಿಕ್ರಾವ್ಣಾ ಎಂಬ ಮಂತ್ರದಿಂದ ಮೊಸರನ್ನೂ, ಘೃತವತೀ ಎಂಬುದರಿಂದ ಘೃತವನ್ನೂ, ಮಧುವಾತಾ ಎಂಬ ಮಂತ್ರದಿಂದ ಜೇನನ್ನೂ, ಸಹ ತ್ರಿಸುಪರ್ಣಮಂತ್ರದಿಂದ ಸೇರಿಸಿ ಸಾವಿತ್ರಿಮಂತ್ರದಿಂದ ಜಪಿಸಬೇಕು. ಆಪೋಹಿಷ್ಠಾ ಎಂಬ ಮಂತ್ರದಿಂದ ತೃಪ್ತ್ಯುದಕವನ್ನು ಕೊಡಬೇಕು. ವಾತಆವಾತು

ಶನ್ನ ಆಪಇತಿ ಆಚಮನೀಯಂ । ಅಷ್ಟಕವಿಧಿನಾಪಶುಂ । ಹಿರಣ್ಯ ವರ್ಣೇತಿ ವಾ ವಾಸಾಂ । ತೇನ ಬಿಂಬಶಂಖಪದ್ಮಾದ್ಯಾನಿ ಮಂಗ ಲ್ಯಾನಿ ನಿವೇದಯೇತ್ ॥

ಶ್ಲೋ ॥ ಮಧುಪರ್ಕವಿಧಿಸ್ತ್ವೇಷ ಕಥಿತಸ್ತೇ ಮಯಾನಘ ।
ಏತತ್ಕೃತ್ವಾ ಮಹಾರಾಜ ವಿಷ್ಣುಲೋಕೇ ಮಹೀಯತೇ ॥ ೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಮಧುಪರ್ಕನಿವೇದನೋ ನಾಮ
ತ್ರಯೋದಶೋತ್ತರಶತತಮೋಽಧ್ಯಾಯಃ

---

ಭೇಷಜಂ ಎಂದು ಒರಸಿಕೊಳ್ಳುವವಸ್ತ್ರವನ್ನೂ, ಶನ್ನಆಪಃ ಎಂಬುದರಿಂದ ಆಚಮನೀಯವನ್ನೂ, ಅಷ್ಟಕವಿಧಿಯಂತೆ ಪಶುವನ್ನೂ, ಹಿರಣ್ಯವರ್ಣಾಎಂಬುದರಿಂದ್ವ ವಾಸ್ತ್ರ ದಾನವನ್ನೂ ಅರ್ಪಿಸಬೇಕು. ಅದೇ ಮಂತ್ರದಿಂದ ಬಿಂಬಫಲ. ಶಂಖ, ಪದ ಮೊದಲಾದ ಮಂಗಲವಸ್ತುಗಳನ್ನೂ ಅರ್ಪಿಸಬೇಕು. ಧೂರೆಯೇ ಮಧುಪರ್ಕಪೂಜ್ಞಾ ವಿಧಿಯನ್ನು ಈ ರೀತಿ ನನಗೆ ಹೇಳಿದ್ದೇನೆ. ಇದನ್ನು ನೆರವೇರಿಸಿದವನು ವಿಷು ಲೋಕವನ್ನು ಹೊಂದಿ ಪೂಜ್ಯನಾಗುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಮಧುಪರ್ಕನಿವೇದನವೆಂಬ
ನೂರ ಹದಿಮೂರನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಚತುರ್ದಶೋತ್ತರಶತತಮೋಽಧ್ಯಾಯಃ ||

### || ಮಾರ್ಕಂಡೇಯ ಉವಾಚ ||

**ಗದ್ಯ— ಹಿರಣ್ಯವರ್ಣೇತ್ಯರ್ಘಾಂ ದದ್ಯಾತ್ । ತತಃ ಸಭಕ್ಷ್ಯಂ ಸವ್ಯಂ-ಜನಂ ಸಹಚರಿತಕಂ ಸಾವದಂಶಂ ಸಫಲಂ ಸಾವಿತ್ರೇಣ ನಿವೇದ-ಯೇತ್ । ಶಕ್ತ್ಯಾ ಸುಗಂಧೀನಿ ಸುಸ್ವಾದೂನಿ ಅಂಬುಪಾನಾನಿ ಚ । ಆಪೋಹಿಷ್ಠೇತಿ ಚ ತರ್ಪಣೇನ । ವಾತಆವಾತಭೇಷಜಮಿತಿ ನಿಷ್ಪುಂಸನೇನ । ಶನ್ನ ಆಪಇತ್ಯಾಚಮನೀಯೇನ । ಅಗ್ನಿಮೂರ್-**

---

### ನೂರ ಹದಿನಾಲ್ಕನೆಯ ಅಧ್ಯಾಯ.

ಮಾರ್ಕಂಡೇಯರು ಹೇಳುತ್ತಾರೆ. ಹಿರಣ್ಯವರ್ಣಾ ಎಂಬ ಮಂತ್ರದಿಂದ ಅರ್ಘೋದಕವನ್ನು ಅರ್ಪಿಸಬೇಕು. ಅನಂತರ ಭಕ್ಷ್ಯ ವ್ಯಂಜನ ಉಪವ್ಯಂಜನ ಚಟ್ನಿ ಮೊದಲಾದ ಉಪದಂಶ, ಫಲ ಇವುಗಳೊಡನೆ ಕೂಡಿದ ನೈವೇದ್ಯವನ್ನು ಸಾವಿತ್ರಿಮಂತ್ರದಿಂದ ನಿವೇದಿಸಬೇಕು. ಯಥಾಶಕ್ತಿ ಸುಗಂಧಿಯಾಗಿಯೂ ಸ್ವಾದು ವಾಗಿಯೂ ಇರುವ ತೀರ್ಥವನ್ನು ಪಾನಕ್ಕಾಗಿ ಅರ್ಪಿಸಬೇಕು. ಆಪೋಹಿಷ್ಠಾ ಎಂಬುದರಿಂದ ತೃಪ್ತ್ಯುದಕವನ್ನೂ ವಾತಆವಾತ ಎಂಬುದರಿಂದ ನಿಷ್ಪುಂಸನವನ್ನೂ ಶನ್ನ ಆಪಃ ಎಂಬುದರಿಂದ ಆಚಮನೀಯವನ್ನೂ, ಅಗ್ನಿಮೂರ್ಧಾ ಎಂಬುದರಿಂದ ಇದೇ ವಿಧಾನದಿಂದ ಪರಿಜನರಿಗೆ ಸಂವಿಭಾಗಾರ್ಥವಾದ ಅನುಯಜ್ಞದಿಂದಲೂ, ಭಗವಂತನನ್ನು ಪೂಜಿಸಬೇಕು. ಮುಖಾದಿಂದ್ರಶ್ಚ ಎಂಬ ಮಂತ್ರದಿಂದ ತಾಂಬೂ

ರ್ಥೇತಿ ಪುನರನ್ನೇನೈವವಿಧಾನೇನ ಸಂವಿಭಾಗಾರ್ಥಿಯೋನ ಅನು-
ಯಜ್ಞೇನ ಶ್ರೀಭಗವನ್ತಮರ್ಚಯೇತ್ । ಮುಖಾದಿಂದ್ರಶ್ಚ ತಾಂ-
ಬೂಲಂ ದದ್ಯಾತ್ । ತೇನೈವಸುಗಂಧೀನಿ ಮುಖವಾಸಾಂಸಿ ತೇನೈವ
ದರ್ಪಣಂ ಪುನರಪಿ ಶ್ರೀಭಗವಂತಂ ಗೀತವಾದಿತ್ರನೃತ್ಯೈಃ ಸಮ-
ಭ್ಯರ್ಚಯೇತ್ ॥

ಶ್ಲೋ॥ ಅನ್ನಯಜ್ಞೇನ ಸಂಪೂಜ್ಯ ದೇವದೇವಂ ಸನಾತನಂ ।
ಸರ್ವಾನ್ಕಾಮಾನವಾಪ್ನೋತಿ ವಿಷ್ಣುಲೋಕಂ ಚ ಗಚ್ಛತಿ ।

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಇಜ್ಯಾವರ್ಣನೋ ನಾಮ
ಚತುರ್ದಶೋತ್ತರಶತತಮೋಽಧ್ಯಾಯಃ

---

ಲವನ್ನು ಅರ್ಪಿಸಬೇಕು. ಅದೇ ಮಂತ್ರದಿಂದ ಸುಗಂಧಿಗಳಾದ ಮುಖಪಟಗಳನ್ನು ದರ್ಪಣವನ್ನೂ ಅರ್ಪಿಸಿ ಪುನಃ ಶ್ರೀಭಗವಂತನನ್ನು ನೃತ್ಯಗೀತವಾದ್ಯಾದಿಗಳಿಂದ ಪೂಜಿಸಬೇಕು. ಪುರಾತನ ಪ್ರಭುವಾದ ಭಗವಂತನನ್ನು ಈ ರೀತಿ ಅನ್ನಯಜ್ಞದಿಂದ ಪೂಜಿಸಿದವನು ಎಲ್ಲಾ ಮನೋರಥಗಳನ್ನೂ ಹೊಂದಿ ವಿಷ್ಣುಲೋಕಕ್ಕೆ ಸೇರುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಇಜ್ಯಾವರ್ಣನವೆಂಬ
ನೂರ ಹದಿನಾಲ್ಕನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಪಂಚದಶೋತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಗದ್ಯ—ತತಃ ಶಂಕರಗೀತೋಕ್ತೇನ ವಿಧಾನೇನ ಇಜ್ಯಾಂ ಸಾತ್ವತಃ ಕುರ್ಯಾತ್ । ಕಾರಿಣಶ್ಚ ಭಾಗೈಃ ಶುಚಿಂ ಭಜೇತ್ ದೇವ ಪುರತ ಏವತ್ರ್ವಿಜಾಂ ಪ್ರತ್ಯೇಕಂ ಸುವರ್ಣಮಹತಂ ವಾಸೋ ಗೋವತ್ಸ ಸಹಕೃತಂ ಕಾಂಸ್ಯಂ ದದ್ಯಾತ್ । ಸ್ವಶಕ್ತ್ಯಾ ಚ ತಾನಭ್ಯರ್ಚ-ಯೇತ್ । ತತೋ ಬ್ರಾಹ್ಮಣಾನ್ ಭೋಜಯೇತ್ । ಭುಂಜಾನಾಂಶ್ಚ ಶ್ರೀಭಗವನ್ಮಾಹಾತ್ಮ್ಯಂ ಶ್ರಾವಯೇತ್ । ತತೋ ಹವಿಷ್ಯಂ ಯಜ-**

---

### ನೂರ ಹದಿನೈದನೆಯ ಅಧ್ಯಾಯ.

ಮಾರ್ಕಂಡೇಯರು ಹೇಳುತ್ತಾರೆ :—ಶಂಕರಗೀತೋಕ್ತ ವಿಧಾನದಿಂದ ಸಾತ್ವತನು ಇಜ್ಯೆಯನ್ನು ಮಾಡಬೇಕು. ತನಗೆ ಸಲ್ಲಿಸಬಹುದಾದ ಭಾಗದಿಂದ ಶುದ್ಧನಾಗಿರಬೇಕು. ದೇವತಾಸನ್ನಿಧಾನದಲ್ಲೇ ಋತ್ವಿಜರಿಗೆ ಪ್ರತ್ಯೇಕವಾಗಿ ಸುವರ್ಣ ಶುಭ್ರವಾದವಸ್ತ್ರ ಗೋವು ಅದರ ಕರು ಕರೆಯುವ ಕಾಂಸ್ಯಪಾತ್ರೆ ಇವನ್ನೂ ಕೊಡಬೇಕು ಶಕ್ತ್ಯನುಸಾರವಾಗಿ ಅವರನ್ನು ಪೂಜಿಸಬೇಕು ಅನಂತರ ಬ್ರಾಹ್ಮಣಭೋಜನವನ್ನೂ ಅವರು ಭುಂಜಿಸುವಾಗ ಭಗವನ್ಮಾಹಾತ್ಮ್ಯ ಶ್ರವಣವನ್ನೂ ಮಾಡಿಸಬೇಕು. ಅನಂತರ ಯಜಮಾನನು ಹವಿಷ್ಯಭೋಜನವನ್ನು ಮಾಡಬೇಕು ಅನಂತರ ದೇವಾಲಯದಲ್ಲಿ

ಮಾನಸ್ತ್ವಕ್ಷೀಯೋತ್ । ತತೋ ದೇವಾ ಗಾರೇ ಗೀತನೃತ್ಯವಾದ್ಯ-
ಪುಸ್ತಕಶ್ರವಣೇ ತಿಷ್ಠೇತ್ ॥
ಅನೇನ ವಿಧಿನಾ ಕೃತ್ವಾ ಪ್ರತಿಷ್ಠಾಂ ಶಾರ್ಙ್ಗಿಣೋ ನರಃ ।
ಸರ್ವಾನ್ಕಾಮಾನವಾಪ್ನೋತಿ ವಿಷ್ಣುಲೋಕಂ ಚ ಗಚ್ಛತಿ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಸಾತ್ವತೇಜ್ಯಾವರ್ಣನೋ ನಾಮ
ಪಂಚದಶೋತ್ತರಶತತಮೋಽಧ್ಯಾಯಃ

---

ಗೀತ ನೃತ್ಯ ವಾದ್ಯ ಪುಸ್ತಕಶ್ರವಣ ಇವುಗಳಲ್ಲಿ ಆಸಕ್ತನಾಗಿರಬೇಕು. ಈ ವಿಧಿಯಿಂದ ಹರಿಯ ಪ್ರತಿಷ್ಠಾಕಾರ್ಯವನ್ನು ಮಾಡಿದವನು ಎಲ್ಲಾ ಮನೋರಥಗಳನ್ನೂ ಹೊಂದಿ ವಿಷ್ಣುಲೋಕವನ್ನು ಸೇರುತ್ತಾನೆ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಸಾತ್ವತೇಜ್ಯಾವರ್ಣನವೆಂಬ
ನೂರ ಹದಿನೈದನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಷೋಡಶೋತ್ತರಶತತಮೋऽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಗದ್ಯ—ವೈದಿಕೇನೇಜ್ಯಾವಿಧಾನೇನ ಸಾತ್ವಿಕೋಕ್ತೇನ ದರ್ಶನವಿಧಿ-ಹೋಮೇನ ಸಪ್ತಾಹಂ ಪ್ರತ್ಯಹಮರ್ಚಾಂ ಕುರ್ಯಾತ್ । ತತಃ ಸಪ್ತಮೇऽಹ್ನಿ ಬೃಹತ್ಸ್ನಪನಂ ಕೃತ್ವಾ ಕಲ್ಪಕಃ ಕಲಶಪಾಣಿಃ ಯಾ ಓಷಧಯ ಇತಿ ತೋರಣಾನ್ಯಭಿಷಿಂಚೇತ್ । ಗಂಧದ್ವಾರೇಣೇತ್ಯನು ಲೇಪನೇನಾರ್ಚಯೇತ್। ಪುಷ್ಪವತೀತಿ ಪುಷ್ಪೈಃ । ಅಗ್ನಿರ್ಮೂರ್ಧೇತಿ ದೀಪೇನ । ಧೂರಸೀತಿ ಧೂಪೇನ । ಸಾವಿತ್ರಾಣಿ ಸಾವಿತ್ರಸ್ಯೇತಿ ನೈವೇದ್ಯೇನ ॥ ತತಃ ಪ್ರಾಗುತ್ತರಂ ತತಃ ಪೂರ್ವಂ ತತೋ ದಕ್ಷಿಣತಃ**

---

**ನೂರ ಹದಿನಾರನೆಯ ಅಧ್ಯಾಯ.**

ಮಾರ್ಕಂಡೇಯರು ಹೇಳುತ್ತಾರೆ :—ವೈದಿಕವಾದ ಇಜ್ಯಾವಿಧಿಯಿಂದಲೂ ಸಾತ್ವಿಕೋಕ್ತವಾದ ದರ್ಶನ ವಿಧಿಹೋಮದಿಂದಲೂ ಏಳು ದಿನದವರಿಗೂ ಪ್ರತಿ ದಿನವೂ ಪೂಜೆ ನಡಿಸಬೇಕು ಅನಂತರ ಏಳನೆಯದಿನ ಬೃಹತ್ಸ್ನಪನ ಮಾಡಿದ ಮೇಲೆ ಕಲ್ಪಕನು ಕಲಶವನ್ನು ಕೈಗೆ ತೆಗೆದುಕೊಂಡು ಯಾ ಓಷಧಯಃ ಎಂಬ ಮಂತ್ರದಿಂದ ತೋರಣಗಳನ್ನು ಪ್ರೋಕ್ಷಿಸಬೇಕು. ಗಂಧದ್ವಾರಾ ಎಂಬ ಮಂತ್ರದಿಂದ ಅನುಲೇಪನ ದಾನಪೂರ್ವಕವಾಗಿ ಅರ್ಚಿಸಬೇಕು. ಪುಷ್ಪವತೀ ಎಂಬುದರಿಂದ ಪುಷ್ಪಗಳಿಂದಲೂ, ಅಗ್ನಿರ್ಮೂರ್ಧಾ ಎಂಬುವುದರಿಂದ ಧೂಪದಿಂದಲೂ, ಸಾವಿತ್ರಾಣಿ ಸಾವಿತ್ರಸ್ಯ ಎಂಬುವುದರಿಂದ ನೈವೇದ್ಯದಿಂದಲೂ ಪೂಜಿಸಬೇಕು. ಅನಂತರ ಈಶಾನ್ಯ, ಪೂರ್ವ, ದಕ್ಷಿಣ ಪಶ್ಚಿಮ. ಈ ದಿಕ್ಕುಗಳ ತೋರಣಗಳನ್ನು ಈ ಕ್ರಮದಂತೆ ಶ್ರೀವಿಷ್ಣು

ಪಶ್ಚಿಮೇ ಶ್ರೀವಿಷ್ಣುಗಾಯತ್ರ್ಯಾ ತೋರಣಾನ್ಯುದ್ಧರೇತ್ । ಸರ್ವ ಏವ ಋತ್ವಿಜಃ ತೋರಣಾನ್ಯಾದಾಯ ಗಜಪೃಷ್ಠಗಾ ಅಶ್ವರಥ ಪೃಷ್ಠಗಾ ಗೋರಥಪೃಷ್ಠಗಾಃ ಶಿಬಿಕಾಗತಾ ವಾ ನದೀಂ ಗಚ್ಛೇಯುಃ॥

ತತ್ರ ಸ್ವಸ್ತಿನ ಇಂದ್ರ ಇತಿ ಮಂತ್ರೇಣ ಕ್ಷಿಪೇಯುಃ । ಭದ್ರಂಕರ್ಣೇತಿ ಶ್ರೀ ದೇವತಾಗೃಹಂ ವ್ರಜೇಯುಃ । ಯಶ್ಚೇಹಭಗವಾನಿತಿ ಪ್ರವಿಶೇಯುಃ । ತತೋ ಭೋಗವಿಧಿಪೂರ್ವಕೇಣ ಸರ್ವೇಣ ಪ್ರತಿಷ್ಠೋಕ್ತೇನ ವಿಧಿನಾ ಶ್ರೀಭಗವನ್ತಮನ್ವಯೇಯುಃ। ತತೋ ಭುಕ್ತವತ್ಸು ವಿಪ್ರೇಷು ಮುಂಚಾಮಿತ್ವೇತಿ ಮಂತ್ರೇಣ ಯಜಮಾನಸ್ಯ ದೀಕ್ಷಾಕರಣಂ ಬದ್ಧಂ ಮುಂಚೇತ್ । ಕವಚೇನ ಚ ರಕ್ಷಣಂ ಕುರ್ಯಾತ್ । ತೋರಣೋದ್ಧರಣವರ್ಜಂ ಮಾಸಿಮಾಸಿ ಸಪ್ತಾಹೋಕ್ತಂ ವಿಧಿಂ ಕುರ್ಯಾತ್ । ಯಾವತ್ಸಂವತ್ಸರಂ ನಿತ್ಯಮೇವಂ ಸರ್ವಕಾಮದಂ ಕರ್ಮತತ್ ।

---

ಗಾಯತ್ರಿಯಿಂದ ಉದ್ಧರಿಸಬೇಕು. ಹೀಗೆ ತೆಗೆದ ತೋರಣಗಳನ್ನು ಎಲ್ಲಾ ಋತ್ವಿಜರೂ ತೆಗೆದುಕೊಂಡು ಆನೆ ಅಥವಾ ಕುದುರೆಕಟ್ಟಿದ ರಥ ಅಥವಾ ಎತ್ತುಗಳಿಂದ ಒಯ್ಯುವ ಗಾಡಿ ಅಥವಾ ಪಲ್ಲಕ್ಕಿ ಇವುಗಳಲ್ಲಿ ಯಾವುದಾದರೊಂದರ ಮೇಲೆ ಕುಳಿತು ನದಿಗೆ ಹೋಗಬೇಕು.

ಸ್ವಸ್ತಿನ ಇಂದ್ರಃ ಎಂಬ ಮಂತ್ರದಿಂದ ಎಲ್ಲಾ ತೋರಣಗಳನ್ನೂ ನದಿಯಲ್ಲಿ ವಿಸರ್ಜಿಸಬೇಕು. ಭದ್ರಂಕರ್ಣೇತಿ ಮಂತ್ರದಿಂದ ಲಕ್ಷ್ಮೀದೇವಿಯ ಗೃಹಕ್ಕೆ ಬಂದು ಯಶ್ಚೇಹ ಭಗವಾನ್ ಎಂಬ ಮಂತ್ರದಿಂದ ಪ್ರವೇಶಿಸಬೇಕು. ಅಲ್ಲಿ ಪ್ರತಿಷ್ಠಾಕಲ್ಪ ದಲ್ಲಿ ಹೇಳಿರುವ ಭೋಗವಿಧಿಪೂರ್ವಕವಾಗಿ ಎಲ್ಲವನ್ನೂ ಆಚರಿಸಿ ಭಗವಂತನ ಸಾನ್ನಿಧ್ಯದಲ್ಲಿರಬೇಕು ಅನಂತರ ಬ್ರಾಹ್ಮಣರ ಭೋಜನವಾದ ಮೇಲೆ ಮುಂಚಾ ಮಿತ್ವಾ ಎಂಬ ಮಂತ್ರದಿಂದ ಯಜಮಾನನ ಕೈಗೆ ಕಟ್ಟಿದ್ದ ದೀಕ್ಷಾಬಂಧವನ್ನು ಬಿಚ್ಚ ಬೇಕು. ಕವಚದಿಂದ ರಕ್ಷಣವನ್ನೂ ಮಾಡಬೇಕು. ತೋರಣೋದ್ಧರಣ ಒಂದು ಹೊರತು ಪ್ರತಿಮಾಸದಲ್ಲಿಯೂ ಸಪ್ತಾಹೋಕ್ತವಾದ ವಿಧಿಯನ್ನೇ ನಡೆಸುತ್ತಿರಬೇಕು. ಸಂವತ್ಸರ ಮುಗಿಯುವವರೆಗೂ ನಿತ್ಯವೂ ಈ ವಿಧಾನವು ಇಷ್ಟಾರ್ಥಪ್ರದವಾಗುತ್ತದೆ.

ಪ್ರತಿಷ್ಠಾಕಲ್ಪಮೇತತ್ತೇ ಮಯೋಕ್ತಂ ಪಾರ್ಥಿವೋತ್ತಮ ।
ಸರ್ವಪಾಪಹರಂ ಜ್ಞೇಯಮಾಯುಷ್ಯಮಪರಾಜಿತಂ ॥

ಅನೇನ ವಿಧಿನಾ ಕೃತ್ವಾ ಸ್ಥಾಪನಂ ಶಾರ್ಙ್ಗಿಣೋ ನರಃ ।
ಸರ್ವಕಾಮಾನವಾಪ್ನೋತಿ ವಿಷ್ಣುಲೋಕಂ ಚ ಗಚ್ಛತಿ ॥

ಓಷಧ್ಯಃ ಪವನಂ ವೃಕ್ಷಾ ಯತ್ಕಿಂಚಿದುಪಯುಜ್ಯತೇ ।
ಪ್ರತಿಷ್ಠಾಯಾಂ ಹಿ ತತ್ಸರ್ವಂ ವಿಷ್ಣುಲೋಕೇ ಮಹೀಯತೇ ॥

ಪ್ರತಿಷ್ಠಾಂ ಯೇಽಪಿ ಪಶ್ಯಂತಿ ಕ್ರಿಯಮಾಣಾಂ ನರಾಧಿಪ ।
ಅಭಿನಂದಂತಿ ಯೇ ಭಕ್ತಾಃ ತೇಽಪಿ ಸ್ವರ್ಗಾರ್ಜಿನೋ ನರಾಃ ॥

ಸಾತ್ವತೋಕ್ತೇನ ವಿಧಿನಾ ನಿತ್ಯಮೇವ ಪ್ರತಿಷ್ಠಿತಂ ।
ಪೂಜಯೇದ್ದೇವದೇವೇಶಂ ಯ ಇಚ್ಛೇಚ್ಛಾಶ್ವತಂ ಪದಂ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರ
ಸಂವಾದೇ ತೋರಣೋದ್ಧಾರವಿಧಿವರ್ಣನೋ ನಾಮ
ಷೋಡಶೋತ್ತರಶತತಮೋಽಧ್ಯಾಯಃ

---

ಎಲೈ ದೊರೆಯೇ, ನಾನು ನಿನಗೆ ಹೇಳಿರುವ ಈ ಪ್ರತಿಷ್ಠಾಕಲ್ಪವು ಸರ್ವ ಪಾಪನಾಶಕವೂ, ಆಯುಷ್ಪ್ರದವೂ, ವಿಜಯಪ್ರದವೂ ಆಗಿದೆ. ಈ ವಿಧಿಯಂತೆ ಹರಿಯ ಪ್ರತಿಷ್ಠೆಯನ್ನು ಮಾಡಿದವನು ಎಲ್ಲಾ ಮನೋರಥಗಳನ್ನೂ ಹೊಂದಿ ವಿಷ್ಣುಲೋಕವನ್ನೂ ಹೊಂದುತ್ತಾನೆ ಪ್ರತಿಷ್ಠೆಯಲ್ಲಿ ಯಾವ ಯಾವ ಓಷಧಿಗಳು. ಬೀಸಣಿಗೆ, ಮರ ಮೊದಲಾದವೂ ಉಪಯೋಗಿಸಲ್ಪಡುತ್ತವೆಯೋ ಅವೆಲ್ಲಕ್ಕೂ ವಿಷ್ಣುಲೋಕ ಪ್ರಾಪ್ತಿಯುಂಟಾಗುತ್ತದೆ ಈ ಪ್ರತಿಷ್ಠೆಯು ನಡೆಯುವಾಗ ಯಾರು ಪ್ರೀತಿಯಿಂದ ನೋಡುತ್ತಾರೆಯೋ, ಯಾರು ಸಂತೋಷದಿಂದ ಅಭಿನಂದಿಸುತ್ತಾರೋ ಅಂತಹ ಭಕ್ತರೂ ಸಹ ಸ್ವರ್ಗವನ್ನು ಆರ್ಜಿಸುತ್ತಾರೆ. ಹೀಗೆ ಪ್ರತಿಷ್ಠಿತನಾದ ಹರಿಯನ್ನು ಸಾತ್ವತೋಕ್ತವಾದ ವಿಧಿಯಂತೆ ನಿತ್ಯವೂ ಯಾವನು ಪೂಜಿಸುತ್ತಾನೆಯೋ ಅವನು ತನ್ನ ಇಚ್ಛೆಗೆ ತಕ್ಕಂತೆ ಶಾಶ್ವತವಾದ ಸುಖಸ್ಥಾನವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ತೋರಣೋದ್ಧಾರವಿಧಿವರ್ಣನವೆಂಬ
ನೂರ ಹದಿನಾರನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಸಪ್ತದಶೋತ್ತರಶತತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಗದ್ಯ— ಅಥ ದೇವಯಾತ್ರಾವಿಧಿರ್ಭವತಿ । ತಸ್ಯ ದೇವಸ್ಯ ಯಾ ತಿಥಿಃ ಸ್ವಕೀಯಾ ಉಕ್ತಾ ತಸ್ಯ ತಸ್ಯಾಂ ತಿಥೌ ಯಾತ್ರಾಂ ಕುರ್ಯಾತ್ । ಯಸ್ಯ ತಿಥಿರ್ನಜ್ಞಾಯತೇ ತಸ್ಯ ಪೌರ್ಣಮಾಸ್ಯಾಂ ಕುರ್ಯಾತ್ । ಶ್ರೀಭಗವತೋ ವಾಸುದೇವಸ್ಯ ಸರ್ವಾ ಏವ ತಿಥಯಃ ನಾಸ್ಯ ತಿಥಿ-ರ್ನಾಮ ತತ್ರಾದಾವೇವ ಸುಧಾವದಾತಂ ಸುಚಿತ್ರಿತಂ ದೇವಕುಲಂ ಕೃತ್ವಾ ಶುಭೇಽಹ್ನಿ ವಿನಾಯಕಪೂಜನಂ ಕುರ್ಯಾತ್ । ದ್ವಿತೀ-ಯೇಽಹ್ನಿ ಗ್ರಹರ್ಕ್ಷಪೂಜನಂ ತೃತೀಯೇಽಹ್ನಿ ನಾಗಪೂಜನಂ ।**

---

### ನೂರ ಹದಿನೇಳನೆಯ ಅಧ್ಯಾಯ.

ಮಾರ್ಕಂಡೇಯರು ಹೇಳುತ್ತಾರೆ :— ಇನ್ನು ಮುಂದೆ ಭಗವಂತನ ಯಾತ್ರಾ ವಿಧಿಯನ್ನು ಹೇಳಬೇಕಾಗಿದೆ. ಯಾವ ದೇವತೆಗೆ ಯಾವ ತಿಥಿಯು ಸ್ವಕೀಯ ವೆಂದು ನಿರ್ಣಯಿಸಲ್ಪಟ್ಟಿದೆಯೋ ಆ ದೇವತೆಗೆ ಆತಿಥಿಯಲ್ಲಿ ಯಾತ್ರೋತ್ಸವವನ್ನು ಮಾಡಬೇಕು. ಯಾವ ದೇವತೆಗೆ ತಿಥಿಯು ತಿಳಿದಿರುವುದಿಲ್ಲವೋ ಅಂತಹ ದೇವತೆಯ ಯಾತ್ರೋತ್ಸವವನ್ನು ಪೂರ್ಣಿಮಾ ದಿನದಲ್ಲಿ ನಡೆಸಬೇಕು. ಶ್ರೀಭಗವಂತನಾದ ವಾಸುದೇವನಿಗೆ ಮಾತ್ರ ಎಲ್ಲಾ ತಿಥಿಗಳೂ ಅರ್ಹವಾಗುತ್ತವೆ. ಇವನಿಗೆ ಇದೇ ಎಂದು ನಿರ್ದಿಷ್ಟವಾದ ತಿಥಿಯೊಂದಿಲ್ಲ. ಈ ಸಂದರ್ಭದಲ್ಲಿ ಮೊಟ್ಟಮೊದಲು ದೇವ ಗೃಹವನ್ನು ಸುಣ್ಣದಿಂದ ಶುಭ್ರವನ್ನಾಗಿ ಮಾಡಿ ಚಿತ್ರಲೇಖನಾದಿಗಳಿಂದ ಅಲಂಕರಿಸಿ ಶುಭದಿನದಲ್ಲಿ ವಿನಾಯಕಪೂಜೆ ಮಾಡಬೇಕು. ಎರಡನೆಯದಿನ ಗ್ರಹನಕ್ಷತ್ರಗಳ

ಚತುರ್ಥೇಽಹ್ನಿ ಪ್ರಮಥಪೂಜನಂ । ಪಂಚಮೇಽಹ್ನಿ ಬ್ರಾಹ್ಮಣ-ಪೂಜನಂ । ದೀನಾನಾಥದಾನಂ ಚ । ಷಷ್ಠೇಽಹ್ನಿ ಸ್ನಪನಂ ॥

ತತ್ರ ಬೃಹತ್ಸ್ನಪನಂ ಕೃತ್ವಾ ಸರ್ವ ಏವ ನಾಗರಜನಾಃ ಸುಶುಕ್ಲವಾಸಸಃ ಪವಿತ್ರಕೃತಪಾಣಯಃ ಮಹತಾವಾದ್ಯಘೋಷೇಣ ಸುಭಗಾನರ್ತಿ-ತೇನ ಸರಃ ಸರಿತ್ಪ್ರಸ್ರವಣಾಗಾರಂ ನಗರಸನ್ನಿಕರ್ಷಮಾಸನ್ನತಮಂ ಗಚ್ಛೇಯುಃ । ತಸ್ಮಾದುದಕಕಲಶಾನಾದಾಯ ಗಜಪೃಷ್ಠಗತಾನ್ವಾ ವಾಸಸಾ ಶುಭೇನಾಚ್ಛಾದಿತಾನ್ ಪ್ರವೇಶಯೇತ್ । ಪ್ರವೇಶ್ಯ ಶ್ರೀ ಭಗವಂತಂ ಸ್ನಾಪಯೇತ್ । ಭೋಗವಿಧಿಪೂರ್ವಕೇನ ಪ್ರತಿಷ್ಠೋ-ಕ್ತೇನ ವಿಧಿನಾ ಪೂಜಯೇತ್ । ನೃತ್ಯವಾದ್ಯಗೀತೈಶ್ಚ ಶ್ರೀಭಗವಂತ-ಮರ್ಚಯೇತ್ ॥

ತತೋ ಯಾತ್ರಾದಿನೇ ಪ್ರಾಪ್ತೇ ಸ್ವಲ್ಪಾಕಾರಂ ಪ್ರತಿಮಾಖ್ಯಾಂ ಕೂಟಾಗಾರೇ ಮನೋಹರೇ ನಾನಾಪ್ರಕಾರವಸನಾಚ್ಛಾದಿತೇ ಸಕಿಂಕಿಣೀಕೇ ರತ್ನ-

---

ಪೂಜೆ, ಮೂರನೇದಿನದಲ್ಲಿ ನಾಗಪೂಜೆ, ನಾಲ್ಕನೆಯ ದಿನದಲ್ಲಿ ಪ್ರಮಥಪೂಜೆ, ಐದನೆಯ ದಿನದಲ್ಲಿ ಬ್ರಾಹ್ಮಣಪೂಜೆ ಬಡಬಗ್ಗರಿಗೆ ದಾನ, ಆರನೆಯ ದಿನದಲ್ಲಿ ಸ್ನಪನ

ಆದಿನ ಬೃಹತ್ಸ್ನಪನಮಾಡಿ ನಗರದಲ್ಲಿರುವ ಎಲ್ಲಾ ಜನಗಳೂ ಧವಲವಸ್ತ್ರ ಧಾರಿಗಳಾಗಿ ಕೈಗಳಲ್ಲಿ ಪವಿತ್ರಧರಿಸಿ ಹೆಚ್ಚಾದ ವಾದ್ಯಘೋಷದೊಡನೆ ನರ್ತನ ಮಾಡುತ್ತಾ ಊರಿಗೆ ಸಮೀಪದಲ್ಲಿರುವ ಸರೋವರ ಅಥವಾ ನದಿ ಅಥವಾ ಝರಿ ಇವುಗಳಾವುದಾದರೊಂದರ ಸಮೀಪಕ್ಕೆ ಹೋಗಬೇಕು. ಆ ತೀರ್ಥದಿಂದ ಜಲ ಪೂರ್ಣ ಕಲಶಗಳನ್ನು ಆನೆಯ ಮೇಲೆ ಇಟ್ಟು ಅಥವಾ ತಾವಾಗಿಯೇ ಶುಭವಸ್ತ್ರ ದಿಂದ ಆಚ್ಛಾದಿಸಿ ತರಬೇಕು. ತಂದು ಶ್ರೀ ಭಗವಂತನನ್ನು ಅಭಿಷೇಕಮಾಡಬೇಕು. ಪ್ರತಿಷ್ಠಾ ಪ್ರಸಂಗದಲ್ಲಿ ಹೇಳಿರುವ ಭೋಗವಿಧಿಯಂತೆ ಪೂಜಿಸಬೇಕು. ನೃತ್ಯವಾದ್ಯ ಗೀತಾದಿಗಳಿಂದಲೂ ಪೂಜಿಸಬೇಕು.

ಅನಂತರ ಯಾತ್ರಾದಿನದಲ್ಲಿ ಪ್ರತಿಮೆ ಎಂಬ ಹೆಸರಿನ ಸಣ್ಣ ಉತ್ಸವಮೂರ್ತಿ ಯನ್ನು ರಮ್ಯವಾಗಿಯೂ, ನಾನಾವಿಧವಾದ ವಸ್ತ್ರಗಳಿಂದ ಅಲಂಕರಿಸಿಯೂ, ಸಣ್ಣ

**ಮಾಲ್ಯಪತಾಕೋಪಶೋಭಿತೇ ರಥೇ ದೃಢೀಕೃತ್ಯ ಅಶ್ವೈರ್ದಾಂತೈಃ ವ್ಯಾಯತ್ತೈರ್ವಾ ಪುರುಷೈಃ ನಗರಂ ಭ್ರಾಮಯೇತ್ । ನಾಗರೇಣ ಚ ಜನೇನ ಸುವೇಶೇನ ಚಾಪಮಾತ್ರಪಾಣಿನಾ ಕೂಟಾಗಾರಸ್ಯ ಪುರಸ್ತಾ-ದ್ಭ್ರಮಣಂ ಕಾರ್ಯಂ । ಅನ್ಯೈಶ್ಚ ಕುಸುಮಮಾಲಾವಿಕಿರಣಂ ಕಾರ್ಯಂ । ಸ್ತುತೀಶ್ಚ ಕುರ್ಯುಃ । ವಂದಿನೋ ಮಂಗಲಪಾಠಕಾಶ್ಚ ಪುರತೋ ಭವೇಯುಃ । ವಾದಿತ್ರಾಣಿ ವಾದಯಂಶ್ಚತುರಂಗಬಲಾ-ನುಯಾತೋ ರಾಜಾ ಚಾನುಗಮನಂ ಕುರ್ಯಾತ್ । ನಗರಾಧಿ-ಕೃತೋ ವಾ ತದಧಿಕೃತೋ ವಾ ಗಜಪೃಷ್ಠಗತಶ್ಚ ಸಾಂವತ್ಸರೇಣಾನು ಗಮನಂ ಕುರ್ಯಾತ್ । ನಿಮಿತ್ತಾನಿ ಚ ಪಶ್ಯೇತ್ ॥**

**ವಿನಾವಾತಂ ಧ್ವಜಭಂಗೇ ರಾಜ್ಞಾಂ ಮರಣಮಾದಿಶೇತ್ । ಛತ್ರಭಂಗೇ-ಜನಪದವಿನಾಶಃ । ಈಷಾಭಂಗೇ ರಾಜಪತ್ನೀಮರಣಂ । ರಜ್ಜು-ಚ್ಛೇದೇಬಾಲಪೀಡಾ । ಅಶ್ವದಾಂತನರವಿಪತ್ತೌ ಜನಪದಪೀಡಾ ।**

---

ಸಣ್ಣ ಘಂಟೆಗಳಿಂದ ಕೂಡಿಯೂ, ರತ್ನ, ಹೂಮಾಲೆಗಳು ಪತಾಕೆಗಳು ಇವುಗಳಿಂದ ವಿರಾಜಿತವೂ ಆಗಿರುವ ರಥದಲ್ಲಿ ಸಣ್ಣ ಮಂಡಪದಲ್ಲಿಟ್ಟು ದೃಢವಾಗಿ ಮಾಡಿ ಪಳಗಿದ ಕುದುರೆಗಳಿಂದಾಗಲಿ ಸಮರ್ಥರಾದ ಪುರುಷರಿಂದಾಗಲಿ ಒಯ್ಯಲ್ಪಡುವ ಆ ರಥವನ್ನು ನಗರದ ಸುತ್ತಲೂ ಸ್ತುತಿಸಬೇಕು. ನಗರದ ಜನಗಳು ಒಳ್ಳೆಯ ಉಡುಪನ್ನು ಧರಿಸಿ ಧನುಸ್ಸನ್ನು ಮಾತ್ರ ಹಿಡಿದು ಆ ಮಂಡಪದ ಮುಂದೆ ಸುತ್ತುತ್ತಿರಬೇಕು. ಉಳಿದ ನಗರಜನಗಳು ಹೂವು, ಹೂವಿನಮಾಲೆ ಇವುಗಳನ್ನು ಎರಚುತ್ತಿರಬೇಕು. ಸ್ತುತಿಮಾಡುತ್ತಿರಬೇಕು. ಮುಂಭಾಗದಲ್ಲಿ ಸ್ತುತಿಪಾಠಕರು ತಮ್ಮ ಕಾರ್ಯದಲ್ಲಿ ವ್ಯಗ್ರರಾಗಿರಬೇಕು. ವಾದ್ಯಗಳನ್ನು ಭಾರಿಸುತ್ತಾ ಚತುರಂಗಬಲದಿಂದ ಕೂಡಿದ ದೊರೆಯು ಅನುಸರಿಸಿ ಹಿಂದೆ ಹೊರಡಬೇಕು ನಗರದ ಮುಖ್ಯಾಧಿಕಾರಿಯಾಗಲಿ ಅವನಿಂದ ಅಧಿಕೃತನೇ ಆಗಲಿ ಆನೆಯಮೇಲೆ ಕುಳಿತು ಜ್ಯೋತಿಷಿಕನೊಡನೆ ಹಿಂಬಾಲಿಸಿ ಬರಬೇಕು. ಶುಭಾಶುಭನಿಮಿತ್ತಗಳನ್ನೂ ನಿರೀಕ್ಷಿಸುತ್ತಿರಬೇಕು.

ಗಾಳಿ ಇಲ್ಲದಿದ್ದರೂ ರಥಧ್ವಜವು ಭಗ್ನವಾದಲ್ಲಿ ರಾಜನಿಗೆ ಮರಣವುಂಟಾಗುತ್ತದೆಂದು ತಿಳಿಯಬೇಕು. ಛತ್ರವು ಮುರಿದಲ್ಲಿ ರಾಜ್ಯನಾಶ, ನೊಗದದಂಡವು ಮುರಿದಲ್ಲಿ ರಾಜಪತ್ನೀನಾಶ, ಹಗ್ಗವು ಕತ್ತರಿಸಿ ಹೋದಲ್ಲಿ ಬಾಲರಿಗೆ ಪೀಡಾ, ಕುದುರೆ ಮತ್ತು ಸಾಧುಜನರಿಗೆ ವಿಪತ್ತುಂಟಾದಲ್ಲಿ ರಾಜ್ಯಪೀಡೆ. ರಜ್ಜುವಿನ

**ಮಾತ್ಸೆ ಕಾಚ್ಛೇದೇ ರಾಜಮಾತುಃ ಪೀಡಾ । ಅರ್ಚಾಭಂಗೇ ಪತನೇ ಲೋಕನಾಶಃ । ಸಮಗ್ರ ಕೂಟಾಗಾರಸ್ಯ ಪತನೇ ಸರಾಜಕಸ್ಯ ರಾಷ್ಟ್ರಸ್ಯ ವಿನಾಶಃ । ವಿಸ್ವರೇಷು ವಾದಿತ್ರೇಷು ಪರಚಕ್ರಾಗಮಃ । ಧ್ವಜಸ್ಥೇ ಕ್ರವ್ಯಾದೇ ಸಮರಭಯಂ । ಅಸ್ಪೃಷ್ಟಜನಪದೇ ದುರ್ಭಿಕ್ಷ-ಭಯಂ । ಶುಭಭೇ ಶುಭಂ ಬಾಲಕಾ ಯತ್ರ ಕುರ್ಯುಃ ತತ್ ತಥಾ ವಿಧಮೇವ ಭವತಿ । ಯಸ್ಯ ಚ ಪುರುಷಸ್ಯ ತಸ್ಮಿನ್ನಹನಿ ಯಾದೃಶೇ ಸುಖದುಃಖೇ ಭವೇತಾಂ । ತಾದೃಶೇಪಿ ಸಂವತ್ಸರೇ ತಸ್ಯ ಜ್ಞೇಯೇ । ತಸ್ಮಾತ್ತತ್ರಾಹ್ನಿ ಸ್ವಾಶಿತೇನ ಸುವಾಸಸಾ ಪ್ರಹೃಷ್ಟೇನ ನಾಗರೇಣ ಭವಿತವ್ಯಂ । ಏವಂ ನಗರೇ ಸಂಭ್ರಾಮ್ಯ ಚಿಹ್ನಾಗಮಂ ಜ್ಞಾತ್ವಾ ಪವಿಷ್ಟಾಯಾಂ ಪ್ರತಿಮಾರ್ಚಾಯಾಂ ಮಹೋತ್ಸವಂ ಕುರ್ಯಾತ್ ॥**

**ದ್ವಿತೀಯದಿವಸಾದಾರಭ್ಯ ಯಾವತ್ಸಾಮರ್ಥ್ಯಂ ಪ್ರತ್ಯಹಂ ನಟನರ್ತಕ-ನರ್ತಕೀ ಮಲ್ಲೇಂದ್ರ ಜಾಲಿಕಾದೀನಾಂ ಪ್ರೇಕ್ಷಾಪೂರ್ವಕಂ ಧನಂ ದದ್ಯಾತ್ । ಪ್ರೇಕ್ಷಾಕಾಲೇ ಚ ಪ್ರೇಕ್ಷಕಂ ಜನಂ ಮಾಲ್ಯತಾಂಬೂ-**

---

ಮೂಲವೇ ಕತ್ತರಿಸಿ ಹೋದಲ್ಲಿ ರಾಜನ ತಾಯಿಗೆ ಪೀಡೆ, ವಿಗ್ರಹವೇ ಭಗ್ನವಾದರೆ ಅಥವಾ ಬಿದ್ದರೆ ಲೋಕನಾಶ. ಸಣ್ಣ ಮಂಟಪದೊಡನೆ ವಿಗ್ರಹವು ಬಿದ್ದಲ್ಲಿ ರಾಜನೊಡನೆ ರಾಷ್ಟ್ರಕ್ಕೆ ನಾಶ. ವಾದ್ಯಗಳು ಅಪಸ್ವರಹೊಂದಿದಲ್ಲಿ ಶತ್ರುಸೈನ್ಯಾಗಮನ, ಧ್ವಜದಮೇಲೆ ಹದ್ದುಮೊದಲಾದವು ಕುಳಿತಲ್ಲಿ ಯುದ್ಧಭಯ, ದೇಶದ ಜನರನ್ನು ಕೇಳದೆಯೇ ನಡೆದಲ್ಲಿ ಆ ದೇಶಕ್ಕೆ ದುರ್ಭಿಕ್ಷಭಯ, ಶುಭನಕ್ಷತ್ರದಲ್ಲಿ ಇದು ನಡೆದಲ್ಲಿ ಆ ದಿನ ಬಾಲಕರು ಸಂತೋಷದಿಂದ ಆಟವಾಡುತ್ತಿದ್ದಲ್ಲಿ ಇವರಿಂದ ಬಾಲಕರಿಗೆ ಸಂತೋಷವೇ ಆಗುತ್ತಿರುತ್ತದೆ. ಯಾವ ಮನುಷ್ಯನಿಗೆ ಆ ದಿನ ಯಾವ ವಿಧವಾದ ಸುಖದುಃಖಗಳು ಉಂಟಾಗುತ್ತವೆಯೋ ಅಂತಹ ಸುಖದುಃಖಗಳೇ ಆ ವರ್ಷದ ವರಿಗೆ ಅವನಿಗೆ ಉಂಟಾಗುತ್ತವೆ. ಆದುದರಿಂದ ಆ ದಿನ ನಗರಜನಗಳು ಚನ್ನಾಗಿ ಊಟಮಾಡಿ ಒಳ್ಳೆಯ ವಸ್ತ್ರಗಳನ್ನೂ ಧರಿಸಿ ಬಹುಸಂತೋಷದಿಂದರಬೇಕು. ಹೀಗೆ ನಗರದಲ್ಲಿ ಸುತ್ತಿ ಅಪಶಕುನಗಳ ಚಿಹ್ನೆಯು ಕಂಡುಬಂದಲ್ಲಿ ಪ್ರತಿಮಾವಿಗ್ರಹವು ಆಲಯಕ್ಕೆ ಬಂದು ಸೇರಿದನಂತರ ಮಹೋತ್ಸವವನ್ನು ನಡೆಸಬೇಕು.

ಎರಡನೆಯದಿನ ಮೊದಲು ಯಥಾಶಕ್ತಿಯಾಗಿ ಪ್ರತಿದಿನವೂ ನಟರು, ನರ್ತಕರು, ನರ್ತಕಿಯರು ಜಟ್ಟಿಗಳು ಇಂದ್ರಜಾಲಿಕರು ಇವರಿಗೆ ಅವರ ಕಲೆಯನ್ನು ನೋಡುವುದರ ಮೂಲಕ ಧನವನ್ನು ಕೊಡಬೇಕು ನೋಡುವಾಗಲೂ ನೋಟಕ್ಕೆ

ಲಾನುಲೇಪನಾದಿ ದಾನೇನಾರ್ಚಯೇತ್ । ಅದೃಶ್ಯಾನಾಂ ಪ್ರೇಕ್ಷ
ಕಾಣಾಂ ಭೂತಾನಾಂ ರಂಗಾದಿದಿಗ್ವಿದಿಕ್ಷು ಸೋದಕಮನ್ನಾದ್ಯಂ
ಫಲಾನಿ ಪುಷ್ಪಾಣಿ ಪಲಲೋಲ್ಲೋಪಿಕಾ ಮೋದಕಾನಿ ವಿಕಿರೇತ್ ।
ಪ್ರೇಕ್ಷಕಾಣಾಂ ಯಾತ್ರಾಗತಾನಾಂ ಚ ಶ್ರೇಯಶ್ಚಾಸ್ತ್ವಿತ್ಯುದೀರ-
ಯೇತ್ । ಯಾತ್ರಾಗತಾಶ್ಚ ಪ್ರೇಕ್ಷಕಾಃ ಆಗಾಮಿನೀಂ ಯಾತ್ರಾಂ
ಪಶ್ಯಂತ್ವಿತ್ಯುದೀರಯೇತ್ ॥

ಅಶುಭನಿಮಿತ್ತೋತ್ಪತ್ತೌ ತದುಪಶಮನಾಯಾನೇನ ವಿಧಿನಾ ಪುನರ್ಯಾತ್ರಾಂ
ಸಮ್ಯಕ್ಕುರ್ಯಾತ್ ।

ಅನೇನ ವಿಧಿನಾ ಯಸ್ತು ಯಾತ್ರಾಂ ಕುರ್ಯಾತ್ಸುರಾಲಯೇ ।
ಸ ಸರ್ವಕಾಮಾನಾಪ್ನೋತಿ ವಿಷ್ಣುಲೋಕಂ ಚ ಗಚ್ಛತಿ ॥

ಧನ್ಯಂ ಯಶಸ್ಯಮಾಯುಷ್ಯಂ ರಾಜ್ಞಾಂ ಚ ವಿಜಯಪ್ರದಂ ।
ನಾಗರಾಣಾಂ ಹಿತಕರಂ ಯಾತ್ರಾಕರ್ಮ ಪ್ರಕೀರ್ತಿತಂ ॥

---

ಬಂದಿರುವ ಜನರಿಗೂ ಹೂವು, ತಾಂಬೂಲ, ಗಂಧ ಇತ್ಯಾದಿಗಳನ್ನು ಕೊಟ್ಟು ಸತ್ಕರಿಸಬೇಕು. ಅದೃಶ್ಯರಾಗಿ ಪ್ರೇಕ್ಷಕರಾಗಿರುವ ಭೂತಗಳನ್ನುದ್ದೇಶಿಸಿ ರಂಗ ಸ್ಥಲದ ದಿಕ್ಕುವಿದಿಕ್ಕುಗಳಲ್ಲಿ ನೀರಿನೊಡನೆ ಅನ್ನ ಮೊದಲಾದ್ದನ್ನೂ, ಫಲ, ಪುಷ್ಪ, ಮಾಂಸ, ಮೋದಕ ಮುಂತಾದುವನ್ನೂ ಎರಚಬೇಕು. ಯಾತ್ರಿಕರುಗಳಿಗೂ ಪ್ರೇಕ್ಷಕರಿಗೂ ಶ್ರೇಯಸ್ಸುಂಟಾಗಲಿ ಎಂದು ಘೋಷಿಸಬೇಕು. ಯಾತ್ರೆಗಾಗಿ ಬಂದಿರುವವರೂ ಸಹ ಪ್ರೇಕ್ಷಕರು ಮುಂದಿನ ಯಾತ್ರೆಯನ್ನೂ ನೋಡಲಿ ಎಂದೂ ಘೋಷಿಸಬೇಕು.

ಮೇಲೆ ಹೇಳಿರುವ ಅಶುಭನಿಮಿತ್ತಗಳಾವುದಾದರೂ ಕಂಡು ಬಂದಲ್ಲಿ ಅಂತಹ ಅಶುಭಶಮನಕ್ಕಾಗಿ ಇದೇ ವಿಧಾನದಿಂದ ಪುನಃ ಯಾತ್ರೋತ್ಸವವನ್ನು ಚೆನ್ನಾಗಿ ಮಾಡಬೇಕು. ಈ ವಿಧಿಯಂತೆ ಯಾವನು ದೇವಾಲಯದಲ್ಲಿ ಯಾತ್ರೆಯನ್ನು ನಡೆಸುತ್ತಾನೆಯೋ ಅವನು ಎಲ್ಲಾ ಮನೋರಥಗಳನ್ನೂ ಹೊಂದಿ ವಿಷ್ಣುಲೋಕ ವನ್ನೂ ಸೇರುತ್ತಾನೆ. ಈ ಯಾತ್ರಾಕರ್ಮವು ಧನಸಮೃದ್ಧಿಗೆ ಕಾರಕವಾಗಿಯೂ ಯಶಃ ಪ್ರದವಾಗಿಯೂ, ಆಯುಃಪ್ರದವಾಗಿಯೂ, ರಾಜರಿಗೆ ವಿಜಯಸಾಧಕವಾಗಿಯೂ, ನಗರದ ಜನಗಳಿಗೂ ಹಿತಕರವಾಗಿಯೂ ಆಗುತ್ತದೆ. ದೇವತೋತ್ತಮರ ತುಷ್ಟಿ

ತುಷ್ಟ್ಯರ್ಥಂ ತ್ರಿದಶೇಂದ್ರಾಣಾಂ ಹಿತಾರ್ಥಂ ನಾಗರಸ್ಯ ಚ ।
ಜನಸ್ಯ ರಾಜನ್ ಕರ್ತವ್ಯಂ ಯಾತ್ರಾಕರ್ಮ ಜಯಾವಹಂ ॥
ಅತಿವೃಷ್ಟಿಕರಂ ಪ್ರೋಕ್ತಂ ತ್ವನಾವೃಷ್ಟಿವಿನಾಶನಂ ।
ಯಾತ್ರಾಕರ್ಮತ್ವಿದಂ ಕಾರ್ಯಂ ದೇವತಾಯತನೇ ಸದಾ ॥
ಪ್ರತಿಸಂವತ್ಸರಂ ರಾಜನ್ ರಾಜ್ಞಾ ವಿಜಯಮಿಚ್ಛತಾ ।

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಯಾತ್ರಾವಿಧಿವರ್ಣನೋ ನಾಮ
ಸಪ್ತದಶೋತ್ತರಶತತಮೋಽಧ್ಯಾಯಃ

---

ಗಾಗಿಯೂ, ನಗರಜನಗಳ ಹಿತಕ್ಕಾಗಿಯೂ, ಜಯಪ್ರದವಾಗಿರುವ ಈ ಯಾತ್ರಾ ಕರ್ಮವನ್ನು ನೆರವೇರಿಸಲೇಬೇಕು. ದೇವಾಲಯದಲ್ಲಿ ನಡೆಯುವ ಈ ಯಾತ್ರಾ ಕರ್ಮವು ಹೆಚ್ಚಾಗಿ ವೃಷ್ಟಿಯುಂಟಾಗುವುದಕ್ಕೂ ಅನಾವೃಷ್ಟಿ ನಾಶವಾಗುವುದಕ್ಕೂ ಕಾರಣವಾಗಿರುವುದರಿಂದ ಇದನ್ನು ಯಾವಾಗಲೂ ನಡೆಸುವುದು ಅವಶ್ಯಕ. ಶತ್ರು ವಿಜಯವನ್ನು ಅಪೇಕ್ಷಿಸುವ ರಾಜನು ಪ್ರತಿ ಸಂವತ್ಸರದಲ್ಲೂ ಇದನ್ನು ನಡೆಸಲೇ ಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಯಾತ್ರಾವಿಧಿವರ್ಣನವೆಂಬ
ನೂರ ಹದಿನೇಳನೆಯ ಅಧ್ಯಾಯ
ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

|| ಅಷ್ಟಾದಶೋತ್ತರಶತತಮೋಽಧ್ಯಾಯಃ ||

|| ವಜ್ರ ಉವಾಚ ||

**ಕಾಂಕಾಂ ವಿಷ್ಣೋಸ್ತನುಂ ಭಕ್ತಃ ಕೇನ ಕಾಮೇನ ಪೂಜಯೇತ್ ।**
**ಏತಂ ಮೇ ಸಂಶಯಂ ಛಿನ್ಧಿ ತ್ವಂ ಹಿ ಸರ್ವಂ ವಿಜಾನಸೇ || ೧ ||**

|| ಮಾರ್ಕಂಡೇಯ ಉವಾಚ ||

**ಸರ್ವಕಾಮಪ್ರದಂ ದೇವಂ ಚತುರ್ಮೂರ್ತಿಂ ತು ಪೂಜಯೇತ್ ।**
**ಪೂಜಯೇದನಿರುದ್ಧಂ ತು ಧರ್ಮಕಾಮೋ ನರಃ ಸದಾ || ೨ ||**
**ತಥಾ ಸಂಕರ್ಷಣಂ ದೇವಮರ್ಥಕಾಮಸ್ತು ಪೂಜಯೇತ್ ।**
**ಕಾಮಕಾಮೋಽಪಿ ರಾಜೇಂದ್ರ ಪ್ರದ್ಯುಮ್ನಂ ಪೂಜಯೇದ್ವಿಭುಂ || ೩ ||**

---

### ನೂರ ಹದಿನೆಂಟನೆಯ ಅಧ್ಯಾಯ.

೩-೫. ವಜ್ರನು ಪ್ರಶ್ನೆಮಾಡುತ್ತಾನೆ :—ಭಕ್ತನಾದವನು ಫಲಾರ್ಥಿಯಾದಲ್ಲಿ ವಿಷ್ಣುವಿಗೆ ಶರೀರಭೂತರಾದ ಈ ದೇವತೆಗಳಲ್ಲಿ ಯಾವ ಯಾವ ಫಲಕ್ಕಾಗಿ ಯಾವ ಯಾವ ದೇವತೆಗಳನ್ನು ಪೂಜಿಸಬೇಕು. ಪೂಜ್ಯನೇ ಸರ್ವಜ್ಞನಾದ ನೀನು ನನ್ನ ಈ ಸಂಶಯವನ್ನೂ ಹೋಗಲಾಡಿಸಬೇಕು, ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ. ಸರ್ವಪುರುಷಾರ್ಥಗಳನ್ನೂ ಅಪೇಕ್ಷಿಸುವವನು ಅಂತಹ ಪುರುಷಾರ್ಥ ಪ್ರದನಾದ ವಾಸುದೇವಾದಿಚತುರ್ಮೂರ್ತಿಯಾದ ವಿಷ್ಣುವನ್ನು ಆರಾಧಿಸಬೇಕು. ಧರ್ಮಾರ್ಥಿಯಾದ ಮನುಷ್ಯನು ಯಾವಾಗಲೂ ಅನಿರುದ್ಧನನ್ನು ಪೂಜಿಸಬೇಕು.

ಪೂಜಯೇನ್ಮೋಕ್ಷಕಾಮಸ್ತು ವಾಸುದೇವಂ ಜಗತ್ಪ್ರಭುಂ ।
ಪುತ್ರಕಾಮಸ್ತಥಾ ರಾಜನ್ ಪದ್ಮನಾಭಂ ಚ ಪೂಜಯೇತ್ ॥ ೪ ॥

ತಥಾಶ್ವಶಿರಸಂ ದೇವಂ ವಿದ್ಯಾಕಾಮಸ್ತು ಪೂಜಯೇತ್ ।
ಭೋಗಾನಾಮಾಪ್ತುಕಾಮಸ್ತು ಪೂಜಯೇದ್ಭೋಗಶಾಯಿನಂ ॥ ೫ ॥

ಭೋಗಿಭೋಗಾಸನಾಸೀನಂ ಸ್ಥಾನಕಾಮಸ್ತು ಪೂಜಯೇತ್ ।
ಮತ್ಸ್ಯಂ ಸಂಪೂಜಯೇದ್ದೇವಂ ಧಾನ್ಯಕಾಮೋ ನರಃ ಸದಾ ॥ ೬ ॥

ತಥೈವಾರೋಗ್ಯಕಾಮಸ್ತು ಕೂರ್ಮದೇವಂ ಚ ಪೂಜಯೇತ್ ।
ಜ್ಞಾನಕಾಮಸ್ತಥಾ ಹಂಸಂ ನೃಸಿಂಹಮಥವಾ ವಿಭುಂ ॥ ೭ ॥

---

ಅರ್ಥಕಾಮನಾದವನು ಸಂಕರ್ಷಣಮೂರ್ತಿಯನ್ನು ಪೂಜಿಸಬೇಕು. ಕಾಮವೆಂಬ ಪುರುಷಾರ್ಥಾಪೇಕ್ಷಿಯಾದವನು ಪ್ರಭುವಾದ ಪ್ರದ್ಯುಮ್ನಮೂರ್ತಿಯನ್ನು ಪೂಜಿಸಬೇಕು. ಮೋಕ್ಷಾಪೇಕ್ಷೆಯುಳ್ಳವನು ಜಗತ್ಪ್ರಭುವಾದ ವಾಸುದೇವನನ್ನು ಪೂಜಿಸಬೇಕು. ಪುತ್ರಾರ್ಥಿಯಾದವನು ಪದ್ಮನಾಭಮೂರ್ತಿಯನ್ನು ಪೂಜಿಸಬೇಕು. ವಿದ್ಯಾಪೇಕ್ಷೆಯುಳ್ಳವನು ಹಯಗ್ರೀವಮೂರ್ತಿಯನ್ನು ಪೂಜಿಸಬೇಕು. ಭೋಗಾಪೇಕ್ಷೆಯುಳ್ಳವನು ಭೋಗಶಾಯಿಮೂರ್ತಿಯನ್ನು ಪೂಜಿಸಬೇಕು.

೬–೧೦. ಉತ್ತಮಸ್ಥಾನಾಪೇಕ್ಷೆಯುಳ್ಳವನು ಸರ್ಪಾಸನನಾದ ಮೂರ್ತಿಯನ್ನೂ, ಧಾನ್ಯಾಪೇಕ್ಷೆಯುಳ್ಳವನು ಮತ್ಸ್ಯಮೂರ್ತಿಯನ್ನೂ ಪೂಜಿಸಬೇಕು. ಆರೋಗ್ಯಕಾಮನಾದವನು ಕೂರ್ಮಮೂರ್ತಿಯನ್ನು ಪೂಜಿಸಬೇಕು. ಜ್ಞಾನಕಾಮನಾದವನು ಹಂಸಮೂರ್ತಿಯನ್ನು ಅಥವಾ ನರಸಿಂಹ ಮೂರ್ತಿಯನ್ನೂ ಪೂಜಿಸಬೇಕು. ವಿದ್ಯಾಪೇಕ್ಷಿಯಾದವನು ವಾಲ್ಮೀಕಿಯನ್ನಾಗಲಿ, ವ್ಯಾಸರನ್ನಾಗಲಿ ಪೂಜಿಸಬೇಕು. ಸಾಂಖ್ಯಶಾಸ್ತ್ರವನ್ನು ಅಪೇಕ್ಷಿಸುವವನು ಕಪಿಲಮೂರ್ತಿಯನ್ನೂ, ಐಶ್ವರ್ಯಾಪೇಕ್ಷಿಯಾದವನು ಯಜ್ಞವರಾಹ ಅಥವಾ ನೃವರಾಹಮೂರ್ತಿಯನ್ನು

ವಿದ್ಯಾಕಾಮೋಽಥ ವಾಲ್ಮೀಕಿಂ ವ್ಯಾಸಂ ವಾಪ್ಯಥ ಪೂಜಯೇತ್ ।
ಸಾಂಖ್ಯಜ್ಞಾನಪರಿಜ್ಞಾನಹೇತವೇ ಕಪಿಲಂ ತಥಾ ॥ ೮ ॥

ಭೂತಿಕಾಮೋ ವರಾಹಂ ತು ನೃವರಾಹಮಥಾರ್ಚಯೇತ್ ।
ವ್ಯವಹಾರೇ ರಣೇ ದ್ಯೂತೇ ಜಯಕಾಮಸ್ತಥಾ ಪೃಥಕ್ ॥ ೯ ॥

ಧರ್ಮಕಾಮಸ್ತಥಾ ಧರ್ಮಂ ಬ್ರಹ್ಮಾಣಂ ಚಾಪಿ ಪೂಜಯೇತ್ ।
ಶತ್ರೂಣಾಂ ನಾಶಕಾಮಸ್ತು ಮಹಾದೇವಂ ತು ಪೂಜಯೇತ್ ॥ ೧೦ ॥

ಪೂಜಯೇದ್ಭಾರ್ಗವಂ ರಾಮಂ ಪ್ರತಿಜ್ಞಾಪೂರಣೇಚ್ಛಯಾ ।
ಅಥವಾ ರಾಜಶಾರ್ದೂಲಂ ರಾಮಂ ದಶರಥಾತ್ಮಜಂ ॥ ೧೧ ॥

ಶ್ರೀಕಾಮಸ್ತು ಮಹಾರಾಜ ಶ್ರೀಸಹಾಯಂ ಚ ಪೂಜಯೇತ್ ।
ಬಲಕಾಮಸ್ತಥಾ ದೇವಂ ಬಲಭದ್ರಂ ಪ್ರಪೂಜಯೇತ್ ॥ ೧೨ ॥

ತಮೇವ ರಾಜಶಾರ್ದೂಲಂ ಕೃಷಿಕರ್ಮಪ್ರಸಿದ್ಧಯೇ ।
ಸರ್ವಕಾಮಪ್ರದಂ ದೇವಂ ಯಥೇಷ್ಟಾಂ ತನುಮಾಸ್ಥಿತಂ ॥ ೧೩ ॥

---

ಪೂಜಿಸಬೇಕು. ವ್ಯವಹಾರದಲ್ಲಿಯೂ, ಯುದ್ಧದಲ್ಲಿಯೂ, ದ್ಯೂತದಲ್ಲಿಯೂ ಜಯವನ್ನು ಅಪೇಕ್ಷಿಸುವವನು ಈ ವರಾಹಮೂರ್ತಿಯನ್ನೇ ಬೇರೆ ಬೇರೆಯಾಗಿ ಪೂಜಿಸಬೇಕು. ಧರ್ಮಕಾಮನಾದವನು ಧರ್ಮನನ್ನಾಗಲಿ, ಬ್ರಹ್ಮನನ್ನಾಗಲಿ ಪೂಜಿಸಬೇಕು. ಶತ್ರುನಾಶವನ್ನು ಅಪೇಕ್ಷಿಸುವವನು ಮಹಾದೇವನನ್ನು ಪೂಜಿಸಬೇಕು.

೧೧-೧೪. ಪ್ರತಿಜ್ಞಾಪೂರ್ತಿಯನ್ನು ಅಪೇಕ್ಷಿಸುವವನು ಭಾರ್ಗವರಾಮನನ್ನು ಅಥವಾ ದಶರಥರಾಮನನ್ನು ಪೂಜಿಸಬೇಕು ಸಂಪತ್ತನ್ನು ಅಪೇಕ್ಷಿಸುವವನು ಲಕ್ಷ್ಮೀಸಹಾಯನಾದ ನಾರಾಯಣನನ್ನು ಪೂಜಿಸಬೇಕು. ಬಲವನ್ನು ಅಪೇಕ್ಷಿಸುವವನು ಬಲಭದ್ರದೇವನನ್ನೂ, ಕೃಷಿಕರ್ಮಕಾಮನೂ ಸಹ ಅದೇ ಬಲಭದ್ರನನ್ನೂ ಪೂಜಿಸಬೇಕು. ಅಥವಾ ಸರ್ವಕಾಮಪ್ರದನಾದ ವಾಸುದೇವನು ಎಲ್ಲಾ ಫಲಗಳನ್ನೂ ಕೊಡುವ

ಪೂಜಯೇತ್ಸರ್ವಶಕ್ತಿತ್ವಾತ್ಸರ್ವಕಾಮಫಲಪ್ರದಂ ।
ನಿರಾಶಿಷಃ ಪೂಜಯತೋ ವರೇಣ್ಯಂ
ದೇವೇಶ್ವರಂ ವಾಸುದೇವಂ ಪುರಾಣಂ ।
ಯಥೇಷ್ಟದೇಹೋಪಗತಂ ನೃವೀರ
ಸ್ಥಾನಂ ತದುಕ್ತಂ ಪರಮಂ ಹಿ ಯತ್ಸ್ಯಾತ್ ॥ ೧೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ತತ್ತ್ವಕಾಮಪೂಜನವರ್ಣನೋ ನಾಮ
ಅಷ್ಟಾದಶೋತ್ತರಶತತಮೋಽಧ್ಯಾಯಃ

---

ಶಕ್ತಿಹೊಂದಿರುವುದರಿಂದ ಯಾವ ದೇಹಹೊಂದಿದ್ದರೂ ಆ ವಾಸುದೇವನನ್ನು ಎಲ್ಲಾ ಫಲಕ್ಕಾಗಿಯೂ ಪೂಜಿಸಬಹುದು. ಪುರಾತನನಾಗಿಯೂ ಸೇವ್ಯನಾಗಿಯೂ ಇರುವ ಸರ್ವದೇವಾಧಿಪನಾದ ವಾಸುದೇವನನ್ನು ಅವನು ಯಾವ ದೇಹ ಹೊಂದಿದ್ದರೂ ನಿಷ್ಕಾಮಬುದ್ಧಿಯಿಂದ ಪೂಜಿಸಿದಲ್ಲಿ ಅವನಿಗೆ ಶಾಶ್ವತವಾದ ಪರಮಪದವೇ ಲಭಿಸುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ತತ್ತ್ವಕಾಮಪೂಜನವರ್ಣನವೆಂಬ
ನೂರ ಹದಿನೆಂಟನೆಯ ಅಧ್ಯಾಯ ಮುಗಿದಿದೆ.



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಏಕೋನವಿಂಶತ್ಯುತ್ತರಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಕಸ್ಮಿನ್ ಕರ್ಮಣಿ ಸಂಪ್ರಾಪ್ತೇ ಕಾಂಸ್ತಾಂ ಸಂಪೂಜಯೇತ್ತನುಂ ।
ಕಾರ್ಯಸಿದ್ಧಿಮಭಿಪ್ರೇಪ್ಸುಸ್ತನ್ಮೇ ವದ ಮಹಾಮುನೇ ॥ ೧ ॥

॥ ಮಾರ್ಕಂಡೇಯ ಉವಾಚ ॥

ಸಮುದ್ರಪೋತಯಾತ್ರಾಯಾಂ ಮತ್ಸ್ಯಂ ಸಂಪೂಜಯೇದ್ವಿಭುಂ ।
ವಾರಾಹಂ ವಾ ಮಹಾಭಾಗ ನದ್ಯುತ್ತಾರೇ ತಥೈವ ಚ ॥ ೨ ॥

ಸಂಪೂಜಯೇದಶ್ವಶಿರೋ ವಿದ್ಯಾರಂಭೇ ತು ಮಾನವಃ ।
ತ್ರಿವಿಕ್ರಮಂ ತಥಾ ದೇವಂ ಯಾತ್ರಾಕಾಲೇ ತು ಪೂಜಯೇತ್ ॥ ೩ ॥

---

### ನೂರ ಹತ್ತೊಂಭತ್ತನೆಯ ಅಧ್ಯಾಯ.

೧. ವಜ್ರನು ಪ್ರಶ್ನೆಮಾಡುತ್ತಾನೆ:—ಕಾರ್ಯಸಿದ್ಧಿಯನ್ನು ಅಪೇಕ್ಷಿಸುವ ಪುರುಷನು ಯಾವ ಯಾವ ಕರ್ಮ ಒದಗಿದಾಗ ಯಾವ ಯಾವ ಮೂರ್ತಿರೂಪವಾದ ಶರೀರಗಳನ್ನು ಪೂಜಿಸಬೇಕು ಎಂಬುದನ್ನು ದಯವಿಟ್ಟು ಹೇಳಬೇಕು. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ.

೨-೫. ಸಮುದ್ರದ ಮೇಲೆ ದೋಣಿಯೇ ಮೊದಲಾದುವುಗಳಿಂದ ಪ್ರಯಾಣ ಮಾಡುವ ಕಾಲದಲ್ಲಿ ಮತ್ಸ್ಯಮೂರ್ತಿಯನ್ನೂ, ನದಿಯನ್ನು ದಾಟುವಾಗ ವಾರಾಹ ಮೂರ್ತಿಯನ್ನೂ, ವಿದ್ಯಾರಂಭಕಾಲದಲ್ಲಿ ಹಯಗ್ರೀವಮೂರ್ತಿಯನ್ನೂ, ಪೂಜಿಸ

ವಿವಾಹಕಾಲೇ ಸಂಪ್ರಾಪ್ತೇ ಪ್ರದ್ಯುಮ್ನಂ ಪೂಜಯೇನ್ನೃಪ ।
ಸಂಸ್ಕಾರೇಷು ಚ ಸರ್ವೇಷು ದತ್ತಾತ್ರೇಯಂ ಚ ಪೂಜಯೇತ್ ॥ ೪ ॥

ಕಾವ್ಯಾರಂಭೇ ತಥಾ ಪೂಜ್ಯೋ ವಾಲ್ಮೀಕಿಃ ವ್ಯಾಸ ಏವ ಚ ।
ಅಭಿಷೇಕೇ ತಥಾ ರಾಜ್ಞಾಂ ಮೃತ್ಯುಂ ವೈನ್ಯಂ ಚ ಪೂಜಯೇತ್ ॥ ೫ ॥

ಅವಶ್ಯಂ ವ್ಯವಹಾರೇ ಚ ಸಂಗ್ರಾಮೇ ದ್ಯೂತ ಏವ ವಾ ।
ವಾರಾಹಂ ಪೂಜಯೇದ್ದೇವಂ ಪ್ರಾರಂಭೇ ಕೃಷಿಕರ್ಮಣಿ ॥ ೬ ॥

ಅಥವಾಪಿ ಮಹಾರಾಜ ದೇವಂ ಸಂಕರ್ಷಣಂ ವಿಭುಂ ।
ನೃಸಿಂಹಂ ಪೂಜಯೇದ್ದೇವಂ ಕರ್ಮಣ್ಯರಿವಿನಾಶನೇ ॥ ೭ ॥

ಪ್ರತಿಜ್ಞಾಪೂರಣೇ ರಾಮಂ ಭಾರ್ಗವಂ ವಾಥ ರಾಘವಂ ।
ಔಷಧಸ್ಯ ಸಮಾರಂಭೇ ಕೂರ್ಮಂ ಸ್ತ್ರೀರೂಪಮೇವ ವಾ ॥ ೮ ॥

ತೀರ್ಥಯಾತ್ರಾ ಸಮಾರಂಭೇ ಹಂಸಂ ಸಮ್ಪೂಜಯೇದ್ವಿಭುಂ ।
ವಾಣಿಜ್ಯಸ್ಯ ಸಮಾರಂಭೇ ತಥೈವ ಗರುಡಧ್ವಜಂ ॥ ೯ ॥

---

ಬೇಕು. ಯಾತ್ರಾಕಾಲದಲ್ಲಿ ತ್ರಿವಿಕ್ರಮಮೂರ್ತಿಯನ್ನೂ, ವಿವಾಹಕಾಲದಲ್ಲಿ ಪ್ರದ್ಯುಮ್ನನನ್ನೂ, ಎಲ್ಲಾ ಸಂಸ್ಕಾರಗಳಲ್ಲೂ ದತ್ತಾತ್ರೇಯಮೂರ್ತಿಯನ್ನೂ, ಕಾವ್ಯಾರಂಭದಲ್ಲಿ ವಾಲ್ಮೀಕಿ ಮತ್ತು ವ್ಯಾಸ ಇವರನ್ನೂ, ರಾಜರ ಅಭಿಷೇಕ ಕಾಲದಲ್ಲಿ ಮೃತ್ಯುವನ್ನೂ ವೈನ್ಯನನ್ನೂ ಪೂಜಿಸಬೇಕು.

೬-೧೦. ವ್ಯವಹಾರಕಾಲದಲ್ಲಿಯೂ, ಯುದ್ಧಕಾಲದಲ್ಲಿಯೂ, ದ್ಯೂತಕಾಲದಲ್ಲಿಯೂ ವರಾಹಮೂರ್ತಿಯನ್ನು ಅವಶ್ಯ ಪೂಜಿಸಲೇ ಬೇಕು. ಕೃಷಿಕರ್ಮ ಪ್ರಾರಂಭದಲ್ಲಿಯೂ ಹಾಗೆಯೇ. ಅಥವಾ ಸಂಕರ್ಷಣಮೂರ್ತಿಯನ್ನೂ ಈ ಸಂದರ್ಭದಲ್ಲಿ ಪೂಜಿಸಬಹುದು. ಶತ್ರುವಿನಾಶಕರ್ಮದಲ್ಲಿ ನರಸಿಂಹನನ್ನು ಪೂಜಿಸಲೇಬೇಕು. ಪ್ರತಿಜ್ಞಾಪೂರಣ ಕಾಲದಲ್ಲಿ ಭಾರ್ಗವರಾಮನನ್ನಾಗಲೀ, ದಶರಥ ರಾಮನನ್ನಾಗಲಿ ಪೂಜಿಸಬೇಕು. ಔಷಧಿಗಳ ಪ್ರಾರಂಭ ಕಾಲದಲ್ಲಿ, ಕೂರ್ಮ ಅಥವಾ ಮೋಹಿನೀರೂಪಗಳನ್ನು ಪೂಜಿಸಬೇಕು, ತೀರ್ಥಯಾತ್ರಾ ಕಾಲದಲ್ಲಿ

ಶಿಲ್ಪಕರ್ಮಸಮಾರಂಭೇ ವಿಶ್ವರೂಪಂ ಸಮರ್ಚಯೇತ್ ।
ತಪಸಶ್ಚ ಸಮಾರಂಭೇ ನರನಾರಾಯಣಾವುಭೌ ॥ ೧೦ ॥

ಗೃಹಪ್ರವೇಶೇ ಚ ತಥಾ ದೇವಂ ಭೋಗಿಶಯಂ ವಿಭುಂ ।
ಧರ್ಮಂ ಸಂಪೂಜಯೇದ್ದೇವಂ ಧರ್ಮಕಾರ್ಯಪ್ರವರ್ತನೇ ॥ ೧೧ ॥

ವರಾಹಂ ಪೂಜಯೇಚ್ಛ್ರಾದ್ಧೇ ದಾನವಾನ್ಯಜ್ಞಕರ್ಮಣಿ ।
ವ್ಯಾಲಕುಂಜರದುರ್ಗೇಷು ರಿಪುಚೌರಭಯೇಷು ಚ ॥ ೧೨ ॥

ಪೂಜಯೇನ್ನರಸಿಹ್ಮಂ ತು ಸರ್ವಬಾಧಾವಿನಾಶನಂ ।
ಯಥೇಷ್ಟರೂಪಂ ಧರ್ಮಜ್ಞ ಸರ್ವಕಾರ್ಯೇಷು ಚಾರ್ಚಯೇತ್ ॥ ೧೩ ॥

ಯೇನ ಯೇನೇಹ ಕಾಮೇನ ಯಾಂ ಯಾಂ ಸಂಪೂಜಯೇತ್ತನುಂ ।
ಸಾಸಾ ತಸ್ಯ ಧ್ರುವಂ ದದ್ಯಾತ್ತಂ ತಂ ಕಾಮಮಸಂಶಯಂ ॥ ೧೪ ॥

---

ಹಂಸಮೂರ್ತಿಯನ್ನೂ, ವ್ಯಾಪಾರಾರಂಭದಲ್ಲಿ ಗರುಡಧ್ವಜನನ್ನೂ, ಶಿಲ್ಪಕರ್ಮ ಪ್ರಾರಂಭದಲ್ಲಿ ವಿಶ್ವರೂಪಮೂರ್ತಿಯನ್ನೂ, ತಪಸ್ಸಿನ ಪ್ರಾರಂಭದಲ್ಲಿ ನರನಾರಾಯಣ ಮೂರ್ತಿಯನ್ನೂ ಪೂಜಿಸಬೇಕು.

೧೧-೧೫. ಗೃಹಪ್ರವೇಶ ಕಾಲದಲ್ಲಿ ಭೋಗಿಶಯನಮೂರ್ತಿಯನ್ನೂ, ಧರ್ಮ ಕಾರ್ಯ ನಡೆಸುವಾಗ ಧರ್ಮನ ಮೂರ್ತಿಯನ್ನೂ, ಶ್ರಾದ್ಧದಲ್ಲಿ ವರಾಹಮೂರ್ತಿಯನ್ನೂ, ಯಜ್ಞಕಾರ್ಯದಲ್ಲಿ ದಾನವರನ್ನೂ. ಸರ್ಪ, ಆನೆ, ದುರ್ಗ, ಶತ್ರು, ಚೋರ ಇವುಗಳಿಂದ ಭಯಸಂಭವಿಸಿದ ಕಾಲದಲ್ಲಿ ಸರ್ವಬಾಧಾನಾಶಕನಾದ ನರಸಿಂಹನನ್ನೂ ಪೂಜಿಸಬೇಕು. ಇದು ಪ್ರಾಯಿಕ, ಎಲ್ಲಾ ಕಾರ್ಯದಲ್ಲಿಯೂ ತನಗೆ ಇಷ್ಟಬಂದ ರೂಪಗಳನ್ನೂ ಪೂಜಿಸಬಹುದು. ಯಾವ ಮನೋರಥಕ್ಕಾಗಿ ಯಾವ ಮೂರ್ತಿಯನ್ನು ಪೂಜಿಸಿದರೂ ಆಯಾಯ ಮನೋರಥವನ್ನು ಆಯಾಯ ಮೂರ್ತಿಯು ನಿಸ್ಸಂಶಯವಾಗಿಯೂ ಉಂಟುಮಾಡಿಯೇ ಮಾಡುತ್ತದೆ. ಇಷ್ಟ

ಸಂಪೂಜಿತೋ ದೇವವರಸ್ಯ ಕಾಮ್ಯೈ-
ರ್ಯಥೇಪ್ಸಿತಂ ವಜ್ರ ದದಾತಿ ಕಾಮಂ ।
ಸರ್ವಾಸ್ವಥಾರ್ಚಾಸು ಯಥೇಷ್ಟಸಂಸ್ಥಾ-
ಸ್ತ್ವಕಾಮಕಾಮ್ಯೈರ್ವಿದಧಾತಿ ಮೋಕ್ಷಂ ॥ ೧೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಕಾಯಾರಂಭಪ್ರಾದುರ್ಭಾವ ಪೂಜನಂ ನಾಮ
ಏಕೋನವಿಂಶತ್ಯುತ್ತರ ಶತತಮೋಽಧ್ಯಾಯಃ

---

ಪ್ರಾಪ್ತಿಗಾಗಿ ಈ ರೀತಿ ಪೂಜಿಸಿದವನಿಗೆ ಎಲ್ಲಾ ಇಷ್ಟಗಳನ್ನೂ ಕೊಡುತ್ತಾನೆ. ಅಲ್ಲದೆ ಎಲ್ಲಾ ಅರ್ಚೆಗಳಲ್ಲಿಯೂ ತನಗೆ ಅಭಿಮತನಾದ ಯಾವುದಾದರೊಂದನ್ನೂ ನಿಷ್ಕಾಮನಾಗಿ ಪೂಜಿಸಿದಲ್ಲಿ ಮೋಕ್ಷವೆಂಬ ಪುರುಷಾರ್ಥವೇ ಲಭಿಸುತ್ತದೆ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಕಾಯಾರಂಭ ಪ್ರಾದುರ್ಭಾವ ಪೂಜನವೆಂಬ
ನೂರಹತ್ತೊಂಭತ್ತನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ವಿಂಶತ್ಯುತ್ತರ ಶತತಮೋಽಧ್ಯಾಯಃ ||

|| ವಜ್ರ ಉವಾಚ ||

ಕಸ್ಮಿನ್ಕಾಲೇ ತು ದೇವಸ್ಯ ಪ್ರಾದುರ್ಭಾವಂ ಸಮರ್ಚಯೇತ್ ।
ಏತಂ ಮೇ ಸಂಶಯಂ ಛಿಂಧಿ ಭೃಗುವಂಶವಿವರ್ಧನ || ೧ ||

|| ಮಾರ್ಕಂಡೇಯ ಉವಾಚ ||

ನೃಹಯಂ ನೃವರಾಹಂ ಚ ನರಸಿಹ್ಮಂ ಚ ವಾಮನಂ ।
ತ್ರಿವಿಕ್ರಮಂ ತು ಧರ್ಮಜ್ಞ ಪಂಚಸ್ವಬ್ದೇಷು ಪೂಜಯೇತ್ || ೨ ||

ವಾಸುದೇವಂ ಹಲಧರಂ ಪೂಜಯೇದಯನದ್ವಯೇ ।
ಪ್ರದ್ಯುಮ್ನಮನಿರುದ್ಧಂ ಚ ತಥಾ ಭೋಗಶಯಂ ಪ್ರಭುಂ || ೩ ||

---

### ನೂರ ಇಪ್ಪತ್ತನೆಯ ಅಧ್ಯಾಯ.

೧-೪. ವಜ್ರನು ಪ್ರಶ್ನೆಮಾಡುತ್ತಾನೆ:— ಎಲೈ ಭೃಗುಕುಲೋತ್ತಮನೇ, ಆವಿರ್ಭಾವರೂಪಗಳಾದ ಭಗವಂತನ ಯಾವ ಯಾವ ಮೂರ್ತಿಗಳನ್ನು ಯಾವ ಯಾವ ಕಾಲಗಳಲ್ಲಿ ಪೂಜಿಸಬೇಕು. ನನ್ನ ಈ ಸಂಶಯವನ್ನು ದಯವಿಟ್ಟು ಪರಿಹರಿಸಬೇಕು. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ:— ಹಯಗ್ರೀವ, ನರವರಾಹ, ನರಸಿಂಹ, ವಾಮನ, ತ್ರಿವಿಕ್ರಮ ಈ ಮೂರ್ತಿಗಳನ್ನು ಐದು ವರ್ಷದಲ್ಲಿ ಕ್ರಮವಾಗಿ ಪೂಜಿಸಬೇಕು. ವಾಸುದೇವನನ್ನೂ, ಬಲರಾಮ

ಪದ್ಮನಾಭಂ ದಾಶರಥಿಂ ರಾಮಂ ಭಾರ್ಗವಮೇವ ಚ ॥ ೪ ॥

ವಸಂತಾದಿಷು ಧರ್ಮಜ್ಞ ಪೂಜಯೇದೃತುಷು ಕ್ರಮಾತ್ ।
ಗಜೇಂದ್ರಮೋಕ್ಷಣಂ ಚೈವ ಪೃಥುಂ ವಾಲ್ಮೀಕಿಮೇವ ಚ ॥ ೫ ॥

ವ್ಯಾಸಂ ಚ ಕೃಷ್ಣಂ ಚ ನರಂ ನರನಾರಾಯಣೌ ತಥಾ ।
ರಾಮಂ ರಾಮಂ ತಥಾ ರಾಮಂ ಹರಿಂ ಚೈತ್ರಾದಿಷು ಕ್ರಮಾತ್ ॥ ೬ ॥

ವಹ್ನಿಂ ಪ್ರಜಾಪತಿಂ ಸೋಮಂ ರುದ್ರಂ ಸ್ತ್ರೀರೂಪಿಣಂ ತಥಾ ।
ವ್ಯಾಸಂ ಶೇಷಂ ವರಾಹಂ ಚ ಪ್ರದ್ಯುಮ್ನಂ ಚಾರ್ಜುನಂ ನೃಪ ॥ ೭ ॥

ಆದಿತ್ಯಂ ವಿಶ್ವಕರ್ಮಾಣಂ ಚಕ್ರಂ ದೇವಂ ನೃಕೇಸರಿಂ ।
ಗರುಡಂ ಪುರುಹೂತಂ ಚ ಕಪಿಲಂ ಪದ್ಮಮೇವ ಚ ॥ ೮ ॥

ವಿಶ್ವರೂಪಂ ಚ ಬ್ರಹ್ಮಾಣಂ ತಥಾ ದೇವಂ ತ್ರಿವಿಕ್ರಮಂ ।
ಗವಾಂ ಕೂರ್ಮಂ ನರಂ ಚೈವ ತಥಾ ನಾರಾಯಣಂ ಹರಿಂ ॥ ೯ ॥

---

ನನ್ನೂ ಎರಡು ಅಯನಗಳಲ್ಲಿಯೂ ಪೂಜಿಸಬೇಕು. ಪ್ರದ್ಯುಮ್ನ, ಅನಿರುದ್ಧ, ಭೋಗಶಾಯಿ, ಪದ್ಮನಾಭ, ದಾಶರಥಿರಾಮ, ಭಾರ್ಗವರಾಮ ಇವರುಗಳ ಮೂರ್ತಿಯನ್ನು ಕ್ರಮವಾಗಿ ವಸಂತಾದಿ ಆರು ಋತುಗಳಲ್ಲಿಯೂ ಪೂಜಿಸಬೇಕು.

೫–೯. ಗಜೇಂದ್ರಮೋಕ್ಷಣ, ಪೃಥು, ವಾಲ್ಮೀಕಿ, ವ್ಯಾಸ, ಕೃಷ್ಣ, ನರ, ನರನಾರಾಯಣರು, ಭಾರ್ಗವರಾಮ, ದಶರಥರಾಮ, ಬಲರಾಮ, ಹರಿ ಈ ಹನ್ನೆರಡು ರೂಪಗಳನ್ನೂ ಚೈತ್ರಾದಿ ಹನ್ನೆರಡು ಮಾಸಗಳಲ್ಲಿ ಕ್ರಮವಾಗಿ ಪೂಜಿಸಬೇಕು. ಅಗ್ನಿ, ಪ್ರಜಾಪತಿ, ಸೋಮ, ರುದ್ರ, ಮೋಹಿನಿ, ವ್ಯಾಸ, ಶೇಷ, ವರಾಹ, ಪ್ರದ್ಯುಮ್ನ, ಅರ್ಜುನ, ಆದಿತ್ಯ, ವಿಶ್ವಕರ್ಮ, ಚಕ್ರ, ನರಸಿಂಹ, ಗರುಡ, ಇಂದ್ರ, ಕಪಿಲ, ಪದ್ಮ, ವಿಶ್ವರೂಪಿ, ಬ್ರಹ್ಮ, ತ್ರಿವಿಕ್ರಮ, ಕೂರ್ಮ, ನರ, ನಾರಾಯಣ, ರಾಮ, ಕೃಷ್ಣ, ವರದ ಈ ರೂಪಗಳನ್ನು ಕೃತ್ತಿಕಾದಿನಕ್ಷತ್ರಗಳಲ್ಲಿ ಪೂಜಿಸಬೇಕು.

ರಾಮಂ ಕೃಷ್ಣಂ ಚ ವರದಂ ಕೃತ್ತಿಕಾದಿಷು ಪೂಜಯೇತ್ ।
ನೃಹಯಂ ನೃವರಾಹಂ ಚ ತಥಾ ದೇವಂ ತ್ರಿವಿಕ್ರಮಂ　　　　|| ೧೦ ||

ಕಪಿಲಂ ಭೋಗಶಯನಂ ವರಾಹಂ ಮತ್ಸ್ಯಮೇವ ಚ ।
ರಾಮಂ ರಾಮಂ ಚ ಧರ್ಮಜ್ಞ ಕೂರ್ಮಂ ಹಂಸಂ ಚ ಯಾದವ || ೧೧ ||

ಪ್ರದ್ಯುಮ್ನಂ ಬಲದೇವಂ ಚ ವರಾಹಂ ಚ ತಥಾ ಕ್ರಮಾತ್ ।
ತಿಥಿಷು ಪ್ರಥಮಾದ್ಯಾಸು ಕ್ರಮೇಣೈವ ಸಮರ್ಚಯೇತ್　　　　|| ೧೨ ||

ಯಥೇಷ್ಟಮೂರ್ತಿಗಃ ದೇವಂ ಸರ್ವಕಾಲಮಥಾರ್ಚಯೇತ್ ।
ತಸ್ಯ ಸರ್ವಾತಿಥಿರ್ಯಸ್ಮಾನ್ಮಹಾಶಕ್ತೇರ್ಜಗದ್ಗುರೋಃ　　　　|| ೧೩ ||

ಸ ಸರ್ವಶಕ್ತಿರ್ಭಗವಾನ್ಮಹಾತ್ಮಾ ಪೂಜ್ಯಃ ಸದಾ ಭಕ್ತಿಮುಪೇತ್ಯ ರಾಜನ್ ।
ಸಂಪೂಜನಂ ದೇವವರಸ್ಯ ತಸ್ಯ ಭಕ್ತಿಃ ಪ್ರಭಾವಾ ನ ಹಿ ಕಾಲಯೋಗಃ ||

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಕಾಲನಿಯಮಪೂಜಾವರ್ಣನೋನಾಮ
ವಿಂಶತ್ಯುತ್ತರ ಶತತಮೋಽಧ್ಯಾಯಃ

---

೧೦-೧೪. ಹಯಗ್ರೀವ, ನರವರಾಹ, ತ್ರಿವಿಕ್ರಮ, ಕಪಿಲ, ಭೋಗ ಶಯನ, ವರಾಹ, ಮತ್ಸ್ಯ, ಭಾರ್ಗವರಾಮ, ದಶರಥರಾಮ, ಕೂರ್ಮ, ಹಂಸ, ಪ್ರದ್ಯುಮ್ನ, ಬಲದೇವ, ವರಾಹ ಇವರ ಮೂರ್ತಿಗಳನ್ನು ಪ್ರಥಮಾದಿ ತಿಥಿಗಳಲ್ಲಿ ಕ್ರಮವಾಗಿ ಪೂಜಿಸಬೇಕು. ತನಗೆ ಇಷ್ಟವಾದ ಯಾವ ಮೂರ್ತಿಯ ರೂಪದಲ್ಲಿದ್ದರೂ ಸರಿ. ಮಹಾಶಕ್ತಿಯುಳ್ಳ ಆ ಜಗದ್ಗುರುವಿಗೆ ತಿಥಿನಿಯಮವೇಕೆ. ಎಲ್ಲವೂ ಅವನ ತಿಥಿಯೇ ಆಗುತ್ತದೆ. ಆದುದರಿಂದ ಎಲ್ಲಾ ಕಾಲದಲ್ಲಿಯೂ ಅವನ ಅರ್ಚನೆಗೆ ಸಾಫಲ್ಯವುಂಟು. ಸರ್ವಶಕ್ತನಾದ ಆ ವಾಸುದೇವನನ್ನು ಭಕ್ತಿಯಿಂದ ಪೂಜಿಸಬೇಕೆಂಬುದೊಂದೇ ಮುಖ್ಯ. ಆದುದರಿಂದ ಅವನ ಪೂಜೆಗೆ ಭಕ್ತಿಯೇ ಪ್ರಧಾನ ಕಾರಣ. ಕಾಲವಿಶೇಷವು ಪ್ರಧಾನವಲ್ಲ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಕಾಲನಿಯಮಪೂಜಾವರ್ಣನವೆಂಬ
ನೂರ ಇಪ್ಪತ್ತನೆಯ ಅಧ್ಯಾಯವು ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕವಿಂಶತ್ಯುತ್ತರಶತತಮೋಽಧ್ಯಾಯಃ ||

|| ವಜ್ರ ಉವಾಚ ||

ಕಸ್ಮಿನ್ ದೇಶೇ ಮಹಾಭಾಗ ಪ್ರಾದುರ್ಭಾವಂ ಕಮರ್ಚಯೇತ್ ।
ಏತಂ ಮೇ ಸಂಶಯಂ ಛಿಂಧಿ ತ್ವಂ ಹಿ ಸರ್ವಂ ವಿಜಾನಸೇ || ೧ ||

|| ಮಾರ್ಕಂಡೇಯ ಉವಾಚ ||

ಬ್ರಹ್ಮಾಣಂ ಪುಷ್ಕರೇ ದೇವಂ ಪ್ರಯಾಗೇ ಯೋಗಶಾಯಿನಂ ।
ಕಾಲಂಜರೇ ಮಹಾದೇವಂ ಶಕ್ರತೀರ್ಥೇ ಶತಕ್ರತುಂ || ೨ ||

ಸಿಂಧುಕೂಲೇ ವರಾಹಂ ಚ ಶಾಲಿಗ್ರಾಮೇ ತ್ರಿವಿಕ್ರಮಂ ।
ಕಾಶ್ಮೀರೇಷು ತಥಾ ಮತ್ಸ್ಯಂ ಸಾಗರೇ ವಡವಾನಲಂ || ೩ ||

---

### ನೂರ ಇಪ್ಪತ್ತೊಂದನೆಯ ಅಧ್ಯಾಯ.

೧-೫. ವಜ್ರನು ಪ್ರಶ್ನೆಮಾಡುತ್ತಾನೆ:— ಪೂಜ್ಯರೇ, ಭಗವಂತನ ಈ ಮೂರ್ತಿಗಳಲ್ಲಿ ಯಾವ ಯಾವ ಮೂರ್ತಿಯನ್ನು ಯಾವ ಯಾವ ದೇಶದಲ್ಲಿ ಪೂಜಿಸಬೇಕು. ಈ ಸಂಶಯವನ್ನೂ ಸಹ ಸರ್ವಜ್ಞರಾದ ತಾವು ಪರಿಹರಿಸಬೇಕು. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ:— ಪುಷ್ಕರಕ್ಷೇತ್ರದಲ್ಲಿ ಬ್ರಹ್ಮದೇವರನ್ನೂ, ಪ್ರಯಾಗದಲ್ಲಿ ಯೋಗಶಾಯಿಯನ್ನೂ, ಕಾಲಂಜರದಲ್ಲಿ ಮಹಾದೇವ

ಅಯೋಧ್ಯಾಯಾಂ ತಥಾ ರಾಮಂ ನೈಮಿಷೇ ಧರ್ಮಮೇವ ಚ ।
ಕರ್ಣಾಟೇ ಚಾಶ್ವಶಿರಸಂ ಮದ್ರದೇಶೇ ನೃಕೇಸರಿಂ ॥ ೪ ॥

ಶತ್ರುಘ್ನಂ ಮಧುರಾಯಾಂ ಚ ದಂಡಕೇಷು ಚ ಲಕ್ಷ್ಮಣಂ ।
ಭರತಂ ಕೇಕಯೇಷ್ವೇವ ಯಮುನಾಯಾಂ ತಥಾ ಬಲಿಂ ॥ ೫ ॥

ಪ್ರಾಗ್ಜ್ಯೋತಿಷೇಽನಿರುದ್ಧಂ ಚ ಪ್ರದ್ಯುಮ್ನಂ ದಕ್ಷಿಣಾಪಥೇ ।
ತಥಾ ಭಾರ್ಗವರಾಮಂ ಚ ಮಲಯೇ ಯದುನಂದನಂ ॥ ೬ ॥

ಪಾಂಚಾಲವಿಷಯೇ ರಾಜನ್ ಪೃಥುಂ ವೈನ್ಯಂ ಚ ಪೂಜಯೇತ್ ।
ತಮಸಾತೀರಮಾಸಾದ್ಯ ವಾಲ್ಮೀಕಿಂ ಪೂಜಯೇನ್ನರಃ ॥ ೭ ॥

ವಾರಾಣಸ್ಯಾಃ ಪರೇ ಪಾರೇ ವ್ಯಾಸಂ ಯದುಕುಲೋದ್ವಹ ।
ಗಂಗಾಕೂಲೇ ಮಹಾರಾಜ ವಾಸುದೇವಂ ಚ: ಪೂಜಯೇತ್ ॥ ೮ ॥

ಗಜೇಂದ್ರಮೋಕ್ಷಣಂ ದೇವಮಂಗೇಷು ಯದುನಂದನ ।
ದ್ವಾರವತ್ಯಾಂ ತಥಾ ಕೃಷ್ಣಂ ನರನಾರಾಯಣಾವುಭೌ ॥ ೯ ॥

---

ನನ್ನೂ, ಶಕ್ರತೀರ್ಥದಲ್ಲಿ ಇಂದ್ರನನ್ನೂ, ಸಿಂಧೂತೀರದಲ್ಲಿ ವರಾಹನನ್ನೂ, ಸಾಲಿಗ್ರಾಮದಲ್ಲಿ ತ್ರಿವಿಕ್ರಮನನ್ನೂ, ಕಾಶ್ಮೀರ ದೇಶದಲ್ಲಿ ಮತ್ಸ್ಯಮೂರ್ತಿಯನ್ನೂ, ಸಾಗರದಲ್ಲಿ ಬಡಬಾಗ್ನಿಯನ್ನೂ, ಅಯೋಧ್ಯೆಯಲ್ಲಿ ರಾಮನನ್ನೂ, ನೈಮಿಷ ಕ್ಷೇತ್ರದಲ್ಲಿ ಧರ್ಮನನ್ನೂ, ಕರ್ಣಾಟ ದೇಶದಲ್ಲಿ ಹಯಗ್ರೀವನನ್ನೂ, ಮದ್ರದೇಶದಲ್ಲಿ ನೃಸಿಂಹನನ್ನೂ, ಮಧುರೆಯಲ್ಲಿ ಶತ್ರುಘ್ನನನ್ನೂ, ದಂಡಕಾಭಾಗಗಳಲ್ಲಿ ಲಕ್ಷ್ಮಣನನ್ನೂ, ಭರತನನ್ನು ಕೇಕಯ ದೇಶವಲ್ಲಿಯೂ, ಯಮುನಾದಡದಲ್ಲಿ ಬಲಿಚಕ್ರವರ್ತಿಯನ್ನೂ ಪೂಜಿಸಬೇಕು.

೬–೧೦. ಕಾಮರೂಪದೇಶದಲ್ಲಿ ಅನಿರುದ್ಧನನ್ನೂ, ದಕ್ಷಿಣಾಪಥದಲ್ಲಿ ಪ್ರದ್ಯುಮ್ನನನ್ನೂ ಮತ್ತು ಭಾರ್ಗವರಾಮನನ್ನೂ, ಮಲಯದಲ್ಲಿ ಯದುನಂದನನನ್ನೂ, ಪಾಂಚಾಲದೇಶದಲ್ಲಿ ಪೃಥುವನ್ನೂ, ವೈನ್ಯನನ್ನೂ ಪೂಜಿಸಬೇಕು. ವಾಲ್ಮಿಕಿಯನ್ನು ತಮಸಾನದಿಯ ತೀರದಲ್ಲಿ ಪೂಜಿಸಬೇಕು. ವಾರಾಣಸಿಯ ಕೊನೆಯ ಭಾಗದಲ್ಲಿ ವ್ಯಾಸರನ್ನೂ, ಗಂಗಾತೀರದಲ್ಲಿ ವಾಸುದೇವನನ್ನೂ ಪೂಜಿಸಬೇಕು. ಗಜೇಂದ್ರವರದನನ್ನು

ಬದರ್ಯಾಶ್ರಮಮಾಸಾದ್ಯ ಪೂಜಯೇತ್ತು ವಿಚಕ್ಷಣಃ ।
ಕುರುಕ್ಷೇತ್ರೇಽಪಿ ಧರ್ಮಜ್ಞ ರಾಮಂ ಭೃಗುಕುಲೋದ್ವಹಂ ॥ ೧೦ ॥

ಅಥವಾ ಯಾದವಶ್ರೇಷ್ಠ ರಥಸ್ಥೌ ಕೃಷ್ಣಫಾಲ್ಗುನೌ ।
ಹಂಸಪ್ರಪತನೇ ಹಂಸಂ ಮತ್ಸ್ಯಂ ಮತ್ಸ್ಯೇಷು ಯಾದವ ॥ ೧೧ ॥

ಗಯಾಶೀರ್ಷೇ ವರಾಹಂತು ಮೂಲಸ್ಥಾನೇ ದಿವಾಕರಂ ।
ಪ್ರಭಾಸೇ ಚ ತಥಾ ಸೋಮಂ ಹಿಮವತ್ಯಲಕಾಧಿಪಂ ॥ ೧೨ ॥

ಐರಾವತ್ಯಾಂ ಭೋಗಮಯಂ ಸರಯ್ವಾಂ ರಾಮಮೇವ ಚ ।
ಭೋಗಿಭೋಗಾಸನಾಸೀನಂ ಸರಯೂತಟಸಂಸ್ಥಿತಂ ॥ ೧೩ ॥

ಸರ್ವಮೂರ್ತಿಧರಂ ದೇವಂ ಸರ್ವತ್ರಾಪ್ಯಥವಾರ್ಚಯೇತ್ ।
ಸರ್ವತ್ರ ಸರ್ವಶಕ್ತಿರ್ಹಿ ಸರ್ವಾತ್ಮಾ ಸ ನಿಗದ್ಯತೇ ॥ ೧೪ ॥

---

ಅಂಗದೇಶದಲ್ಲಿಯೂ, ಕೃಷ್ಣನನ್ನು ದ್ವಾರಕಿಯಲ್ಲಿಯೂ, ನರನಾರಾಯಣರನ್ನು ಬದರ್ಯಾಶ್ರಮದಲ್ಲಿಯೂ ಪೂಜಿಸಬೇಕು, ಭಾರ್ಗವರಾಮನನ್ನು ಕುರುಕ್ಷೇತ್ರ ದಲ್ಲಿಯೂ ಪೂಜಿಸಬೇಕು.

೧೧–೧೫. ಅಥವಾ ರಥಸ್ಥರಾದ ಕೃಷ್ಣಾರ್ಜುನರನ್ನು ಕುರುಕ್ಷೇತ್ರದಲ್ಲಿ ಪೂಜಿಸಬಹುದು. ಹಂಸಪ್ರಪತನಕ್ಷೇತ್ರದಲ್ಲಿ ಹಂಸಮೂರ್ತಿಯನ್ನೂ, ಮತ್ಸ್ಯ ದೇಶದಲ್ಲಿ ಮತ್ಸ್ಯಮೂರ್ತಿಯನ್ನೂ, ಗಯಾಶೀರ್ಷದಲ್ಲಿ ವರಾಹನನ್ನೂ, ಮೂಲ ಸ್ಥಾನದಲ್ಲಿ ದಿವಾಕರನನ್ನೂ, ಪ್ರಭಾಸತೀರ್ಥದಲ್ಲಿ ಸೋಮನನ್ನೂ, ಹಿಮವತ್ಪರ್ವತ ದಲ್ಲಿ ಕುಬೇರನನ್ನೂ, ಐರಾವತಿಯಲ್ಲಿ ಭೋಗಶಾಯಿಯನ್ನೂ, ಸರಯೂ ತೀರದಲ್ಲಿ ರಾಮನನ್ನೂ, ಭೋಗಿಭೋಗಾಸನನನ್ನು ಸರಯೂ ದಡದಲ್ಲಿಯೂ ಪೂಜಿಸಬೇಕು. ಅಥವಾ ಸರ್ವಶಕ್ತನೂ ಸರ್ವಾತ್ಮನೂ ಆಗಿರುವ ಪರಮಾತ್ಮನು ಎಲ್ಲಾ ಕಡೆಗಳಲ್ಲೂ ಇರುವುದರಿಂದ ಸರ್ವಮೂರ್ತಿಧಾರಿಯಾದ ಅವನನ್ನು ಎಲ್ಲಾ ಕಡೆಗಳಲ್ಲಿಯೂ

**ಸರ್ವತ್ರ ದೇವಃ ಸ ತು ಸರ್ವಶಕ್ತಿಃ**
**ಸರ್ವೇಶ್ವರಃ ಸರ್ವಶರೀರಸಂಸ್ಥಃ ।**
**ಪೂಜ್ಯಃ ಸದಾ ಸರ್ವಫಲಪ್ರದಾತಾ**
**ಲೋಕೇ ಸ ಕಾಮಾನ್ ವಿದಧಾತಿ ರಾಜನ್ ॥ ೧೫ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಶ್ರೀ ವಿಷ್ಣುದೇಶಾಧಿದೇಶ ಪ್ರಾದುರ್ಭಾವ ಪೂಜಾವರ್ಣನೋ ನಾಮೈಕವಿಂಶತ್ಯುತ್ತರಶತತಮೋಽಧ್ಯಾಯಃ**

---

ಪೂಜಿಸಬಹುದು. ಸರ್ವಶಕ್ತನೂ, ಸರ್ವೇಶ್ವರನೂ, ಸರ್ವಶರೀರಾಂತಸ್ಥನೂ ಆಗಿರುವ ವಾಸುದೇವನು ಎಲ್ಲಾ ಕಡೆಯಲ್ಲಿಯೂ ಪೂಜ್ಯನೇ ಆಗುತ್ತಾನೆ. ಸರ್ವಫಲ ಪ್ರದಾತನಾದುದರಿಂದ ಎಲ್ಲಾ ಕಡೆಯಲ್ಲೂ ಪೂಜಕರಾದ ಭಕ್ತರಿಗೆ ಇಷ್ಟಫಲವನ್ನು ಕೊಟ್ಟೇಕೊಡುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಶ್ರೀವಿಷ್ಣುದೇಶಾಧಿದೇಶ ಪ್ರಾದುರ್ಭಾವ ಪೂಜಾವರ್ಣನವೆಂಬ ನೂರ ಇಪ್ಪತ್ತೊಂದನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ದ್ವಾವಿಂಶತ್ಯುತ್ತರಶತತಮೋಽಧ್ಯಾಯಃ ||

|| ವಜ್ರ ಉವಾಚ ||

ಕೇನ ಕಾರ್ಯೇಣ ದೇವಸ್ಯ ಕಿಂ ಕಿಂ ನಾಮ ಪ್ರಕೀರ್ತಯೇತ್ ।
ಏತಂ ಮೇ ಸಂಶಯಂ ಛಿಂಧಿ ಭೃಗುವಂಶವಿವರ್ಧನ || ೧ ||

|| ಮಾರ್ಕಂಡೇಯ ಉವಾಚ ||

ವಾಸುದೇವಾಚ್ಯುತಾನಂತಸತ್ಯಾಜಪುರುಷೋತ್ತಮ ।
ಪರಮಾತ್ಮೇಶ್ವರಾದ್ಯೈಶ್ಚ ತತೋ ಮೋಕ್ಷಂ ಪ್ರಯಚ್ಛತಿ || ೨ ||

ಧರ್ಮವಿದ್ಧರ್ಮಕೃದ್ಧರ್ಮೀ ವಿಶ್ವಾತ್ಮಾ ವಿಶ್ವಕೃಚ್ಛುಚಿಃ ।
ಶುಚಿಮದ್ವಿಷ್ಣುರಬ್ಜಾಕ್ಷೋ ಪುಷ್ಕರಾಕ್ಷೋಽಥೋಕ್ಷಜಃ || ೩ ||

---

### ನೂರ ಇಪ್ಪತ್ತೆರಡನೆಯ ಅಧ್ಯಾಯ.

೧–೪. ವಜ್ರನು ಪ್ರಶ್ನೆ ಮಾಡುತ್ತಾನೆ. ಎಲೈ ಭೃಗುಕುಲಶ್ರೇಷ್ಠರೇ, ತಾವು ಇದುವರಿಗೆ ವಾಸುದೇವನೇ ದೇವತೋತ್ತಮನೆಂದೂ, ಎಲ್ಲಾ ದೇವತೆಗಳೂ ಅವನ ಶರೀರಗಳೆಂದೂ ಆ ದೇವತಾದ್ವಾರಾಫಲದಾತೃವಾದವನು ಸರ್ವವ್ಯಾಪಕನೂ ಸರ್ವಶಕ್ತನೂ ಆದ ವಾಸುದೇವನೇ ಎಂದೂ ಅಂತಹ ಮೂರ್ತಿಗಳ ಪೂಜೆಗೆ ಅರ್ಹವಾದ ದೇಶಕಾಲಗಳನ್ನೂ ಅಪ್ಪಣೆ ಕೊಡುಸಿರುತ್ತೀರಿ. ಇಂತಹ ವಾಸುದೇವನನ್ನೇ ಕಾರ್ಯಾರ್ಥವಾಗಿ ಆರಾಧಿಸುವವರು ಯಾವಯಾವ ಕಾರ್ಯಕ್ಕೆ ಯಾವಯಾವ

**ಶುಚಿಶ್ರವಾಃ ಶಿಪಿವಿಷ್ಟೋ ಯಜ್ಞೇಶೋ ಯಜ್ಞಭಾವನಃ ।**
**ನಾಮ್ನಾಮಿತ್ಯೇವಮಾದೀನಾಂ ಸಮುಚ್ಚಾರಣತೋ ನರಃ ॥ ೪ ॥**

**ಧರ್ಮಂ ಮಹಾನ್ತಮಾಪ್ನೋತಿ ಪಾಪಬಂಧಕ್ಷಯಂ ತಥಾ ।**
**ಶ್ರೀದಃ ಶ್ರೀಶಃ ಶ್ರೀನಿವಾಸಃ ಶ್ರೀಧರಃ ಶ್ರೀನಿಕೇತನಃ ॥ ೫ ॥**

**ಶ್ರಿಯಃಪತಿಃ ಶ್ರೀಪರಮಃ ಶ್ರೀಮಾನ್ ಶ್ರೀವತ್ಸಲಾಂಛನಃ ।**
**ನೃಸಿಹ್ಮೋ ದುಷ್ಟದಮನಃ ಜಯೋ ವಿಷ್ಣುಃ ತ್ರಿವಿಕ್ರಮಃ ॥ ೬ ॥**

**ಸ್ತುತಃ ಪ್ರಯಚ್ಛತೇ ಚಾಥ ಅಣಿಮಾದಿಭಿರಚ್ಯುತಃ ।**
**ಕಾಮ್ಯಃ ಕಾಮಪ್ರದಃ ಕಾಂತಃ ಕಾಮಯಾತ್ಮಾ ತಥಾ ಹರಿಃ ॥ ೭ ॥**

**ಆನಂದೋ ಮಾಧವಶ್ಚೈವ ಕಾಮಸಂವೃದ್ಧಯೇ ಜಪೇತ್ ।**
**ರಾಮಃ ಪರಶುರಾಮಶ್ಚ ನೃಸಿಹ್ಮೋ ವಿಷ್ಣುರೇವ ಚ ॥ ೮ ॥**

---

ನಾಮದಿಂದ ಪೂಜಿಸಬೇಕೆಂಬುದನ್ನು ಅಪ್ಪಣೆ ಕೊಡಿಸಬೇಕು. ಈ ನನ್ನ ಸಂಶಯವನ್ನು ಹೋಗಲಾಡಿಸಬೇಕು (ಇಲ್ಲಿ ಶರೀರರೂಪರಾದ ದೇವತೆಗಳ ಮೂರ್ತಿಗಳನ್ನೂ, ನಾಮಧೇಯಗಳನ್ನೂ, ವಿದ್ಯಾರಂಭವೇ ಮೊದಲಾದ ಕಾರ್ಯಗಳನ್ನೂ ಸಹ ಹೇಳಿದ್ದಾರೆ. ಆದರೂ ಹೇಳಿರುವ ಆಯಾಯ ಮೂರ್ತಿಗಳ ನಾಮಕ್ಕಿಂತಲೂ ಬೇರೆಯಾಗಿರುವ ಅಪರಿಮಿತವಾದ ವಾಸುದೇವನ ನಾಮಗಳಿಗೆ ಕಾರ್ಯಭೇದದಿಂದ ಫಲವಿದೆಯೇ ಇಲ್ಲವೇ ಎಂಬ ಸಂಶಯದಿಂದ ಈ ಪ್ರಶ್ನೆಗೆ ಅವಕಾಶವೆಂದು ತಿಳಿಯಬೇಕು.) ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ.

೫-೭. ಶ್ರೀದಃ, ಶ್ರೀಶಃ, ಶ್ರೀಪರಮಃ, ಶ್ರೀನಿವಾಸಃ, ಶ್ರೀಧರಃ ಶ್ರೀನಿಕೇತನಃ, ಶ್ರಿಯಃಪತಿಃ, ಶ್ರೀಮಾನ್, ಶ್ರೀವತ್ಸಲಾಂಛನಃ, ನೃಸಿಹ್ಮಃ, ದುಷ್ಟದಮನಃ, ಜಯಃ, ವಿಷ್ಣುಃ, ತ್ರಿವಿಕ್ರಮಃ, ಈ ನಾಮಗಳಿಂದ ಸ್ತೋತ್ರಮಾಡಿದಲ್ಲಿ ಅಣಿಮಾದಿಸಿದ್ಧಿಗಳನ್ನು ಕೊಡುತ್ತಾನೆ. ಕಾಮ್ಯಃ, ಕಾಮಪ್ರದಃ, ಕಾಂತಃ, ಕಾಮಯಾತ್ಮಾ, ಹರಿ, ಆನಂದ ಮಾಧವ ಈ ನಾಮಗಳನ್ನು ಜಪಮಾಡಿದಲ್ಲಿ ಕಾಮಸಮೃದ್ಧಿಯುಂಟಾಗುತ್ತದೆ.

೮-೧೦. ರಾಮ, ಪರಶುರಾಮ, ನೃಸಿಹ್ಮ, ವಿಷ್ಣು, ವಿಕ್ರಮ, ಇತ್ಯಾದಿ ನಾಮಗಳನ್ನು ಶತ್ರುವಿಜಯವನ್ನು ಅಪೇಕ್ಷಿಸುವವರು ಜಪಿಸಬೇಕು. ದಾಮೋದರ

ವಿಕ್ರಮಶ್ಚೈವಮಾದೀನಿ ಜಪ್ಯಾನ್ಯರಿಜಿಗೀಷುಭಿಃ ।
ದಾಮೋದರಾನಿರುದ್ಧೌ ಚ ಜ್ಞೇಯೌ ಬಂಧನಮೋಕ್ಷದೌ ॥ ೯ ॥

ಜಪ್ತವ್ಯೋಭ್ಯಸತಾ ವಿದ್ಯಾಂ ಮಹಾಪುರುಷ ಇತ್ಯಪಿ ।
ವಿದ್ಯಾರ್ಥಿನಾ ವಾ ಜಪ್ತವ್ಯಂ ತಥಾಶ್ವಶಿರಸೇತಿ ಚ ॥ ೧೦ ॥

ಬಲಾರ್ಥೀ ಬಲಭದ್ರೇತಿ ಸೌಖ್ಯಾರ್ಥೀ ಸುಖದೇತಿ ಚ ।
ಅಶ್ವಾರ್ಥೀ ಚಾಶ್ವಶಿರಸಂ ಗಜಾರ್ಥೀ ನಾಗಮೋಕ್ಷಣಂ ॥ ೧೧ ॥

ಗೋಭಿರರ್ಥೀ ಜಪೇನ್ನಾಮ ವಾಸುದೇವೇತಿ ಕೀರ್ತಿತಂ ।
ಯಜ್ಞಾರ್ಥೀ ಯಜ್ಞಪುರುಷಂ ಕೀರ್ತಯೇತ್ಪ್ರಯತೋ ನರಃ ॥ ೧೨ ॥

ನಾರಾಯಣೇತಿ ಚ ತಥಾ ವಿಷ್ಣೋ ಇತಿ ಯದೊದ್ವಹ ।
ಯದ್ವಾಭಿರೋಚತೋ ರಾಮಂ ಸರ್ವಾರ್ಥೇಷು ಹ್ಯುದೀರಯೇತ್ ।
ಸರ್ವಾಣ್ಯೇತಾನಿ ನಾಮಾನಿ ಪರಸ್ಯ ಬ್ರಹ್ಮಣೋ ಯತಃ ॥ ೧೩ ॥

---

ಅನಿರುದ್ಧ ಈ ನಾಮಗಳನ್ನು ಜಪಿಸುವವರು ಸಂಸಾರಬಂಧನದಿಂದ ಮುಕ್ತರಾಗುತ್ತಾರೆ. ವಿದ್ಯೆಯನ್ನು ಅಭ್ಯಾಸಮಾಡುವವನು ಪುರುಷೋತ್ತಮ ಎಂಬ ನಾಮವನ್ನೂ ಜಪಿಸಬೇಕು. ವಿದ್ಯಾರ್ಥಿಯಾದವನು ಅಶ್ವಶಿರಾಃ ಎಂಬ ನಾಮವನ್ನು ಜಪಿಸಬೇಕು. ಬಲಾರ್ಥಿಯಾದವನು ಬಲಭದ್ರ ಎಂದೂ, ಸೌಖ್ಯಾರ್ಥಿಯಾದವನು ಸುಖದ ಎಂದೂ ಜಪಿಸಬೇಕು.

೧೧-೧೪. ಅಶ್ವವನ್ನು ಅಪೇಕ್ಷಿಸುವವನು ಹಯಗ್ರೀವನನ್ನೂ ಗಜಾರ್ಥಿಯಾದವನು ಗಜೇಂದ್ರವರದನನ್ನೂ, ಗೋವುಗಳ ಅಪೇಕ್ಷೆಯುಳ್ಳವನು ವಾಸುದೇವನನ್ನೂ, ಆಯಾಯ ನಾಮಗಳಿಂದ ಜಪಿಸಬೇಕು. ಯಜ್ಞಾರ್ಥಿಯಾದವನು ಶುಚಿಯಾಗಿದ್ದು ಯಜ್ಞಪುರುಷನೆಂಬ ನಾಮದಿಂದ ಜಪಿಬೇಕು. ನಾರಾಯಣ, ವಿಷ್ಣೋ ಎಂಬ ನಾಮಗಳನ್ನು ಸರ್ವಕಾರ್ಯದಲ್ಲಿಯೂ ಜಪಿಸಬೇಕು. ಪ್ರೀತಿ ಇದ್ದಲ್ಲಿ

**ಸರ್ವಾಣಿ ನಾಮಾನಿ ಹಿ ತಸ್ಯ ರಾಜನ್**
**ಭವಂತಿ ಕಾಮಾಖಿಲದಾಯಕಾನಿ ।**
**ಯದೇವ ಸಂಕೀರ್ತಯತೇ ಸ ಶಕ್ತ್ಯಾ**
**ತಸ್ಮಾದವಾಪ್ನೋತಿ ಹಿ ಕಾಮಸಿದ್ಧಿಂ ॥ ೧೪ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಕಾಮಪ್ರಾಪ್ತಿವರ್ಣನೋ ನಾಮ ದ್ವಾವಿಂಶತ್ಯುತ್ತರಶತತಮೋಽಧ್ಯಾಯಃ**

---

ರಾಮ ಎಂಬ ನಾಮವನ್ನೂ ಜಪಿಸಬಹುದು. ಈ ಎಲ್ಲಾ ನಾಮಗಳೂ ಪರಮಾತ್ಮನದೇ ಆಗಿರುವುದರಿಂದ ಯಾವನಾಮಗಳನ್ನು ಪಠಿಸಿದರೂ ಎಲ್ಲಾ ವಿಧವಾದ ಅರ್ಥಸಿದ್ಧಿಗೂ ಕಾರಣವಾಗುತ್ತವೆ. ಸ್ವಶಕ್ತಿಗೆ ತಕ್ಕಂತೆ ಯಾವ ನಾಮವನ್ನು ಕೀರ್ತನ ಮಾಡಿದರೂ ಆದು ಸರ್ವಫಲಸಿದ್ಧಿಗೂ ಕಾರಣವಾಗುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಕಾಮಪ್ರಾಪ್ತಿವರ್ಣನವೆಂಬ ನೂರ ಇಪ್ಪತ್ತೆರಡನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ತ್ರಯೋವಿಂಶತ್ಯುತ್ತರಶತತಮೋಽಧ್ಯಾಯಃ ||

**|| ವಜ್ರ ಉವಾಚ ||**

**ಕಾರ್ಯಾರಂಭೇ ತಥಾ ಕಸ್ಮಿನ್ ಕಂ ನಾಮ ದ್ವಿಜ ಕೀರ್ತಯೇತ್ ।**
**ಏತಂ ಮೇ ಸಂಶಯಂ ಛಿನ್ಧಿ ತ್ವಂ ಹಿ ಸರ್ವಂ ವಿಜಾನಸೇ || ೧ ||**

**|| ಮಾರ್ಕಂಡೇಯ ಉವಾಚ ||**

**ಚಕ್ರಿಣಂ ಹಲಿನಂ ಚೈವ ಶಾರ್ಙ್ಗಿಣಂ ಖಡ್ಗಿನಂ ತಥಾ ।**
**ಕ್ಷೇಮಾರ್ಥೀ ಪ್ರವಸನ್ ರಾಜನ್ ದಿಕ್ಷು ಪ್ರಾಚ್ಯಾದಿಷು ಸ್ಮರೇತ್ || ೬ ||**

**ಅರ್ಚಿತಂ ಚಾಧಿಕಂ ಚೈವ ಸರ್ವಂ ಸರ್ವೇಶ್ವರಂ ಪ್ರಭುಂ ।**
**ಸಂಸ್ಮರೇತ್ ಪುರುಷಂ ಭಕ್ತ್ಯಾ ವ್ಯವಹಾರೇಷು ಸರ್ವದಾ || ೩ ||**

---

### ನೂರ ಇಪ್ಪತ್ತಮೂರನೆಯ ಅಧ್ಯಾಯ.

೧-೪. ವಜ್ರನು ಪ್ರಶ್ನೆ ಮಾಡುತ್ತಾನೆ :—ಯಾವ ಯಾವ ಕಾರ್‍ಯಾರಂಭದಲ್ಲಿ ಯಾವ ಯಾವ ದೇವತೆಗಳ ಹೆಸರನ್ನು ಪಠಿಸಬೇಕು. ಸರ್ವಜ್ಞರಾದ ತಾವು ಈ ಸಂಶಯ ವನ್ನು ಹೋಗಲಾಡಿಸಬೇಕು. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ. ಪ್ರವಾಸ ಹೊಂದುವವನು ತನ್ನ ಕ್ಷೇಮಕ್ಕಾಗಿ ಚಕ್ರಿ, ಹಲೀ, ಶಾರ್ಙ್ಗೀ, ಖಡ್ಗೀ ಎಂಬ ಹೆಸರಿನ ಚಕ್ರಾಯುಧಧಾರಿ, ಹಲಾಯುಧಧಾರಿ, ಶಾರ್ಙ್ಗಾಯುಧಧಾರಿ, ಖಡ್ಗಾಯುಧಧಾರಿಗಳಾದ ದೇವತೆಗಳನ್ನು ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿಯೂ

ಕೂರ್ಮಂ ವರಾಹಂ ಮತ್ಸ್ಯಂ ಚ ಜಲಪ್ರತರಣೇ ಸ್ಮರೇತ್ ।
ಭ್ರಾಜಿಷ್ಣುಮಗ್ನಿಜನನೇ ಜಪೇದ್ರಾಮಮತಂದ್ರಿತಃ ॥ ೪ ॥

ಸಂಗ್ರಾಮಾಭಿಮುಖೇ ಗಚ್ಛನ್ ಸಂಸ್ಮರೇದಪರಾಜಿತಂ ।
ಕೇಶವಂ ಪುಂಡರೀಕಾಕ್ಷಂ ಪುಷ್ಕರಾಕ್ಷಂ ತಥಾ ಜಪೇತ್ ॥ ೫ ॥

ನೇತ್ರಬಾಧಾಸು ಸರ್ವಾಸು ಹೃಷೀಕೇಶಂ ತಥೈವ ಚ ।
ಅಚ್ಯುತಂ ಚಾಮೃತಂ ಚೈವ ಜಪೇದೌಷಧಕರ್ಮಣಿ ॥ ೬ ॥

ಗರುಡಧ್ವಜಾನುಸ್ಮರಣಾದಾಪದೋ ಮುಚ್ಯತೇ ನರಃ ।
ಜ್ವರದುಷ್ಟಶಿರೋರೋಗ ವಿಷವೀರ್ಯಂ ಪ್ರಶಾಮ್ಯತಿ ॥ ೭ ॥

ಗ್ರಹನಕ್ಷತ್ರಪೀಡಾಸು ದೇವಬಾಧಾಟವೀಷು ಚ ।
ದಸ್ಯುವೈರಿನಿರೋಧೇಷು ವ್ಯಾಘ್ರಸಿಹ್ಮಾದಿಸಂಕಟೇ ॥ ೮ ॥

---

ನಾಮೋಚ್ಚಾರಣೆಯಿಂದ ಸ್ಮರಿಸಬೇಕು. ಎಲ್ಲಾ ವ್ಯವಹಾರಗಳಲ್ಲಿಯೂ ಚೆನ್ನಾಗಿ ಪೂಜಿಸಲ್ಪಟ್ಟ ಸರ್ವೇಶ್ವರನಾದ ಮಹಾಪುರುಷನನ್ನು ಸ್ಮರಿಸಬೇಕು ಜಲಮಾರ್ಗವನ್ನು ದಾಟುವ ಕಾಲದಲ್ಲಿ ಕೂರ್ಮ, ವರಾಹ, ಮತ್ಸ್ಯ ಈ ದೇವತೆಗಳನ್ನು ಸ್ಮರಿಸಬೇಕು. ಅಗ್ನಿಯನ್ನು ಉತ್ಪಾದನೆ ಮಾಡುವಾಗ ಭಾರ್ಗವರಾಮನನ್ನು ಯಾವಾಗಲೂ ಸ್ಮರಿಸಬೇಕು

೫-೮. ಯುದ್ಧಾಭಿಮುಖನಾಗಿ ಹೋಗುವ ಕಾಲದಲ್ಲಿ ಅಪರಾಜಿತನನ್ನು ಸ್ಮರಿಸಬೇಕು. ಕೇಶವ, ಪುಂಡರೀಕಾಕ್ಷ, ಪುಷ್ಕರಾಕ್ಷ, ಇವರ ಈ ನಾಮಗಳನ್ನು ಜಪಿಸಬೇಕು. ನೇತ್ರಬಾಧೆಗಳುಂಟಾದಾಗ ಹೃಷೀಕೇಶ ನಾಮದಿಂದ ಅವನನ್ನು ಸ್ಮರಿಸಬೇಕು. ಔಷಧಕಾರ್ಯದಲ್ಲಿ ಅಚ್ಯುತ, ಅಮೃತ, ಶಬ್ದಗಳನ್ನು ಜಪಿಸಬೇಕು. ಗರುಡಧ್ವಜನ ಅನುಸ್ಮರಣೆಯಿಂದ ಮನುಷ್ಯನು ಎಲ್ಲಾ ವಿಪತ್ತಿನಿಂದಲೂ ಪಾರಾಗುತ್ತಾನೆ. ಜ್ವರ, ದುಷ್ಟಶಿರೋರೋಗ, ವಿಷದಪ್ರಸರಣ, ಇವೂ ಶಾಂತಿ ಹೊಂದುತ್ತವೆ. ಗ್ರಹ, ನಕ್ಷತ್ರ ಇವುಗಳಿಂದ ಬಾಧೆಯುಂಟಾದಾಗಲೂ ದೇವತೆಗಳಿಂದ ಅಥವಾ ಅರಣ್ಯಗಳಲ್ಲಿ ತೊಂದರೆಯುಂಟಾದಾಗಲೂ ಕಳ್ಳಕಾಕರಿಂದಲೂ, ಶತ್ರುಗಳಿಂದಲೂ ತೊಂದರೆಯುಂಟಾದಾಗಲೂ ಹುಲಿ, ಸಿಂಹ, ಇವುಗಳಿಂದ ತೊಂದರೆಯುಂಟಾಗುವಾಗಲೂ ಪೆಚ್ಚಾದ ಅಂಧಕಾರದಿಂದ ತೊಂದರೆಯಾಗುವಾಗಲೂ ನರಸಿಹ್ಮ ಎಂಬ ನಾಮವನ್ನು ಉಚ್ಚರಿಸಬೇಕು.

ಅಂಧಕಾರೇ ತಥಾ ತೀವ್ರೇ ನರಸಿಹ್ಮೇತಿ ಕೀರ್ತಯೇತ್ ।
ವಿತ್ತಸ್ಥಾಪನಕಾಲೇ ಚ ಧಾನ್ಯಸಂಸ್ಥಾಪನೇ ತಥಾ ॥ ೯ ॥

ಕುರ್ವೀತ ತನ್ಮನಾ ಭೂತ್ವಾ ಅನನ್ತಾಚ್ಯುತಕೀರ್ತನಂ ।
ನಾರಾಯಣಂ ಶಾರ್ಙ್ಗಧರಂ ಶ್ರೀಧರಂ ಗಜಮೋಕ್ಷಣಂ ॥ ೧೦ ॥

ವಾಮನಂ ಖಡ್ಗಿನಂ ಚೈವ ದುಃಸ್ವಪ್ನೇಷು ತು ಸಂಸ್ಮರೇತ್ ।
ಅಗ್ನಿದಾಹೇ ಸಮುತ್ಪನ್ನೇ ಸಂಸ್ಮರೇಜ್ಜಲಶಾಯಿನಂ ॥ ೧೧ ॥

ಬಲಭದ್ರಂ ಸಮೃದ್ಧ್ಯರ್ಥೇ ಕೃಷ್ಯಾರಂಭೇ ಹಲಾಯುಧಂ ।
ಉತ್ತಾರಣಂ ವಣಿಜ್ಯಾರ್ಥೀ ಶ್ರೀಶಮಭ್ಯುದಯೇ ನೃಪ ॥ ೧೨ ॥

ಮಂಗಲ್ಯಂ ಮಂಗಲೇ ವಿಷ್ಣುಮಮಂಗಲ್ಯೇಷು ಕೀರ್ತಯೇತ್ ।
ಅರಿಷ್ಟಾನ್ತೇಷು ಶೇಷೇಷು ವಿಶೋಕೇಷು ತಥಾ ಜಪೇತ್ ॥ ೧೩ ॥

---

೯-೧೨. ಭೂಮಿಯಲ್ಲಿ ದ್ರವ್ಯವನ್ನು ಸ್ಥಾಪನೆಮಾಡುವಾಗಲೂ, ಧಾನ್ಯವನ್ನು ಸ್ಥಾಪನೆಮಾಡುವಾಗಲೂ ಅನಂತ, ಅಚ್ಯುತ ಎಂಬ ನಾಮಗಳನ್ನು ಆಯಾಯ ದೇವತೆಗಳನ್ನು ಮನಸ್ಸಿನಲ್ಲಿಟ್ಟು ಕೀರ್ತಿಸಬೇಕು. ನಾರಾಯಣ, ಶಾರ್ಙ್ಗಧರ, ಶ್ರೀಧರ, ಗಜೇಂದ್ರವರದ, ವಾಮನ, ಖಡ್ಗಿ, ಇವರನ್ನು ದುಃಸ್ವಪ್ನ ಉಂಟಾದ ಕಾಲದಲ್ಲಿ ಸ್ಮರಿಸಬೇಕು. ಅಗ್ನಿಯ ಪ್ರಸರಣದಿಂದ ದಾಹಭಯವುಂಟಾದಾಗ ಜಲಶಾಯಿಯನ್ನು ಸ್ಮರಿಸಬೇಕು. ಅರ್ಥಸಮೃದ್ಧಿಕಾಲದಲ್ಲಿ ಬಲಭದ್ರನನ್ನೂ, ಕೃಷಿಯ ಪ್ರಾರಂಭದಲ್ಲಿ ಹಲಾಯುಧನನ್ನೂ ವಾಣಿಜ್ಯದಲ್ಲಿ ಉತ್ತಾರಣನನ್ನೂ, ಅಭ್ಯುದಯ ಕಾಲದಲ್ಲಿ ಶ್ರೀಶನನ್ನೂ ಸ್ಮರಿಸಬೇಕು.

೧೩-೧೭. ಅಮಂಗಳಕಾಲದಲ್ಲಿ ಮಂಗಳಸ್ವರೂಪನಾದ ವಿಷ್ಣುವನ್ನು ಮಂಗಲ ಪ್ರಾಪ್ತಿಗಾಗಿ ಕೀರ್ತನೆ ಮಾಡಬೇಕು. ಉಳಿದ ಅನಿಷ್ಟಸಂಭವದಲ್ಲಿಯೂ ಶೋಕಶಾಂತಿಗಾಗಿ ಜಪಿಸಬೇಕು ಕುಳಿತಿದ್ದು ಏಳುವಾಗ ವಿಷ್ಣುವನ್ನೂ, ಮಲಗಿರುವಾಗ ಮಾಧವನನ್ನೂ, ಭೋಜನಮಾಡುವಾಗ ಗೋವಿಂದನನ್ನೂ, ಎಲ್ಲಾ ಕಾಲದಲ್ಲಿಯೂ ಮಧುಸೂದನನನ್ನೂ ಆಯಾಯ ನಾಮಗಳಿಂದ ಉಚ್ಚರಿಸಬೇಕು.

ಉತ್ತಿಷ್ಠನ್ ಕೀರ್ತಯೇದ್ವಿಷ್ಣುಂ ಪ್ರಸುಪ್ತೋ ಮಾಧವಂ ನರಃ ।
ಭೋಜನೇ ಚೈವ ಗೋವಿಂದಂ ಸರ್ವತ್ರ ಮಧುಸೂದನಂ ॥ ೧೪ ॥

ನಾರಾಯಣಂ ಸರ್ವಕಾಲೇ ಕ್ಷುತಪ್ರಸ್ಖಲನಾದಿಷು ।
ಸ್ನಾನೇ ದೇವಾರ್ಚನೇ ಹೋಮೇ ಪ್ರಣಿಪಾತೇ ಪ್ರದಕ್ಷಿಣೇ ॥ ೧೫ ॥

ಕೀರ್ತಯೇದ್ವಾಸುದೇವೇತಿ ಅನುಕ್ತೇಷ್ವಪಿಯಾದವ ।
ಕಾರ್ಯಾರಂಭೇಽಥವಾ ರಾಜನ್ ಯಥೇಷ್ಟಂ ನಾಮ ಕೀರ್ತಯೇತ್ ॥೧೬॥

ಸರ್ವಾಣಿ ನಾಮಾನಿ ಹಿ ತಸ್ಯ ರಾಜನ್
ಸರ್ವಾರ್ಥಸಿದ್ಧಾನಿ ಭವಂತಿ ಪುಂಸಃ ।
ತಸ್ಮಾದ್ಯಥೇಷ್ಟಂ ಖಲು ದೇವನಾಮ
ಸರ್ವೇಷು ಕಾರ್ಯೇಷು ಜಪೇತ್ತು ಭಕ್ತ್ಯಾ ॥ ೧೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ತತ್ತತ್ಕಾರ್ಯಪ್ರಾಪ್ತಿತತ್ತನ್ನಾಮಕೀರ್ತನ
ವರ್ಣನೋ ನಾಮ
ತ್ರಯೋವಿಂಶತ್ಯುತ್ತರಶತತಮೋಽಧ್ಯಾಯಃ

---

ನಾರಾಯಣನನ್ನು ಸರ್ವಕಾಲದಲ್ಲಿಯೂ ಅಂದರೆ, ಶೀನುವಾಗ, ಎಡರಿದಾಗ, ಸ್ನಾನ, ದೇವಾರ್ಚನ, ಹೋಮ, ನಮಸ್ಕಾರ, ಪ್ರದಕ್ಷಿಣೆ ಈ ಕಾಲಗಳಲ್ಲಿಯೂ ನಾರಾಯಣ ಶಬ್ದದಿಂದ ಕೀರ್ತಿಸಬೇಕು. ಇಲ್ಲಿ ಹೇಳದಿರುವ ಇತರ ಕಾಲಗಳಲ್ಲಿಯೂ ವಾಸುದೇವ ಎಂದು ಕೀರ್ತಿಸಬೇಕು. ಅಥವಾ ಎಲ್ಲಾ ಕಾರ್ಯಾರಂಭದಲ್ಲಿಯೂ ತನಗೆ ಇಷ್ಟ ನಾದ ಯಾವನನ್ನಾದರೂ ಉಚ್ಛರಿಸಬಹುದು. ಎಲ್ಲಾ ನಾಮಗಳೂ ಅವನದೇ ಆಗಿರುವುದರಿಂದ ಎಲ್ಲಾ ಕಾರ್ಯಸಿದ್ಧಿಗೂ ಆ ನಾಮಗಳೇ ಸಾಧಕವಾಗುತ್ತವೆ. ಆದ್ದರಿಂದ ತನಗೆ ಇಷ್ಟಬಂದ ಯಾವ ನಾಮವನ್ನಾದರೂ ಕಾರ್ಯಾರ್ಥಿಯಾದವನು ಯಾವ ಕಾರ್ಯಕ್ಕಾದರೂ ಭಕ್ತಿಯಿಂದ ಜಪಿಸಿದರೆ ಸಾಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ತತ್ತತ್ಕಾರ್ಯಪ್ರಾಪ್ತಿ ತತ್ತನ್ನಾಮಕೀರ್ತನವೆಂಬ
ನೂರ ಇಪ್ಪತ್ತಮೂರನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಚತುರ್ವಿಂಶತ್ಯುತ್ತರಶತತಮೋಽಧ್ಯಾಯಃ ||

|| ವಜ್ರ ಉವಾಚ ||

ಕಸ್ಮಿನ್ ಕಾಲೇ ತು ದೇವಸ್ಯ ಕಿಂ ಕಿಂ ನಾಮ ಪ್ರಕೀರ್ತಯೇತ್ ।
ಏತಂ ಮೇ ಸಂಶಯಂ ಛಿನ್ಧಿ ತ್ವಂ ಹಿ ಸರ್ವಂ ವಿಜಾನಸೇ || ೧ ||

|| ಮಾರ್ಕಂಡೇಯ ಉವಾಚ ||

ಪುರುಷಂ ವಾಸುದೇವಂ ಚ ತಥಾ ಸಂಕರ್ಷಣಂ ಪ್ರಭುಂ ।
ಪ್ರದ್ಯುಮ್ನಮನಿರುದ್ಧಂ ಚ ಕ್ರಮಾಚ್ಛಬ್ದೇಷು ವರ್ಜಯೇತ್ || ೨ ||

ವಿಷ್ಣುಂ ಮಧುನಿಹನ್ತಾರಂ ತಥಾ ದೇವಂ ತ್ರಿವಿಕ್ರಮಂ ।
ವಾಮನಂ ಶ್ರೀಧರಂ ಚೈವ ಹೃಷೀಕೇಶಂ ತಥೈವ ಚ || ೩ ||

---

### ನೂರ ಇಪ್ಪತ್ತನಾಲ್ಕನೆಯ ಅಧ್ಯಾಯ.

೧-೪. ವಜ್ರನು ಪ್ರಶ್ನೆಮಾಡುತ್ತಾನೆ:—ಯಾವಯಾವ ಕಾಲದಲ್ಲಿ ವಾಸುದೇವನ ಯಾವಯಾವ ನಾಮಗಳನ್ನು ಪಠಿಸಬೇಕು. ಈ ಸಂಶಯವನ್ನು ಸರ್ವಜ್ಞರಾದ ತಾವು ಹೋಗಲಾಡಿಸಬೇಕು. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ. ಪುರುಷ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ

ದಾಮೋದರಂ ಪದ್ಮನಾಭಂ ಕೇಶವಂ ಚ ಯದೂತ್ತಮ ।
ನಾರಾಯಣಂ ಮಾಧವಂ ಚ ಗೋವಿಂದಂ ಚ ತಥಾ ಕ್ರಮಾತ್ ॥ ೪ ॥

ಚೈತ್ರಾದಿಷು ತು ಮಾಸೇಷು ದೇವದೇವಮನುಸ್ಮರೇತ್ ।
ಪ್ರದ್ಯುಮ್ನಮನಿರುದ್ಧಂ ಚ ಪಕ್ಷಯೋಃ ಶುಕ್ಲಕೃಷ್ಣಯೋಃ ॥ ೫ ॥

ಸರ್ವಃ ಶರ್ವಃ ಶಿವಃ ಸ್ಥಾಣುಃ ಭೂತಾನಾಂ ನಿಧಿರವ್ಯಯಃ ।
ಆದಿತ್ಯಾದಿಷು ವಾರೇಷು ಕ್ರಮಾದೇವಮನುಸ್ಮರೇತ್ ॥ ೬ ॥

ವಿಶ್ವಂ ವಿಷ್ಣುಃ ವಷಟ್ಕಾರೋ ಭೂತಭವ್ಯಭವಃ ಪ್ರಭುಃ ।
ಭೂತಕೃತ್ ಭೂತಭೃದ್ಭಾವೋ ಭೂತಾತ್ಮಾ ಭೂತಭಾವನಃ ॥ ೭ ॥

ಅವ್ಯಕ್ತಃ ಪುಂಡರೀಕಾಕ್ಷೋ ವಿಶ್ವಕರ್ಮಾ ಶುಚಿಶ್ರವಾಃ ।
ಸಂಭವೋ ಭಾವನೋ ಭರ್ತಾ ಪ್ರಭವಃ ಪ್ರಭುರೀಶ್ವರಃ ॥ ೮ ॥

ಅಪ್ರಮೇಯೋ ಹೃಷೀಕೇಶಃ ಪದ್ಮನಾಭಃ ಪರಃ ಪ್ರಭುಃ ।
ಅಗ್ರಾಹ್ಯಃ ಶಾಶ್ವತೋ ಧಾತಾ ಕೃಷ್ಣಶ್ಚೈತಾನ್ಯನುಸ್ಮರೇತ್ ॥ ೯ ॥

---

ಇವರುಗಳನ್ನು ಕ್ರಮವಾಗಿ ಈ ಶಬ್ದಗಳಿಂದ ಉಚ್ಚರಿಸಕೂಡದು. ವಿಷ್ಣು. ಮಧುಸೂದನ, ವಾಮನ, ಶ್ರೀಧರ, ಹೃಷೀಕೇಶ, ದಾಮೋದರ, ಪದ್ಮನಾಭ, ಕೇಶವ, ನಾರಾಯಣ, ಮಾಧವ, ಗೋವಿಂದ ಈ ನಾಮಗಳನ್ನು ಕ್ರಮವಾಗಿ ಉಚ್ಚರಿಸಿ ಚೈತ್ರಾದಿ ಮಾಸಗಳಲ್ಲಿ ಪರಮಾತ್ಮನನ್ನು ಸ್ಮರಿಸಬೇಕು.

೫-೯ ಪ್ರದ್ಯುಮ್ನ ಅನಿರುದ್ಧ ಇವರನ್ನು ಶುಕ್ಲಕೃಷ್ಣಪಕ್ಷಗಳಲ್ಲಿ ಸ್ಮರಿಸಬೇಕು ಸರ್ವ, ಶರ್ವ, ಶಿವ, ಸ್ಥಾಣು ಭೂತಾನಾಂನಿಧಿಃ ಅವ್ಯಯ: ಈ ನಾಮಗಳನ್ನುಚ್ಚರಿಸಿ ಆದಿತ್ಯಾದಿವಾರಗಳಲ್ಲಿ ಕ್ರಮವಾಗಿ ಸ್ಮರಿಸಬೇಕು ವಿಶ್ವ, ವಿಷ್ಣು, ವಷಟ್ಕಾರ, ಭೂತಭವ್ಯಭವಃ, ಪ್ರಭುಃ ಭೂತಕೃತ್, ಭೂತಭೃತ್, ಭಾವ, ಭೂತಾತ್ಮಾ, ಸಂಭವ, ಭೂತಭಾವನ, ಅವ್ಯಕ್ತ. ಪುಂಡರೀಕಾಕ್ಷ, ವಿಶ್ವಕರ್ಮ, ಶುಚಿಶ್ರವ, ಭಾವನ, ಭರ್ತಾ, ಪ್ರಭವ, ಪ್ರಭು, ಈಶ್ವರ, ಅಪ್ರಮೇಯ. ಹೃಷೀಕೇಶ ಪದ್ಮನಾಭ, ಅಗ್ರಾಹ್ಯ ಶಾಶ್ವತ, ಧಾತಾ, ಕೃಷ್ಣ, ಇತ್ಯಾದಿ ದೇವದೇವನ ನಾಮಗಳನ್ನು ಕೃತಿಕಾದಿ ನಕ್ಷತ್ರಗಳಲ್ಲಿ ಸ್ಮರಿಸಬೇಕು.

ದೇವದೇವಸ್ಯ ನಾಮಾನಿ ಕೃತ್ತಿಕಾದಿಷು ಯಾದವ ।
ಬ್ರಹ್ಮಾಣಂ ಶ್ರೀಪತಿಂ ವಿಷ್ಣುಂ ಕಪಿಲಂ ಶ್ರೀಧರಂ ಪ್ರಭುಂ ॥ ೧೦ ॥

ದಾಮೋದರಂ ಹೃಷೀಕೇಶಂ ಗೋವಿಂದಂ ಮಧುಸೂದನಂ ।
ಭೂಧರಂ ಗದಿನಂ ಚೈವ ಶಿಖಿನಂ ಪದ್ಮಿನಂ ತಥಾ ॥ ೧೧ ॥

ಚಕ್ರಿಣಂ ಚ ಮಹಾರಾಜ ಪ್ರಥಮಾದಿಷು ಸಂಸ್ಮರೇತ್ ।
ಸರ್ವಂ ವಾ ಸರ್ವದಾ ರಾಮ ದೇವದೇವಸ್ಯ ಯಾದವ ॥ ೧೨ ॥

ನಾಮಾನಿ ಸರ್ವಾಣಿ ಜನಾರ್ದನಸ್ಯ
ಕಾಲಶ್ಚ ಸರ್ವಃ ಪುರುಷಪ್ರವೀರ ।
ತಸ್ಮಾತ್ಸದಾ ಸರ್ವಗತಸ್ಯ ನಾಮ
ಗ್ರಾಹ್ಯಂ ಯಥೇಷ್ಟಂ ವರದಸ್ಯ ರಾಜನ್ ॥ ೧೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಕಾಲನಾಮಾಖ್ಯಾನೋ ನಾಮ
ಚತುರ್ವಿಂಶತ್ಯುತ್ತರಶತತಮೋಽಧ್ಯಾಯಃ

---

೧೦-೧೩. ಬ್ರಹ್ಮಾ, ಶ್ರೀಪತಿ, ವಿಷ್ಣು, ಕಪಿಲ, ಶ್ರೀಧರ, ದಾಮೋದರ ಹೃಷೀಕೇಶ, ಗೋವಿಂದ, ಮಧುಸೂದನ, ಭೂಧರ, ಗದೀ, ಶಿಖೀ, ಚಕ್ರೀ, ಈ ನಾಮಗಳನ್ನು ಎಲ್ಲಾಕಾಲದಲ್ಲಿಯೂ ಸ್ಮರಿಸಬಹುದು ಎಲ್ಲಾ ನಾಮಗಳೂ ಎಲ್ಲಾ ಕಾಲವೂ ಆ ಜನಾರ್ದನಿಗೆ ಸೇರಿದ್ದಾಗಿದೆ. ಆದುದರಿಂದ ಎಲ್ಲಾ ಕಾಲದಲ್ಲಿಯೂ ಎಲ್ಲಾ ನಾಮಗಳನ್ನೂ ಉಚ್ಚರಿಸಿ ವರಪ್ರದನಾದ ಆ ಪರಮಾತ್ಮನನ್ನು ಸ್ಮರಿಸ ಬಹುದು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಕಾಲನಾಮಾಖ್ಯಾನವೆಂಬ
ನೂರ ಇಪ್ಪತ್ತನಾಲ್ಕನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಪಂಚವಿಂಶತ್ಯುತ್ತರಶತತಮೋಽಧ್ಯಾಯಃ ||

|| ವಜ್ರ ಉವಾಚ ||

ಕಸ್ಮಿನ್ ಕ್ಷೇತ್ರೇ ತು ದೇವಸ್ಯ ಕಿಂ ಕಿಂ ನಾಮ ಪ್ರಕೀರ್ತಯೇತ್ ।
ಏತಂ ಮೇ ಸಂಶಯಂ ಛಿದ್ಧಿ ಭೃಗುವಂಶವಿವರ್ಧನ || ೧ ||

|| ಮಾರ್ಕಂಡೇಯ ಉವಾಚ ||

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ ।
ವಾಸುದೇವಸ್ಯ ಸಂವಾದಮರ್ಜುನಸ್ಯ ಚ ಯಾದವ || ೨ ||

ವೃತ್ತೇ ಭಾರತಸಂಗ್ರಾಮೇ ರಾಜ್ಯಂ ಪ್ರಾಪ್ತೇ ಯುಧಿಷ್ಠಿರೇ ।
ಅಸ್ಮಿನ್ನೇವ ಸಭೋದ್ದೇಶೇ ವಿಜಹ್ರಾತೇ ಯಥಾಸುಖಂ || ೩ ||

---

### ನೂರ ಇಪ್ಪತ್ತೈದನೆಯ ಅಧ್ಯಾಯ.

೧-೪. ವಜ್ರನು ಪ್ರಶ್ನೆಮಾಡುತ್ತಾನೆ. ಎಲೈ ಭೃಗೂತ್ತಮನೇ, ಯಾವ ಯಾವ ಕ್ಷೇತ್ರದಲ್ಲಿ ಭಗವಂತನ ಯಾವ ಯಾವ ನಾಮವನ್ನು ಕೀರ್ತನಮಾಡಬೇಕು. ಈ ನನ್ನ ಸಂಶಯವನ್ನೂ ಹೋಗಲಾಡಿಸಬೇಕು. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ. ಈ ವಿಷಯದಲ್ಲಿ ಪುರಾತನವಾದ ಕೃಷ್ಣಾರ್ಜುನರ ಸಂವಾದವನ್ನೂ ನಿದರ್ಶನವಾಗಿ ಉದಾಹರಿಸುತ್ತಾರೆ. ಅದನ್ನೂ ಹೇಳುತ್ತೇನೆ. ಹಿಂದೆ ಭಾರತಯುದ್ಧವೆಲ್ಲವೂ ಮುಗಿದು ಯುಧಿಷ್ಠಿರನು ರಾಜ್ಯವನ್ನು ಹೊಂದಿದ

ವಾಸುದೇವಾರ್ಜುನೌ ವೀರೌ ಲಕ್ಷ್ಮೀಕೃತವಸುಂಧರೌ ।
ತತಃ ಕಥಾಂತೇ ಕಸ್ಮಿಂಶ್ಚಿತ್ಕೃಷ್ಣಂ ಪಪ್ರಚ್ಛ ಫಾಲ್ಗುನಃ ॥ ೪ ॥

॥ ಅರ್ಜುನ ಉವಾಚ ॥

ಕ್ಷೇತ್ರೇಷು ಯೇಷು ಯೇಷು ತ್ವಂ ಕೀರ್ತನೀಯೋ ಮಯಾಚ್ಯುತ ।
ಚೇತಸಃ ಪ್ರಣಿಧಾನಾರ್ಥಂ ತ್ವಂ ಮಮಾಖ್ಯಾತುಮರ್ಹಸಿ ॥ ೫ ॥

॥ ಶ್ರೀ ಭಗವಾನುವಾಚ ॥

ಸರ್ವಗಃ ಸರ್ವಭೂತೋಽಹಂ ನಹಿ ಕಿಂಚಿನ್ಮಯಾ ವಿನಾ ।
ಚರಾಚರೇ ಜಗತ್ಯಸ್ಮಿನ್ ವಿದ್ಯತೇ ಕುರುಸತ್ತಮ ॥ ೬ ॥

ತಥಾಪಿ ಯೇಷು ಸ್ಥಾನೇಷು ಚಿಂತನೀಯೋಽಹಮರ್ಜುನ ।
ಸ್ತೋತವ್ಯೋ ನಾಮಭಿಶ್ಚೈವ ಶೃಣು ತ್ವಂ ತದ್ವದಾಮಿ ತೇ ॥ ೭ ॥

---

ನಂತರ ವಾಸುದೇವಾರ್ಜುನರಿಬ್ಬರೂ ಈ ಸಭೆಯಲ್ಲಿಯೇ ಸುಖದಿಂದ ವಿಹರಿಸುತ್ತಿದ್ದರು. ಆಗ ಆ ವಾಸುದೇವಾರ್ಜುನರು ಭೂಮಿಯಲ್ಲೆಲ್ಲಾ ಸ್ತುತಿಕಥಾದಿಗಳಿಂದ ವಿಹರಿಸುತ್ತಿದ್ದಾಗ ಒಂದಾನೊಂದು ಕಥೆಯಾದ ನಂತರ ಅರ್ಜುನನು ಕೃಷ್ಣನನ್ನು ಕುರಿತು ಪ್ರಶ್ನೆಮಾಡುತ್ತಾನೆ.

೫-೭. ಅರ್ಜುನನು ಪ್ರಶ್ನೆಮಾಡುತ್ತಾನೆ:—ಎಲೈ ಅಚ್ಯುತನೇ, ಮನಸ್ಸಿನ ಏಕಾಗ್ರ್ಯಕ್ಕಾಗಿ ಯಾವಯಾವ ಕ್ಷೇತ್ರದಲ್ಲಿ ನಿನ್ನನ್ನು ಯಾವಯಾವ ನಾಮದಿಂದ ಸ್ತುತಿಸಬೇಕು. ಇದನ್ನು ನೀನೇ ನನಗೆ ಹೇಳಬೇಕು. ಇದಕ್ಕೆ ಉತ್ತರವಾಗಿ ಭಗವಂತನು ಹೇಳುತ್ತಾನೆ. ಎಲೈ ಕುರುಶ್ರೇಷ್ಠನೇ ನಾನು ಸರ್ವವ್ಯಾಪಿಯಾಗಿಯೂ ಸರ್ವಪ್ರಪಂಚರೂಪನಾಗಿಯೂ ಇರುತ್ತೇನೆ. ಈ ಜಗತ್ತಿನಲ್ಲಿ ನನ್ನ ಸಂಬಂಧವನ್ನು ಬಿಟ್ಟಿರುವ ಯಾವ ವಸ್ತುವೂ ಇಲ್ಲ. ಆದರೂ ಯಾವಯಾವ ಸ್ಥಾನದಲ್ಲಿ ನನ್ನನ್ನು ಯಾವಯಾವ ನಾಮದಿಂದ ಸ್ಮರಿಸಬೇಕು. ಸ್ತೋತ್ರ ಮಾಡಬೇಕೆಂಬುದನ್ನು ಹೇಳುತ್ತೇನೆ ಕೇಳು.

ಪುಷ್ಕರೇ ಪುಂಡರೀಕಾಕ್ಷಂ ಗಯಾಯಾಂ ಚ ಗದಾಧರಂ ।
ಲೋಹದಂಡೇ ತಥಾ ವಿಷ್ಣುಂ ಸ್ತುವಂಸ್ತರತಿ ದುಷ್ಕೃತಂ ॥ ೮ ॥

ರಾಘವಂ ಚಿತ್ರಕೂಟೇ ತು ಪ್ರಭಾಸೇ ದೈತ್ಯಸೂದನಂ ।
ವೃಂದಾವನೇ ಚ ಗೋವಿಂದಂ ಮಾಂ ಸ್ತುವನ್ ಪುಣ್ಯಭಾಗ್ಭವೇತ್ ॥ ೯ ॥

ಜಯಂ ಜಯಂತ್ಯಾಂ ಸ್ತುನ್ವಂಶ್ಚ ಜಯಂತಂ ಹಸ್ತಿನಾಪುರೇ ।
ವರಾಹಂ ಕಂದಮಾಲೇ ಚ ಕಾಶ್ಮೀರೇಷು ಚ ಚಕ್ರಿಣಂ ॥ ೧೦ ॥

ಜನಾರ್ದನಂ ತು ಕುಬ್ಜಾಮ್ರೇ ಮಧುರಾಯಾಂ ಚ ಕೇಶವಂ ।
ಶ್ರೀಕುಬ್ಜೇ ಶ್ರೀಧರಂ ತದ್ವದ್ಗಂಗಾದ್ವಾರೇ ಸುರೋತ್ತಮಂ ॥ ೧೧ ॥

ಶಾಲಿಗ್ರಾಮೇ ಮಹಾಯೋಗ್ಯಂ ಹರಿಂ ಗೋವರ್ಧನಾಚಲೇ ।
ಪಿಂಡಾರಕೇ ಚತುರ್ಬಾಹುಂ ಶಂಖದ್ವಾರೇ ಚ ಶಂಖಿನಂ ॥ ೧೨ ॥

ವಾಮನಂ ತು ಕುರುಕ್ಷೇತ್ರೇ ಯಮುನಾಯಾಂ ತ್ರಿವಿಕ್ರಮಂ ।
ವಿಶ್ವೇಶ್ವರಂ ತಥಾ ಶೋಣೇ ಕಪಿಲಂ ಪೂರ್ವಸಾಗರೇ ॥ ೧೩ ॥

---

೮–೧೨. ಪುಷ್ಕರ ಕ್ಷೇತ್ರದಲ್ಲಿ ಪುಂಡರೀಕಾಕ್ಷನನ್ನೂ, ಗಯೆಯಲ್ಲಿ ಗದಾಧರನನ್ನೂ, ಲೋಹದಂಡದಲ್ಲಿ ವಿಷ್ಣುವನ್ನೂ, ಸ್ತೋತ್ರಮಾಡಿದಲ್ಲಿ ಪಾಪಪರಿಹಾರವಾಗುತ್ತದೆ. ಚಿತ್ರಕೂಟದಲ್ಲಿ ರಾಘವನನ್ನೂ, ಪ್ರಭಾಸದಲ್ಲಿ ದೈತ್ಯಸೂದನನನ್ನೂ, ವೃಂದಾವನದಲ್ಲಿ ಗೋವಿಂದರೂಪನಾದ ನನ್ನನ್ನೂ ಸ್ತೋತ್ರಮಾಡಿದಲ್ಲಿ ಪುಣ್ಯವುಂಟಾಗುತ್ತದೆ. ಜಯಂತಿಯಲ್ಲಿ ಜಯನನ್ನೂ, ಹಸ್ತಿನಾಪುರದಲ್ಲಿ ಜಯಂತನನ್ನೂ, ಕಂದಮಾಲದಲ್ಲಿ ವರಾಹನನ್ನೂ, ಕಾಶ್ಮೀರದಲ್ಲಿ ಚಕ್ರಿಯನ್ನೂ, ಕುಬ್ಜಾಮ್ರದಲ್ಲಿ ಜನಾರ್ದನನನ್ನೂ, ಮಧುರೆಯಲ್ಲಿ ಕೇಶವನನ್ನೂ, ಶ್ರೀಕುಬ್ಜದಲ್ಲಿ ಶ್ರೀಧರನನ್ನೂ, ಗಂಗಾದ್ವಾರದಲ್ಲಿ ಸುರೋತ್ತಮನನ್ನೂ, ಶಾಲಿಗ್ರಾಮದಲ್ಲಿ ಮಹಾಯೋಗಿಯನ್ನೂ, ಗೋವರ್ಧನಪರ್ವತದಲ್ಲಿ ಹರಿಯನ್ನೂ, ಪಿಂಡಾರಕದಲ್ಲಿ ಚತುರ್ಬಾಹುವನ್ನೂ, ಶಂಖದ್ವಾರದಲ್ಲಿ ಶಂಖಿಯನ್ನೂ,

೧೩–೧೫. ಕುರುಕ್ಷೇತ್ರದಲ್ಲಿ ವಾಮನನನ್ನೂ, ಯಮುನಾನದಿಯಲ್ಲಿ ತ್ರಿವಿಕ್ರಮನನ್ನೂ ಶೋಣದಲ್ಲಿ ವಿಶ್ವೇಶ್ವರನನ್ನೂ, ಪೂರ್ವಸಮುದ್ರದಲ್ಲಿ ಕಪಿಲನನ್ನೂ, ಗಂಗಾಸಮುದ್ರಗಳ ಸಂಗಮದಲ್ಲಿ ಶ್ವೇತದ್ವೀಪಾಧಿಪತಿಯನ್ನೂ, ದೇವಿಕಾ ತೀರ್ಥದಲ್ಲಿ

ಶ್ವೇತದ್ವೀಪಪತಿಂ ಚಾಪಿ ಗಂಗಾಸಾಗರಸಂಗಮೇ ।
ಭೂಧರಂ ದೇವಿಕಾತೀರೇ ಪ್ರಯಾಗೇ ಯೋಗಶಾಯಿನಂ ॥ ೧೪ ॥

ನರನಾರಾಯಣಾಖ್ಯೌ ಚ ತಥಾ ಬದರಿಕಾಶ್ರಮೇ ।
ಸಮುದ್ರೇ ದಕ್ಷಿಣೇ ನಾಮ ಪದ್ಮನಾಭೇತಿ ಫಾಲ್ಗುನ ॥ ೧೫ ॥

ದ್ವಾರಕಾಯಾಂ ತಥಾ ಕೃಷ್ಣಂ ಸ್ತುವಂಸ್ತರತಿ ದುರ್ಗತಿಂ ।
ಏವಂ ರಾಮಂ ಮಹೇಂದ್ರಾದ್ರೌ ಹೃಷೀಕೇಶಂ ತಥಾ ಬುಧೇ ॥ ೧೬ ॥

ಅಶ್ವತೀರ್ಥೇ ಹಯಗ್ರೀವಂ ವಿಶ್ವರೂಪಂ ಹಿಮಾಚಲೇ ।
ನೃಸಿಂಹಂ ಕೃತಶೌಚೇ ತು ವಿಪಾಶಾಯಾಂ ದ್ವಿಜಪ್ರಿಯಂ ॥ ೧೭ ॥

ನೈಮಿಷೇ ಯಜ್ಞಪುರುಷಂ ಜಂಬುಮಾಲೇ ತಥಾಚ್ಯುತಂ ।
ಅನಂತಂ ಸೈಂಧವಾರಣ್ಯೇ ದಂಡಕೇ ಶಾರ್ಙ್ಗಧಾರಿಣಂ ೧೮ ॥

ಉತ್ಪಲಾವರ್ತಕೇ ಶೌರಿಂ ನರ್ಮದಾಯಾಂ ಶ್ರಿಯಃಪತಿಂ ।
ದಾಮೋದರಂ ರೈವತಕೇ ನಂದಾಯಾಂ ಜಲಶಾಯಿನಂ । ೧೯ ॥

---

ಭೂಧರನನ್ನೂ, ಪ್ರಯಾಗದಲ್ಲಿ ಯೋಗಶಾಯಿಯನ್ನೂ, ಬದರಿಕಾಶ್ರಮದಲ್ಲಿ ನರನಾರಾಯಣರನ್ನೂ ದಕ್ಷಿಣಸಮುದ್ರದಲ್ಲಿ ಪದ್ಮನಾಭನೆಂಬ ನಾಮದಿಂದಲೂ, ದ್ವಾರಕೆಯಲ್ಲಿ ಕೃಷ್ಣನನ್ನೂ ಸ್ತೋತ್ರಮಾಡಿದಲ್ಲಿ ದಾರಿದ್ರನಾಶವುಂಟಾಗುತ್ತದೆ.

೧೬.-೨೦. ಭಾರ್ಗವರಾಮನನ್ನು ಮಹೇಂದ್ರಪರ್ವತದಲ್ಲಿಯೂ, ಹೃಷೀಕೇಶನನ್ನು ಬುಧಪರ್ವತದಲ್ಲಿಯೂ, ಹಯಗ್ರೀವನನ್ನು ಅಶ್ವತೀರ್ಥದಲ್ಲಿಯೂ, ಹಿಮವತ್ಪರ್ವತದಲ್ಲಿ ವಿಶ್ವರೂಪನನ್ನೂ, ಕೃತಶೌಚದಲ್ಲಿ ನೃಸಿಂಹನನ್ನೂ, ವಿಪಾಶಾ ನದಿಯಲ್ಲಿ ದ್ವಿಜಪ್ರಿಯನನ್ನೂ, ನೈಮಿಷದಲ್ಲಿ ಯಜ್ಞಪುರುಷನನ್ನೂ, ಜಂಬುಮಾಲದಲ್ಲಿ ಅಚ್ಯುತನನ್ನೂ, ಸೈಂಧವಾರಣ್ಯದಲ್ಲಿ ಅನಂತನನ್ನೂ, ದಂಡಕದಲ್ಲಿ ಶಾರ್ಙ್ಗಧಾರಿಯನ್ನೂ, ಉತ್ಪಲಾವರ್ತಕದಲ್ಲಿ ಶೌರಿಯನ್ನೂ, ನರ್ಮದೆಯಲ್ಲಿ ಶ್ರಿಯಃಪತಿಯನ್ನೂ, ರೈವತಕಪರ್ವತದಲ್ಲಿ ದಾಮೋದರನನ್ನೂ, ನನ್ದಾನದಿಯಲ್ಲಿ ಜಲಶಾಯಿ

**ಸರ್ವಯೋಗೇಶ್ವರಂ ಚೈವ ಸಿಂಧುಸಾಗರಸಂಙ್ಗಮೇ ।**
**ಸಹ್ಯಾದ್ರೌ ದೇವದೇವೇಶಂ ವೈಕುಂಠಂ ಮಾಧವೇ ವನೇ　　॥ ೨೦ ॥**

**ಸರ್ವಪಾಪಹರಂ ವಿಂಧ್ಯೇ ಚೋಡ್ರೇಷು ಪುರುಷೋತ್ತಮಂ ।**
**ಹೃದಯೇಚಾಪಿ ಕೌಂತೇಯ ಪರಮಾತ್ಮಾ ಸನಾತನಃ　　॥ ೨೧ ॥**

**ವಟೇ ವಟೇ ವೈಶ್ರವಣಂ ಚತ್ವರೇ ಚತ್ವರೇ ಶಿವಂ ।**
**ಪರ್ವತೇ ಪರ್ವತೇ ರಾಮಂ ಸರ್ವತ್ರ ಮಧುಸೂದನಂ　　॥ ೨೨ ॥**

**ನರಂ ಭೂಮೌ ತಥಾ ವ್ಯೋಮ್ನಿ ಕೌಂತೇಯ ಗರುಡಧ್ವಜಂ ।**
**ವಾಸುದೇವಂ ಚ ಸರ್ವತ್ರ ಸಂಸ್ಮರೇಜ್ಜ್ಯೋತಿಷಾಂ ಪತಿಂ　　॥ ೨೩ ॥**

**ಅರ್ಚಯನ್ ಪ್ರಣಮಂಸ್ತುನ್ವನ್ಸಂಸ್ಮರೇಶ್ಚ ಧನಂಜಯ ।**
**ಏತೇಷ್ವೇತಾನಿ ನಾಮಾನಿ ನರಃ ಪಾಪಾತ್ಪ್ರಮುಚ್ಯತೇ　　॥ ೨೪ ॥**

---

ಯನ್ನೂ, ಸಿಂಧೂನದಿ ಮತ್ತು ಸಾಗರ ಇವುಗಳ ಸಂಗಮದಲ್ಲಿ ಸರ್ವಯೋಗೇಶ್ವರನನ್ನೂ, ಸಹ್ಯಾದ್ರಿಯಲ್ಲಿ ದೇವದೇವೇಶನನ್ನೂ ಮಾಧವವನದಲ್ಲಿ ವೈಕುಂಠನನ್ನೂ,

೨೧–೨೫. ಸರ್ವಪಾಪಹರನನ್ನು ವಿಂಧ್ಯದಲ್ಲಿಯೂ, ಪುರುಷೋತ್ತಮನನ್ನು ಓಢ್ರದೇಶದಲ್ಲಿಯೂ, ಶಾಶ್ವತನಾದ ಪರಮಾತ್ಮನನ್ನು ಹೃದಯದಲ್ಲಿಯೂ, ಕುಬೇರನನ್ನು ಎಲ್ಲಾ ವಟವೃಕ್ಷದಲ್ಲಿಯೂ, ಶಿವನನ್ನು ಎಲ್ಲಾ ಅಂಗಳಗಳಲ್ಲಿಯೂ, ರಾಮನನ್ನು ಎಲ್ಲಾ ಪರ್ವತಗಳಲ್ಲಿಯೂ, ಮಧುಸೂದನನನ್ನು ಎಲ್ಲಾ ಕಡೆಗಳಲ್ಲಿಯೂ, ನರನನ್ನು ಭೂಮಿಯಲ್ಲಿಯೂ, ಗರುಡಧ್ವಜನನ್ನು ಅಂತರಿಕ್ಷದಲ್ಲಿಯೂ, ವಾಸುದೇವನನ್ನೂ ಜ್ಯೋತಿಷ್ಪತಿಯನ್ನೂ ಎಲ್ಲಾ ಕಡೆಯಲ್ಲೂ ಸ್ಮರಿಸಬೇಕು. ಇವರನ್ನು ಆಯಾಯ ಪ್ರದೇಶದಲ್ಲಿ ಪೂಜಿಸುತ್ತಲೂ, ನಮಸ್ಕರಿಸುತ್ತಲೂ, ಸ್ತೋತ್ರಮಾಡುತ್ತಲೂ, ಸ್ಮರಿಸುತ್ತಲೂ ಇರಬೇಕು. ಇದರಿಂದ ಮನುಷ್ಯನು ಎಲ್ಲಾ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ. ಈ ಸ್ಥಳಗಳಲ್ಲಿ ನಾನು ಹೇಳಿರುವ

ಸ್ಥಾನೇಷ್ವೇತೇಷು ಮನ್ನಾಮ್ನಾ ಮೇತೇಷಾಂ ಪ್ರೀಣಯೇನ್ನರಃ ।
ದ್ವಿಜಾನಾಂ ಪ್ರೀಣನಂ ಕೃತ್ವಾ ಸ್ವರ್ಗಲೋಕೇ ಮಹೀಯತೇ ॥ ೨೫ ॥

ನಾಮಾನ್ಯೇತಾನಿ ಕೌಂತೇಯ ಸ್ಥಾನಾನ್ಯೇತಾನಿ ಚಾತ್ಮವಾನ್ ।
ಜಪನ್ ವೈ ಪಂಚಪಂಚಾಶತ್ತ್ರಿಸಂಧ್ಯಂ ತತ್ಪರಾಯಣಃ ॥ ೨೬ ॥

ತ್ರೀಣಿ ಜನ್ಮಾನಿ ಯತ್ಪಾಪಂ ಚಾವಸ್ಥಾ ತ್ರಿತಯೇ ಕೃತಂ ।
ತತ್ಕ್ಷಾಲಯತ್ಯಸಂದಿಗ್ಧಂ ಜಾಯತೇ ಚ ಸತಾಂ ಕುಲೇ ॥ ೨೭ ॥

ದ್ವಿಕಾಲಂ ವಾ ಜಪನ್ನೈತದ್ದಿವಾರಾತ್ರೌ ಚ ಯತ್ಕೃತಂ ।
ತಸ್ಮಾದ್ವಿಮುಚ್ಯತೇ ಪಾಪಾತ್ಸಂಸ್ತುವನ್ ಪರಮೋ ನರಃ ॥ ೨೮ ॥

ಜಪ್ತಾನ್ಯೇತಾನಿ ಕೌಂತೇಯ ಸಕೃಚ್ಛ್ರದ್ಧಾಸಮನ್ವಿತಂ ।
ಮೋಚಯಂತಿ ನರಂ ಪಾಪಾದ್ಯತ್ತತ್ರೈವ ದಿನೇ ಕೃತಂ ॥ ೨೯ ॥

---

ಈ ಹೆಸರುಗಳನ್ನು ಸ್ತೋತ್ರಮಾಡಿ ಸಂತೋಷಪಡಿಸಬೇಕು. ಬ್ರಾಹ್ಮಣರನ್ನೂ ಸಂತೋಷಪಡಿಸಿ ಸ್ವರ್ಗಲೋಕದಲ್ಲಿ ಪೂಜಿಸಲ್ಪಡುತ್ತಾನೆ.

೨೬-೩೦. ಎಲೈ ಕೌಂತೇಯನೇ, ನನ್ನ ಈ ನಾಮಗಳನ್ನೂ, ಈ ಸ್ಥಾನಗಳನ್ನೂ ಸಹ ಮೂರು ಸಂಧ್ಯಾಕಾಲಗಳಲ್ಲೂ, ಜಿತೇಂದ್ರಿಯನಾಗಿದ್ದು ಐವತ್ತೈದು ಬಾರಿ ಜಪಿಸಿದ್ದೇ ಆದರೆ ಮೂರು ಜನ್ಮಗಳಿಂದಲೂ ಜಾಗ್ರತ್ಸ್ವಪ್ನಸುಷುಪ್ತಿ ಈ ಮೂರು ಅವಸ್ಥೆಗಳಲ್ಲಿಯೂ ಮಾಡಲ್ಪಟ್ಟಿರುವ ಎಲ್ಲಾ ಪಾಪಗಳನ್ನೂ ಹೋಗಲಾಡಿಸಿಕೊಂಡು ಭಗವತ್ಪರರಾದ ಸತ್ಪುರುಷರ ವಂಶದಲ್ಲಿ ಜನಿಸುತ್ತಾನೆ. ಹಗಲು ರಾತ್ರಿ ಎರಡು ಹೊತ್ತುಗಳಲ್ಲಿ ಜಪಿಸಿದರೂ ಆ ದಿನದ ಪಾಪದಿಂದ ಮುಕ್ತನಾಗಿ ಪವಿತ್ರನಾಗುತ್ತಾನೆ. ಈ ನಾಮಗಳನ್ನು ಶ್ರದ್ಧೆಯಿಂದಿದ್ದು ಒಂದಾವರ್ತಿ ಜಪಿಸಿದರೂ, ಆ ದಿನದ ಪಾಪದಿಂದ ಅವನನ್ನು ಬಿಡುಗಡೆ ಹೊಂದುವಂತೆ ಈ ನಾಮಗಳೇ ಮಾಡು

ಧನ್ಯೋ ಯಶಸ್ಯಃ ಶತ್ರುಘ್ನೋ ಜಯಃ ಕುರುಕುಲೋದ್ವಹ ।
ಗ್ರಹಾನುಕೂಲತಾಂ ಚೈವ ಕರೋತ್ಯಾಶು ನ ಸಂಶಯಃ ॥ ೩೦ ॥

ಉಪೋಷಿತಶ್ಚ ಮನಸಃ ಸ್ಥಾನೇಷ್ವೇತೇಷು ಮಾನವಃ ।
ಕೃತಾಯತನವಾಸಶ್ಚ ಪ್ರಾಪ್ನೋತ್ಯಭಿಮತಂ ಫಲಂ ॥ ೩೧ ॥

ಉತ್ಕ್ರಾಂತಿರಪ್ಯಶೇಷೇಷು ಸ್ಥಾನೇಷ್ವೇತೇಷು ಶಸ್ಯತೇ ।
ಅನ್ಯಸ್ಥಾನಾಚ್ಛತಗುಣಮೇತೇಷ್ವನಶನಾದಿಕಂ ॥ ೩೨ ॥

ಯಸ್ತು ಮತ್ಪರಮಃ ಕಾಲಂ ಕರೋತ್ಯೇತೇಷು ಮಾನವಃ ।
ದೇವಾನಾಮಪಿ ಪೂಜ್ಯೋಽಸೌ ಮಮ ಲೋಕೇ ಮಹೀಯತೇ ॥ ೩೩ ॥

ಸ್ಥಾನೇಷ್ವೇತೇಷು ಚ ಯೇ ವಸಂತಿ
ಸಂಪೂಜಯಂತೇ ಮಮ ಸರ್ವಕಾಲಂ ।

ತ್ರವೆ. ಧನ್ಯವಾಗಿಯೂ, ಯಶಸ್ವಿಯಾಗಿಯೂ, ಶತ್ರುನಾಶಕವಾಗಿಯೂ, ಜಯಪ್ರದವಾಗಿಯೂ ಇರುವ ಈ ಜಪವು ಗ್ರಹಗಳ ಅನುಕೂಲ್ಯವನ್ನೂ ಜಾಗ್ರತೆಯಾಗಿ ಉಂಟುಮಾಡುತ್ತದೆ. ತನ್ನ ಮನಸ್ಸಿನ ಅಭಿರುಚಿಗೆ ತಕ್ಕ ಯಾವುದಾದರೂ ಒಂದು ಸ್ಥಾನಗಳಲ್ಲಿ ಉಪವಾಸಮಾಡಿ, ಅಲ್ಲಿಯೇ ವಾಸಮಾಡಿದ್ದಲ್ಲಿ ಇಷ್ಟಸಿದ್ಧಿ ಹೊಂದುತ್ತಾನೆ.

೩೨-೩೪. ಈ ಸ್ಥಾನಗಳಲ್ಲಿ ಅಂತಿಮಕಾಲದಲ್ಲಿ ಉತ್ಕ್ರಾಂತಿಯೂ ಪುಣ್ಯಕರವಾಗುತ್ತದೆ. ಇಲ್ಲಿ ಮಾಡುವ ಉಪವಾಸವು ಇತರ ಕಡೆಗಳಿಗಿಂತಲೂ ನೂರರಷ್ಟು ಗುಣಕಾರಿಯಾಗುತ್ತದೆ. ಯಾವನು ನನ್ನ ಧ್ಯಾನಕ್ಕಾಗಿಯೇ ಈ ಸ್ಥಾನಗಳಲ್ಲಿ ಕಾಲಯಾಪನ ಮಾಡುತ್ತಾನೆಯೋ ಅಂತಹವನು ದೇವತೆಗಳಿಗೂ ಪೂಜ್ಯನಾಗಿ ನನ್ನ ಲೋಕದಲ್ಲಿ ಬೆಳಗುತ್ತಾನೆ. ಈ ಸ್ಥಾನಗಳಲ್ಲಿ ವಾಸಮಾಡುತ್ತಾ ನನ್ನನ್ನೇ ಯಾರು ಪೂಜಿಸುತ್ತಾರೆಯೋ ಅವರು ಇಲ್ಲಿದ್ದ ಕಾಲದಲ್ಲಿ ನನ್ನ ಪೂಜೆಯಿಂದ ಸಂತುಷ್ಟ

ತದೇಹ ಚಾಂತೇ ತ್ರಿದಿವಂ ಪ್ರಯಾಂತಿ
ನಾಕಂ ಚ ಲೋಕಂ ಸಮವಾಪ್ನುವಂತಿ ॥ ೩೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಅರ್ಜುನಂಪ್ರತಿ ಕೃಷ್ಣೋಪದೇಶೇ ಸ್ಥಾನ-
ವಿಶೇಷಕೀರ್ತನಮಹಾತ್ಮ್ಯವರ್ಣನೋ ನಾಮ
ಪಂಚವಿಂಶತ್ಯುತ್ತರಶತತಮೋಽಧ್ಯಾಯಃ

---

ರಾಗಿದ್ದು ದೇಹವಿಯೋಗ ಹೊಂದಿ ಸ್ವರ್ಗಕ್ಕೆ ಹೋಗುತ್ತಾರೆ. ಸ್ವರ್ಗಸುಖವನ್ನು ಹೊಂದಿ ಮೋಕ್ಷಕ್ಕೂ ಹೋಗುತ್ತಾರೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಅರ್ಜುನನಿಗೆ ಕೃಷ್ಣನ ಉಪದೇಶದಲ್ಲಿ
ಸ್ಥಾನವಿಶೇಷ ಕೀರ್ತನ ಮಾಹಾತ್ಮ್ಯವರ್ಣನವೆಂಬ
ನೂರ ಇಪ್ಪತ್ತೈದನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಷಡ್ವಿಂಶತ್ಯುತ್ತರಶತತಮೋಽಧ್ಯಾಯಃ ||

|| ವಜ್ರ ಉವಾಚ ||

**ನಾಮ್ನಾಂ ಸಂಪೂಜನಂ ವಿಷ್ಣೋಃ ತ್ವಯಾ ಕಾರ್ಯಂ ಪ್ರಕೀರ್ತಿತಂ |**
**ಪ್ರಾದುರ್ಭಾವೇಷು ಕಾಮ್ಯಂ ಚ ಪೂಜನಂ ಚ ತ್ವಯೇರಿತಂ || ೧ ||**

**ಕಾಲನಾಮಾನಿ ಚ ತಥಾ ಸ್ಥಾನನಾಮಾನಿ ಚಾಪ್ಯಥ |**
**ಕಾಮ್ಯಾನಿ ಚೈವ ನಾಮಾನಿ ತ್ವಯಾ ಪ್ರೋಕ್ತಾನಿ ಭಾರ್ಗವ || ೨ ||**

**ತಸ್ಯೈವ ದೇವದೇವಸ್ಯ ವಿಷ್ಣೋರಮಿತತೇಜಸಃ |**
**ಸರ್ವದೇವಮಯಸ್ಯೇಹ ಸರ್ವರೂಪಧರಸ್ಯ ಚ || ೩ ||**

---

### ನೂರ ಇಪ್ಪತ್ತಾರನೆಯ ಅಧ್ಯಾಯ.

೧-೫. ವಜ್ರನು ಪ್ರಶ್ನೆಮಾಡುತ್ತಾನೆ. ಪೂಜ್ಯರೇ, ವಿಷ್ಣುವಿನ ಪ್ರಾದುರ್ಭಾವಗಳಲ್ಲಿ ಅವನ ನಾಮಗಳ ಪೂಜೆಯೂ ಕಾಮ್ಯಫಲಕ್ಕಾಗಿ ನಡೆಸಬಹುದಾದ ಪೂಜೆಯೂ ಇದುವರೆಗೂ ನಿಮ್ಮಿಂದ ಹೇಳಲ್ಪಟ್ಟಿತು. ಹಾಗೆಯೇ ಕಾಲ ನಾಮಗಳು ಸ್ಥಾನನಾಮ್ಯಗಳು, ಕಾಮ್ಯನಾಮಗಳೂ, ಎಲ್ಲವೂ ಹೇಳಲ್ಪಟ್ಟವು. ಅಂತಹ

ಆರಾಧನವಿಧಾನಾನಿ ಕಥಯಸ್ವ ಮಮಾನಘ ।
ತ್ವಂ ಹಿ ಸರ್ವಕಥಾಭಿಜ್ಞೋ ಯಥಾ ದೇವಃ ಪಿತಾಮಹಃ ॥ ೪ ॥

ಭೂಯ ಏವ ಸಮಾಚಕ್ಷ್ವ ಉಪವಾಸಫಲಂ ವಿಭೋ ।
ದೇವತಾಪೂಜನಾರ್ಥಾಯ ವಿಧಿನಾಪೂಜನಸ್ಯ ಚ ॥ ೫ ॥

॥ ಮಾರ್ಕಂಡೇಯ ಉವಾಚ ॥

ಅಷ್ಟಪತ್ರಂ ತು ಕಮಲಂ ವಿನ್ಯಸ್ಯೇದ್ವರ್ಣಕೈಃ ಶುಭೈಃ ।
ಬ್ರಹ್ಮಾಣಂ ಕರ್ಣಿಕಾಯಾಂ ತು ತಸ್ಯ ಸಂಪೂಜಯೇದ್ವಿಭುಂ ॥ ೬ ॥

ಋಗ್ವೇದಂ ಪೂರ್ವಪತ್ರೇ ತು ಯಜುರ್ವೇದಂ ತು ದಕ್ಷಿಣೇ ।
ಪಶ್ಚಿಮೇ ಸಾಮವೇದಂ ತು ಉತ್ತರೇಽಥರ್ವಣಂ ತಥಾ ॥ ೭ ॥

---

ಅಪರಿಮಿತ ತೇಜಸ್ವಿಯೂ ಸರ್ವದೇವತಾಮಯನೂ, ಸರ್ವರೂಪಧಾರಿಯಾಗಿಯೂ ಆಗಿರುವ ಮಹಾವಿಷ್ಣುವಿನ ಆರಾಧನ ವಿಧಾನಗಳನ್ನೂ ದಯವಿಟ್ಟು ಹೇಳಬೇಕು. ತಾವು ಚತುರ್ಮುಖನಂತೆ ಎಲ್ಲಾ ವಿಚಾರಗಳಿಗೂ ವಾಸಸ್ಥಾನರಾಗಿದ್ದೀರಿ, ಆದ್ದರಿಂದ ದೇವತೆಯ ಸಾಮಾನ್ಯಪೂಜೆ ಮತ್ತು ವಿಧಿವಿಹಿತನಾದ ವಿಶೇಷಪೂಜೆ ಇವುಗಳಿಗೆ ತಕ್ಕ ಉಪವಾಸಫಲ ಇವನ್ನೂ ಸಹ ವಿಶದವಾಗಿ ಪುನಃ ಅಪ್ಪಣೆಕೊಡಿಸಬೇಕು ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ.

೬-೧೨. ಎಂಟು ದಳಗಳುಳ್ಳ ಒಂದು ಕಮಲವನ್ನು ಒಳ್ಳೆಯವರ್ಣದಿಂದ ಬರೆಯಬೇಕು. ಅದರ ಮಧ್ಯಭಾಗದ ಕರ್ಣಿಕೆಯಲ್ಲಿ ಬ್ರಹ್ಮನನ್ನು ಪೂಜಿಸಬೇಕು ಪೂರ್ವಭಾಗದ ದಳದಲ್ಲಿ ಋಗ್ವೇದವನ್ನೂ, ದಕ್ಷಿಣಭಾಗದ ದಳದಲ್ಲಿ ಯಜುರ್ವೇದವನ್ನೂ, ಪಶ್ಚಿಮದಲ್ಲಿ ಸಾಮವೇದವನ್ನೂ ಉತ್ತರದಲ್ಲಿ ಅಥರ್ವವೇದವನ್ನೂ ಆಗ್ನೇಯದಲ್ಲಿ ವೇದಾಙ್ಗಗಳನ್ನೂ, ನೈಋತ್ಯದಲ್ಲಿ ಧರ್ಮಶಾಸ್ತ್ರಗಳನ್ನೂ, ವಾಯವ್ಯದಲ್ಲಿಪುರಾಣಗಳನ್ನೂ, ಈಶಾನ್ಯದಲ್ಲಿ ನ್ಯಾಯವಿಸ್ತರವನ್ನೂ, ವಿನ್ಯಾಸಮಾಡಿ ಉಪವಾಸದಿಂದಿದ್ದು ಪೂಜಿಸಬೇಕು. ಚೈತ್ರಶುಕ್ಲಪಕ್ಷದಲ್ಲಿ ಪ್ರಾರಂಭಿಸಿ ಜಿತೇಂದ್ರಿಯತೆಯಿಂದಿದ್ದು ಉಪವಾಸಮಾಡಿ ಶುಕ್ಲಪಕ್ಷದ ಪ್ರತಿಪತ್ತಿನಲ್ಲಿ ಯಾವಾಗಲೂ ಪೂಜೆ

ಆಗ್ನೇಯೋ ಚ ತಥಾಙ್ಗಾನಿ ಧರ್ಮಶಾಸ್ತ್ರಾಣಿ ನೈಋತೇ ।
ಪುರಾಣಾನ್ಯೇವವಾ ಯವ್ಯೇ ಚೈಶಾನ್ಯಾಂ ನ್ಯಾಯವಿಸ್ತರಂ ॥ ೮ ॥

ಏವಂ ವಿನ್ಯಸ್ಯ ಧರ್ಮಜ್ಞ ಸೋಽವಾಸಸ್ತು ಪೂಜಯೇತ್ ।
ಚೈತ್ರಶುಕ್ಲಾದಥಾರಭ್ಯ ಸೋಽಪವಾಸೋ ಜಿತೇಂದ್ರಿಯಃ ॥ ೯ ॥

ಸದಾ ಪ್ರತಿಪದಂ ಪ್ರಾಪ್ಯ ಶುಕ್ಲಪಕ್ಷಸ್ಯ ಯಾದವ ।
ಸಂವತ್ಸರಂ ಮಹಾಭಾಗ ಶುಕ್ಲಗಂಧಾನುಲೇಪನೈಃ ॥ ೧೦ ॥

ಭೂರಿಣಾ ಪರಮಾನ್ನೇನ ಧೂಪದೀಪೈರತಂದ್ರಿತಃ ।
ಸಂವತ್ಸರಾಂತೇ ಗಾಂ ದದ್ಯಾತ್ ಹುತೇ ಚೀರ್ಣೇ ನರೋತ್ತಮ ॥ ೧೧ ॥

ಇದಂ ವ್ರತಂ ಯಸ್ತು ಕರೋತಿ ರಾಜನ್
ಸವೇದವಿತ್ಸ್ಯಾದ್ಭುವಿ ಧರ್ಮನಿತ್ಯಃ ।
ಕೃತ್ವಾ ತಥಾ ದ್ವಾದಶವತ್ಸರಾಣಿ
ವಿಧೇಃ ಲೋಕಂ ಪುರುಷಃ ಪ್ರಯಾತಿ ॥ ೧೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯ ಖಂಡೇ ಮಾರ್ಕಂಡೇಯ
ವಜ್ರಸಂವಾದೇ ಬ್ರಾಹ್ಮೀಪ್ರತಿಪಲ್ಲಾಭೋನಾಮಷಡ್ವಿಂ
ಶತ್ಯುತ್ತರ ಶತತಮೋಽಧ್ಯಾಯಃ

---

ಮಾಡುತ್ತಿರಬೇಕು. ಸಂವತ್ಸರಪರ್ಯಂತವೂ ಬಿಳಿಯಗಂಧಾದಿಗಳಿಂದ ಜಾಗರೂಕತೆಯಿಂದ ಪೂಜಿಸಿ ಸಂವತ್ಸರದ ಕೊನೆಯಲ್ಲಿಯೂ ಹೆಚ್ಚಾದ ಪರಮಾನ್ನ ಧೂಪದೀಪಾದಿಗಳಿಂದ ಪೂಜಿಸಿ ಹೋಮ ವ್ರತ ಎಲ್ಲವೂ ನಡೆದಮೇಲೆ ಗೋದಾನವನ್ನು ಮಾಡಬೇಕು. ಇಂತಹ ವ್ರತವನ್ನು ಯಾವನು ಮಾಡುತ್ತಾನೆಯೋ, ಅವನು ವೇದಜ್ಞನಾಗಿಯೂ, ಧಾರ್ಮಿಕನಾಗಿಯೂ, ಆಗುತ್ತಾನೆ. ಹೀಗೆ ಹನ್ನೆರಡುವರ್ಷ ಪರ್ಯಂತ ನಡೆಸಿದವನು ಬ್ರಹ್ಮಲೋಕವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಬ್ರಾಹ್ಮೀಪ್ರತಿಪಲ್ಲಾಭವೆಂಬ
ನೂರ ಇಪ್ಪತ್ತಾರನೆಯ ಅಧ್ಯಾಯ ಮುಗಿದಿದೆ.

॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಸಪ್ತವಿಂಶತ್ಯುತ್ತರಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಆರಾಧನಂ ತ್ರಿದೇವಸ್ಯ ತಸ್ಯ ವಕ್ಷ್ಯಾಮಿ ಯಾದವ ।
ವಿಷ್ಣೋರಮಿತವೀರ್ಯಸ್ಯ ದ್ವಿತೀಯಮರಿಮರ್ದನ ॥ ೧ ॥

ಬ್ರಾಹ್ಮೀ ತು ರಾಜಸೀ ಮೂರ್ತಿಃ ತಸ್ಯ ವರ್ಗಪ್ರವರ್ತಿನೀ ।
ಸಾತ್ವಿಕೀ ವೈಷ್ಣವೀ ಜ್ಞೇಯಾ ಸಂಸಾರಪರಿಪಾಲಿನೀ ॥ ೨ ॥

ತಾಮಸೀ ಚ ತಥಾ ರೌದ್ರೀ ಜ್ಞೇಯಾ ಸಂಹಾರಕಾರಿಣೀ ।
ಚೈತ್ರಶುಕ್ಲಪ್ರತಿಪದಿ ಬ್ರಹ್ಮಾಣಂ ಪೂಜಯೇನ್ನರಃ ॥ ೩ ॥

---

### ನೂರ ಇಪ್ಪತ್ತೇಳನೆಯ ಅಧ್ಯಾಯ.

೧-೫. ಮಾರ್ಕಂಡೇಯರು ಹೇಳುತ್ತಾರೆ:—ಅಮಿತವೀರ್ಯನೂ, ಮೂರ್ತಿತ್ರಯಾತ್ಮಕನೂ ಆದ ವಿಷ್ಣುವಿನ ಎರಡನೆಯ ಆರಾಧನವನ್ನು ಹೇಳುತ್ತೇನೆ :—ಆ ವಿಷ್ಣುವಿನ ಮೂರ್ತಿಗಳಲ್ಲಿ ರಜೋಗುಣ ಸಂಬಂಧದಿಂದ ಉಂಟಾದ ಮೂರ್ತಿಯು ಬ್ರಾಹ್ಮೀ. ಇದು ತ್ರಿವರ್ಗಕ್ಕೆ ಪ್ರವರ್ತಕ, ಸತ್ವಗುಣ ಸಂಬಂಧದಿಂದ ಉಂಟಾದ ಮೂರ್ತಿಯೇ ವೈಷ್ಣವಿ. ಇದು ಸಂಸಾರಕ್ಕೆ ರಕ್ಷಕವಾದದ್ದು. ತಾಮಸವಾದ ಮೂರ್ತಿಯು ರೌದ್ರೀ ಎನಿಸುತ್ತದೆ. ಇದು ಸಂಹಾರಕಾರಕ, ಬ್ರಹ್ಮನನ್ನು ಚೈತ್ರ ಶುಕ್ಲ ಪ್ರತಿಪತ್ತಿನಲ್ಲಿ ಪೂಜಿಸಬೇಕು. ಗಂಧ, ಪುಷ್ಪ, ನಮಸ್ಕಾರ, ಧೂಪ

ಗಂಧಮಾಲ್ಯನಮಸ್ಕಾರ ಧೂಪದೀಪಾನ್ನಸಂಪದಾ ।
ಕ್ಷೀರಂ ಬ್ರಾಹ್ಮೈಸ್ತತೋ ಮಂತ್ರೈಃ ಜುಹುಯಾಜ್ಜಾತವೇದಸಿ ॥ ೪ ॥

ಲೋಹಭಾಂಡಂ ದ್ವಿಜೇ ದದ್ಯಾತ್ ಕ್ಷೀರಪೂರ್ಣಂ ಸಕಾಂಚನಂ ।
ದಧ್ನಾ ಚ ಭೋಜನಂ ಕಾರ್ಯಂ ಮಧ್ಯಂ ಪ್ರಾಪ್ತೇ ದಿವಾಕರೇ ॥ ೫ ॥

ಏಕವಸ್ತ್ರಾಂಚಿತೇ ದೇಶೇ ತಥಾ ಸ್ವಪ್ಯಾತ್ಕುಶಾಸ್ತೃತೇ ।
ತತಶ್ಚತುರ್ಥೇ ದಿವಸೇ ಕೂಪನಾದೇಯಸಾರಸೈಃ ।
ತ್ರಿಭಿರೇಕಗತೈಸ್ತೋಯೈಃ ಸಮ್ಯಕ್‌ಸ್ನಾನಂ ಸಮಾಚರೇತ್ ॥ ೬ ॥

ಪೂಜಯೇತ್ಪೂರ್ವವತ್ಸಮ್ಯಕ್ಪುರತ್ರಿತಯಮೇವ ತತ್ ।
ಲೋಹತ್ರಯಂ ದ್ವಿಜೇ ದದ್ಯಾತ್ಸಮಾಲ್ಯಾಂ ನೃಪ ದಕ್ಷಿಣಾಂ ॥ ೭ ॥

ತೃತೀಯೇಽಹ್ನಿ ತತಃ ಪೂಜಾ ಕಾರ್ಯಾ ರುದ್ರಸ್ಯ ಪಾರ್ಥಿವ ।
ಗಂಧಮಾಲ್ಯನಮಸ್ಕಾರ ಧೂಪದೀಪೈಸ್ತಥೈವ ಚ ।
ಮಾನಸ್ತೋಕೇತಿ ಮಂತ್ರೇಣ ಘೃತಹೋಮೋ ವಿಧೀಯತೇ ॥ ೮ ॥

---

ದೀಪ, ನೈವೇದ್ಯ ಇತ್ಯಾದಿಗಳಿಂದ ಪೂಜಿಸಿ ಬ್ರಾಹ್ಮ ಮಂತ್ರಗಳಿಂದ ಕ್ಷೀರವನ್ನು ಅಗ್ನಿಯಲ್ಲಿ ಹೋಮಮಾಡಬೇಕು. ಕ್ಷೀರದಿಂದ ತುಂಬಿದ ಲೋಹ ಭಾಂಡವನ್ನು ಕಾಂಚನ ದಕ್ಷಿಣೆಯೊಡನೆ ಬ್ರಾಹ್ಮಣನಿಗೆ ದಾನಮಾಡಬೇಕು. ಮಧ್ಯಾಹ್ನ ಸಮಯಕ್ಕೆ ಮೊಸರನ್ನದಿಂದ ಭೋಜನಮಾಡಬೇಕು. ಒಂದೇ ವಸ್ತ್ರದಿಂದ ಆಚ್ಛಾದಿತವಾದ ಭೂಮಿಯ ಮೇಲೆ ದರ್ಭೆಗಳನ್ನು ಹರಡಿ ಅದರ ಮೇಲೆ ಮಲಗಬೇಕು.

೬-೧೧ ಅನಂತರ ನಾಲ್ಕನೆಯ ದಿನ ಭಾವಿ ನೀರು, ನದಿಯ ನೀರು, ಸರೋವರದ ನೀರು ಈ ಮೂರು ನೀರನ್ನೂ ಒಂದಾಗಿ ಸೇರಿಸಿ ವ್ರತಸ್ನಾನ ಮಾಡಬೇಕು. ಮೊದಲಿನಂತೆ ಮೂರು ದೇವತೆಗಳನ್ನೂ ಪುರತ್ರಯವನ್ನಾಗಿ ಪೂಜಿಸಬೇಕು. ಮೂರು ವಿಧವಾದ ಲೋಹಗಳನ್ನೂ ಹೂಮಾಲೆಯಿಂದ ಕೂಡಿದ ದಕ್ಷಿಣೆಯನ್ನೂ ಬ್ರಾಹ್ಮಣನಿಗೆ ದಾನಮಾಡಬೇಕು. ಮೂರನೆಯ ದಿನ ಗಂಧಪುಷ್ಪ ನಮಸ್ಕಾರ ಧೂಪದೀಪಾದಿಗಳಿಂದ ರುದ್ರನನ್ನು ಪೂಜಿಸಬೇಕು ಮಾನಸ್ತೋಕೆ ಎಂಬ ಮಂತ್ರದಿಂದ ಆಜ್ಯ ಹೋಮವನ್ನು ಮಾಡಬೇಕು. ಆಜ್ಯದೊಡನೆ ಲೋಹ

ಸಘೃತಂ ಲೋಹಪಾತ್ರಂ ಚ ಸಹಿರಣ್ಯಂ ಸದಕ್ಷಿಣಂ ।
ತೃತೀಯೇ ದಿನಭಾಗೇ ತು ವಾತಾಹಾರಂ ಸಮಾಚರೇತ್ ॥ ೯ ॥

ತಥಾ ತ್ರಿಮಧುರಂ ದದ್ಯಾದ್ಭೋಜನಂ ತಚ್ಚ ಭಕ್ಷಯೇತ್ ।
ವ್ರತಮೇತನ್ನರಃ ಕೃತ್ವಾ ಮಾಸಿ ಮಾಸಿ ದಿನತ್ರಯಂ ।
ಸಂವತ್ಸರೇಣ ಧರ್ಮಜ್ಞ ಗತಿಮಿಷ್ಟಾಮವಾಪ್ನುಯಾತ್ ॥ ೧೦ ॥

ಮಾನುಷ್ಯಮಾಸಾದ್ಯ ಭವತ್ಯರೋಗೋ
ಜಿತೇಂದ್ರಿಯಃ ಸತ್ಯಪರೋ ವಿನೀತಃ ।
ಸೌಭಾಗ್ಯರೂಪದ್ರವಿಣೋಪಪನ್ನಃ
ಸಾಕ್ಷಾಚ್ಛಿವೋ ಲೋಕಧುರಂಧರಃ ಸ್ಯಾತ್ ॥ ೧೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ತ್ರಿಮೂರ್ತಿವ್ರತಂ ನಾಮ
ಸಪ್ತವಿಂಶತ್ಯುತ್ತರಶತತಮೋಽಧ್ಯಾಯಃ

---

ಪಾತ್ರೆಯನ್ನೂ, ಹಿರಣ್ಯ ದಕ್ಷಿಣೆಯೊಡನೆ ಬ್ರಾಹ್ಮಣನಿಗೆ ದಾನಮಾಡಬೇಕು. ದಿನದ ಮೂರನೆಯ ಭಾಗದಲ್ಲಿ ವಾತಾಹಾರದಿಂದ ಇರಬೇಕು. ಮೂರು ವಿಧವಾದ ಮಧುರ ಭಕ್ಷ್ಯದೊಡನೆ ಬ್ರಾಹ್ಮಣ ಭೋಜನ ಮಾಡಿಸಿ ಅನಂತರ ತಾನೂ ಅದನ್ನು ಭಕ್ಷಿಸಬೇಕು. ಈ ವ್ರತವನ್ನು ಪ್ರತಿಮಾಸದಲ್ಲಿಯೂ ಮೂರು ದಿನಗಳು ಮಾಡುತ್ತಿದ್ದು ಒಂದು ಸಂವತ್ಸರ ಹೀಗೆಯೇ ನಡೆಸಿದಲ್ಲಿ ಅವನು ತನಗೆ ಇಷ್ಟವಾದ ಫಲವನ್ನು ಹೊಂದುತ್ತಾನೆ. ಮನುಷ್ಯನಾದವನು ಈ ವ್ರತದಿಂದ ಆರೋಗಿಯಾಗಿಯೂ, ಜಿತೇಂದ್ರಿಯನಾಗಿಯೂ, ಸತ್ಯಸಂಧನಾಗಿಯೂ, ವಿನೀತನಾಗಿಯೂ, ಭಾಗ್ಯ, ರೂಪ, ದ್ರವ್ಯ ಇವುಗಳನ್ನೂ ಹೊಂದಿ ಲೋಕಪೂಜ್ಯನಾದ ಸಾಕ್ಷಾಚ್ಛಿವನಂತೆ ಮಾನ್ಯನಾಗುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ತ್ರಿಮೂರ್ತಿ ವ್ರತವೆಂಬ
ನೂರ ಇಪ್ಪತ್ತೇಳನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಅಷ್ಟಾವಿಂಶತ್ಯುತ್ತರ ಶತತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಏಕಮೇವ ಜಗತ್ಸರ್ವಂ ಪ್ರಕೃತಿಃ ಪುರುಷಃ ಸ್ಮೃತಃ |**
**ಚೈತ್ರಶುಕ್ಲಸಮಾರಂಭೇ ಸೋಪವಾಸೋ ಜಿತೇಂದ್ರಿಯಃ || ೧ ||**

**ಪುರುಷಂ ಪೂಜಯೇದ್ವಿಷ್ಣುಂ ಸ್ಥಲೇ ವಾ ಯದಿ ವಾ ಜಲೇ |**
**ಗಂಧಮಾಲ್ಯನಮಸ್ಕಾರಧೂಪದೀಪಾನ್ನಸಂಪದಾ || ೨ ||**

**ಪೌರುಷಂ ತು ತಥಾ ಸೂಕ್ತಂ ಜಪೇದಂತರ್ಜಲೇ ನರಃ |**
**ತಥಾ ಚೈನಂ ಚ ಪ್ರತ್ಯರ್ಚಂ ಬುಧೋ ದದ್ಯಾಜ್ಜಲಾಂಜಲಿಂ || ೩ ||**

---

### ನೂರ ಇಪ್ಪತ್ತೆಂಟನೆಯ ಅಧ್ಯಾಯ

೧–೭. ಮಾರ್ಕಂಡೇಯರು ಹೇಳುತ್ತಾರೆ :— ಎಲ್ಲಾ ಜಗತ್ತೂ ಒಂದೇ ವಸ್ತುವಾಗಿದೆ. ಇದಕ್ಕೆ ಪ್ರಧಾನವಾದ ಮೂಲಕಾರಣ ಪುರುಷ (ಇಲ್ಲಿ ಪ್ರಕೃತಿ ಮತ್ತು ಪುರುಷ ಇವರಿಂದ ಉಂಟಾಗಿದೆ. ಪ್ರಕೃತಿಯನ್ನು ಅಧಿಷ್ಠಾನವಾಗಿ ಹೊಂದಿ ಪುರುಷನೇ ಜಗದ್ರೂಪನಾಗಿರುವನೆಂದೂ ಅರ್ಥ ಹೇಳಬಹುದು. ಪುರುಷನೇ ಪ್ರಧಾನಕಾರಣವೆಂದಲ್ಲಿ ಪುರುಷನ ಸಂಕಲ್ಪಕ್ಕೆ ಅನುಗುಣವಾಗಿ ಪ್ರಕೃತಿ ಅಧಿಷ್ಠಾನ ರೂಪದಿಂದ ಇದ್ದು ಜಗತ್ಕಾರಣವಾಗಿದೆ ಎಂದು ಅರ್ಥ.) ಚೈತ್ರ ಶುಕ್ಲಪಕ್ಷದ ಪ್ರಥಮ ತಿಥಿಯಲ್ಲಿ ಉಪವಾಸಮಾಡಿ ಜಿತೇಂದ್ರಿಯನಾಗಿದ್ದು ಪುರುಷ ಪದವಾಚ್ಯನಾದ ಮಹಾವಿಷ್ಣುವನ್ನು ಜಲದಲ್ಲಾಗಲಿ, ಸ್ಥಳದಲ್ಲಾಗಲಿ ಗಂಧಪುಷ್ಪ ಧೂಪದೀಪ ನೈವೇದ್ಯಾದಿಗಳಿಂದ ಪೂಜಿಸಬೇಕು. ನೀರಿನ ಮಧ್ಯದಲ್ಲಿ ನಿಂತು ಪುರುಷಸೂಕ್ತ

ತಥಾ ಪುಷ್ಪಾಣಿ ಧರ್ಮಜ್ಞ ಫಲಾನಿ ಚ ಮಹಾಭುಜ ।
ಧೂಪಂ ದದ್ಯಾತ್ಸನೈವೇದ್ಯಂ ಜಪೇಚ್ಛಕ್ತ್ಯಾ ತಥಾ ಚ ತಂ ॥ ೪ ॥

ಜುಹುಯಾಚ್ಚ ತಥಾಜ್ಯೇನ ದ್ವಿಜೇ ದದ್ಯಾಚ್ಚ ಕಾಂಚನಂ ।
ಆಹಾರಂ ಪಯಸಾ ಕುರ್ಯಾನ್ನಿಶಾಕಾಲೇ ಚ ಭಾರ್ಗವ ॥ ೫ ॥

ಏತತ್ಸಂವತ್ಸರಂ ಕೃತ್ವಾ ನಿತ್ಯವ್ರತಮತಂದ್ರಿತಃ ।
ಪಕ್ಷಯೋರುಭಯೋರ್ವೀರ ಸರ್ವಪಾಪೈಃ ಪ್ರಮುಚ್ಯತೇ ॥ ೬ ॥

ಪ್ರಸಾದಮಾಸಾದ್ಯ ಸವಾಸುದೇವಾ-
ತ್ಸರ್ವೇಶ್ವರಾತ್ಸರ್ವಗತಾದಚಿಂತ್ಯಾತ್ ।
ಲೋಕೇಶ್ವರಾನ್ಮೋಕ್ಷಪ್ರದಂ ಪ್ರಯಾತಿ
ಯತ್ ಯಾಂತಿ ಸಿದ್ಧಾ ಮುನಯಃ ಪ್ರತೀತಾಃ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಪೌರುಷೀಪ್ರತಿಪದ್ವರ್ಣನೋ ನಾಮ ಅಷ್ಟಾವಿಂಶತ್ಯುತ್ತರಶತತಮೋಽಧ್ಯಾಯಃ

---

ವನ್ನು ಜಪಿಸಬೇಕು. ಆ ಮಹಾವಿಷ್ಣುವನ್ನೇ ಉದ್ದೇಶಿಸಿ ಪ್ರತಿಯೊಂದು ಋಕ್ಕಿಗೂ ಜಲಾಂಜಲಿಯನ್ನು ಅರ್ಪಿಸಬೇಕು. ಪುಷ್ಪಫಲಗಳನ್ನೂ ಅರ್ಪಿಸಬೇಕು. ಧೂಪ ನೈವೇದ್ಯಾದಿಗಳನ್ನೂ ಅರ್ಪಿಸಿ, ಶಕ್ತ್ಯನುಸಾರ ಜಪಮಾಡಬೇಕು. ಆಜ್ಯದಿಂದ ಹೋಮವನ್ನೂ ಮಾಡಿ, ಬ್ರಾಹ್ಮಣನಿಗೆ ಸ್ವರ್ಣದಕ್ಷಿಣೆಯನ್ನು ಕೊಟ್ಟು, ರಾತ್ರಿಯಲ್ಲಿ ಕೇವಲ ಹಾಲಿನಿಂದಲೇ ಆಹಾರ ಹೊಂದಬೇಕು. ಈ ವ್ರತವನ್ನು ಒಂದು ಸಂವತ್ಸರದ ವರೆಗೂ ಎರಡು ಪಕ್ಷಗಳಲ್ಲಿಯೂ ತಪ್ಪದೆ ಮಾಡುತ್ತ ಬಂದಲ್ಲಿ ಅವನು ಸಮಸ್ತ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ. ಅಂತಹವನು ಸರ್ವೇಶ್ವರನಾಗಿಯೂ, ಅಚಿಂತ್ಯಮಹಿಮನಾಗಿಯೂ ಇರುವ ವಾಸುದೇವನ ಅನುಗ್ರಹ ಹೊಂದಿ ಸಿದ್ಧರಾದ ಮುನಿಗಳಿಗೂ ಸ್ಥಾನವಾದ ಮೋಕ್ಷವನ್ನೇ ಹೊಂದುತ್ತಾನೆ.

ಇಲ್ಲಿಗೆ ಶ್ರೀವಿಷ್ಣು ಧರ್ಮೋತ್ತರ ತೃತೀಯ ಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದದಲ್ಲಿ ಪೌರುಷೀಪ್ರತಿಪದ್ವರ್ಣನವೆಂಬ ನೂರ ಇಪ್ಪತ್ತೆಂಟನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕೋನತ್ರಿಂಶದುತ್ತರ ಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

ಪುರುಷಃ ಪ್ರಕೃತಿಶ್ಚೋಭೌ ಜಗತ್ಸರ್ವಂ ಪ್ರಕೀರ್ತಿತಂ |
ಅಗ್ನೀಷೋಮಾತ್ಮಕಂ ಸರ್ವಂ ತಥಾ ತಸ್ಯ ಪ್ರಕೀರ್ತಿತಂ || ೧ ||

ವಾಸುದೇವಶ್ಚ ಲಕ್ಷ್ಮೀಶ್ಚ ತಾವೇವ ಪರಿಕೀರ್ತಿತೌ |
ಚೈತ್ರಶುಕ್ಲಸಮಾಯಾಂ ಚ ಸೋಪವಾಸೋ ಜಿತೇಂದ್ರಿಯಃ || ೨ ||

ಪೌರುಷೇಣ ಚ ಸೂಕ್ತೇನ ವಹ್ನಿಂ ಸಂಪೂಜಯೇನ್ನರಃ |
ಗಂಧಮಾಲ್ಯನಮಸ್ಕಾರಧೂಪದೀಪಾನ್ನಸಂಪದಾ || ೩ ||

---

### ನೂರ ಇಪ್ಪತ್ತೊಂಭತ್ತನೆಯ ಅಧ್ಯಾಯ.

೧-೭. ಜಗತ್ತೆಲ್ಲವೂ ಪುರುಷ ಪ್ರಕೃತಿ ಇವರುಗಳ ಸಂಘಾತರೂಪ. ಈ ರೂಪವೇ ಅಗ್ನೀಷೋಮಾತ್ಮಕವೆಂದೂ ಹೇಳಲಾಗುತ್ತದೆ. ಇವರೇ ವಾಸುದೇವ ಮತ್ತು ಲಕ್ಷ್ಮೀರೂಪರೆಂದೂ ಪ್ರಸಿದ್ಧಿ ಇದೆ. ಚೈತ್ರಶುಕ್ಲಪ್ರತಿಪತ್ತಿನಲ್ಲಿ ಉಪವಾಸ ಜಿತೇಂದ್ರಿಯತೆಯಿಂದ ಕೂಡಿದ್ದು ಪುರುಷಸೂಕ್ತದಿಂದ ಅಗ್ನಿಯನ್ನು ಪೂಜಿಸಬೇಕು. ಗಂಧಪುಷ್ಪನಮಸ್ಕಾರಧೂಪದೀಪಾದಿಗಳಿಂದ ಪೂಜಿಸಿ ವರಪ್ರದಳಾದ ಲಕ್ಷ್ಮೀ ದೇವಿಯನ್ನೂ, ಉದಕದಿಂದ ಶ್ರೀಸೂಕ್ತವನ್ನು ಪಠಿಸಿ ಪೂಜಿಸಬೇಕು. ಚಿನ್ನ ಮತ್ತು ಬೆಳ್ಳಿಯ ಎರಡುಪಾತ್ರೆಗಳನ್ನು ಬ್ರಾಹ್ಮಣನಿಗೆ ದಕ್ಷಿಣೆಯನ್ನಾಗಿ ಕೊಡಬೇಕು. ಘೃತದಿಂದ ಮಿಶ್ರವಾದ ಕ್ಷೀರವನ್ನು ಆಹಾರಕ್ಕಾಗಿ ಉಪಯೋಗಿಸಿ ಪ್ರಾಣಯಾತ್ರೆ

ಲಕ್ಷ್ಮೀಂ ಚ ವರದಾಂ ದೇವೀಂ ಪೂಜಯೇದುದಕೇನ ತು ।
ಶ್ರೀಸೂಕ್ತೇನ ಚ ಧರ್ಮಜ್ಞ ಯಥಾವನ್ಮನುಜೇಶ್ವರ ॥ ೪ ॥

ಕಾಂಚನಂ ರಾಜತಂ ಚೋಭೌ ದದ್ಯಾದ್ದ್ವಿಪ್ರೇಷು ದಕ್ಷಿಣಾಂ ।
ಪ್ರಾಣಯಾತ್ರಾಂ ಬುಧಃ ಕುರ್ಯಾತ್ ಕ್ಷೀರೇಣ ಸಘೃತೇನ ಚ ॥ ೫ ॥

ಸಂವತ್ಸರಮಿದಂ ಕೃತ್ವಾ ವ್ರತಂ ಸಮ್ಯಗುಪೋಷಿತಃ ।
ಮುಚ್ಯತೇ ಪಾತಕೈಃ ಸರ್ವೈಃ ಮೋಕ್ಷೋಪಾಯಾಂಶ್ಚ ವಿಂದತಿ ॥ ೬ ॥

ಕಾಮಾನವಾಪ್ನೋತ್ಯಥವಾ ವಿಚಿತ್ರಾನ್
ಲೋಕಾಂಶ್ಚ ಮುಖ್ಯಾನ್ವಸುಧಾಂ ಸಮಗ್ರಾಂ ।
ವಿರೂಪತೋ ರೂಪಮಥಾಪಿ ಚಾಗ್ರ್ಯಂ
ಯಶಸ್ತಥಾಗ್ರ್ಯಂ ತನಯಾಂಶ್ಚ ಮುಖ್ಯಾನ್ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪ್ರಕೃತಿಪುರುಷನಿರೂಪಣೋ ನಾಮ
ಏಕೋನತ್ರಿಂಶದುತ್ತರ ಶತತಮೋಽಧ್ಯಾಯಃ

---

ನಡೆಸಬೇಕು ಈ ವ್ರತವನ್ನು ಹೀಗೆ ಉಪವಾಸದಿಂದಿದ್ದು ಸವಂತ್ಸರ ಪರ್ಯಂತ ನಡೆಸಿದಲ್ಲಿ, ಎಲ್ಲಾ ಪಾಪಗಳಿಂದಲೂ ಬಿಡುಗಡೆ ಹೊಂದಿ ಮೋಕ್ಷೋಪಾಯಗಳನ್ನೂ ಹೊಂದುತ್ತಾನೆ. ವಿಚಿತ್ರವಾದ ಐಹಿಕ ಪುರುಷಾರ್ಥಗಳನ್ನೂ, ಮುಖ್ಯವಾದ ಲೋಹಗಳನ್ನೂ ಸಮಗ್ರಭೂಮಿಯನ್ನೂ ವಿರೂಪ ಹೊಂದಿದ್ದವನು ಒಳ್ಳೆಯ ಸುರೂಪವನ್ನೂ, ಯಶಸ್ಸನ್ನೂ ಒಳ್ಳೆಯ ಪುತ್ರರನ್ನೂ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಪ್ರಕೃತಿಪುರುಷ ನಿರೂಪಣವೆಂಬ
ನೂರ ಇಪ್ಪತ್ತೊಂಭತ್ತನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ತ್ರಿಂಶದುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ನಾಸತ್ಯೌ ದೇವಭಿಷಜಾವಶ್ವಿನೌ ಪರಿಕೀರ್ತಿತೌ |**
**ತಾವೇವ ಕಥಿತೌ ಲೋಕೇ ಸೂರ್ಯತಾರಾಧಿಪೌ ನೃಪ || ೧ ||**

**ಅಶ್ವಯಾನರತೌ ಯಸ್ಮಾದಶ್ವಿನೌ ಪರಿಕೀರ್ತಿತೌ |**
**ಚೈತ್ರಶುಕ್ಲದ್ವಿತೀಯಾಯಾಂ ಸೋಪವಾಸೋ ಜಿತೇಂದ್ರಿಯಃ || ೨ ||**

**ನಾಸತ್ಯೌ ದೇವಭಿಷಜೌ ಪೂಜಯೇತ್ಪ್ರಯತಃ ಶುಚಿಃ |**
**ಗಂಧಮಾಲ್ಯನಮಸ್ಕಾರಧೂಪದೀಪಾನ್ನಸಂಪದಾ || ೩ ||**

---

### ನೂರ ಮೂವತ್ತನೆಯ ಅಧ್ಯಾಯ

೧-೨. ಮಾರ್ಕಂಡೇಯರು ಹೇಳುತ್ತಾರೆ:— ನಾಸತ್ಯರೆಂಬುವರು ದೇವತೆಗಳ ವೈದ್ಯರಾದ ಅಶ್ವಿನೀದೇವತೆಗಳು, ಅವರೇ ಲೋಕದಲ್ಲಿ ಸೂರ್ಯಚಂದ್ರರೆಂದೂ ಹೇಳಲ್ಪಡುತ್ತಾರೆ. ಇವರು ಅಶ್ವಾರೋಹಣದಲ್ಲಿ ಆಸಕ್ತರಾಗಿರುವುದರಿಂದ ಅಶ್ವಿನೌ ಎಂದು ಪ್ರಸಿದ್ಧಿ ಹೊಂದಿದ್ದಾರೆ. ಚೈತ್ರಶುಕ್ಲ ದ್ವಿತೀಯಾದಿನ ಉಪವಾಸ ಮತ್ತು ಜಿತೇಂದ್ರಿಯತೆಯಿಂದ ಇದ್ದು ನಾಸತ್ಯರೆಂಬ ಈ ದೇವವೈದ್ಯರನ್ನು ಗಂಧಪುಷ್ಪ ನಮಸ್ಕಾರ ಧೂಪದೀಪ ನೈವೇದ್ಯಾದಿಗಳಿಂದ ಒಂದು ರೂಪವನ್ನು ನಿರ್ಮಿಸಿಕೊಂಡು ಪೂಜಿಸಬೇಕು. ರಾತ್ರಿಯಲ್ಲಿ ವಿಶೇಷವಾಗಿ ದೀಪ ಮಾಲಿಕೆಯಿಂದ ಪೂಜಿಸಿ, ಚಿನ್ನ

ಕೃತ್ವಾ ಚ ರೂಪನಿರ್ಮಾಣಂ ನಾಸತ್ಯೌ ಪೂಜಯೇನ್ನರಃ ।
ದೀಪಮಾಲಾಂ ತತೋ ದದ್ಯಾತ್ತಯೋರ್ನಿಶಿ ವಿಶೇಷತಃ ॥ ೪ ॥

ಕನಕಂ ರಜತಂ ಚೋಭೇ ದದ್ಯಾದ್ವಿಪ್ರೇಷು ದಕ್ಷಿಣಾಂ ।
ನಿಮೀಲ್ಯ ನೇತ್ರಯುಗಳಂ ವಿಷ್ಣುಂ ಚ ಸಂಸ್ಮರೇನ್ನರಃ ॥ ೫ ॥

ಪ್ರದೀಪ್ತತೇಜಾ ಭವತಿ ಚಕ್ಷುಷ್ಮಾಂಶ್ಚೈವ ಜಾಯತೇ ।
ಪ್ರಾಣಯಾತ್ರಾಂ ತು ಕುರ್ವೀತ ದಧ್ನಾ ಘೃತಯುತೇನ ಚ ॥ ೬ ॥

ನೇತ್ರವ್ರತಂ ದ್ವಾದಶವತ್ಸರಾಣಿ
ಕೃತ್ವಾ ಭವೇದ್ಭೂಮಿಪತಿಃ ಪ್ರತೀತಃ ।
ಸರೂಪರೂಪೋರಿಗಣಪ್ರಮಾಥೀ
ಧರ್ಮಾಭಿರಾಮೋ ನೃಪವರ್ಯಮುಖ್ಯಃ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ನಾಸತ್ಯಪೂಜಾಚಕ್ಷುರ್ವ್ರತಂ ನಾಮ
ತ್ರಿಂಶದುತ್ತರಶತತಮೋಽಧ್ಯಾಯಃ

---

ಬೆಳ್ಳಿಯ ಎರಡು ಪಾತ್ರೆಗಳನ್ನು ಬ್ರಾಹ್ಮಣರಿಗೆ ದಕ್ಷಿಣೆಯನ್ನಾಗಿ ಕೊಡಬೇಕು. ಎರಡು ಕಣ್ಣುಗಳನ್ನೂ ಮುಚ್ಚಿಕೊಂಡು ವಿಷ್ಣುವನ್ನು ಸ್ಮರಿಸಬೇಕು. ಇದರಿಂದ ತೇಜಸ್ವಿಯಾಗಿಯೂ, ಒಳ್ಳೆಯ ಕಣ್ಣುಗಳುಳ್ಳವನಾಗಿಯೂ, ಆಗುತ್ತಾನೆ. ಆಜ್ಯ ದೊಡಗೂಡಿದ ಕ್ಷೀರದಿಂದ ಪ್ರಾಣಧಾರಣ ಹೊಂದಬೇಕು. ಹೀಗೆ ನೇತ್ರವ್ರತವನ್ನು ಹನ್ನೆರಡು ವರ್ಷಗಳು ಮಾಡಿದಲ್ಲಿ ಅವನು ಪ್ರಸಿದ್ಧನಾದ ಧೊರೆಯೇ ಆಗುತ್ತಾನೆ. ಒಳ್ಳೆಯ ರೂಪವಂತನೂ, ಶತ್ರುನಾಶಕನೂ, ಧಾರ್ಮಿಕನೂ, ರಾಜಮುಖ್ಯನೂ ಆಗುತ್ತಾನೆ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ನಾಸತ್ಯಪೂಜಾ ಚಕ್ಷುರ್ವ್ರತವೆಂಬ
ನೂರ ಮೂವತ್ತನೆಯ ಅಧ್ಯಾಯ ಮುಗಿದಿದೆ.

॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಏಕತ್ರಿಂಶದುತ್ತರಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಇಮಾಂ ತಥಾನ್ಯಾಂ ವಕ್ಷ್ಯಾಮಿ ದ್ವಿತೀಯಾಂ ಸರ್ವಕಾಮದಾಂ ।
ಯಾಮುಪೋಷ್ಯ ನರಃ ಕಾಮಾನ್ಸರ್ವಾನಾಪ್ನೋತ್ಯಭೀಪ್ಸಿತಾನ್ ॥ ೧ ॥

ಚೈತ್ರದ್ವಿತೀಯಾಂ ಸಂಪ್ರಾಪ್ಯ ಶುಕ್ಲಪಕ್ಷಸ್ಯ ಮಾನವಃ ।
ದಿನಾವಸಾನೇ ಕುರ್ವೀತ ಸಮ್ಯಕ್ ಸ್ನಾನಂ ನದೀಜಲೇ ॥ ೨ ॥

ಬಾಲೇಂದುಮಂಡಲಂ ಕೃತ್ವಾ ಪೂಜಯೇತ್ ಶ್ವೇತವರ್ಣಕೈಃ ।
ಶ್ವೇತೈಃ ಪುಷ್ಪೈಃ ಫಲೈಶ್ಚೈವ ಪರಮಾನ್ನೇನ ಭೂರಿಣಾ ॥ ೩ ॥

---

### ನೂರ ಮೂವತ್ತೊಂದನೆಯ ಅಧ್ಯಾಯ.

೧-೮. ಮಾರ್ಕಂಡೇಯ ಹೇಳುತ್ತಾರೆ :—ಅಂತಹ ದ್ವಿತೀಯಾ ದಿನವೇ ಮಾಡಬೇಕಾದ ಮತ್ತೊಂದು ವ್ರತವನ್ನೂ ಹೇಳುತ್ತೇನೆ. ಇದೂ ಬಹಳ ಮಟ್ಟಿಗೆ ಇಷ್ಟಾರ್ಥಪ್ರದವಾದುದು. ಇಂತಹ ದ್ವಿತೀಯಾ ವ್ರತವನ್ನು ಉಪವಾಸಪೂರ್ವಕ ವಾಗಿ ಮಾಡಿದವನು. ತನಗೆ ಇಷ್ಟವಾದ ಎಲ್ಲಾ ಫಲಗಳನ್ನೂ ಹೊಂದುತ್ತಾನೆ. ಚೈತ್ರಮಾಸದಲ್ಲಿ ಶುಕ್ಲಪಕ್ಷದ ದ್ವಿತೀಯಾ ದಿನದಲ್ಲಿ, ಸಾಯಂಕಾಲದಲ್ಲಿ ನದೀ ಜಲ ದಲ್ಲಿ ಚನ್ನಾಗಿ ಸ್ನಾನಮಾಡಬೇಕು. ಬಿಳಿಯ ಬಣ್ಣದಲ್ಲಿ ಬಾಲಚಂದ್ರ ಮಂಡಲ ವನ್ನು ನಿರ್ಮಿಸಿ ಬಿಳುಪಾದ ಹೂವುಗಳಿಂದಲೂ, ಹೆಚ್ಚಾದ ಪರಮಾನ್ನ, ಕಬ್ಬು, ಕಬ್ಬಿನರಸ, ಬೆಲ್ಲ ಅಥವಾ ಲವಣ ಇವುಗಳಿಂದ ಪೂಜಿಸಬೇಕು. ಸಾಯಂಸಮಯ

ಇಕ್ಷುನೇಕ್ಷುವಿಕಾರೈರ್ವಾ ಗುಡೇನ ಲವಣೇನ ವಾ ।
ದಿನಾವಸಾನೇ ದೇವೇಶಂ ಪೂಜಯಿತ್ವಾ ನಿಶಾಕರಂ ॥ ೪ ॥

ಘೃತೇನ ಹವನಂ ಕೃತ್ವಾ ನಕ್ತಂ ಭುಂಜೀತ ವಾಗ್ಯತಃ ।
ತತಃ ತೈಲೇನ ಹರಿತಂ ಭಕ್ಷಯೇತ್ಸಕೃದೇವ ಚ ॥ ೫ ॥

ಏತದ್ವ್ರತಂ ನರಃ ಕೃತ್ವಾ ಸಮ್ಯಕ್ ಸಂವತ್ಸರಂ ಶುಚಿಃ ।
ಸೌಭಾಗ್ಯಂ ಮಹದಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥ ೬ ॥

ಏತತ್ಪವಿತ್ರಂ ರಿಪುನಾಶಕಾರಿ
ಸೌಭಾಗ್ಯದಂ ರೋಗಹರಂ ಚ ರಾಜನ್ ।
ಪ್ರೋಕ್ತಂ ವ್ರತಂ ಯಾದವವಂಶಮುಖ್ಯ
ಕಾರ್ಯಂ ಪ್ರಯತ್ನೇನ ತಥಾ ಸ್ತ್ರೀಯಾಪಿ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಬಾಲೇಂದುದ್ವಿತೀಯಾ ವ್ರತವರ್ಣನೋ
ನಾಮ ಏಕತ್ರಿಂಶದುತ್ತರ ಶತತಮೋಽಧ್ಯಾಯಃ

---

ದಲ್ಲಿ ಪೂಜ್ಯನಾದ ಚಂದ್ರನನ್ನು ಪೂಜಿಸಿ, ಆಜ್ಯದಿಂದ ಹೋಮಮಾಡಿ ಮೌನದಿಂದಿದ್ದು ರಾತ್ರಿಯಲ್ಲಿ ಊಟಮಾಡಬೇಕು. ಊಟವನ್ನೂ ಸಹ ತೈಲದೊಡನೆ ನುಗ್ಗೆಸೊಪ್ಪನ್ನು ಒಂದೇ ಬಾರಿ ಭಕ್ಷಿಸಬೇಕು ಈ ವ್ರತವನ್ನು ಸಂವತ್ಸರ ಪರ್ಯಂತರವೂ ಶುಚಿಯಾಗಿದ್ದು ಮಾಡಿದಲ್ಲಿ ಹೆಚ್ಚಾದ ಸೌಭಾಗ್ಯ ಹೊಂದಿ ಸ್ವರ್ಗವನ್ನೂ ಸೇರುತ್ತಾನೆ. ಈ ವ್ರತವು ಪವಿತ್ರವೂ, ಶತ್ರುನಾಶಕವೂ, ಸೌಭಾಗ್ಯಪ್ರದವೂ, ರೋಗಹಾರಿಯೂ ಆಗಿರುತ್ತದೆ ಆದ್ದರಿಂದ ಇದನ್ನು ಪುರುಷನಾಗಲಿ, ಸ್ತ್ರೀಯಾಗಲಿ ಪ್ರಯತ್ನದಿಂದ ಆಚರಿಸಬೇಕು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಬಾಲೇಂದು ದ್ವಿತೀಯಾವ್ರತವರ್ಣನವೆಂಬ
ನೂರ ಮೂವತ್ತೊಂದನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ದ್ವಾತ್ರಿಂಶದುತ್ತರ ಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಅಶೂನ್ಯಶಯನಾಂ ರಾಜನ್ ದ್ವಿತೀಯಾಂ ಶೃಣ್ವತೋ ಮಮ |**
**ಯಾಮುಪೋಷ್ಯ ನ ವೈಧವ್ಯಂ ಪ್ರಯಾತಿ ಸ್ತ್ರೀ ಕಥಂಚನ || ೧ ||**

**ಪತ್ನೀವಿಯೋಗಂ ಚ ನರೋ ನಾಸಾದಯತಿ ಕರ್ಹಿಚಿತ್ |**
**ಕೃಷ್ಣಪಕ್ಷದ್ವಿತೀಯಾಯಾಂ ಗ್ರಾಹ್ಯಾ ಸಾ ಶ್ರವಣೇ ತಿಥಿಃ || ೨ ||**

**ಸ್ವಾಸ್ತೀರ್ಣೇ ಶಯನೇ ವಿಷ್ಣುಂ ಲಕ್ಷ್ಮೀಂ ದೇವೀಂ ತಥೈವ ಚ |**
**ಸಂಪೂಜಯೇತ್ಫಲೈಃ ಪುಷ್ಪೈಃ ಗಂಧೈರರ್ಘೈಶ್ಚ ಭಾರ್ಗವ || ೩ ||**

---

### ನೂರ ಮೂವತ್ತೆರಡನೆಯ ಅಧ್ಯಾಯ.

೧–೭. ಮಾರ್ಕಂಡೇಯರು ಹೇಳುತ್ತಾರೆ:—ಎಲೈ ದೊರೆಯೇ, ಅಶೂನ್ಯ ಶಯನ ದ್ವಿತೀಯಾ ವ್ರತವನ್ನು ನಾನು ಹೇಳುತ್ತೇನೆ. ಯಾವ ಈ ದ್ವಿತೀಯೆಯಲ್ಲಿ ಉಪವಾಸಮಾಡಿದಲ್ಲಿ ಸ್ತ್ರೀಯಾದವಳು ವೈಧವ್ಯವನ್ನೇ ಹೊಂದುವುದಿಲ್ಲ. ಪುರುಷನಾದವನು ಪತ್ನೀ ವಿಯೋಗವನ್ನೂ ಎಂದೆಂದಿಗೂ ಹೊಂದುವುದಿಲ್ಲ. ಕೃಷ್ಣಪಕ್ಷದ ದ್ವಿತೀಯೆಯಲ್ಲಿ ಶ್ರವಣನಕ್ಷತ್ರವಿರುವ ದಿನವನ್ನು ನಿರೀಕ್ಷಿಸಿ, ಆ ದಿನ ಚನ್ನಾಗಿ ಹಾಸಿದ ಹಾಸಿಗೆಯ ಮೇಲೆ ವಿಷ್ಣುವನ್ನೂ ಲಕ್ಷ್ಮೀದೇವಿಯನ್ನೂ ಫಲ ಪುಷ್ಪಗಂಧ ಅರ್ಘ್ಯ ನೈವೇದ್ಯಧೂಪದೀಪಾದಿಗಳಿಂದ ಶಕ್ತಿಗೆ ಅನುಸಾರವಾಗಿ ಪೂಜಿಸಬೇಕು. ಹೀಗೆ ಪೂಜೆಮಾಡಿ ಶುಚಿಯಾಗಿದ್ದು ಮುಂದೆ ಹೇಳುವ ಮಂತ್ರ

ನೈವೇದ್ಯಂ ಚ ತತೋ ದದ್ಯಾದ್ದೀಪಂ ಧೂಪಂ ಚ ಶಕ್ತಿತಃ ।
ತತಃ ಸಂಪೂಜ್ಯ ದೇವೇಶಂ ಜಪೇನ್ಮಂತ್ರಮಿದಂ ಶುಚಿಃ ॥ ೪ ॥

ಶ್ರೀವತ್ಸಧಾರಿನ್ ಶ್ರೀಕಾಂತ ಶ್ರೀವಾಸ ಶ್ರೀಪತೇಽಚ್ಯುತ ।
ಗಾರ್ಹಸ್ಥ್ಯಂ ಮಾ ಪ್ರಣಾಶಂ ಮೇ ಯಾತು ಧರ್ಮಾರ್ಥಕಾಮದಂ ॥ ೫ ॥

ಅಗ್ನಯೋ ಮಾ ಪ್ರಣಶ್ಯಂತು ಮಾ ಪ್ರಣಶ್ಯಂತು ದೇವತಾಃ ।
ಪಿತರೋ ಮಾ ಪ್ರಣಶ್ಯಂತು ಮತ್ತೋ ದಾಂಪತ್ಯಭೇದತಃ ॥ ೬ ॥

ಲಕ್ಷ್ಮ್ಯಾ ವಿಯುಜ್ಯತೇ ದೇವ ನ ಕದಾಚಿದ್ಯಥಾ ಭವಾನ್ ।
ತಥಾ ಕಲತ್ರಸಂಬಂಧೋ ದೇವ ಮಾ ಮೇ ವಿನಶ್ಯತು ॥ ೭ ॥

ಲಕ್ಷ್ಮ್ಯಾ ನ ಶೂನ್ಯಂ ವರದ ಯಥಾ ತೇ ಶಯನಂ ಸದಾ ।
ಶಯ್ಯಾ ಮಮಾಪ್ಯಶೂನ್ಯಾಸ್ತು ತಥೈವ ಮಧುಸೂದನ ॥ ೮ ॥

ಏವಂ ಪ್ರಸಾದ್ಯ ದೇವೇಶಂ ನಕ್ತಂ ಭುಂಜೀತ ವಾಗ್ಯತಃ ।
ಬ್ರಾಹ್ಮಣಾಯ ದ್ವಿತೀಯೇಽಹ್ನಿ ಪ್ರದದ್ಯಾಚ್ಚೈವ ದಕ್ಷಿಣಾಂ ॥ ೯ ॥

---

ದಿಂದ ಪ್ರಾರ್ಥಿಸಬೇಕು. ಎಲೈ ಶ್ರೀವತ್ಸಧಾರಿಯೇ, ಶ್ರೀಕಾಂತನೇ, ಶ್ರೀನಿವಾಸನೇ ಶ್ರೀಪತಿಯೇ, ಅಚ್ಯುತನೇ ಧರ್ಮಾರ್ಥಕಾಮಗಳೆಂಬ ಪುರುಷಾರ್ಥಗಳಿಗೆ ಸಾಧಕವಾದ ನನ್ನ ಗೃಹಸ್ಥಾಶ್ರಮವು ನಾಶಹೊಂದದಿರಲಿ. ನನ್ನ ಅಗ್ನಿಗಳು ನಷ್ಟಹೊಂದದಿರಲಿ. ದೇವತೆಗಳೂ ನಾಶಹೊಂದದಿರಲಿ. ನನ್ನ ದಾಂಪತ್ಯಭಂಗದಿಂದ ಪಿತೃಗಳೂ ನಾಶಹೊಂದದಿರಲಿ. ಎಲೈ ಪರಮಾತ್ಮನೇ ನೀನು ಹೇಗೆ ಲಕ್ಷ್ಮೀದೇವಿಯಿಂದ ಯಾವಾಗಲೂ ವಿಯೋಗವಿಲ್ಲದೆ ಇರುವೆಯೋ ಹಾಗೆಯೇ ನನಗೂ ಪತ್ನೀಸಂಬಂಧವು ನಾಶವಾಗದಿರಲಿ.

೮-೧೨. ಎಲೈ ವರಪ್ರದನೇ ನಿನ್ನ ಶಯನವು ಹೇಗೆ ಲಕ್ಷ್ಮಿಯಿಂದ ಶೂನ್ಯವಾಗುವುದೇ ಇಲ್ಲವೋ, ನನ್ನ ಶಯನವೂ ಸಹ ಹಾಗೆಯೇ ಅಶೂನ್ಯವಾಗಿರಲಿ. ಈ ರೀತಿ ಮಧುಸೂದನನಾದ ಪ್ರಭುವನ್ನು ಪ್ರಾರ್ಥಿಸಿ ಮೌನದಿಂದಿದ್ದು ರಾತ್ರಿಯಲ್ಲಿ ಭೋಜನ ಮಾಡಬೇಕು. ಮಾರನೆಯದಿನ ಬ್ರಾಹ್ಮಣನಿಗೆ ಯಥಾಶಕ್ತಿ ದಕ್ಷಿಣೆಯನ್ನೂ ಕೊಡಬೇಕು ನಾಲ್ಕುತಿಂಗಳು ಕಳೆದಮೇಲೆ ಆ ಶಯನವನ್ನೂ

ಶಯನಂ ಚ ದ್ವಿಜೇಂದ್ರಾಯ ಗತೇ ಮಾಸಚತುಷ್ಟಯೇ ।
ತಸ್ಯ ಜನ್ಮತ್ರಯಂ ರಾಜನ್ ಗೃಹಭಂಗೋ ನ ಜಾಯತೇ ॥ ೧೦ ॥

ಅಶೂನ್ಯಶಯನಶ್ಚಾಸೌ ಧರ್ಮಕಾಮಾರ್ಥಸಾಧಕಃ ।
ಭವತ್ಯವ್ಯಾಹತೈಶ್ವರ್ಯಃ ಪುರುಷೋ ನಾತ್ರ ಸಂಶಯಃ ॥ ೧೧ ॥

ವೈಧವ್ಯಹೀನಾ ಸುಭಗಾ ವಿರೋಗಾ
ಪತಿವ್ರತಾ ಧರ್ಮಪರಾ ಚ ಸಾಧ್ವೀ ।
ರೂಪೇಣ ಯುಕ್ತಾ ನ ಭಯಾನ್ವಿತಾ ಚ
ನಾರೀ ಭವೇತ್ಸರ್ವಗುಣೋಪಪನ್ನಾ ॥ ೧೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಅಶೂನ್ಯಶಯನದ್ವಿತೀಯಾವ್ರತಕಥನೋ
ನಾಮ ದ್ವಾತ್ರಿಂಶದುತ್ತರಶತತಮೋಽಧ್ಯಾಯಃ ।

---

ಬ್ರಾಹ್ಮಣರಿಗೆ ದಕ್ಷಿಣೆಯಾಗಿ ಕೊಡಬೇಕು. ಈ ವ್ರತವನ್ನು ಮಾಡಿದವನಿಗೆ ಮೂರು ಜನ್ಮದವರಿಗೂ ಗಾರ್ಹಸ್ಥ್ಯಕ್ಕೆ ಭಂಗಉಂಟಾಗುವುದಿಲ್ಲ. ಈ ಅಶೂನ್ಯ ಶಯನವ್ರತವು ಧರ್ಮಾರ್ಥಕಾಮಗಳಿಗೆ ಸಾಧಕವಾಗುತ್ತದೆ. ವ್ರತಮಾಡಿದವನೂ ನಿರ್ಬಾಧಕವಾದ ಐಶ್ವರ್ಯಶಾಲಿಯಾಗಿ ಆಗೇ ಆಗುತ್ತಾನೆ. ಸ್ತ್ರೀಯು ಈ ವ್ರತದಿಂದ ವೈಧವ್ಯವಿಲ್ಲದೆಯೂ, ಸೌಭಾಗ್ಯಶಾಲಿಯಾಗಿಯೂ, ರೋಗವಿಲ್ಲದೆಯೂ, ಪತಿವ್ರತೆಯಾಗಿಯೂ ಧಾರ್ಮಿಕಳಾಗಿಯೂ, ರೂಪವತಿಯಾಗಿಯೂ, ಭಯರಹಿತಳಾಗಿಯೂ ಸರ್ವಗುಣಗಳಿಂದ ಕೂಡಿಯೂ ಅಭ್ಯುದಯ ಹೊಂದುತ್ತಾಳೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಅಶೂನ್ಯಶಯನದ್ವಿತೀಯಾವ್ರತಕಥನವೆಂಬ
ನೂರ ಮೂವತ್ತೆರಡನೆಯ ಅಧ್ಯಾಯ ಮುಗಿದಿದೆ



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ತ್ರಯಸ್ತ್ರಿಂಶದುತ್ತರಶತತಮೋऽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಶುಕ್ಲಪಕ್ಷದ್ವಿತೀಯಾಯಾಂ ಸೋಪವಾಸೋ ಜಿತೇಂದ್ರಿಯಃ |**
**ಮಂಡಲತ್ರಿತಯಂ ಕುರ್ಯಾದ್ವರ್ಣಕೇನ ಪೃಥಕ್ ಪೃಥಕ್ || ೧ ||**

**ಮಂಡಲಂ ದಕ್ಷಿಣೇ ಭಾಗೇ ಶ್ವೇತಂ ಕುರ್ಯಾನ್ನರೋ ಭವೇತ್ |**
**ರಕ್ತಂ ಮಧ್ಯೇऽಪ್ಯಥಃ ಕುರ್ಯಾದುದಕ್‌ಶ್ವೇತಂ ಧ್ರುವಸ್ಯ ಚ || ೨ ||**

**ವಿಷ್ಣೋಃ ಪದತ್ರಯಂ ತೇಷು ಪೂಜ್ಯಂ ಸ್ಯಾನ್ಮಂಡಲೇಷು ಚ |**
**ಭೂಮೌ ಚ ಪ್ರಥಮಂ ಪಾದಂ ದ್ವಿತೀಯಂ ಸೂರ್ಯಮಂಡಲೇ || ೩ ||**

**ತೃತೀಯಂ ತು ಧ್ರುವೇ ದೇಶೇ ಪೂಜಯೇತ್ಪ್ರಯತಃ ಶುಚಿಃ |**
**ಯಥಾ ಮಂಡಲವರ್ಣಾಂಕೋ ಗಂಧಮಾಲ್ಯಾದಿಭಿಃ ದ್ವಿಜ || ೪ ||**

---

### ನೂರ ಮೂವತ್ತಮೂರನೆಯ ಅಧ್ಯಾಯ.

೧-೪. ಮಾರ್ಕಂಡೇಯರು ಹೇಳುತ್ತಾರೆ :—ಶುಕ್ಲಪಕ್ಷದ ದ್ವಿತೀಯಾ ತಿಥಿಯಲ್ಲಿ ಉಪವಾಸ ಜಿತೇಂದ್ರಿಯತೆಗಳಿಂದ ಕೂಡಿದ್ದು ಬೇರೆ ಬೇರೆಯಾಗಿ ಮೂರು ಮಂಡಲಗಳನ್ನು ಬಣ್ಣದಿಂದ ನಿರ್ಮಿಸಬೇಕು. ದಕ್ಷಿಣಭಾಗದ ಮಂಡಲವನ್ನು ಬಿಳುಪಾಗಿರುವಂತೆಯೂ, ಮಧ್ಯಭಾಗದ ಮಂಡಲವನ್ನು ಕೆಂಪಾಗಿರುವಂತೆಯೂ, ಉತ್ತರಭಾಗದ ಧ್ರುವಮಂಡಲವನ್ನು ಬಿಳುಪಾಗಿಯೂ ಇರುವಂತೆ ಮಾಡಬೇಕು.

ತದ್ವಿಷ್ಣೋಃ ಪರಮಿತ್ಯೇವ ಹೋಮಮಂತ್ರೋ ವಿಧೀಯತೇ ।
ತ್ರಿವಿಕ್ರಮಾಯೇತಿ ತಥಾ ಸ್ತ್ರೀಶೂದ್ರಸ್ಯ ದ್ವಿಜೋತ್ತಮ ॥ ೫ ॥

ಅಕ್ಷತಾನಿ ತಿಲಾನ್ಯಾಜ್ಯಂ ಹೋಮಯೇತ್ಸಂಯುತಂ ತ್ರಯಂ ।
ತಾಮ್ರರೌಪ್ಯಸುವರ್ಣಾನಿ ಶಕ್ತ್ಯಾ ದದ್ಯಾತ್ತು ದಕ್ಷಿಣಾಂ ॥ ೬ ॥

ಭೋಜನಂ ಚ ತ್ರಿಮಧುರಂ ಭೋಜಯೇದ್ಬ್ರಾಹ್ಮಣೋತ್ತಮಂ ।
ಪ್ರಾಣಯಾತ್ರಾಂ ಚ ಕುರ್ವೀತ ತ್ರಿಗವ್ಯೇನ ಚ ತದ್ದಿನಂ ॥ ೭ ॥

ಏವಂ ವರ್ಷತ್ರಯಂ ಕೃತ್ವಾ ವ್ರತಾನ್ತೇ ವೈ ತ್ರಿಹಾಯನಂ ।
ಬ್ರಾಹ್ಮಣಾಯ ತು ಗಾಂ ದತ್ವಾ ಸರ್ವಾನ್ ಕಾಮಾನವಾಪ್ನುಯಾತ್ ॥ ೮ ॥

ಭೂಮೌ ತಥಾಂತರಿಕ್ಷೇ ಚ ದಿವಿ ಚೈವ ನರೋತ್ತಮ ।
ಗತಿಸ್ತಸ್ಯಾಪ್ರತಿಹತಾ ಭವತ್ಯರಿನಿಷೂದನ ॥ ೯ ॥

---

ವಿಷ್ಣುವಿನ ಪಾದತ್ರಯಗಳನ್ನು ಆ ಮಂಡಲಗಳಲ್ಲಿ ಪೂಜಿಸಬೇಕು. ಮೊದಲನೆಯ ಪಾದವನ್ನು ದಕ್ಷಿಣಭಾಗದ ಭೂಮಂಡಲದಲ್ಲಿಯೂ ಎರಡನೆಯ ಪಾದವನ್ನು ಮಧ್ಯದ ಸೂರ್ಯಮಂಡಲದಲ್ಲಿಯೂ, ಮೂರನೆಯ ಪಾದವನ್ನು ಉತ್ತರಭಾಗದ ಧ್ರುವ ಮಂಡಲದಲ್ಲಿಯೂ, ಶುಚಿಯಾಗಿದ್ದು ಆ ಮಂಡಲಗಳ ಬಣ್ಣದಂತಿರುವ ಗಂಧ ಪುಷ್ಪಾದಿಗಳಿಂದ ಪೂಜಿಸಬೇಕು. ತದ್ವಿಷ್ಣೋಃ ಪರಮಂ ಎಂಬ ಮಂತ್ರದಿಂದ ಹೋಮಮಾಡಬೇಕು. ಸ್ತ್ರೀಶೂದ್ರಾದಿಗಳು ತ್ರಿವಿಕ್ರಮಾಯ ಎಂಬ ನಾಮ ಮಂತ್ರದಿಂದ ಹೋಮಮಾಡಬೇಕು.

೬–೯. ಅಕ್ಷತ, ತಿಲ, ಆಜ್ಯ ಇವುಗಳಿಂದ ಮೂರನ್ನೂ ಹೋಮಮಾಡಬೇಕು. ತಾಮ್ರ, ಬೆಳ್ಳಿ, ಸುವರ್ಣ ಇವುಗಳಿಂದ ಮಾಡಿದ ಮೂರು ಪಾತ್ರೆಗಳನ್ನು ಯಥಾಶಕ್ತಿ ದಾನಮಾಡಬೇಕು. ಮೂರು ಮಧುರಭಕ್ಷ್ಯಗಳಿಂದ ಕೂಡಿ ಬ್ರಾಹ್ಮಣನಿಗೆ ಭೋಜನಮಾಡಿಸಬೇಕು. ಹಾಲು, ಮೊಸರು, ತುಪ್ಪ ಈ ಮೂರು ಗವ್ಯಗಳಿಂದ ತಾನೂ ಪ್ರಾಣಧಾರಣ ಹೊಂದಬೇಕು. ಹೀಗೆ ಮೂರು ವರ್ಷಪರ್ಯಂತ ಮಾಡಿದ ವ್ರತ ಮುಗಿದನಂತರ ಮೂರು ವರ್ಷದ ಹಸುವನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ಇದರಿಂದ ಸಕಲ ಮನೋರಥಗಳೂ ಸಿದ್ಧಿಸುತ್ತವೆ. ಭೂಮಿಯಲ್ಲಿಯೂ, ಅಂತರಿಕ್ಷದಲ್ಲಿಯೂ, ದ್ಯುಲೋಕದಲ್ಲಿಯೂ ಅವನಿಗೆ ನಿರ್ಬಾಧವಾದ ಗತಿಯು ಲಭಿಸುತ್ತದೆ.

**ತ್ರೀಣಿ ವರ್ಷಸಹಸ್ರಾಣಿ ಸರ್ವವಿಚಾರಿಣಃ ।**
**ಮಾನಸಂ ವಾಚಿಕಂ ಚೈವ ಕಾಯಿಕಂ ಚ ವಿಮುಂಚತಿ ॥ ೧೦ ॥**

**ಸರ್ವಪಾಪಂ ಮಹಾಭಾಗ ಮನುಷ್ಯೋ ಜಾಯತೇ ತಥಾ ।**
**ಕುಲೇ ಧನಾಢ್ಯೋ ಭವತಿ ರೂಪದ್ರವಿಣಸಂಯುತೇ ॥ ೧೧ ॥**

**ನಿರೋಗಃ ಸರ್ವಸಿದ್ಧಾರ್ಥಸ್ತ್ರಿವರ್ಗಸ್ಯ ಚ ಸಾಧಕಃ ।**
**ಕೃತ್ವಾ ದ್ವಾದಶವರ್ಷಾಣಿ ವಿಷ್ಣುಲೋಕೇ ಮಹೀಯತೇ ॥ ೧೨ ॥**

**ತತ್ರಾಪಿ ನಿತ್ಯಂ ವರೇಣ್ಯಂ ವರೇಣ್ಯ**
**ಲಕ್ಷ್ಮೀಸಹಾಯಂ ಪುರುಷಂ ಪುರಾಣಂ ।**
**ಪಶ್ಯತ್ಯನೋಘಂ ವಿಭುಮಪ್ರತರ್ಕ್ಯಂ**
**ಸನಾತನಂ ದುಃಖವಿನಾಶಹೇತುಂ ॥ ೧೩ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ತ್ರಿವಿಕ್ರಮವ್ರತವರ್ಣನೋ ನಾಮ**
**ತ್ರಯಸ್ತ್ರಿಂಶದುತ್ತರಶತತಮೋಽಧ್ಯಾಯಃ**

---

೧೦–೧೩. ಮೂರುಸಹಸ್ರವರ್ಷಗಳಿಂದ ಹೊಂದಿದ್ದ ಎಲ್ಲಾ ದೇಹಗಳಲ್ಲಿಯೂ ಇವನಿಗೆ ಉಂಟಾಗಿದ್ದ ಮಾನಸ, ವಾಚಕ, ಕಾಯಿಕಗಳೆಂಬ ಮೂರು ವಿಧವಾದ ಎಲ್ಲಾ ಪಾಪರಾಶಿಯೂ ನಾಶಹೊಂದುತ್ತದೆ. ಅನಂತರ ರೂಪದ್ರವ್ಯಾದಿಗಳಿಂದ ಕೂಡಿರುವ ಒಳ್ಳೆಯ ವಂಶದಲ್ಲಿ ಧನಾಢ್ಯನಾಗಿಯೇ ಹುಟ್ಟುತ್ತಾನೆ. ಅರೋಗನಾಗಿಯೂ, ಸರ್ವಮನೋರಥಸಿದ್ಧಿಯಿಂದಲೂ ಕೂಡಿ ತ್ರಿವರ್ಗಕ್ಕೂ ಸಾಧಕನಾಗುತ್ತಾನೆ. ಹನ್ನೆರಡುವರ್ಷ ಪರ್ಯಂತ ಈ ವ್ರತವನ್ನಾಚರಿಸಿದವನು ವಿಷ್ಣುಲೋಕಕ್ಕೇ ಹೋಗುತ್ತಾನೆ. ಅಲ್ಲಿಯೂ ನಿತ್ಯವಾಗಿಯೂ, ವರಪ್ರದನಾಗಿಯೂ, ಲಕ್ಷ್ಮೀಸಹಾಯಕನಾಗಿಯೂ, ಸರ್ವದುಃಖನಾಶಕನಾಗಿಯೂ ಇರುವ ಪುರಾಣಪುರುಷನಾದ ಮಹಾವಿಷ್ಣುವನ್ನು ಸಂದರ್ಶಿಸುತ್ತಾ ಸಂತುಷ್ಟನಾಗುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದದಲ್ಲಿ ತ್ರಿವಿಕ್ರಮವ್ರತವರ್ಣನವೆಂಬ ನೂರಮೂವತ್ತಮೂರನೆಯ ಅಧ್ಯಾಯ ಮುಗಿದುದು.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಚತುಸ್ತ್ರಿಂಶದುತ್ತರಶತತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ದ್ವಿತೀಯಂ ತವ ವಕ್ಷ್ಯಾಮಿ ಶೃಣು ತ್ರೈವಿಕ್ರಮಂ ವ್ರತಂ |**
**ಭೂಮಿಸ್ತು ಪ್ರಥಮಃ ಪಾದೋ ಹ್ಯಂತರಿಕ್ಷಂ ತಥಾ ಪರಂ || ೧ ||**

**ತೃತೀಯಶ್ಚ ದಿವಂ ಜ್ಞೇಯೋ ದೇವದೇವಸ್ಯ ಚಕ್ರಿಣಃ |**
**ಭುವಃ ಪತಿಃ ಸ್ಮೃತೋ ವಹ್ನಿಃ ಅಂತರಿಕ್ಷಂ ತಥಾಪರಂ || ೨ ||**

**ದಿವಃ ಪತಿಸ್ತಥಾ ಸೂರ್ಯಸ್ತಚ್ಚ ವಿಷ್ಣೋಃ ಪದತ್ರಯಂ |**
**ಜ್ಯೇಷ್ಠಶುಕ್ಲತೃತೀಯಾಯಾಂ ಸೋಪವಾಸೋ ಜಿತೇಂದ್ರಿಯಃ || ೩ ||**

---

### ನೂರ ಮೂವತ್ತನಾಲ್ಕನೆಯ ಅಧ್ಯಾಯ.

೧–೪. ಮಾರ್ಕಂಡೇಯರು ಹೇಳುತ್ತಾರೆ:— ಎರಡನೆಯ ತ್ರೈವಿಕ್ರಮ ವ್ರತವನ್ನೂ ನಿನಗೆ ಹೇಳುತ್ತೇನೆ ಕೇಳು. ಭೂಮಿಯೇ ಮೊದಲನೆಯ ಪಾದ, ಅಂತರಿಕ್ಷವು ಎರಡನೆಯಪಾದ, ದ್ಯುಲೋಕವು ಮೂರನೆಯಪಾದ ಈ ರೀತಿ ದೇವಾಧಿಪನಾದ ಚಕ್ರಿಯ ಪಾದಗಳನ್ನು ಭಾವಿಸಿಕೊಳ್ಳಬೇಕು. ಭೂಮಿಗೆ ವಹ್ನಿಯೇ ಪತಿ. ಅಂತರಿಕ್ಷಕ್ಕೆ ಅಂತರಿಕ್ಷ. ದ್ಯುಲೋಕಕ್ಕೆ ಸೂರ್ಯ. ಈ ಪದತ್ರಯವು

**ಕಲ್ಯೇ ಕೂಪಜಲಸ್ನಾತೋ ವಹ್ನಿಂ ಸಂಪೂಜಯೇನ್ನರಃ ।**
**ಗಂಧಮಾಲ್ಯನಮಸ್ಕಾರ ಧೂಪದೀಪಾನ್ನಸಂಪದಾ ॥ ೪ ॥**

**ನದೀಜಲೇ ತತಃ ಸ್ನಾತ್ವಾ ಮಧ್ಯಂ ಪ್ರಾಪ್ತೇ ದಿವಾಕರೇ ।**
**ವಾಯೋಃ ಸಂಪೂಜನಂ ಕೃತ್ವಾ ಸಕ್ತೂನ್ ದದ್ಯಾದ್ದ್ವಿಜಾತಯೇ ॥ ೫ ॥**

**ಸ್ನಾತ್ವಾ ಚ ಸರಸೀತೋಯೇ ಸಾಯಂ ಸೂರ್ಯಂ ಸಮರ್ಚಯೇತ್ ।**
**ತತಶ್ಚ ನಕ್ತಂ ಚಾಶ್ನೀಯಾದ್ಧವಿಷ್ಯಂ ವಾಗ್ಯತಃ ಶುಚಿಃ ॥ ೬ ॥**

**ಏವಂ ಸಂವತ್ಸರೇ ರಾಜನ್ ಕೃತ್ವಾ ವ್ರತಮತಂದ್ರಿತಃ ।**
**ಸಮಾಪಯಿತ್ವಾ ವೈಶಾಖೇ ದದ್ಯಾದ್ವಿಪ್ರೇಷು ದಕ್ಷಿಣಾಂ ॥ ೭ ॥**

**ತಾಮ್ರಂ ರೂಪ್ಯಂ ಸುವರ್ಣಂ ಚ ತ್ರೀಣಿ ಲೋಹಾನಿ ಯಾದವ ।**
**ವಾಸೋಯುಗಂ ಚ ಸೋಷ್ಣೀಷಂ ತ್ರೀಣಿ ವಾಸಾಂಸಿ ಚಾಪ್ಯಥ ॥ ೮ ॥**

**ಉಪಾನಹೋ ಯುಗಂ ಛತ್ರಂ ತ್ರೀಣಿ ಚೇಮಾನಿ ಭಕ್ತಿತಃ ।**
**ಏತತ್ಸಂವತ್ಸರಂ ಕೃತ್ವಾ ನರಸ್ತ್ರೈವಿಕ್ರಮಂ ವ್ರತಂ ॥ ೯ ॥**

---

ವಿಷ್ಣುವಿನ ಸಂಬಂಧಿ ಎಂದು ಭಾವಿಸಬೇಕು. ಜ್ಯೇಷ್ಠ ಶುದ್ಧ ತೃತೀಯೆಯಲ್ಲಿ ಉಪವಾಸಜಿತೇಂದ್ರಿಯತೆಗಳಿಂದ ಕೂಡಿ ಪ್ರಾತಃಕಾಲದಲ್ಲಿ ಭಾವಿಯನೀರಿನಲ್ಲಿ ಸ್ನಾನಮಾಡಬೇಕು. ಅಗ್ನಿಯನ್ನೂ ಗಂಧಪುಷ್ಪಧೂಪದೀಪನೈವೇದ್ಯಾದಿಗಳಿಂದ ಪೂಜಿಸಬೇಕು.

೫-೧೧. ಅನಂತರ ನದೀಜಲದಲ್ಲಿ ಸ್ನಾನಮಾಡಿ ಮಧ್ಯಾಹ್ನಕ್ಕೆ ಸರಿಯಾಗಿ ವಾಯುವಿಗೆ ಪೂಜೆಮಾಡಿ ಬ್ರಾಹ್ಮಣರಿಗೆ ಹುರಿಟ್ಟನ್ನು ದಾನಮಾಡಬೇಕು. ಸಾಯಂಕಾಲ ಸರೋವರದಲ್ಲಿ ಸ್ನಾನಮಾಡಿ ಸೂರ್ಯನನ್ನು ಪೂಜಿಸಬೇಕು. ರಾತ್ರಿಯಲ್ಲಿ ಮೌನದಿಂದಲೂ, ಶುಚಿಯಿಂದಲೂ ಇದ್ದು ಹವಿಷ್ಯಭೋಜನ ಮಾಡಬೇಕು ಈ ರೀತಿ ಸಂವತ್ಸರಪರ್ಯಂತವೂ ಜಾಗರೂಕತೆಯಿಂದ ನಡೆಸಿ ವೈಶಾಖದಲ್ಲಿ ಮುಗಿಸಿ ಬ್ರಾಹ್ಮಣರಿಗೆ ತಾಮ್ರ, ಬೆಳ್ಳಿ, ಚಿನ್ನ, ಇವುಗಳಿಂದ ಮಾಡಿದ ಪಾತ್ರೆಗಳನ್ನೂ ದಾನಮಾಡಬೇಕು ರುಮಾಲು ಮತ್ತ ಎರಡುವಸ್ತ್ರಗಳು ಅಥವಾ ಮೂರುವಸ್ತ್ರಗಳು, ಪಾದುಕೆ, ಛತ್ರಿ, ಇವುಗಳನ್ನೂ ಭಕ್ತಿಯಿಂದ ದಾನಮಾಡಬೇಕು

ಸರ್ವಕಾಮಸಮೃದ್ಧಸ್ಯ ಯಜ್ಞಸ್ಯ ಫಲಮಶ್ನುತೇ ।
ವಿಮಾನೇನಾರ್ಕವರ್ಣೇನ ಕಿಂಕಿಣೀಜಾಲಮಾಲಿನಾ ॥ ೧೦ ॥

ದೇವರಾಜಗಣಾಢ್ಯೇನ ವೀಣಾಮುರಜನಾದಿನಾ ।
ಅನ್ನಮಾಯುಃ ಸುತಾಶ್ಚೈವ ಪ್ರಸನ್ನೇ ಗರುಡಧ್ವಜೇ ॥ ೧೧ ॥

ಆಕ್ರಾಂತಲೋಕತ್ರಿತಯಸ್ಯ ತಸ್ಯ
ಪದತ್ರಯಂ ಧರ್ಮಭೃತಾಂ ವರಿಷ್ಠ ।
ಸಂಪೂಜ್ಯ ಕಾಮಾನ್ ಮನುಜಾ ಲಭಂತೇ
ಗತಿಂ ಯಥೇಷ್ಟಾಂ ಪುರುಷಪ್ರವೀರ ॥ ೧೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ದ್ವಿತೀಯತ್ರೈವಿಕ್ರಮವ್ರತಕಥನೋ ನಾಮ
ಚತುಸ್ತ್ರಿಂಶದುತ್ತರಶತತಮೋಽಧ್ಯಾಯಃ

---

ಈ ತ್ರೈವಿಕ್ರಮವ್ರತವನ್ನು ಸಂವತ್ಸರಪರ್ಯಂತವೂ ಮಾಡಿದವನು ಸರ್ವಫಲ ಸಮೃದ್ಧವಾದ ಯಜ್ಞದ ಫಲವನ್ನೇ ಹೊಂದುತ್ತಾನೆ. ಗರುಡಧ್ವಜನ ಅನುಗ್ರಹಕ್ಕೆ ಸಾಧಕವಾದ ಈ ವ್ರತದಿಂದ ಅನ್ನ, ಆಯುಸ್ಸು ಪುತ್ರರೇ ಮೊದಲಾದ ಐಹಿಕಫಲಗಳೂ ಸೂರ್ಯನಂತೆ ಹೊಳೆಯುವ ಸಣ್ಣಗಂಟೆಗಳಿಂದ ಶೋಭಿತವಾದ ವಿಮಾನಲಾಭವೂ, ಇಂದ್ರನ ಪರಿವಾರ ಮತ್ತು ವಾದ್ಯಗಳೊಡನೆ ಪರಲೋಕಪ್ರಾಪ್ತಿಯೂ ಉಂಟಾಗುತ್ತದೆ. ಲೋಕತ್ರಯವನ್ನೂ ಆಕ್ರಮಿಸಿದ ತ್ರಿವಿಕ್ರಮನ ಪದತ್ರಯವನ್ನು ಈ ರೀತಿ ಪೂಜಿಸಿದವನು ಎಲ್ಲಾ ಮನೋರಥಗಳನ್ನೂ ತನಗೆ ಇಷ್ಟವಾದ ಗತಿಯನ್ನೂ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ದ್ವಿತೀಯತ್ರೈವಿಕ್ರಮವ್ರತವರ್ಣನವೆಂಬ
ನೂರ ಮೂವತ್ತನಾಲ್ಕನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಪಂಚತ್ರಿಂಶದುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ವ್ಯಾಖ್ಯಾತಂ ತೇ ಮಹಾಭಾಗ ತವ ತ್ರೈವಿಕ್ರಮಂ ವ್ರತಂ ।**
**ತೃತೀಯಂ ನೃಪಶಾರ್ದೂಲ ತನ್ಮೇ ನಿಗದತಃ ಶೃಣು ॥ ೧ ॥**

**ಜ್ಯೇಷ್ಠ ಶುಕ್ಲ ತೃತೀಯಾಯಾಂ ನರಃ ಸಮ್ಯಗುಪೋಷಿತಃ ।**
**ಭುವಸ್ಸಂಪೂಜನಂ ಕುರ್ಯಾದ್ಧೂಪಮಾಲ್ಯಾನುಲೇಪನೈಃ ॥ ೨ ॥**

**ದೀಪೈರನ್ನೈಶ್ಚ ವಿವಿಧೈರ್ದದ್ಯಾದ್ವಿಪ್ರೇಷು ದಕ್ಷಿಣಾಂ ।**
**ಬೀಜಪೂರ್ಣಾನಿಪಾತ್ರಾಣಿ ಸಹಿರಣ್ಯಾನಿ ಶಕ್ತಿತಃ ॥ ೩ ॥**

---

### ನೂರ ಮೂವತ್ತೈದನೆಯ ಅಧ್ಯಾಯ.

೧-೬. ಮಾರ್ಕಂಡೇಯರು ಹೇಳುತ್ತಾರೆ. ಇದುವರೆಗೂ ಕೆಲವು ತ್ರೈವಿಕ್ರಮವ್ರತವನ್ನು ನಿನಗೆ ಹೇಳಿದ್ದೇನೆ. ಮೂರನೆಯ ತ್ರೈವಿಕ್ರಮವ್ರತವನ್ನೂ ನಿನಗೆ ಹೇಳುತ್ತೇನೆ, ಕೇಳು. ಜ್ಯೇಷ್ಠ ಶುಕ್ಲತೃತೀಯೆಯಲ್ಲಿ ಉಪವಾಸಮಾಡಿ ಧೂಪ ದೀಪ ಪುಷ್ಪ ಇವುಗಳಿಂದಲೂ ನಾನಾವಿಧವಾದ ಅನ್ನಗಳಿಂದಲೂ ಭೂಮಿಯನ್ನು ಪೂಜಿಸಿ ಬ್ರಾಹ್ಮಣರಿಗೆ ದಕ್ಷಿಣೆಯನ್ನೂ ಕೊಡಬೇಕು. ಈ ದಕ್ಷಿಣೆಯೂ ಸಹ ಬೀಜಗಳಿಂದ ಪೂರ್ಣವಾದ ಪಾತ್ರೆಗಳೊಡನೆಯೂ ಯಥಾಶಕ್ತಿ ಹಿರಣ್ಯದೊಡನೆಯೂ ಕೂಡಿರಬೇಕು. ಹೀಗೆಯೇ ಆಷಾಢಮಾಸದಲ್ಲಿ ಅಂತರಿಕ್ಷದ ಪೂಜೆಯನ್ನೂ ಮಾಡಿ

ಪ್ರಾಜ್ಯೈವಮಂತರಿಕ್ಷಸ್ಯ ಹ್ಯಾಷಾಢೇತಿ ವಿಧೀಯತೇ ।
ದಕ್ಷಿಣಾ ತತ್ರ ದಾತವ್ಯಾ ವಾಸೋಯುಗ್ಮಂ ದ್ವಿಜಾತಯೇ　　॥ ४ ॥

ದಿವಃಪೂಜಾ ಚ ಕರ್ತವ್ಯಾ ಶ್ರಾವಣೇ ಪ್ರಾಗ್ವದೇವ ತು ।
ಛತ್ರಂ ಚೋಪಾನಹೋಯುಗ್ಮಂ ದಕ್ಷಿಣಂ ತತ್ರ ದಾಪಯೇತ್　　॥ ೫ ॥

ಏವಂ ಮಾಸತ್ರಯೇಣೇಹ ಪಾರಣಂ ಪ್ರಥಮಂ ಭವೇತ್ ।
ಮಾಸತ್ರಯೇಣ ಚಾನ್ಯತ್ತು ಮಾಸತ್ರಯ್ಯಾಂ ಪುನಸ್ತತಃ　　॥ ೬ ॥

ತತೋ ಮಾಸತ್ರಯೇಣಾನ್ಯಮೇವಮಬ್ದೇನ ಚಾನಘ ।
ವಿಜ್ಞೇಯಂ ಧರ್ಮನಿತ್ಯಸ್ಯ ಪಾರಣಾನಾಂ ಚತುಷ್ಟಯಂ　　॥ ೭ ॥

ಪ್ರಥಮಂ ಪಾರಣಂ ಕೃತ್ವಾ ಅಗ್ನಿಷ್ಟೋಮಫಲಂ ಲಭೇತ್ ।
ಅತಿರಾತ್ರಫಲಂ ರಾಜನ್ ದ್ವಿತೀಯೇ ಪಾರಣೇ ತಥಾ　　॥ ೮ ॥

ತೃತೀಯೇ ಪಾರಣೇ ವಿದ್ವಾನ್ವಾಜಪೇಯಫಲಂ ಲಭೇತ್ ।
ಚತುರ್ಥೇ ಪಾರಣೇ ಪ್ರೋಕ್ತಂ ರಾಜಸೂಯಸ್ಯ ಯತ್ಫಲಂ　　॥ ೯ ॥

---

ಬ್ರಾಹ್ಮಣನಿಗೆ ವಸ್ತ್ರಯುಗ್ಮವನ್ನು ದಕ್ಷಿಣೆಯೊಡನೆ ಕೊಡಬೇಕು. ಹೀಗೆಯೇ ಶ್ರಾವಣಮಾಸದಲ್ಲಿ ದ್ಯುಲೋಕವನ್ನೂ ಪೂಜಿಸಬೇಕು ಛತ್ರಿ ಪಾದುಕಾಯುಗ್ಮ ಇವನ್ನು ದಕ್ಷಿಣೆಯಾಗಿ ಬ್ರಾಹ್ಮಣನಿಗೆ ಕೊಡಬೇಕು. ಹೀಗೆ ಮೊದಲಿನ ಮೂರು ತಿಂಗಳಲ್ಲಿ ಮೊದಲನೆಯ ಪಾರಣೆ ಹೀಗೆಯೇ ಮುಂದಿನ ಮೂರುತಿಂಗಳು ಮತ್ತು ಅನಂತರವೂ ಮೂರುತಿಂಗಳು ನಡೆಯಬೇಕು.

೭–೧೩. ಅನಂತರ ಮಾಸತ್ರಯಕ್ಕೆ ಮತ್ತೊಂದು ಪಾರಣೆ ಈ ರೀತಿ ವರ್ಷ ಪೂರ್ತಿ ನಡೆಯಬೇಕು. ಧರ್ಮಾಸಕ್ತಿಯುಳ್ಳವನಿಗೆ ಈ ರೀತಿ ನಾಲ್ಕು ಪಾರಣೆಗಳೂ ನಡೆಯಬೇಕೆಂದು ತಿಳಿದಿರಬೇಕು. ಮೊದಲನೆಯ ಪಾರಣವನ್ನು ಮಾಡಿದವನು ಅಗ್ನಿಷ್ಟೋಮದ ಫಲವನ್ನು ಹೊಂದುತ್ತಾನೆ. ಎರಡನೆಯ ಪಾರಣಕ್ಕೆ ಅತಿರಾತ್ರದ ಫಲವೂ, ಮೂರನೆಯ ಪಾರಣೆಗೆ ವಾಜಪೇಯಯಾಗದ ಫಲವೂ, ನಾಲ್ಕನೆಯ ಪಾರಣೆಗೆ ರಾಜಸೂಯಯಾಗದ ಫಲವೂ, ಲಭಿಸುತ್ತದೆ. ಈ ವ್ರತವನ್ನು ಆಚರಿಸಿ ದವನು ಸೂರ್ಯನಂತೆ ಜ್ವಲಿಸುತ್ತಿರುವ ಸಣ್ಣಸಣ್ಣ ಘಂಟೆಗಳಿಂದ ಶೋಭಿಸುವ,

ವಿಮಾನೇನಾರ್ಕವರ್ಣೇನ ಕಿಂಕಿಣೀಜಾಲಮಾಲಿನಾ ।
ಹಂಸಯುಕ್ತೇನ ದಿವ್ಯೇನ ವೀಣಾಮುರಜನಾದಿನಾ ॥ ೧೦ ॥

ವರಾಪ್ಸರೋಗಣಾಢ್ಯೇನ ಕಾಮುಕೇನಾಪಿ ಚಾರುಣಾ ।
ಯಥೇಷ್ಟಗಾಮೀ ಭವತಿ ಬಹುಕಾಲಮಸಂಶಯಂ ॥ ೧೧ ॥

ಮಾನುಷ್ಯೇ ಜನ್ಮಚಾಸಾದ್ಯ ತ್ರಿಶುಕ್ಲತ್ವಮವಾಪ್ನುಯಾತ್ ।
ವಿದ್ಯಾ ಜನ್ಮ ತಥಾ ಕರ್ಮ ನಾತ್ರಕಾರ್ಯಾ ವಿಚಾರಣಾ ॥ ೧೨ ॥

ತ್ರಿವಿಕ್ರಮಸ್ಯಾಪ್ರತಿಮಸ್ಯ ತಸ್ಯ
ಚಾರಾಚರೇಶಸ್ಯ ಪದತ್ರಯಂ ಚ ।
ಯಃ ಪೂಜಯೇತ್ತಸ್ಯ ಭವಂತಿ ಕಾಮಾಃ
ಸರ್ವೇ ಸಮೃದ್ಧಾ ನ ಹಿ ಸಂಶಯೋಽತ್ರ ॥ ೧೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ತೃತೀಯತ್ರೈವಿಕ್ರಮವ್ರತವರ್ಣನೋ ನಾಮ
ಪಂಚತ್ರಿಂಶದುತ್ತರ ಶತತಮೋಽಧ್ಯಾಯಃ

---

ಹಂಸವಾಹನವುಳ್ಳ ವೀಣಾದಿವಾದ್ಯದಿಂದ ಕೂಡಿದ ದಿವ್ಯವಿಮಾನದಲ್ಲಿ ಅಪ್ಸರೋಗಣದಿಂದ ಕೂಡಿ ಕಾಮುಕನಾದರೂ ಚಾರುರೂಪದಿಂದ ಕೂಡಿ ಬಹುಕಾಲದವರೆಗೂ ಯಥೇಷ್ಟವಿಹಾರಶೀಲನಾಗುತ್ತಾನೆ. ಮನುಷ್ಯ ಜನ್ಮವನ್ನು ಹೊಂದಿದರೂ ವಿದ್ಯಾ, ಜನ್ಮ, ಕರ್ಮ ಈ ಮೂರರಲ್ಲಿಯೂ ಅತಿಶುದ್ಧನಾಗಿ ಜನಿಸುತ್ತಾನೆ. ಇದರಲ್ಲಿ ಸಂದೇಹವಿಲ್ಲ ಚರಾಚರೇಶ್ವರನಾಗಿಯೂ, ಅಸದೃಶನಾಗಿಯೂ ಇರುವ ತ್ರಿವಿಕ್ರಮನ ಪದತ್ರಯವನ್ನು ಈ ರೀತಿ ಯಾವನು ಪೂಜಿಸುತ್ತಾನೆಯೋ ಅವನಿಗೆ ಎಲ್ಲಾ ಮನೋರಥಗಳೂ ಸುಖವಾಗಿ ಸಿದ್ಧಿಸುತ್ತವೆ. ಇದರಲ್ಲಿ ಸಂದೇಹವಿಲ್ಲ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ತೃತೀಯತ್ರೈವಿಕ್ರಮವ್ರತವರ್ಣನವೆಂಬ
ನೂರ ಮೂವತ್ತೈದನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಷಟ್‌ತ್ರಿಂಶದುತ್ತರ ಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

ಆರಾಧನಂ ಹಿ ದೇವಸ್ಯ ತಸ್ಯ ವಕ್ಷ್ಯಾಮಿ ಯಾದವ ।
ವಿಷ್ಣೋರಮಿತವೀರ್ಯಸ್ಯ ತನ್ನಿಬೋಧ ನರಾಧಿಪ || ೧ ||

ವಾಯ್ವರ್ಕಚಂದ್ರದೇಹಸ್ತು ತ್ರಿಮೂರ್ತಿರ್ಭಗವಾನ್‌ಹರಿಃ ।
ಅಗ್ನಿಷೋಮೋ ಜಗತ್ಯಸ್ಮಿಂಶ್ಚಂದ್ರಾರ್ಕೌ ಪರಿಕೀರ್ತಿತಾ || ೨ ||

ಸರ್ವಾಧಾರಶ್ಚ ಭಗವಾನ್ವಾಯುಃ ಸರ್ವಗತಸ್ತಥಾ ।
ಪಂಚಭೂತಾತ್ಮಕಂ ಸರ್ವಂ ಜಗದೇತಚ್ಚರಾಚರಂ || ೩ ||

---

### ನೂರ ಮೂವತ್ತಾರನೆಯ ಅಧ್ಯಾಯ.

೧-೫. ಮಾರ್ಕಂಡೇಯರು ಹೇಳುತ್ತಾರೆ :—ಅಪರಿಮಿತ ಮಹಿಮನಾದ ವಿಷ್ಣುವಿನ ಆರಾಧನ ಪ್ರಕಾರವನ್ನು ಹೇಳುತ್ತೇನೆ. ಇದನ್ನೂ ತಿಳಿದುಕೋ, ಪೂಜ್ಯನಾದ ಹರಿಯು ವಾಯು, ಸೂರ್ಯ, ಚಂದ್ರ ಈ ಮೂರು ದೇವತೆಗಳನ್ನೂ ಶರೀರವಾಗಿ ಹೊಂದಿ ತಾನು ತ್ರಿಮೂರ್ತಿಯಾಗಿ ಶರೀರಿಯಾಗಿರುತ್ತಾನೆ. ಇವರಲ್ಲಿ ಚಂದ್ರಸೂರ್ಯರು ಅಗ್ನಿಷೋಮರೂಪರೆಂದೂ ಪ್ರಸಿದ್ಧಿ ಇದೆ. ವಾಯುವು ಸರ್ವಾಧಾರನಾಗಿಯೂ, ಸರ್ವಗತನಾಗಿಯೂ ಇರುತ್ತಾನೆ. ಈ ಎಲ್ಲಾ ಚರಾಚರ

ಆಧಾರಭೂತೌ ದ್ವಾವೇತೌ ಪೃಥಿವೀ ಗಗನಂ ತಥಾ ।
ಆಧೇಯೋ ವಿದ್ಧಿ ಧರ್ಮಜ್ಞ ತಥಾ ಭೂತತ್ರಯಂ ಸದಾ ॥ ೪ ॥

ಚಂದ್ರಾದಿತ್ಯೌ ಚ ವಾಯುಶ್ಚ ಸರ್ವಸ್ಯ ಜಗತೋ ದ್ವಿಜ ।
ಆಧಾರಾಧೇಯಭಾವೇನ ಭೂತೈರ್ವ್ಯಾಪ್ತಮಿದಂ ಜಗತ್ ॥ ೫ ॥

ನೈವ ಚಾಸ್ತಿ ಜಗತ್ಯಸ್ಮಿನ್ ಕಿಂಚಿದ್ಭೂತವಿವರ್ಜಿತಂ ।
ತಸ್ಮಾದ್ದ್ವಾ ಯಾದವಶ್ರೇಷ್ಠ ಭೂತೈರ್ವ್ಯಾಪ್ತಮಿದಂ ಜಗತ್ ॥ ೬ ॥

ಬ್ರಹ್ಮಾಣಂ ವಿದ್ಧಿ ಭೂಮಿಂ ಚ ಗಗನಂ ತದನಂತರಂ ।
ಅಂಡಸ್ಯಾಂತಃಸ್ಥಿತಾ ದೇವಾ ವಾಯ್ವರ್ಕತುಹಿನಾಂಶವಃ ॥ ೭ ॥

ಪಾಲಯಂತಿ ಜಗತ್ಸರ್ವಂ ಸದೇವಾಸುರಮಾನುಷಂ ।
ತಥೈವಾಂಡಸ್ಥಿತಾಃ ಸರ್ವೇ ಪಾಲಯಂತಿ ಜಗತ್ತ್ರಯಂ ॥ ೮ ॥

ತಥೈವ ದೇಹಿನಾಂ ದೇಹೇ ಪಾಲಯಂತಿ ಶರೀರಗಾಃ ।
ವಾತಪಿತ್ತಕಫತ್ವೇನ ವಾಯ್ವರ್ಕಶಿಶಿರಾಂಶವಃ ॥ ೯ ॥

---

ಪ್ರಪಂಚವು ಪಂಚಭೂತಾತ್ಮಕವಾಗಿದೆಯಷ್ಟೆ. ಇವುಗಳಲ್ಲಿ ಭೂಮಿ, ಗಗನ ಇವು ಆಧಾರಭೂತವಾಗಿವೆ. ಉಳಿದ ಭೂತತ್ರಯಗಳು ಆಧೇಯವಾಗಿದೆ. ಆ ಭೂತಗಳೇ ಚಂದ್ರ, ಸೂರ್ಯ, ವಾಯುಗಳು, ಜಗತ್ತೆಲ್ಲವೂ ಭೂತಗಳಿಂದ ಆಧಾರಾಧೇಯ ಭಾವದಿಂದ ಆವರಿಸಲ್ಪಟ್ಟಿದೆ.

೬–೯. ಸ್ವಲ್ಪವಾಗಿಯಾಗಲಿ, ಹೆಚ್ಚಾಗಿಯಾಗಲಿ ಭೂತಗಳಿಂದ ಸಂಬಂಧ ಹೊಂದದಿರುವ ವಸ್ತುವಾವುದೂ ಜಗತ್ತಿನಲ್ಲಿಲ್ಲ. ಆದುದರಿಂದಲೇ ಜಗತ್ತೆಲ್ಲವೂ ಭೂತಗಳಿಂದ ಆವೃತವೆಂದೇ ನಿರ್ಣಯ. ಭೂಮಿಯೇ ಬ್ರಹ್ಮನೆಂದು ತಿಳಿ. ಮೇಲಿನ ಭಾಗವೇ ಗಗನ, ಈ ಅಂಡದ ಮಧ್ಯದಲ್ಲಿ ವಾಯು, ಸೂರ್ಯ, ಚಂದ್ರ ಇವರಿರುವರು. ಇವರೇ ದೇವಾಸುರ ಮನುಷ್ಯರಿಂದ ಕೂಡಿದ ಜಗತ್ತನ್ನು ನಾನಾ ರೂಪದಿಂದಿದ್ದು ರಕ್ಷಿಸುವರು. ಅಂಡದ ಒಳಗೂ ಇದ್ದು ಇವರೇ ರಕ್ಷಿಸುತ್ತಾರೆ. ಪ್ರಾಣಿಗಳ ದೇಹದಲ್ಲಿದ್ದೂ ರಕ್ಷಿಸುತ್ತಾರೆ. ವಾತಪಿತ್ತ ಕಫರೂಪದಿಂದ ಈ ವಾಯು. ಸೂರ್ಯ, ಚಂದ್ರರೇ ದೇಹವನ್ನೂ ಆಶ್ರಯಿಸಿಕೊಂಡು ರಕ್ಷಿಸುತ್ತಾರೆ.

ಆಧಾರಂ ಜಗತೋ ಯದ್ವದ್ಬ್ರಹ್ಮಾಂಡಂ ಪರಿಕೀರ್ತಿತಂ ।
ತಥಾ ದೇಹೇ ಶರೀರಸ್ಥಾ ದೇಹಿನಾಂ ಹಿ ತ್ವಗುಚ್ಯತೇ ॥ ೧೦ ॥

ಬ್ರಹ್ಮಾಂಡೇ ದೇಹಿದೇಹೇಪಿ ಗಗನಂ ದೃಶ್ಯತೇ ದ್ವಯೋಃ ।
ಬ್ರಹ್ಮಾಂಡವಚ್ಛರೀರಾಣಿ ವಾಯ್ವರ್ಕಶಿಶಿರಾಂಶವಃ ॥ ೧೧ ॥

ಪಾಲಯಂತಿ ಮಹೀಪಾಲ ವಾತಪಿತ್ತಕಫಾಂಶಕಾಃ ।
ವಾಯ್ವರ್ಕಚಂದ್ರದೇಹಸ್ತು ತಸ್ಮಾದ್ವಿಷ್ಣುಃ ತ್ರಿಮೂರ್ತಿಧೃಕ್ ॥ ೧೨ ॥

ತಸ್ಯ ಸಂಪೂಜನಂ ಕಾರ್ಯಂ ಯಥಾವಚ್ಛೃಣು ಭಾರ್ಗವ ।
ಜ್ಯೇಷ್ಠಶುಕ್ಲತೃತೀಯಾಯಾಂ[1] ನಿರಾಹಾರೋ ನರಃ ಶುಚಿಃ ॥ ೧೩ ॥

ತ್ರಿಮೂರ್ತಿಪೂಜನಂ ಕುರ್ಯಾದ್ದ್ವಿತೀಯಾಯಾಂ[2] ಯಥಾವಿಧಿ ।
ಕೂಪನಾದೇಯತಾಡಾಕಮಿಶ್ರೈಃ ಸ್ನಾತಃ ಶುಚಿರ್ಜಲೈಃ ॥ ೧೪ ॥

---

೧೦-೧೩. ಜಗತ್ತಿಗೆ ಬ್ರಹ್ಮಾಂಡವು ಆಧಾರವಾಗಿರುವಂತೆ ಪ್ರಾಣಿಗಳಿಗೆ ದೇಹದಲ್ಲಿರುವ ಚರ್ಮವೇ ಬ್ರಹ್ಮಾಂಡದಂತೆ ಆಧಾರವಾಗಿರುತ್ತದೆ. ಬ್ರಹ್ಮಾಂಡದಲ್ಲಿಯೂ, ಪ್ರಾಣಿಗಳ ದೇಹದಲ್ಲಿಯೂ ಎರಡು ಕಡೆಗಳಲ್ಲಿಯೂ ಗಗನವು ಇದ್ದೇ ಇದೆ ಆದುದರಿಂದ ಬ್ರಹ್ಮಾಂಡದಂತೆ ಪ್ರಾಣಿಗಳ ಶರೀರಗಳೂ, ವಾಯು, ಸೂರ್ಯ, ಚಂದ್ರರೂಪಗಳೇ ಆಗಿವೆ. ಇವರೂ ಸಹ ವಾತ, ಪಿತ್ತ, ಕಫರೂಪದಲ್ಲಿ, ಶರೀರದಲ್ಲಿದ್ದು ರಕ್ಷಿಸುತ್ತಾರೆ. ಆದುದರಿಂದ ವಾಯು, ಸೂರ್ಯ, ಚಂದ್ರರೆಂಬ ದೇಹ ಹೊಂದಿರುವುದರಿಂದ ವಿಷ್ಣುವು ತ್ರಿಮೂರ್ತಿಧೃತ್ ಎಂದು ಹೇಳಲಾಗಿದೆ. ಆ ತ್ರಿಮೂರ್ತಿಯ ಪೂಜೆಯನ್ನು ಮಾಡಬೇಕು ಅದನ್ನು ಯಥಾವಿಧಿ ಹೇಳುತ್ತೇನೆ, ಕೇಳು:—ಜ್ಯೇಷ್ಠ ಶುದ್ಧ ದ್ವಿತೀಯಾ ತಿಥಿಯಲ್ಲಿ ಉಪವಾಸಮಾಡಿ ಶುಚಿಯಾಗಿದ್ದು, ಆ ತೃತೀಯಾ ದಿನದಲ್ಲಿ ತ್ರಿಮೂರ್ತಿ ಪೂಜೆಯನ್ನು ಯಥಾವಿಧಿಯಾಗಿ ಮಾಡಬೇಕು.

೧೪-೧೯. ಭಾವಿ, ನದಿ, ತಟಾಕ ಇವುಗಳ ನೀರನ್ನು ಮಿಶ್ರಮಾಡಿ ಶುಚಿಯಾದ ಆ ತೀರ್ಥದಿಂದ ಸ್ನಾನಮಾಡಿ, ಪ್ರತ್ಯೂಷಕಾಲದಲ್ಲಿ ಅನುಲೇಪನ (ಸಾರಿಸುವುದು) ದಿಂದ ಶುಭವಾದ ಸ್ಥಳದಲ್ಲಿ ವಾಯುವನ್ನು ಗಂಧಪುಷ್ಪ ನಮಸ್ಕಾರ ಧೂಪ

1 ಇಲ್ಲಿ ದ್ವಿತೀಯಾಯಾಂ ಎಂದೂ, 2. ಇಲ್ಲಿ ತೃತೀಯಾಯಾಂ ಎಂದೂ ಪಾಠವಿರಬೇಕು. ಇಲ್ಲದಿದ್ದಲ್ಲಿ ಅರ್ಥವು ಅಸಂಗತವಾಗುತ್ತದೆ.

ಪ್ರತ್ಯೂಷೇ ಪೂಜಯೇದ್ವಾಯುಮನುಲಿಪ್ತೇ ಶುಭೇ ಸ್ಥಲೇ ।
ಗಂಧಮಾಲ್ಯನಮಸ್ಕಾರಧೂಪದೀಪಾನ್ನಸಂಪದಾ ॥ ೧೫ ॥

ಹೋಮಂ ಕುರ್ಯಾದ್ಯವೈರ್ಮುಖ್ಯೈಃ ವಸ್ತ್ರಂ ದದ್ಯಾದ್ದ್ವಿಜಾತಯೇ ।
ಮಧ್ಯಾಹ್ನೇ ಪೂಜಯೇದ್ವಹ್ನೌ ತಥಾ ಸೂರ್ಯಮತಂದ್ರಿತಃ ॥ ೧೬ ॥

ತಿಲಾಂಶ್ಚ ಜುಹುಯಾದ್ವಹ್ನೌ ದದ್ಯಾದ್ವಿಪ್ರೇಷು ದಕ್ಷಿಣಾಂ ।
ಸೂರ್ಯಾಸ್ತಮಯವೇಲಾಯಾಂ ಜಲೇ ಚಂದ್ರಂ ಚ ಪೂಜಯೇತ್ ॥ ೧೭ ॥

ಘೃತೇನ ಹೋಮಂ ಕುರ್ವೀತ ರಜತಂ ದಕ್ಷಿಣಾ ಸ್ಮೃತಾ ।
ನಕ್ತಂ ಭುಂಜೀತ ಧರ್ಮಜ್ಞ ತೈಲಹೀನಂ ತತೋ ನರಃ ॥ ೧೮ ॥

ಪೂರ್ಣಂ ಸಂವತ್ಸರಂ ಕೃತ್ವಾ ವ್ರತಮೇತದತಂದ್ರಿತಃ ।
ಸ್ವರ್ಗಲೋಕಮವಾಪ್ನೋತಿ ಸಹಸ್ರಪರಿವತ್ಸರಾನ್ ॥ ೧೯ ॥

ಮಾನುಷ್ಯಮಾಸಾದ್ಯ ತತೋ ರಾಜಾ ಭವತಿ ಗಹ್ವರೇ ।
ವ್ರತಂ ಕೃತ್ವಾ ಮಹಾರಾಜ ಪೂರ್ಣಂ ಸಂವತ್ಸರತ್ರಯಂ ॥ ೨೦ ॥

---

ದೀಪಾದಿಗಳಿಂದ ಪೂಜಿಸಬೇಕು. ಒಳ್ಳೆ ೧ ಯವಧಾನ್ಯದಿಂದ ಹೋಮವನ್ನೂ ಮಾಡಿ ಬ್ರಾಹ್ಮಣನಿಗೆ ವಸ್ತ್ರದಾನವನ್ನು ಮಾಡಬೇಕು ಮಧ್ಯಾಹ್ನಕಾಲಕ್ಕೆ ಸರಿಯಾಗಿ ಅಗ್ನಿಯಲ್ಲಿ ಸೂರ್ಯನನ್ನು ಪೂಜಿಸಬೇಕು. ಮತ್ತು ಎಳ್ಳುಗಳಿಂದ ಹೋಮ ಮಾಡಿ ದಕ್ಷಿಣೆಯಿಂದ ಬ್ರಾಹ್ಮಣರನ್ನು ತೃಪ್ತಿಪಡಿಸಬೇಕು ಸೂರ್ಯಾಸ್ತಕಾಲದಲ್ಲಿ ಜಲದಲ್ಲಿ ಚಂದ್ರನನ್ನು ಪೂಜಿಸಬೇಕು. ಆಜ್ಯದಿಂದ ಹೋಮಮಾಡಿ ಬ್ರಾಹ್ಮಣರಿಗೆ ರಜತಮಯವಾದ ದಕ್ಷಿಣೆಯನ್ನು ಕೊಡಬೇಕು. ರಾತ್ರಿಯಲ್ಲಿ ತೈಲಸಂಬಂಧವಿಲ್ಲದ ಭೋಜನಮಾಡಬೇಕು. ಈ ರೀತಿ ಆ ಸಂವತ್ಸರ ಪೂರ್ತಿಯಾಗಿ ಜಾಗರೂಕತೆಯಿಂದ ವ್ರತವನ್ನಾಚರಿಸಿದವನು ಸಾವಿರಾರು ವರ್ಷಪರ್ಯಂತರವೂ ಸ್ವರ್ಗಲೋಕದಲ್ಲಿ ಸುಖಿಯಾಗುತ್ತಾನೆ.

೨೦–೨೩. ಪುನಃ ಮನುಷ್ಯಜನ್ಮಹೊಂದಿದಾಗ ಪ್ರಬಲರಾಜನಾಗಿ ದುರ್ಗಸ್ಥಾನದಲ್ಲಿ ಪ್ರತಿಷ್ಠೆಹೊಂದುತ್ತಾನೆ. ಮೂರು ವರ್ಷ ಪೂರ್ತಿಯಾಗಿ ಈ ವ್ರತವನ್ನು ಮಾಡಿದ್ದೇ ಆದರೆ ಐದುಸಾವಿರ ವರ್ಷಪರ್ಯಂತವೂ ಸ್ವರ್ಗಸುಖಕ್ಕೆ ಭಾಗಿಯಾಗು

**ಪಂಚವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ।**
**ಮಾನುಷ್ಯಂ ಚ ಸಮಾಸಾದ್ಯ ರಾಜಾ ಭವತಿ ಧಾರ್ಮಿಕಃ ॥ ೨೦ ॥**

**ವೀರೋ ಮಾಂಡಲಿಕಃ ಶೂರಃ ಪರಚಕ್ರಭಯಂಕರಃ ।**
**ನಿರೋಗೋ ದರ್ಶನೀಯಶ್ಚ ಸುಭಗೋ ಜನವಲ್ಲಭಃ ॥ ೨೨ ॥**

**ಕೃತ್ವಾ ದ್ವಾದಶವರ್ಷಾಣಿ ವ್ರತಮೇತದನುತ್ತಮಂ ।**
**ವ್ರತಾವಸಾನೇ ವಿಪ್ರಾಣಾಂ ಸಹಸ್ರಂ ಭೋಜಯೇತ್ತತಃ ॥ ೨೩ ॥**

**ಭೋಜ್ಯಂ ತ್ರಿಮಧುರಂ ದೇಯಂ ದದ್ಯಾಚ್ಛಕ್ತ್ಯಾ ಚ ದಕ್ಷಿಣಾಂ ।**
**ತತಃ ಸ್ವರ್ಗಮವಾಪ್ನೋತಿ ವರ್ಷಾಣಾಂ ಚ ಶತಂ ವಶೀ ॥ ೨೪ ॥**

**ತತೋ ಮಾನುಷ್ಯಮಾಸಾದ್ಯ ರಾಜಾ ಭವತಿ ಪಾರ್ಥಿವಃ ।**
**ಪ್ರದೀಪ್ತಚಕ್ರೋ ಬಲವಾನ್ ಧರ್ಮರಾಜೋ ಜನಪ್ರಿಯಃ ॥ ೨೫ ॥**

**ಜನ್ಮಾಂತರಂ ಸಮಾಸಾದ್ಯ ತತೋ ವಿಪ್ರತ್ವಮಾಪ್ನುಯಾತ್ ।**
**ತತೋ ಬ್ರಾಹ್ಮಣ್ಯಮಾಸಾದ್ಯ ಮೋಕ್ಷೋಪಾಯಂ ಚ ವಿಂದತಿ ॥ ೨೬ ॥**

---

ತ್ತಾನೆ. ಪುನಃ ಮನುಷ್ಯನಾಗಿ ಜನಿಸುವಾಗ ಧಾರ್ಮಿಕನೂ, ಶೂರನೂ, ಮಂಡಲಾಧಿಪತಿಯೂ ಶತ್ರುಗಳಿಗೆ ಭಯಂಕರನೂ ಆದ ರಾಜಶ್ರೇಷ್ಠನಾಗಿ ಜನಿಸುತ್ತಾನೆ. ಆರೋಗನೂ, ದರ್ಶನೀಯನೂ, ಸೌಭಾಗ್ಯಶಾಲಿಯೂ, ಜನಪ್ರಿಯನೂ ಆಗುತ್ತಾನೆ. ಹನ್ನೆರಡುವರ್ಷ ಪರ್ಯಂತ ಈ ವ್ರತವನ್ನು ಮಾಡಿ ವ್ರತಮುಗಿಯುವಾಗ ಬ್ರಾಹ್ಮಣ ಸಹಸ್ರಕ್ಕೆ ಭೋಜನಮಾಡಿಸಬೇಕು.

೨೪-೨೬. ಭೋಜನದಲ್ಲಿಯೂ ಮೂರು ವಿಧವಾದ ಮಧುರ ರಸದಿಂದ ಕೂಡಿದ ಭಕ್ಷ್ಯ ಮತ್ತು ಪಾನೀಯವನ್ನು ಅರ್ಪಿಸಬೇಕು. ಯಥಾಶಕ್ತಿ ದಕ್ಷಿಣೆಯನ್ನೂ ಕೊಡಬೇಕು. ಹೀಗೆ ಮಾಡಿದವನು ನೂರುವರ್ಷದವರೆಗೂ ಸ್ವರ್ಗಸುಖವನ್ನು ಹೊಂದುತ್ತಾನೆ. ಅನಂತರ ಮನುಷ್ಯನಾಗಿ ಹುಟ್ಟಿದಲ್ಲಿ ರಾಜನಾಗಿಯೇ ಆಗುತ್ತಾನೆ. ಅದರಲ್ಲಿಯೂ ಪ್ರಬಲವಾದ ರಾಷ್ಟ್ರವುಳ್ಳವನಾಗಿಯೂ, ಬಲಶಾಲಿಯಾಗಿಯೂ, ಧಾರ್ಮಿಕನೂ, ಜನಪ್ರಿಯನೂ ಆಗುತ್ತಾನೆ. ಇವನು ಮುಂದಿನ ಜನ್ಮದಲ್ಲಿ

ಆರಾಧನಂ ತೇ ಕಥಿತಂ ಮಯ್ಯೈತ-
ದ್ವಿಷ್ಣೋಃ ತ್ರಿದೇಹಸ್ಯ ಮಹಾನುಭಾವ ।
ಆರಾಧಿತೋ ಯೇನ ಜಗತ್ಪ್ರಧಾನ
ಕಾಮಾನಭೀಷ್ಟಾನ್ವಿದುಷೋ ದದಾತಿ ॥ ೨೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶ್ರೀ ವಿಷ್ಣುತ್ರಿಮೂರ್ತಿವ್ರತವರ್ಣನೋ ನಾಮ
ಷಟ್‌ತ್ರಿಂಶದುತ್ತರ ಶತತಮೋಽಧ್ಯಾಯಃ

---

ಬ್ರಾಹ್ಮಣನಾಗಿಯೇ ಹುಟ್ಟುತ್ತಾನೆ. ಬ್ರಾಹ್ಮಣ್ಯದಿಂದ ಮೋಕ್ಷೋಪಾಯವನ್ನು ಸಂಪಾದಿಸುತ್ತಾನೆ. ತ್ರಿದೇಹನಾದ ವಿಷ್ಣುವಿನ ಆರಾಧನವನ್ನು ಈ ರೀತಿ ಹೇಳಿರುತ್ತೇನೆ. ಈ ಆರಾಧನದಿಂದ ಸಂತುಷ್ಟನಾದ ಜಗತ್ಪತಿಯು ಪೂಜಕನಾದ ಜ್ಞಾನಿಗೆ ಎಲ್ಲಾ ಮನೋರಥಗಳನ್ನೂ ಸಫಲಗೊಳಿಸುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದದಲ್ಲಿ ಶ್ರೀ ವಿಷ್ಣುತ್ರಿಮೂರ್ತಿವ್ರತವರ್ಣನವೆಂಬ
ನೂರ ಮೂವತ್ತಾರನೆಯ ಅಧ್ಯಾಯವು ಮುಗಿದುದು.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಸಪ್ತತ್ರಿಂಶದುತ್ತರ ಶತತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಅತಃ ಪರಂ ಪ್ರವಕ್ಷ್ಯಾಮಿ ವಿಷ್ಣುಮೂರ್ತಿವ್ರತಂ ತವ ।**
**ದ್ವಿಧಾತು ದೇವದೇವಸ್ಯ ಮೂರ್ತಿರ್ಭವತಿ ಯಾದವ || ೧ ||**

**ಘೋರಾ ಚಾನ್ಯಾ ಶಿವಾಚಾನ್ಯಾ ಘೋರಾ ಭವತಿ ಪಾವಕಃ ।**
**ಶಿವಾಚಾಂಬುಪತಿರ್ಯಸ್ಮಾದಗ್ನೀಷೋಮಾತ್ಮಕಂ ಜಗತ್ || ೨ ||**

**ದ್ವಿಧಾ ಘೋರಾ ವಿನಿರ್ದಿಷ್ಟಾ ದ್ವಿಧಾ ಸೌಮ್ಯಾ ತತಃ ಪುನಃ ।**
**ಘೋರಾ ವಹ್ನಿಶ್ಚ ಸೂರ್ಯಶ್ಚ ಸೌಮ್ಯಾ ಸೋಮಜಲಾಧಿಪೌ || ೩ ||**

---

### ನೂರ ಮೂವತ್ತೇಳನೆಯ ಅಧ್ಯಾಯ.

೧-೩. ಮಾರ್ಕಂಡೇಯರು ಹೇಳುತ್ತಾರೆ :–ಇನ್ನು ಮುಂದೆ ವಿಷ್ಣುಮೂರ್ತಿ ವ್ರತವನ್ನು ನಿನಗೆ ಹೇಳುತ್ತೇನೆ. ದೇವಾಧಿದೇವನಾದ ವಿಷ್ಣುವಿನ ಮೂರ್ತಿಯು ಎರಡು ವಿಧವಾಗಿರುತ್ತದೆ. ಒಂದು ಘೋರಾ ಮತ್ತೊಂದು ಶಿವಾ ಇದರಲ್ಲಿ ಘೋರಮೂರ್ತಿಯೇ ಅಗ್ನಿ. ಶಿವಮೂರ್ತಿಯೇ ಜಲಾಧಿಪನಾದ ವರುಣ ಆದುದರಿಂದಲೇ ಅಗ್ನಿ ಜಲರೂಪವಾದ ಜಗತ್ತು ಅಗ್ನೀಷೋಮಾತ್ಮಕವೆಂದು ಹೇಳಲಾಗುತ್ತಿದೆ. ಇವೆರಡೂ ಎರಡೆರಡು ರೂಪಗಳಾಗಿವೆ. ಅಗ್ನಿ, ಸೂರ್ಯ ಇವರು ಘೋರಮೂರ್ತಿಗೆ ಸೇರಿದವರು ಚಂದ್ರ, ಜಲಾಧಿಪರು ಸೌಮ್ಯಮೂರ್ತಿಗೆ ಸೇರಿದವರು.

ತೇಷಾಂ ಚ ಪೂಜನಂ ಕಾರ್ಯಂ ಪ್ರತಿಪತ್ಪ್ರಭೃತಿಕ್ರಮಾತ್ ।
ಶುಕ್ಲಪಕ್ಷಾದಥಾರಭ್ಯ ಫಾಲ್ಗುನಸ್ಯ ದ್ವಿಜೋತ್ತಮ ॥ ೪ ॥

ಆದಿತ್ಯಂ ಪೂಜಯೇದ್ರಾಜಾ ಪ್ರಥಮೇಽಹ್ನಿ ಪರಃ ಶುಚಿಃ ।
ದ್ವಿತೀಯೇಽಹ್ನಿ ತಥಾ ವಹ್ನಿಂ ತೃತೀಯೇಽಹ್ನಿ ಜಲಾಧಿಪಂ ॥ ೫ ॥

ಚತುರ್ಥೇಽಹ್ನಿ ಶಶಾಂಕಂ ಚ ಯಥಾವನ್ಮಾನವೋತ್ತಮ ।
ತೇಷಾಂ ತು ರೂಪನಿರ್ಮಾಣಂ ಕೃತ್ವಾ ಸಾನರ್ಚಯೇದ್ಬುಧಃ ॥ ೬ ॥

ಗಂಧಮಾಲ್ಯನಮಸ್ಕಾರಧೂಪದೀಪಾನ್ನಸಂಪದಾ ।
ವಚಾಹರಿದ್ರಯಾ ಸ್ನಾನಂ ಪ್ರಥಮೇಽಹ್ನಿ ಸಮಾಚರೇತ್ ॥ ೭ ॥

ದ್ವಿತೀಯೇ ಯದುಶಾರ್ದೂಲ ಸ್ನಾನಮಾಮಲಕೈಃ ಶುಭಂ ।
ಪ್ರಿಯಂಗುಣಾ ತೃತೀಯೇ ಚ ಚತುರ್ಥೇ ಗೌರಸರ್ಷಪೈಃ ॥ ೮ ॥

ಗೋಧೂಮತಿಲಧಾನ್ಯೈಶ್ಚ ಯವೈಶ್ಚ ದಿವಸಕ್ರಮಾತ್ ।
ಹೋಮಶ್ಚ ಕಾರ್ಯೋ ಧರ್ಮಜ್ಞ ದಕ್ಷಿಣಾಂ ಶೃಣು ಚಾಪ್ಯಥ ॥ ೯ ॥

---

ಈ ಮೂರ್ತಿಗಳ ಪೂಜೆಯನ್ನು ಫಾಲ್ಗುಣ ಶುಕ್ಲಪಕ್ಷದ ಪ್ರತಿಪತ್ತಿನಿಂದ ಮೊದಲು ಮಾಡಿ ಕ್ರಮವಾಗಿ ಮಾಡಬೇಕು ಮೊದಲನೆಯ ದಿನ ಶುಚಿಯಾಗಿದ್ದು ಸೂರ್ಯನನ್ನು ಪೂಜಿಸಬೇಕು. ಎರಡನೆಯ ದಿನ ಅಗ್ನಿಯನ್ನೂ ಮೂರನೆಯ ದಿನ ಜಲಾಧಿಪತಿಯನ್ನೂ ಪೂಜಿಸಬೇಕು.

೬-೧೩. ನಾಲ್ಕನೆಯ ದಿನದಲ್ಲಿ ಚಂದ್ರನನ್ನೂ ಯಥಾವಿಧಿಯಾಗಿ ಪೂಜಿಸಬೇಕು. ಈ ದೇವತೆಗಳ ರೂಪಗಳನ್ನು ನಿರ್ಮಿಸಿಕೊಂಡು ಗಂಧಪುಷ್ಪ ನಮಸ್ಕಾರ ಧೂಪದೀಪ ನೈವೇದ್ಯಾದಿಗಳಿಂದ ಪೂಜಿಸಬೇಕು. ಮೊದಲನೆಯ ದಿನ ಬಜೆ, ಹರಿದ್ರಾ (ಅರಿಶಿನ) ಇವುಗಳಿಂದ ಕೂಡಿದ ಸ್ನಾನ, ಎರಡನೆಯ ದಿನ ಆಮಲಕ (ನೆಲ್ಲಿಕಾಯಿ) ದಿಂದ ಸ್ನಾನ, ಮೂರನೆಯ ದಿನ ಬಿಳಿಯ ಗುಲಗಂಜಿಯಿಂದ ಕೂಡಿದ ಸ್ನಾನ, ನಾಲ್ಕನೆಯ ದಿನ ಬಿಳಿಯ ಸಾಸವೆಯಿಂದ ಕೂಡಿದ ಸ್ನಾನ ಈ ರೀತಿ ಸ್ನಾನ ಮಾಡಬೇಕು. ಹೋಮವನ್ನೂ ಸಹ ಪ್ರಥಮಾದಿದಿನ ಕ್ರಮದಿಂದ ಗೋಧೂಮ, ಎಳ್ಳು, ಧಾನ್ಯ, ಯವ ಇವುಗಳಿಂದ ಮಾಡಬೇಕು. ಕ್ರಮವಾಗಿ ಕುಂಕುಮಕೇಸರಿ, ಕೆಂಪುವಸ್ತ್ರ, ಚಂದನ, ಛತ್ರಿ ಇವನ್ನು ದಕ್ಷಿಣೆಯಾಗಿ ಕೊಡಬೇಕು. ಪ್ರತಿನಿತ್ಯವೂ

ಹೋಮಶ್ಚ ಕಾರ್ಯೋಧರ್ಮಜ್ಞ ದಕ್ಷಿಣಾಂಶ್ಚಾಣುಚಾಪ್ಯಥ ।
ಕುಂಕುಮಂ ರಕ್ತವಸ್ತ್ರಂ ಚ ಚಂದನಂ ಛತ್ರಮೇವ ಚ ।
ಕ್ಷೀರೇಣ ಚಾತ್ರ ಕರ್ತವ್ಯಂ ಪ್ರತ್ಯಹಂ ಪ್ರಾಣಧಾರಣಂ || ೧೦ ||

ಏತತ್ಸಂವತ್ಸರಂ ಕೃತ್ವಾ ವ್ರತಂ ಪೂರ್ಣಂ ನರೋತ್ತಮ ।
ಸರ್ವಕಾಮಸಮೃದ್ಧಸ್ಯ ಯಜ್ಞಸ್ಯ ಫಲಮಶ್ನುತೇ || ೧೧ ||

ವಿಮಾನೇನಾರ್ಕವರ್ಣೇನ ಸ್ವರ್ಗಲೋಕಂ ಚ ಗಚ್ಛತಿ ।
ತತ್ರೋಷ್ಯ ಸುಚಿರಂ ಕಾಲಂ ಕುಲೇ ಮಹತಿ ಜಾಯತೇ || ೧೨ ||

ಮಾನುಷ್ಯಮಾಸಾದ್ಯ ಭವತ್ಯರೋಗೋ
ವಸುಂಧರೇಶೋ ವಿಜಿತಾರಿಪಕ್ಷಃ ।
ಧರ್ಮೇ ಸ್ಥಿತಃ ಸತ್ಯಪರೋ ವಿನೀತೋ
ಜಿತೇಂದ್ರಿಯಃ ಸರ್ವಜನಾಭಿರಾಮಃ || ೧೩ ||

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಚತುರ್ಮೂರ್ತಿವ್ರತವರ್ಣನೋ ನಾಮ
ಸಪ್ತತ್ರಿಂಶದುತ್ತರಶತತಮೋಽಧ್ಯಾಯಃ

---

ಕ್ಷೀರಪಾನದಿಂದ ಪ್ರಾಣಧಾರಣೆ ಹೊಂದಬೇಕು. ಈ ರೀತಿ ಸಂವತ್ಸರಪರ್ಯಂತವೂ ಪೂರ್ಣವಾಗಿ ವ್ರತವನ್ನು ನಡೆಸಿದವನು ಸಕಲಸಾಮಗ್ರಿಗಳಿಂದ ಸಮೃದ್ಧವಾದ ಯಜ್ಞದ ಫಲವನ್ನೇ ಹೊಂದುತ್ತಾನೆ. ಸೂರ್ಯನಂತೆ ಜ್ವಲಿಸುವ ವಿಮಾನದಿಂದ ಸ್ವರ್ಗಲೋಕವನ್ನೂ ಹೊಂದುತ್ತಾನೆ. ಅಲ್ಲಿ ಬಹುಕಾಲ ಸುಖಿಸಿ ಮಹಾಕುಲದಲ್ಲಿಯೇ ಜನಿಸುತ್ತಾನೆ. ಆರೋಗನಾಗಿಯೂ ಶತ್ರುವಿಜಯ ಹೊಂದಿದ ಧೊರೆಯಾಗಿಯೂ, ಸತ್ಯ, ಧರ್ಮ, ಇಂದ್ರಿಯನಿಗ್ರಹ ಇತ್ಯಾದಿ ಗುಣಗಳಿಂದ ಕೂಡಿ ಸರ್ವಜನಪ್ರಿಯನಾಗುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಚತುರ್ಮೂರ್ತಿವ್ರತವರ್ಣನವೆಂಬ
ನೂರ ಮೂವತ್ತೇಳನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಅಷ್ಟತ್ರಿಂಶದುತ್ತರಶತತಮೋಽಧ್ಯಾಯಃ ||

### || ಮಾರ್ಕಂಡೇಯ ಉವಾಚ ||

**ಇದಮನ್ಯತ್ಪ್ರವಕ್ಷ್ಯಾಮಿ ಚತುರ್ಮೂರ್ತಿವ್ರತಂ ತವ ।**
**ಶಕ್ರಕೀನಾಶವರುಣ ಧನಾಧ್ಯಕ್ಷಾನ್ಯದೂತ್ತಮ || ೧ ||**

**ಚತುರಾತ್ಮಾ ವಿನಿರ್ದಿಷ್ಟೋ ವಾಸುದೇವೋ ಜಗತ್ಪತಿಃ ।**
**ತೇಷಾಂ ತು ರೂಪನಿರ್ಮಾಣಂ ಕೃತ್ವಾ ತಾನರ್ಚಯೇದ್ಬುಧಃ || ೨ ||**

**ಗಂಧಮಾಲ್ಯನಮಸ್ಕಾರ ಧೂಪದೀಪಾನ್ನಸಂಪದಾ ।**
**ಆದ್ಯೇಽಹ್ನಿ ಚೈತ್ರಶುಕ್ಲಸ್ಯ ಯಜೇತ ತ್ರಿದಶೇಶ್ವರಂ || ೩ ||**

---

### ನೂರ ಮೂವತ್ತೆಂಟನೆಯ ಅಧ್ಯಾಯ.

೧-೭. ಮಾರ್ಕಂಡೇಯರು ಹೇಳುತ್ತಾರೆ:— ಇದಕ್ಕಿಂತಲೂ ಬೇರೆಯಾದ ಚತುರ್ಮೂರ್ತಿವ್ರತವೊಂದನ್ನೂ ಹೇಳುತ್ತೇನೆ. ಇಂದ್ರ, ವರುಣ, ಕುಬೇರ ಇವರನ್ನೇ ದೇಹವಾಗಿ ಹೊಂದಿರುವ ಜಗತ್ಪತಿಯಾದ ವಾಸುದೇವನೇ ಚತುರಾತ್ಮಾ ಎನಿಸುತ್ತಾನೆ ಇವರ ರೂಪಗಳನ್ನು ನಿರ್ಮಿಸಿಕೊಂಡು ಗಂಧ, ಪುಷ್ಪ, ಧೂಪದೀಪ ನೈವೇದ್ಯಾದಿಗಳಿಂದ ಇವರನ್ನು ಪೂಜಿಸಬೇಕು. ಚೈತ್ರ ಶುದ್ಧ ಪ್ರಥಮೆಯ ದಿನ ಇಂದ್ರನನ್ನೂ, ದ್ವಿತೀಯಾ ದಿನ ಯಮನನ್ನೂ ಮೂರನೆಯದಿನ ವರುಣನನ್ನೂ, ನಾಲ್ಕನೆಯ ದಿನ ಕುಬೇರನನ್ನೂ ಸಹ ಪ್ರತಿನಿತ್ಯವೂ ಸ್ನಾನಮಾಡಿ ಪೂಜಿಸ ಬೇಕು. ಸ್ನಾನವನ್ನೂ ಸಹ ನದಿಯ ಪ್ರದೇಶಕ್ಕೆ ಹೋಗಿ ಪೂರ್ವಾಭಿಮುಖವಾಗಿ

ದ್ವಿತೀಯೇಽಹ್ನಿ ಯಮಂ ದೇವಂ ತೃತೀಯೇ ಸಲಿಲಾಧಿಪಂ ।
ಚತುರ್ಥೇಽಹ್ನಿ ಧನಾಧ್ಯಕ್ಷಂ ಪ್ರತ್ಯಹಂ ಸ್ನಾನಮಾಚರೇತ್ ॥ ೪ ॥

ನದೀಪ್ರದೇಶಮಾಸಾದ್ಯ ದೇವದೃಕ್ ಪ್ರತ್ಯಹಂ ಕ್ರಮಾತ್ ।
ಯವೈಸ್ತಿಲೈಸ್ತಥಾಜ್ಯೇನ ಹೋಮಃ ಸ್ಯಾತ್ತಿಲತಂಡುಲೈಃ ॥ ೫ ॥

ರಕ್ತಂ ಪೀತಂ ತಥಾ ಕೃಷ್ಣಂ ಶ್ವೇತಂ ವಸ್ತ್ರಂ ದಿನಕ್ರಮಾತ್ ।
ಶುಭಮೇತದ್ವ್ರತಂ ಕೃತ್ವಾ ಪೂರ್ಣಂ ಸಂವತ್ಸರಂ ನರಃ ।
ನಾಕಲೋಕಮವಾಪ್ನೋತಿ ಯಾವದಿಂದ್ರಾಶ್ಚತುರ್ದಶ ॥ ೬ ॥

ಮಾನುಷ್ಯಮಾಸಾದ್ಯ ಭವತ್ಯರೋಗೋ
ವಸುಂಧರೇಶೋ ವಿಜಿತಾರಿಪಕ್ಷಃ ।
ಜನಾಭಿರಾಮಃ ಸುಭಗಃ ಪ್ರಕೃತ್ಯಾ
ತತೋಽಪಿ ವಿಪ್ರತ್ವಮುಪೈತಿ ಭೂಯಃ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಚತುರ್ಮೂರ್ತಿವ್ರತವರ್ಣನೋ ನಾಮ
ಅಷ್ಟತ್ರಿಂಶದುತ್ತರಶತತಮೋಽಧ್ಯಾಯಃ

---

ಮೊದಲು ಆಯಾಯ ದೇವತೆಗಳ ದಿಕ್ಕಿಗೆ ಅಭಿಮುಖವಾಗಿ ಆಯಾಯ ದಿನದಲ್ಲಿ ಮಾಡಬೇಕು, ಯವ, ತಿಲ, ಆಜ್ಯ, ತಿಲತಂಡುಲ (ತಿಲಮಿಶ್ರವಾದ ಅಕ್ಕಿ) ಇವುಗಳಿಂದ ನಾಲ್ಕುದಿನಗಳಲ್ಲಿಯೂ ಕ್ರಮವಾಗಿ ಹೋಮಮಾಡಿ, ಕ್ರಮವಾಗಿ ಕೆಂಪು, ಹಳದಿ, ಕಪ್ಪು, ಬಿಳಪು ಈ ವಸ್ತ್ರಗಳನ್ನು ಆಯಾಯ ದಿನದಲ್ಲಿ ದಾನಮಾಡಬೇಕು. ಈ ವ್ರತವನ್ನು ವರ್ಷಪೂರ್ತಿಯಾಗಿಮಾಡಿದವನು ಚತುರ್ದಶ ಇಂದ್ರರಿರುವವರೆಗೂ ಸ್ವರ್ಗಲೋಕವಾಸಿಯಾಗುತ್ತಾನೆ. ಮನುಷ್ಯನಾಗಿ ಹುಟ್ಟಿದರೂ ಆರೋಗನಾಗಿಯೂ, ಶತ್ರುವಿಜಯಿಯಾದ ದೊರೆಯಾಗಿಯೂ ಸೌಭಾಗ್ಯ ಮತ್ತು ಜನಾನುರಾಗದಿಂದ ಬದುಕಿ ಮುಂದಿನ ಜನ್ಮದಲ್ಲಿ ಬ್ರಾಹ್ಮಣನಾಗಿ ಹುಟ್ಟುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಚತುರ್ಮೂರ್ತಿವ್ರತ ವರ್ಣನವೆಂಬ
ನೂರಮೂವತ್ತೆಂಟನೆಯ ಅಧ್ಯಾಯವು ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕೋನಚತ್ವಾರಿಂಶದುತ್ತರ ಶತತಮೋಽಧ್ಯಾಯಃ ||

### || ಮಾರ್ಕಂಡೇಯ ಉವಾಚ ||

**ಇದಮನ್ಯತ್ಪ್ರವಕ್ಷ್ಯಾಮಿ ಚತುರ್ಮೂರ್ತಿವ್ರತಂ ತವ ।**
**ವಿಷ್ಣುರ್ಭೂಮಿಃ ನಭೋಬ್ರಹ್ಮಾ ತಸ್ಯರೂಪಚತುಷ್ಟಯಂ || ೧ ||**

**ತೇಷಾಂ ತು ರೂಪನಿರ್ಮಾಣಂ ಕೃತ್ವಾ ತಾನರ್ಚಯೇತ್ತತಃ ।**
**ಗಂಧಮಾಲ್ಯನಮಸ್ಕಾರಧೂಪದೀಪಾನ್ನಸಂಪದಾ || ೨ ||**

**ಆದ್ಯೇಽಹ್ನಿ ಚೈತ್ರಶುಕ್ಲಸ್ಯ ವಿಷ್ಣುಂ ದೇವಂ ಸಮರ್ಚಯೇತ್ ।**
**ದ್ವಿತೀಯಾದಿಷು ಧರ್ಮಜ್ಞ ಭುವಂ ತಾಂ ಚ ಪಿತಾಮಹಂ || ೩ ||**

---

### ನೂರ ಮೂವತ್ತೊಂಭತ್ತನೆಯ ಅಧ್ಯಾಯ.

೧-೫. ಮಾರ್ಕಂಡೇಯರು ಹೇಳುತ್ತಾರೆ. ಮತ್ತೊಂದು ಚತುರ್ಮೂರ್ತಿ ವ್ರತವನ್ನೂ ಹೇಳುತ್ತೇನೆ. ವಿಷ್ಣು, ಭೂಮಿ, ಗಗನ, ಬ್ರಹ್ಮಾ, ಎಂಬ ನಾಲ್ಕು ರೂಪಳುಂಟು. ಆ ರೂಪಗಳನ್ನು ನಿರ್ಮಿಸಿಕೊಂಡು ಗಂಧಪುಷ್ಪಾದಿಗಳಿಂದ ಪೂಜಿಸಬೇಕು ಚೈತ್ರಶುದ್ಧದಲ್ಲಿ ಮೊದಲನೆಯ ದಿನ ವಿಷ್ಣುವನ್ನೂ ಎರಡನೆಯದಿನ ಭೂಮಿ, ಬ್ರಹ್ಮ ಇತ್ಯಾದಿಗಳನ್ನೂ ಪೂಜಿಸಬೇಕು. ಉಳಿದ ವಿಧಾನವೆಲ್ಲವೂ ಹಿಂದೆ ಹೇಳಿದಂತೆಯೇ ಈ ವ್ರತವನ್ನು ಮಾಡಿದವನೂ ಸ್ವರ್ಗಸುಖಕ್ಕೆ ಭಾಗಿಯಾಗುತ್ತಾನೆ.

ಪೂರ್ವವ್ರತೋಕ್ತಂ ಸಕಲಂ ವಿಧಾನಮಪರಂ ಭವೇತ್ ।
ವ್ರತಮೇತನ್ನರಃ ಕೃತ್ವಾ ಸ್ವರ್ಗಲೋಕಮವಾಪ್ನುಯಾತ್ ॥ ೪ ॥

ಮಾನುಷ್ಯಮಾಸಾದ್ಯ ಭವತ್ಯರೋಗೋ
ಧರ್ಮಾಭಿರಾಮೋ ದ್ರವಿಣೋಪಪನ್ನಃ ।
ಧನೇನ ರೂಪೇಣ ಸುಖೇನ ಯುಕ್ತೋ
ಜನಾಭಿರಾಮೋ ವಿಜಿತಾರಿಪಕ್ಷಃ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇತಾರ್ತೀಯಿಕ ಚತುರ್ಮೂರ್ತಿವ್ರತವರ್ಣನೋ ನಾಮ ಏಕೋನಚತ್ವಾರಿಂಶದುತ್ತರ ಶತತಮೋಽಧ್ಯಾಯಃ

---

ಮನುಷ್ಯನಾಗಿ ಹುಟ್ಟಿದಲ್ಲಿ ಅರೋಗನಾಗಿಯೂ ಧಾರ್ಮಿಕನಾಗಿಯೂ ಧನಾಢ್ಯನಾಗಿಯೂ, ಜಪ್ರಿಯನಾಗಿಯೂ, ವಿಜಯಶಾಲಿಯಾಗಿಯೂ, ಸುಖಿಯಾಗಿಯೂ, ಆಗುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ತಾರ್ತೀಯಿಕಚತುರ್ಮೂರ್ತಿವ್ರತವರ್ಣನವೆಂಬ ನೂರ ಮೂವತ್ತೊಂಭತ್ತನೆಯ ಅಧ್ಯಾಯ ಮುಗಿದಿದೆ.



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಚತ್ವಾರಿಂಶದುತ್ತರ ಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಇದಮನ್ಯತ್ಪ್ರವಕ್ಷ್ಯಾಮಿ ಚತುರ್ಮೂರ್ತಿವ್ರತಂ ತವ ।
ಬಲಂ ಜ್ಞಾನಂ ತಥೈಶ್ವರ್ಯಂ ಶಕ್ತಿಶ್ಚ ಯದುನಂದನ ॥ ೧ ॥

ವಿಖ್ಯಾತಂ ದೇವದೇವಸ್ಯ ತಸ್ಯ ಮೂರ್ತಿಚತುಷ್ಟಯಂ ।
ಯದೇವ ರೂಪಂ ಧರ್ಮಸ್ಯ ಬಲಸ್ಯೋಕ್ತಂ ತದೇವ ತು ॥ ೨ ॥

ರೂಪಂ ಜ್ಞಾನಸ್ಯ ತೇ ಪ್ರೋಕ್ತಂ ನರಸಿಂಹಂ ತಥಾ ನೃಪ ।
ರುದ್ರರೂಪಮಥೈಶ್ವರ್ಯಂ ಕಥಿತಂ ತೇ ಮಯಾ ನೃಪ ॥ ೩ ॥

---

### ನೂರ ನಲವತ್ತನೆಯ ಅಧ್ಯಾಯ.

೧-೫. ಮಾರ್ಕಂಡೇಯರು ಹೇಳುತ್ತಾರೆ. ಮತ್ತೊಂದು ವಿಧವಾದ ಚತುರ್ಮೂರ್ತಿವ್ರತವನ್ನೂ ನಿನಗೆ ಹೇಳುತ್ತೇನೆ. ದೇವಾಧಿಪನಾದ ಮಹಾವಿಷ್ಣುವಿಗೆ ಬಲ, ಜ್ಞಾನ, ಐಶ್ವರ್ಯ, ಶಕ್ತಿ ಈ ನಾಲ್ಕೂ ಪ್ರಸಿದ್ಧವಾಗಿವೆ. ಇವೇ ಅವನ ಮೂರ್ತಿ ಚತುಷ್ಟಯ. ಯಮನಿಗೆ ಯಾವ ರೂಪವೋ ಅದೇ ಬಲದರೂಪ, ನರಸಿಂಹನ ರೂಪವೇ ಜ್ಞಾನದ ರೂಪ. ರುದ್ರನ ರೂಪವೇ ಐಶ್ವರ್ಯದ ರೂಪ ವರಾಹರೂಪವೇ ಶಕ್ತಿಯರೂಪ. ಪ್ರಭುವಾದ ಮಧುಸೂದನನ ಅವಯವಭೂತರಾದ

ಶಕ್ತಿರ್ವರಾಹಃ ಕಥಿತೋ ದೇವೋ ಮಧುನಿಷೂದನಃ ।
ಏವಮೇತನ್ಮುಖಂ ಪ್ರೋಕ್ತಂ ಚತುರ್ಮೂರ್ತಿಧರಸ್ಯ ತೇ ॥ ೪ ॥
ಪೂರ್ವಂ ಬಲಮುಖಂ ತಸ್ಯ ವಾಸುದೇವಮುಖಂ ಭವೇತ್ ।

ದಕ್ಷಿಣಂ ವದನಂ ಜ್ಞಾನಂ ದೇವಂ ಸಂಕರ್ಷಣಂ ವಿದುಃ ॥ ೫ ॥
ಐಶ್ವರ್ಯಂ ಪಶ್ಚಿಮಂ ವಕ್ತ್ರಂ ರೌದ್ರಂ ಪಾಪಹರಂ ತಥಾ ।

ವಾರಾಹಮುತ್ತರಂ ವಕ್ತ್ರಂಮನಿರುದ್ಧಂ ಪ್ರಕೀರ್ತಿತಂ ॥ ೬ ॥
ತ್ರಿರಾತ್ರೋಪೋಷಿತಶ್ಚೈತ್ರೇ ಪೂರ್ವಂ ಸಂಪೂಜಯೇನ್ಮುಖಂ ।

ತಥಾ ವೈಶಾಖಮಾಸೇ ತು ಪೂಜಯೇದ್ದಕ್ಷಿಣಂ ಮುಖಂ ।
ಜ್ಯೇಷ್ಠೆ ಚ ಪಶ್ಚಿಮಂ ವಕ್ತ್ರಮಾಷಾಢೇತಿ ತಥೋತ್ತರಂ ॥ ೭ ॥

ಗೃಹೋಪಯೋಗಿ ದಾತವ್ಯಂ ಚೈತ್ರೇ ಮಾಸಿ ದ್ವಿಜಾತಯೇ ।
ರಣೋಪಯೋಗಿ ದಾತವ್ಯಂ ವೈಶಾಖೇ ಯಾದವೋತ್ತಮ ॥ ೪ ॥

---

ಈ ದೇವತೆಗಳ ರೂಪವನ್ನೇ ಬಲ. ಜ್ಞಾನಾದಿ ರೂಪದಿಂದ ಹೊಂದಿ ತಾನು ದೇಹಿಯಾಗಿರುವನು. ಈ ರೀತಿ ಚತುರ್ಮೂರ್ತಿಯಾಗಿರುವ ಈ ಮಧುಸೂದನನಿಗೆ ಪೂರ್ವಭಾಗದ ಬಲದಮುಖವು ವಾಸುದೇವನ ಮುಖವೇ ಆಗಿರುತ್ತದೆ. ದಕ್ಷಿಣ ಭಾಗದ ಜ್ಞಾನದ ಮುಖವು ಸಂಕರ್ಷಣರೂಪವಾಗಿದೆ.

೬–೧೦. ಪಶ್ಚಿಮ ಭಾಗದ ಮುಖವಾದ ಐಶ್ವರ್ಯವು ಸರ್ವಪಾಪನಾಶಕವಾದ ರುದ್ರರೂಪ, ಉತ್ತರಭಾಗದ ಮುಖವು ವರಾಹ, ಶಕ್ತಿಯು ಅನಿರುದ್ಧರೂಪ, ಚೈತ್ರಮಾಸವಲ್ಲಿ ಮೂರು ರಾತ್ರಿ ಉಪವಾಸವಿದ್ದು ಪೂರ್ವಮುಖವನ್ನು ಪೂಜಿಸಬೇಕು. ಹಾಗೆಯೇ ವೈಶಾಖಮಾಸದಲ್ಲಿ ದಕ್ಷಿಣಮುಖವನ್ನೂ, ಜ್ಯೇಷ್ಠಮಾಸದಲ್ಲಿ ಪಶ್ಚಿಮಮುಖವನ್ನೂ, ಆಷಾಢಮಾಸದಲ್ಲಿ ಉತ್ತರಮುಖವನ್ನೂ ಪೂಜಿಸಬೇಕು. ಚೈತ್ರಮಾಸದ ಪೂಜೆಯಾದನಂತರ ಬ್ರಾಹ್ಮಣನಿಗೆ ಮನೆಗೆ ಉಪಯೋಗವಾಗುವ ಪದಾರ್ಥಗಳನ್ನು ದಾನಕೊಡಬೇಕು. ವೈಶಾಖಮಾಸದ ಪೂಜೆಯಲ್ಲಿ ಯುದ್ಧೋ

ಯೋಗೋಪಯೋಗಿ ದಾತವ್ಯಂ ತಥಾ ಜ್ಯೇಷ್ಠೇ ದ್ವಿಜಾತಯೇ ।
ಯಜ್ಞೋಪಯೋಗಿ ದಾತವ್ಯಂ ಮಾಸ್ಯಾಷಾಢೇ ತಥೈವ ಚ ॥ ೯ ॥

ವ್ರತಮೇತನ್ನರಃ ಕೃತ್ವಾ ಪೂರ್ಣಂ ಮಾಸಚತುಷ್ಟಯಂ ।
ಪಾರಣೇ ಪ್ರಥಮೇ ಪ್ರಾಪ್ತೇ ಭವತೀತಿ ವಿನಿಶ್ಚಯಃ ॥ ೧೦ ॥

ಪಾರಣಂ ಪ್ರಥಮಂ ಕೃತ್ವಾ ಸ್ವರ್ಗಲೋಕೇ ಮಹೀಯತೇ ।
ದಶವರ್ಷ ಸಹಸ್ರಾಣಿ ಸ್ವರ್ಗಂ ಭುಕ್ತ್ವಾ ಯಥೋದಿತಂ ॥ ೧೧ ॥

ಸೌಮ್ಯಾದಿಷು ಚ ಮಾಸೇಷು ದ್ವಿತೀಯಂ ಪಾರಣಂ ಭವೇತ್ ।
ದ್ವಿತೀಯಂ ಪಾರಣಂ ಕೃತ್ವಾ ಭೋಜಯೇದ್ಬ್ರಾಹ್ಮಣಾನ್ ಶುಚಿಃ ।
ಭೋಜನಂ ಗೋರಸಪ್ರಾಯಂ ಮೃದ್ವೀಕಾಶರ್ಕರಾಯುತಂ ॥ ೧೨ ॥

ಪ್ರಾಪ್ತೇ ತೃತೀಯೇ ದ್ವಿಜಪಾರಣೇ ಚ
ಪ್ರಾಪ್ನೋತಿ ದೇವಸ್ಯ ಸಲೋಕತಾಂ ಸಃ ।

---

ಪಯೋಗಿ ವಸ್ತುಗಳನ್ನು ದಾನಮಾಡಬೇಕು. ಜ್ಯೇಷ್ಠಮಾಸದ ಪೂಜೆಯಲ್ಲಿ ಯೋಗೋಪಯೋಗಿಗಳಾದ ವಸ್ತುಗಳನ್ನು ದಾನಮಾಡಬೇಕು. ಆಷಾಢಮಾಸದ ಪೂಜೆಯಲ್ಲಿ ಯಜ್ಞೋಪಯೋಗಿಗಳಾದ ವಸ್ತುಗಳನ್ನು ದಾನಮಾಡಬೇಕು. ಈ ವ್ರತವನ್ನು ನಾಲ್ಕು ತಿಂಗಳು ಪೂರ್ತಿಯಾಗಿ ಮಾಡಿದವನಿಗೆ ಮೊದಲನೆಯ ಪಾರಣೆಯು ಲಭಿಸುತ್ತದೆ.

೧೧-೧೩. ಮೊದಲನೆಯ ಪಾರಣೆಯನ್ನು ಮಾಡಿದವನು ಹತ್ತುಸಾವಿರ ವರ್ಷ ಸ್ವರ್ಗಸುಖವನ್ನು ಅನುಭವಿಸಿ ಗೌರವಿಸಲ್ಪಡುತ್ತಾನೆ. ಶ್ರಾವಣ ಮೊದಲು ಮುಂದಿನ ಮಾಸಗಳಲ್ಲಿ ಎರಡನೆಯ ಪಾರಣೆಯಾಗುತ್ತದೆ. ಎರಡನೆಯ ಪಾರಣೆ ಮಾಡಿದ ಮೇಲೆ ಹಾಲು, ದ್ರಾಕ್ಷಿ, ಸಕ್ಕರೆ ಮೊದಲಾದ ಮಧುರ ವಸ್ತುಗಳಿಂದ

ಸ್ವರ್ಗೇಂದುಲೋಕೌ ಚ ಯಥೋಕ್ತಕಾಲಂ
ಭುಕ್ತ್ವಾ ಸುಖೀ ಸರ್ವಸಮೃದ್ಧಿಕಾಮಃ        || ೧೩ ||

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಚತುರ್ಥಃ ಚತುರ್ಮೂರ್ತಿವ್ರತವರ್ಣನೋ
ನಾಮ ಚತ್ವಾರಿಂಶದುತ್ತರಶತತಮೋऽಧ್ಯಾಯಃ

---

ಬ್ರಾಹ್ಮಣ ಭೋಜನ ಮಾಡಿಸಬೇಕು. ಮೂರನೆಯ ಪಾರಣೆಯನ್ನು ಮಾಡಿದವನು. ಭಗವಂತನ ಸಾಲೋಕ್ಯವನ್ನು ಹೊಂದುತ್ತಾನೆ. ಸ್ವರ್ಗಲೋಕ, ಚಂದ್ರ ಲೋಕಗಳಲ್ಲಿಯೂ ವಿಹಿತಕಾಲದಲ್ಲಿ ಸುಖವನ್ನೂ ಸರ್ವಮನೋರಥ ಫಲವನ್ನೂ ಹೊಂದುತ್ತಾನೆ

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಚತುರ್ಥಚತುರ್ಮೂರ್ತಿ ವ್ರತವರ್ಣನವೆಂಬ
ನೂರ ನಲವತ್ತನೆಯ ಅಧ್ಯಾಯವು ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕಚತ್ವಾರಿಂಶದುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

ಏವಮನ್ಯತ್ಪ್ರವಕ್ಷ್ಯಾಮಿ ಚತುರ್ಮೂರ್ತಿವ್ರತಂ ತವ ।
ವಿದ್ಯಾಕಾಮೇನ ಕರ್ತವ್ಯಂ ನರೇಣ ಸುವಿಪಶ್ಚಿತಾ || ೧ ||

ಬಹಿಃ ಸ್ನಾನಂ ನರಃ ಕೃತ್ವಾ ಕೃತಋಗ್ವೇದಪೂಜನಃ ।
ಋಗ್ವೇದಂ ಶೃಣುಯಾನ್ನಿತ್ಯಂ ಮಾಸತ್ರಯಮತಂದ್ರಿತಃ || ೨ ||

ಚೈತ್ರಾದಾರಭ್ಯ ಧರ್ಮಜ್ಞಃ ನಿತ್ಯಂ ನಕ್ತಾಶನೋ ದ್ವಿಜಃ ।
ಯಸ್ಮಾಚ್ಛ್ರುತಂ ದ್ವಿಜಾತ್ತಸ್ಯ ಜ್ಯೇಷ್ಠಸ್ಯ ಚರಮೇಽಹನಿ || ೩ ||

---

### ನೂರ ನಲವತ್ತೊಂದನೆಯ ಅಧ್ಯಾಯ.

೧-೪. ಮಾರ್ಕಂಡೇಯರು ಹೇಳುತ್ತಾರೆ :— ಮತ್ತೊಂದು ಚತುರ್ಮೂರ್ತಿ ವ್ರತವನ್ನೂ ನಿನಗೆ ಹೇಳುತ್ತೇನೆ. ವಿದ್ಯಾಪೇಕ್ಷೆಯುಳ್ಳವನಿಂದ ಇದು ಅವಶ್ಯ ಆಚರಿಸಲ್ಪಡತಕ್ಕದ್ದು. ಹೊರಗಿನ ಜಲದಲ್ಲಿ ಸ್ನಾನಮಾಡಿ ಋಗ್ವೇದವನ್ನು ಪೂಜಿಸಿ ಚೈತ್ರಮಾಸದಲ್ಲಿ ಪ್ರಾರಂಭಿಸಿ ನಿತ್ಯವೂ ರಾತ್ರಿಯಲ್ಲೇ ಊಟಮಾಡುತ್ತಾ ಋಗ್ವೇದ ವನ್ನು ಮೂರು ತಿಂಗಳು ನಿಯಮದಿಂದ ಶ್ರವಣಮಾಡಬೇಕು ಯಾರಿಂದ ಶ್ರವಣ ಮಾಡುತ್ತಾನೆಯೋ, ಅಂತಹ ಬ್ರಾಹ್ಮಣನಿಗೆ ಜ್ಯೇಷ್ಠಮಾಸದ ಕೊನೆಯ ದಿನದಲ್ಲಿ

ವಾಸೋಯುಗಂ ಹಿರಣ್ಯಂ ಚ ರಥಾ ಧೇನುಂ ಪಯಸ್ವಿನೀಂ ।
ಘೃತಪೂರ್ಣಂ ಕಾಂಸ್ಯಪಾತ್ರಂ ಸಹಿರಣ್ಯಂ ಚ ದಕ್ಷಿಣಂ ॥ ೪ ॥

ಅಷಾಢಾದಿಷು ಮಾಸೇಷು ಯಜುರ್ವೇದವ್ರತಂ ಭವೇತ್ ।
ಆಶ್ವಿನಾದಿಷು ಮಾಸೇಷು ಸಾಮವೇದವ್ರತಂ ಭವೇತ್ ॥ ೫ ॥

ತಥಾಥರ್ವವ್ರತಂ ನಾಮ ಪೌಷಾದಿಷು ವಿಧೀಯತೇ ।
ಸರ್ವೇಷು ಸರ್ವಂ ಕರ್ತವ್ಯಮೃಗ್ವೇದವ್ರತಕೀರ್ತಿತಂ ॥ ೬ ॥

ವೇದಾತ್ಮನೋ ವಾಸುದೇವಸ್ಯ ಪೂಜಾಂ
ಕೃತ್ವಾ ನರೋ ದ್ವಾದಶವತ್ಸರಾಣಿ ।
ವಿಷ್ಣೋರ್ಲೋಕಂ ಯಾತಿ ಲೋಕೈರ್ವಿಶಿಷ್ಟಂ
ಯಸ್ತಂಪ್ರಾಪ್ತಃ ಸರ್ವದುಃಖಂ ಜಹಾತಿ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಪಂಚಮಚತುರ್ಮೂರ್ತಿಕಲ್ಪೇ ವೇದವ್ರತೋ ನಾಮೈಕಚತ್ವಾರಿಂಶದುತ್ತರ ಶತತಮೋಽಧ್ಯಾಯಃ

---

ಹಿರಣ್ಯದೊಡನೆ ವಸ್ತ್ರಯುಗ್ಮವನ್ನೂ, ಹಾಲು ಕೊಡುವ ಹಸುವನ್ನೂ, ಘೃತದಿಂದ ತುಂಬಿದ ಕಂಚಿನ ಪಾತ್ರೆಯನ್ನೂ ದಕ್ಷಿಣೆಯೊಡನೆ ದಾನಮಾಡಬೇಕು.

೫-೭. ಅಷಾಢಾದಿ ಮೂರು ಮಾಸಗಳಲ್ಲಿ ಯಜುರ್ವೇದ ವ್ರತ, ಆಶ್ವಯುಜಾದಿ ಮೂರು ಮಾಸಗಳಲ್ಲಿ ಸಾಮವೇದ ವ್ರತವು, ಪುಷ್ಯಾದಿ ಮೂರು ಮಾಸಗಳಲ್ಲಿ ಅಥರ್ವವೇದ ವ್ರತವೂ ನಡೆಯಬೇಕು ದಾನದಕ್ಷಿಣಾದಿಗಳೆಲ್ಲಾ ಋಗ್ವೇದ ವ್ರತದಲ್ಲಿ ಹೇಳಿರುವಂತೆಯೇ ಎಲ್ಲಾ ವ್ರತಕ್ಕೂ ನಡೆಯಬೇಕು. ಈ ರೀತಿ ವೇದ ಸ್ವರೂಪನಾದ ವಾಸುದೇವನ ಪೂಜೆಯನ್ನು ಹನ್ನೆರಡು ವರ್ಷ ಮಾಡಿದಲ್ಲಿ ಅವನಿಗೆ ವಿಷ್ಣುಲೋಕವೇ ಪ್ರಾಪ್ತವಾಗುತ್ತದೆ. ಅಲ್ಲಿ ಸರ್ವದುಃಖ ಶಾಂತಿಯೂ ಉಂಟಾಗುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಪಂಚಮ ಚತುರ್ಮೂರ್ತಿಕಲ್ಪದಲ್ಲಿ ವೇದವ್ರತವೆಂಬ ನೂರ ನಲವತ್ತೊಂದನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ದ್ವಿಚತ್ವಾರಿಂಶದುತ್ತರ ಶತತಮೋಽಧ್ಯಾಯಃ ||

### || ಮಾರ್ಕಂಡೇಯ ಉವಾಚ ||

**ಇದಮನ್ಯತ್ಪ್ರವಕ್ಷ್ಯಾಮಿ ಚತುರ್ಮೂರ್ತಿವ್ರತಂ ತವ ।**
**ಸರ್ವಾತ್ಮನಾಂ ತು ಕರ್ತವ್ಯಾ ಯಥಾಪೂಜಾ ಜಗದ್ಗುರೋಃ ।**
**ಚೈತ್ರಶುಕ್ಲ ಚತುರ್ಥ್ಯಾಂ ತು ಸೋಪವಾಸೋ ಜಿತೇಂದ್ರಿಯಃ || ೧ ||**

**ಚತುರ್ಥ್ಯಾಂ ವಾಸುದೇವಸ್ಯ ಕೃತ್ವಾ ಸಂಪೂಜನಂ ಶುಭಂ ।**
**ಕಾಂಚನಂ ದಕ್ಷಿಣಾಂ ದದ್ಯಾದ್ವಿಜಾಯ ಬ್ರಹ್ಮಚಾರಿಣೆ । || ೨ ||**

**ತಥಾ ಸಂಕರ್ಷಣಂ ದೇವಂ ಪೂಜಯಿತ್ವಾ ಜಗದ್ಗುರುಂ ।**
**ವೈಶಾಖೆ ತು ಗೃಹಸ್ಥಾಯ ದದ್ಯಾಚ್ಛಯ್ಯಾಂ ಸುಸಂಸ್ಕೃತಾಂ || ೩ ||**

---

### ನೂರ ನಲವತ್ತೆರಡನೆಯ ಅಧ್ಯಾಯ.

೧-೩. ಮಾರ್ಕಂಡೇಯರು ಹೇಳುತ್ತಾರೆ:—ಮತ್ತೊಂದು ಚತುರ್ಮೂರ್ತಿ ವ್ರತವನ್ನೂ ನಿನಗೆ ಹೇಳುತ್ತೇನೆ:—ಜಗದ್ಗುರುವಾದ ವಾಸುದೇವನ ಎಲ್ಲಾ ಅವತಾರಗಳಿಗೂ ಇದರಿಂದ ಪೂಜೆ ನಡೆದಂತಾಗುತ್ತದೆ. ಚೈತ್ರಶುಕ್ಲ ಚತುರ್ಥೀ ತಿಥಿಯಲ್ಲಿ ಉಪವಾಸದಿಂದಲೂ, ಜಿತೇಂದ್ರಿಯತೆಯಿಂದಲೂ ಇದ್ದು, ಆ ದಿನ ವಾಸುದೇವನನ್ನು ಪೂಜಿಸಿ, ಬ್ರಹ್ಮಚಾರಿಯಾದ ಬ್ರಾಹ್ಮಣನಿಗೆ ಸುವರ್ಣದಕ್ಷಿಣೆಯನ್ನು ಕೊಡಬೇಕು. ಹಾಗೆಯೇ ವೈಶಾಖಮಾಸದಲ್ಲಿ ಸಂಕರ್ಷಣ ಪ್ರಭುವನ್ನು ಪೂಜಿಸಿ ಗೃಹಸ್ಥನಾದ ಬ್ರಾಹ್ಮಣನಿಗೆ ಸಪರಿಕರವಾದ ಶಯ್ಯೆಯನ್ನು (ಹಾಸಿಗೆ) ದಾನಮಾಡಬೇಕು.

**ಸಂಪೂಜ್ಯ ದೇವಂ ಪ್ರದ್ಯುಮ್ನಂ ಜ್ಯೇಷ್ಠಮಾಸಿ ಯಥಾವಿಧಿ ।**
**ವನಸ್ಥಾಯ ತಥಾ ದದ್ಯಾತ್ಫಲಮೂಲಂ ಸಗೋರಸಂ ॥ ೪ ॥**

**ಅನಿರುದ್ಧಂ ತಥಾಷಾಢೇ ಪೂಜಯಿತ್ವಾ ಜಗದ್ಗುರುಂ ।**
**ದದ್ಯಾದಲಾಬುಪಾತ್ರಂ ಚ ಯೋಗಸ್ಥಾಯ ದ್ವಿಜಾತಯೇ ॥ ೫ ॥**

**ಇತ್ಯೇವಂ ಪಾರಣಂ ಪ್ರೋಕ್ತಂ ಸ್ವರ್ಗಲೋಕೇ ಮಹೀಯತೇ ।**
**ದ್ವಿತೀಯೇ ಪಾರಣೇ ಪ್ರಾಪ್ತೇ ಶಕ್ರಲೋಕೇ ಮಹೀಯತೇ ॥ ೬ ॥**

**ಸಾಲೋಕ್ಯಮಾಯಾತ್ಯಥ ಕೇಶವಸ್ಯ**
**ಪ್ರಾಪ್ತೇ ತೃತೀಯೇ ತ್ವಥ ಪಾರಣೇ ಚ ।**
**ಇತ್ಯಾಶ್ರಮಾಖ್ಯಂ ವ್ರತಮುತ್ತಮಂ**
**ತೇ ಮಯೇರಿತಂ ಕಲ್ಮಷನಾಶಕಾರಿ ॥ ೭ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಚತುರ್ಮೂರ್ತಿಕಲ್ಪೇ ಆಶ್ರಮವ್ರತವರ್ಣನೋ ನಾಮ ದ್ವಿಚತ್ವಾರಿಂಶದುತ್ತರ ಶತತಮೋಽಧ್ಯಾಯಃ**

---

ಜ್ಯೇಷ್ಠಮಾಸದಲ್ಲಿ ಪ್ರದ್ಯುಮ್ನನನ್ನು ಯಥಾವಿಧಿಯಾಗಿ ಪೂಜಿಸಿ ವಾನಪ್ರಸ್ಥನಾದ ಬ್ರಾಹ್ಮಣನಿಗೆ ಕ್ಷೀರದೊಡನೆ ಫಲಮೂಲಗಳನ್ನು ದಾನಮಾಡಬೇಕು ಹಾಗೆಯೇ ಆಷಾಢಮಾಸದಲ್ಲಿ ಅನಿರುದ್ಧಮೂರ್ತಿಯನ್ನು ಪೂಜಿಸಿ, ಯೋಗಿಯಾಗಿರುವ ಬ್ರಾಹ್ಮಣನಿಗೆ ಸೋರೆಕಾಯಿನಿಂದ ಮಾಡಿದ ಪಾತ್ರೆಯನ್ನು ದಾನಮಾಡಬೇಕು. ಈ ವಿಧವಾದ ವ್ರತವನ್ನಾಚರಿಸಿ ಪಾರಣೆ ಮಾಡಿದವನು ಸ್ವರ್ಗಲೋಕದಲ್ಲಿ ಪೂಜ್ಯನಾಗುತ್ತಾನೆ. ಎರಡನೆಯ ಪಾರಣೆಯು, ಇಂದ್ರಲೋಕ ಪ್ರಾಪ್ತಿಗೆ ಕಾರಣವಾಗುತ್ತದೆ ಮೂರನೆಯ ಪಾರಣೆಯನ್ನು ಹೊಂದಿದವನು ಕೇಶವನ ಸಾಲೋಕ್ಯವನ್ನೇ ಹೊಂದುತ್ತಾನೆ. ಈ ರೀತಿ ಆಶ್ರಮವ್ರತವನ್ನೂ ನಿನಗೆ ಹೇಳಿರುತ್ತೇನೆ:—ಇದು ಬಹುಮಟ್ಟಿಗೂ ಪಾಪನಾಶಕ್ಕೆ ಕಾರಣವಾಗುತ್ತದೆ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಚತುರ್ಮೂರ್ತಿಕಲ್ಪದಲ್ಲಿ ಆಶ್ರಮವ್ರತವರ್ಣನವೆಂಬ ನೂರ ನಲವತ್ತೆರಡನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ತ್ರಿಚತ್ವಾರಿಂಶದುತ್ತರಶತತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಇದಮನ್ಯತ್ಪ್ರವಕ್ಷ್ಯಾಮಿ ಚತುರ್ಮೂರ್ತಿವ್ರತಂ ತವ ।**
**ಚತುರಾತ್ಮಾ ಹರಿಃ ಪ್ರೋಕ್ತಃ ಚತ್ವಾರಸ್ತು ಹುತಾಶನಾಃ || ೧ ||**

**ಆಹಿತಾಗ್ನಿರ್ದ್ವಿಜೋ ಯಸ್ಯ ವಿದ್ಯತೇಽಗ್ನಿಚತುಷ್ಟಯಂ ।**
**ಸೋಪವಾಸಶ್ಚತುರ್ಥ್ಯಾಂ ತು ಶುಕ್ಲಪಕ್ಷಸ್ಯ ಫಾಲ್ಗುನೇ || ೨ ||**

**ಅಭ್ಯರ್ಚ್ಯ ಚತುರಾತ್ಮಾನಂ ವಾಸುದೇವಮತಂದ್ರಿತಃ ।**
**ತಸ್ಮೈ ದದ್ಯಾದ್ದ್ವಿಜೇಂದ್ರಾಯ ತಿಲಪ್ರಸ್ಥಾನಿ ಷೋಡಶ || ೩ ||**

---

### ನೂರ ನಲವತ್ತಮೂರನೆಯ ಅಧ್ಯಾಯ.

೧-೭. ಮಾರ್ಕಂಡೇಯರು ಹೇಳುತ್ತಾರೆ:—ಮತ್ತೊಂದು ಚತುರ್ಮೂರ್ತಿಯ ವ್ರತವನ್ನು ನಿನಗೆ ಹೇಳುತ್ತೇನೆ:—ಅಗ್ನಿಗಳು ನಾಲ್ಕು ವಿಧವಾಗಿವೆ. ಈ ಅಗ್ನಿಗಳನ್ನು ಶರೀರವನ್ನಾಗಿ ಧರಿಸಿರುವ ಹರಿಯು ಚತುರ್ಮೂರ್ತಿಯಾಗುತ್ತಾನೆ. ಅಗ್ನಿಯ ಚತುಷ್ಟಯವನ್ನು ಹೊಂದಿ, ಆಹಿತಾಗ್ನಿಯಾಗಿರುವ ಬ್ರಾಹ್ಮಣನೊಬ್ಬನನ್ನು ಸತ್ಕಾರಕ್ಕೆ ಏರ್ಪಡಿಸಿಕೊಳ್ಳಬೇಕು. ಫಾಲ್ಗುನ ಶುಕ್ಲಪಕ್ಷದ ಚತುರ್ಥೀ ದಿನ ಉಪವಾಸಮಾಡಿ, ಈ ರೀತಿಯಾದ ಚತುರ್ಮೂರ್ತಿಯಾದ ವಾಸುದೇವನನ್ನು ಆರಾಧಿಸಬೇಕು. ಮೇಲೆ ಹೇಳಿರುವ ಆಹಿತಾಗ್ನಿಯಾದ ಬ್ರಾಹ್ಮಣನಿಗೆ ಹದಿನಾರು ಕೊಳಗ ಎಳ್ಳು, ಸುವರ್ಣ, ಸುವರ್ಣದಂತಹ ವಸ್ತ್ರ, ಘೃತಕುಂಭ ಇವನ್ನು ದಾನ

ಸುವರ್ಣಸ್ಯ ಸುವರ್ಣಂ ಚ ವಸ್ತ್ರಂ ಘೃತತುಲಾಮಪಿ ।
ಏವಂ ಸಂವತ್ಸರಂ ಕೃತ್ವಾ ವ್ರತಮೇತದತಂದ್ರಿತಃ ॥ ೪ ॥

ಸರ್ವಕಾಮಸಮೃದ್ಧಸ್ಯ ಯಜ್ಞಸ್ಯ ಫಲಮಶ್ನುತೇ ।
ವಿಮಾನೇನಾರ್ಕವರ್ಣೇನ ಸ್ವರ್ಗಲೋಕಂ ಚ ಗಚ್ಛತಿ ॥ ೫ ॥

ಮಾನುಷೋ ದೀಪ್ತತೇಜಾಃ ಸ್ಯಾದ್ಧೀಪ್ತಾಗ್ನಿಃ ಪ್ರಮದಾಪ್ರಿಯಃ ।
ರಿಪೂನ್ ಜಯತಿ ಸಂಗ್ರಾಮೇ ಧನವಾಂಶ್ಚ ತಥಾ ಭವೇತ್ ॥ ೬ ॥

ಯೇತ್ವಗ್ನಯೋ ವೈ ಚತುರಃ ಪ್ರದಿಷ್ಟಾಃ
ಸ ವಾಸುದೇವಃ ಕಥಿತಶ್ಚತುರ್ಧಾ ।
ಯಃ ಪೂಜಯೇದ್ಬ್ರಾಹ್ಮಣಮಾಹಿತಾಗ್ನಿಂ
ದೇವಃ ಸ ತೇನಾಪ್ಯಥ ಪೂಜಿತಃ ಸ್ಯಾತ್ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯ ಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಸಪ್ತಮಚತುರ್ಮೂರ್ತಿಕಲ್ಪೇ ಅಗ್ನಿವ್ರತವರ್ಣನೋ ನಾಮ ತ್ರಿಚತ್ವಾರಿಂಶದುತ್ತರಶತತಮೋಽಧ್ಯಾಯಃ

---

ಮಾಡಬೇಕು. ಈ ರೀತಿ ಸಂವತ್ಸರಪೂರ್ತಿ ವ್ರತವನ್ನು ಮಾಡಿದವನು ಸರ್ವ ಸಮೃದ್ಧವಾದ ಯಜ್ಞದ ಫಲವನ್ನೇ ಹೊಂದುತ್ತಾನೆ. ಸೂರ್ಯನಂತೆ ಜ್ವಲಿಸುವ ವಿಮಾನದಿಂದ ಸ್ವರ್ಗಲೋಕವನ್ನು ಹೊಂದುತ್ತಾನೆ. ಮನುಷ್ಯನಾಗಿರುವಾಗಲೂ ತೇಜಸ್ವಿಯಾಗಿಯೂ, ಅಗ್ನಿವೃದ್ಧಿಯುಳ್ಳವನಾಗಿಯೂ, ಪ್ರಮದಾಪ್ರಿಯನಾಗಿಯೂ, ಶತ್ರುವಿಜಯಿಯಾಗಿಯೂ, ಧನವಂತನಾಗಿಯೂ ಆಗಿರುತ್ತಾನೆ. ಈ ಅಗ್ನಿಗಳೆಲ್ಲವೂ ಆ ವಾಸುದೇವನ ನಾಲ್ಕು ವಿಧವಾದ ರೂಪಗಳೇ ಆಗಿವೆ ಆದುದರಿಂದ ಇಂತಹ ಅಗ್ನಿಯುಳ್ಳ ಆಹಿತಾಗ್ನಿಯಾದ ಬ್ರಾಹ್ಮಣನ ಪೂಜೆ ನಡೆಸಿದಲ್ಲಿ ವಾಸುದೇವನ ಪೂಜೆಯನ್ನೇ ನಡೆಸಿದಂತಾಗುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಸಪ್ತಮ ಚತುರ್ಮೂರ್ತಿಕಲ್ಪದಲ್ಲಿ ಅಗ್ನಿವ್ರತವರ್ಣನವೆಂಬ ನೂರ ನಲವತ್ತಮೂರನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಚತುಶ್ಚತ್ವಾರಿಂಶದುತ್ತರಶತತಮೋಽಧ್ಯಾಯಃ ||

### || ಮಾರ್ಕಂಡೇಯ ಉವಾಚ ||

ಇದಮನ್ಯತ್ಪ್ರವಕ್ಷ್ಯಾಮಿ ಚತುರ್ಮೂರ್ತಿವ್ರತಂ ತವ ।
ಚೈತ್ರಶುಕ್ಲಸಮಾರಮ್ಭೇ ಪ್ರಥಮೇಽಹನಿ ಪೂಜಯೇತ್ ॥ ೧ ॥

ಕೃತಂ ಶುಕ್ಲೇನ ಸರ್ವೇಣ ಗಂಧಮಾಲ್ಯಾದಿನಾ ದ್ವಿಜಃ ।
ದ್ವಿತೀಯೇಽಹನಿ ರಕ್ತೇನ ತಥಾ ತ್ರೇತಾಂ ತು ಪೂಜಯೇತ್ ॥ ೨ ॥

ತೃತೀಯೇಽಹನಿ ಪೀತೇನ ದ್ವಾಪರಂ ಪೂಜಯೇದ್ಬುಧಃ ।
ಚತುರ್ಥೇಽಹನಿ ಕೃಷ್ಣೇನ ತಿಷ್ಯಂ ಸಂಪೂಜಯೇದ್ಯುಗಂ ॥ ೩ ॥

---

### ನೂರ ನಲವತ್ತನಾಲ್ಕನೆಯ ಅಧ್ಯಾಯ.

೧-೭. ಮಾರ್ಕಂಡೇಯರು ಹೇಳುತ್ತಾರೆ:—ಮತ್ತೊಂದು ಚತುರ್ಮೂರ್ತಿ ವ್ರತವನ್ನು ನಿನಗೆ ಹೇಳುತ್ತೇನೆ:—ಚೈತ್ರ ಶುಕ್ಲ ಪ್ರತಿಪತ್ತಿನ ದಿನ ಬಿಳುಪಾದ ಗಂಧ ಮಾಲ್ಯಾದಿ ಪರಿಕರಗಳಿಂದ ಕೃತಯುಗವನ್ನು ಪೂಜಿಸಬೇಕು. ಎರಡನೆಯ ದಿನ ಕೆಂಪು ಬಣ್ಣದ ಪುಷ್ಪಾದಿ ಪರಿಕರಗಳಿಂದ ತ್ರೇತಾಯುಗವನ್ನೂ, ಮೂರನೆಯ ದಿನ ಹೊಂಬಣ್ಣದ ಪರಿಕರಗಳಿಂದ ದ್ವಾಪರಯುಗವನ್ನೂ, ನಾಲ್ಕನೆಯ ದಿನ ಕಪ್ಪಾದ ಪರಿಕರಗಳಿಂದ ಕಲಿಯುಗವನ್ನೂ ಪೂಜಿಸಬೇಕು. ಈ ದಿನಗಳಲ್ಲಿ ಕ್ರಮ

ಸಿದ್ಧಾರ್ಥಕೈಃ ಕುಂಕುಮೇನ ತಥೈವ ಚ ಹರಿದ್ರಯಾ ।
ತಥೈವಾಮಲಕಸ್ನಾನಮಾಚರೇದ್ದಿವಸಕ್ರಮಾತ್ ॥ ೪ ॥

ಸಿದ್ಧಾರ್ಥಕಾಕ್ಷತತಿಲೈರ್ಘೃತೇನ ಜುಹುಯಾತ್ತಥಾ ।
ಮುಕ್ತಾಫಲಂ ತಥಾವಜ್ರಂ ಪದ್ಮರಾಗಂ ಚ ಯಾದವ ॥ ೫ ॥

ಇಂದ್ರನೀಲಂ ತಥಾ ದದ್ಯಾದ್ವಿಪ್ರೇಷು ದಿವಸಕ್ರಮಾತ್ ।
ಕ್ಷೀರೇಣ ಪ್ರಾಣಯಾತ್ರಾಂ ತು ಕುರ್ಯಾತ್ಪ್ರತ್ಯಹಮೇವ ಚ ॥ ೬ ॥

ಕೃತ್ವಾ ವ್ರತಂ ವತ್ಸರಮೇತದೇಕಂ
ಚತುರ್ಯುಗಂ ಮೋದತಿ ನಾಕಪೃಷ್ಠೇ ।
ಸಂಪೂಜ್ಯ ದೇವಂ ಯುಗಮೂರ್ತಿಸಂಜ್ಞಂ
ಚತುರ್ಯುಗಂ ಶಾಸ್ತಿ ಮಹೀಂ ಸಮಗ್ರಾಂ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಅಷ್ಟಮಚತುರ್ಮೂರ್ತಿಕಲ್ಪೇ ಚತುರ್ಯುಗವ್ರತವರ್ಣನೋ ನಾಮ ಚತುಶ್ಚತ್ವಾರಿಂಶದುತ್ತರಶತತಮೋಽಧ್ಯಾಯಃ

---

ವಾಗಿ ಬಿಳಿಯ ಸಾಸವೆ, ಕುಂಕುಮಕೇಸರಿ, ಹರಿದ್ರಾ, ಆಮಲಕ (ನೆಲ್ಲಿ) ಇವುಗಳಿಂದ ಸ್ನಾನಮಾಡಬೇಕು. ಕ್ರಮವಾಗಿ ಬಿಳಿಯ ಸಾಸವೆ, ಅಕ್ಷತೆ, ತಿಲ, ಆಜ್ಯ ಇವುಗಳಿಂದ ಹೋಮಮಾಡಬೇಕು. ಮುತ್ತು, ವಜ್ರ, ಪದ್ಮರಾಗ, ನೀಲ ಈ ರತ್ನಗಳನ್ನು ಕ್ರಮವಾಗಿ ನಾಲ್ಕು ಪೂಜೆಯ ದಿನಗಳಲ್ಲೂ ಬ್ರಾಹ್ಮಣರಿಗೆ ದಾನಮಾಡಬೇಕು. ಪ್ರತಿನಿತ್ಯವೂ ಕ್ಷೀರದಿಂದಲೇ ದೇಹಯಾತ್ರೆಯನ್ನು ನಡೆಸಬೇಕು. ಈ ವ್ರತವನ್ನು ಒಂದು ವರ್ಷಕಾಲ ಹೀಗೆ ಆಚರಿಸಿದಲ್ಲಿ ಅವನು ಚತುರ್ಯುಗಪರ್ಯಂತವೂ ಸ್ವರ್ಗಸುಖಕ್ಕೆ ಭಾಗಿಯಾಗುತ್ತಾನೆ. ಈ ರೀತಿ ಯುಗಮೂರ್ತಿಯಾದ ವಾಸುದೇವನನ್ನು ಪೂಜಿಸಿದವನು ಚತುರ್ಯುಗಪರ್ಯಂತವೂ ಭೂಮಿಯನ್ನೇ ಆಳುತ್ತಾನೆ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದದಲ್ಲಿ ಅಷ್ಟಮ ಚತುರ್ಮೂರ್ತಿಕಲ್ಪದಲ್ಲಿ ಚತುರ್ಯುಗ ವ್ರತವರ್ಣನವೆಂಬ ನೂರ ನಲವತ್ತನಾಲ್ಕನೆಯ ಅಧ್ಯಾಯ ಮುಗಿದಿದೆ.

॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಪಂಚಚತ್ವಾರಿಂಶದುತ್ತರಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

**ಇದಮನ್ಯತ್ಪ್ರವಕ್ಷ್ಯಾಮಿ ಚತುರ್ಮೂರ್ತಿವ್ರತಂ ತವ ।**
**ನಿತ್ಯಂ ಚತುರ್ಷು ಮಾಸೇಷು ಶ್ರಾವಣಾದ್ಯೇಷು ಯಾದವ ॥ ೧ ॥**

**ಚತುಃಸಾಗರಚಿಹ್ನಾನಿ ಪೂರ್ಣಕುಂಭಾನಿ ಪೂಜಯೇತ್ ।**
**ಚತುರಾತ್ಮಾ ಹರಿರ್ಜ್ಞೇಯಃ ಸಾಗರಾತ್ಮಾ ವಿಚಕ್ಷಣೈಃ ।**
**ಸ್ನಾನಂ ಸಮಾಚರೇನ್ನಿತ್ಯಂ ನದೀತೋಯೇಷು ಯಾದವ ॥ ೨ ॥**

**ಹೋಮಂ ಚ ಪ್ರತ್ಯಹಂ ಕುರ್ಯಾದ್ಗವ್ಯೇನ ಪಯಸಾ ತಥಾ ।**
**ತಾನಿ ಕುಂಭಾನಿ ವಿಪ್ರೇಭ್ಯಃ ಪ್ರತ್ಯಹಂ ವಿನಿವೇದಯೇತ್ ॥ ೩ ॥**

---

### ನೂರ ನಲವತ್ತೈನೆಯ ಅಧ್ಯಾಯ.

೧-೭ ಮಾರ್ಕಂಡೇಯರು ಹೇಳುತ್ತಾರೆ :— ಮತ್ತೊಂದು ಚತುರ್ಮೂರ್ತಿ ವ್ರತವನ್ನು ನಿನಗೆ ಹೇಳುತ್ತೇನೆ. ಶ್ರಾವಣಮಾಸ ಮೊದಲು ಮಾಡಿಕೊಂಡು ನಾಲ್ಕು ತಿಂಗಳು ಚತುಃಸಾಗರಚಿಹ್ನೆಯುಳ್ಳ ನಾಲ್ಕು ಪೂರ್ಣಕುಂಭಗಳನ್ನು ಪೂಜಿಸಬೇಕು. ಇದೇ ಚತುಃಸಾಗರ ಶರೀರನಾದ ಹರಿಯ ರೂಪವೆಂದು ಭಾವಿಸಬೇಕು. ನಿತ್ಯವೂ ನದೀಜಲದಲ್ಲಿಯೇ ಸ್ನಾನಮಾಡಬೇಕು. ನಿತ್ಯವೂ ಹಸುವಿನ ಹಾಲಿನಿಂದಲೇ ಹೋಮವನ್ನು ಮಾಡಬೇಕು. ಆ ಕುಂಭಗಳನ್ನು ಪ್ರತಿನಿತ್ಯವೂ ಬ್ರಾಹ್ಮಣ

ಸೋಪಹಾರಾಣಿ ದರ್ಮಜ್ಞ ಭಕ್ತ್ಯಾ ಶಕ್ತ್ಯಾ ತಥೈವ ಚ ।
ನಕ್ತಂ ಚ ಪ್ರಾಶನಂ ಕುರ್ಯಾತ್ಸತತಂ ತೈಲವರ್ಜಿತಂ　　　॥ ೪ ॥

ಕಾರ್ತಿಕಸ್ಯಾವಸಾನೇಽಹ್ನಿ ಭೋಜಯಿತ್ವಾ ದ್ವಿಜೋತ್ತಮಾನ್ ।
ಧೇನುಂ ದತ್ವಾ ಚ ವಿಪ್ರಾಯ ನಾಕಪೃಷ್ಠೇ ಮಹೀಯತೇ ।
ಸರ್ವಕಾಮಸಮೃದ್ಧಸ್ಯ ಯಜ್ಞಸ್ಯ ಫಲಮಶ್ನುತೇ　　　॥ ೫ ॥

ಮಾನುಷ್ಯಮಾಸಾಧ್ಯ ಮಹೀಪತಿಃ ಸ್ಯಾ-
ದ್ಭುಕ್ತ್ವಾ ಮಹೀಂ ಸಾಗರಮೇಖಲಾನ್ತಾಂ ।
ತತ್ರಾಪಿ ಧರ್ಮಸ್ಯ ಪತಿರ್ನಿವಿಷ್ಟೋ
ಭವತ್ಯರೋಗಶ್ಚ ಬಲೇನ ಯುಕ್ತಃ　　　॥ ೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ವಿಷ್ಣುಚತುರ್ಮೂರ್ತಿಕಲ್ಪೇ ಸಾಗರವ್ರತವರ್ಣನೋ ನಾಮ ಪಂಚಚತ್ವಾರಿಂಶದುತ್ತರಶತತಮೋಽಧ್ಯಾಯಃ

---

ರಿಗೆ ಕೊಡಬೇಕು. ಇದರೊಡನೆ ಸ್ವಶಕ್ತಿಗೆ ತಕ್ಕಂತೆ ಉಪಹಾರಗಳನ್ನೂ ಭಕ್ತಿಯಿಂದ ಅರ್ಪಿಸಬೇಕು. ಯಾವಾಗಲೂ ತೈಲವರ್ಜಿತವಾದ ಭೋಜನವನ್ನು ರಾತ್ರಿಯಲ್ಲಿಯೇ ಮಾಡಬೇಕು. ಕಾರ್ತಿಕಮಾಸದ ಕೊನೆಯಲ್ಲಿ ಬ್ರಾಹ್ಮಣ ಭೋಜನ ಮಾಡಿಸಿ ಗೋದಾನವನ್ನೂ ಮಾಡಬೇಕು. ಹೀಗೆ ಮಾಡಿದವನು ಸ್ವರ್ಗಸುಖಕ್ಕೆ ಭಾಗಿಯಾಗುತ್ತಾನೆ. ಸರ್ವಸಮೃದ್ಧವಾದ ಯಜ್ಞದ ಫಲವನ್ನೂ ಹೊಂದುತ್ತಾನೆ. ಮನುಷ್ಯನಾಗಿ ಹುಟ್ಟಿದರೂ ಅಖಂಡಭೂಮಂಡಲಕ್ಕೂ ದೊರೆಯಾಗಿಯೂ, ಧಾರ್ಮಿಕನಾಗಿಯೂ, ಅರೋಗನಾಗಿಯೂ, ಬಲಶಾಲಿಯಾಗಿಯೂ ಬದುಕುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದದಲ್ಲಿ ವಿಷ್ಣುಚತುರ್ಮೂರ್ತಿಕಲ್ಪದಲ್ಲಿ ಸಾಗರವ್ರತವರ್ಣನವೆಂಬ ನೂರ ನಲವತ್ತೈದನೆಯ ಅಧ್ಯಾಯ ಮುಗಿದಿದೆ.

॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಷಟ್‌ಚತ್ವಾರಿಂಶದುತ್ತರಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

**ಇದಮನ್ಯತ್ಪ್ರವಕ್ಷ್ಯಾಮಿ ಚತುರ್ಮೂರ್ತಿವ್ರತಂ ತವ ।**
**ವಾಸುದೇವಸ್ಯ ಗರುಡಸ್ತಾಲಃ ಸಂಕರ್ಷಣಸ್ಯ ಚ ॥ ೧ ॥**

**ಪ್ರದ್ಯುಮ್ನಸ್ಯ ತಥಾ ಚಿಹ್ನಂ ಮಕರೋ ವ್ಯಾದಿತಾನನಃ ।**
**ದೇವೋಽನಿರುದ್ಧೋ ಧರ್ಮಜ್ಞ ಋಷ್ಯಕೇತುಃ ಪ್ರಕೀರ್ತಿತಃ ॥ ೨ ॥**

**ಪೀತಂ ನೀಲಂ ತಥಾ ಶ್ವೇತಂ ರಕ್ತಂ ಚ ಯದುನಂದನ ।**
**ತೇಷಾಂ ತು ಕಥಿತಂ ವಾಸಃ ಪತಾಕಾ ತಾದೃಗಿಷ್ಯತೇ ॥ ೩ ॥**

---

### ನೂರ ನಲವತ್ತಾರನೆಯ ಅಧ್ಯಾಯ.

೧-೫. ಮಾರ್ಕಂಡೇಯರು ಹೇಳುತ್ತಾರೆ:—ಮತ್ತೊಂದು ಚತುರ್ಮೂರ್ತಿ ವ್ರತವನ್ನೂ ನಿನಗೆ ಹೇಳುತ್ತೇನೆ. ವಾಸುದೇವನಿಗೆ ಗರುಡನೂ, ಸಂಕರ್ಷಣನಿಗೆ ತಾಲವೂ, ಪ್ರದ್ಯುಮ್ನನಿಗೆ ಬಾಯಿತೆರೆದುಕೊಂಡಿರುವ ಮಕರವೂ, ಅನಿರುದ್ಧನಿಗೆ ಋಷ್ಯಕೇತುವೂ ಚಿಹ್ನಗಳೆಂದು ಪ್ರಸಿದ್ಧಿ ಇದೆ. ಈ ಚಿಹ್ನೆಗಳಿಗೆ ಕ್ರಮವಾಗಿ ವಸ್ತ್ರಗಳೂ ಸಹ ಹೊಂಬಣ್ಣ, ನೀಲ, ಬಿಳಿಪು, ಕೆಂಪು. ಪತಾಕೆಗಳೂ ಸಹ ಇದೇ ಬಣ್ಣದವು. ಯಾವ ದೇವತೆಗೆ ಯಾವುದು ಚಿಹ್ನವಾಗಿದೆಯೋ ಅದೇ ಆತ್ಮವೆಂದಿನಿಸು

ಯಸ್ಯ ದೇವಸ್ಯ ಯಚ್ಚಿಹ್ನಂ ಸ ಚಾತ್ಮಾ ನಾಮಕೀರ್ತಿತಃ ।
ಪತಾಕಾ ಯಾದೃಶೀ ಯಸ್ಯ ವಸನಂ ತಸ್ಯ ತಾದೃಶಂ ॥ ೪ ॥

ಚೈತ್ರೇ ತು ಪ್ರತ್ಯಹಂ ಮಾಸಿ ಗರುಡಂ ಪೂಜಯೇನ್ನರಃ ।
ಪೀತೇನ ಗಂಧನೈವೇದ್ಯಮಾಲ್ಯವಸ್ತ್ರಾದಿನಾ ದ್ವಿಜಃ ॥ ೫ ॥

ವೈಶಾಖೇ ಚ ತಥಾ ಮಾಸಿ ತಾಲಂ ಸಂಪೂಜಯೇತ್ಸದಾ ।
ನೀಲೇನ ಗಂಧನೈವೇದ್ಯಮಾಲ್ಯವಸ್ತ್ರಾದಿನಾ ದ್ವಿಜಃ ॥ ೬ ॥

[1]ಝಷ್ಯಂ ಸಂಪೂಜಯೇದ್ದೇವಂ ಮಾಸ್ಯಾಷಾಢೇ ಯಥಾವಿಧಿ ।
ರಕ್ತೇನ ಗಂಧನೈವೇದ್ಯಮಾಲ್ಯವಸ್ತ್ರಾದಿನಾ ದ್ವಿಜಃ ॥ ೭ ॥

ಬಹಿಃ ಸ್ನಾನಂ ತಥಾ ಕುರ್ಯಾದ್ವಹ್ನಿಸಂಪೂಜನಂ ತತಃ ।
ನಿತ್ಯಂ ಚ ಕುರ್ಯಾದ್ಧರ್ಮಜ್ಞ ತಥಾ ಬ್ರಾಹ್ಮಣತರ್ಪಣಂ । ॥ ೮ ॥

ಪ್ರಾಣಯಾತ್ರಾಂ ತಥಾ ಕುರ್ಯಾದುಕ್ತಾಂ ತೈಲವಿವರ್ಜಿತಾಂ ।
ಅಧಃಶಾಯೀ ತಥಾ ಚ ಸ್ಯಾತ್ ಬ್ರಹ್ಮಚಾರೀ ತಥಾ ಭವೇತ್ ॥ ೯ ॥

---

ತ್ತದೆ. ಅಂತಹ ಚಿಹ್ನೆಗಳಿಗೆ ಪತಾಕೆಗಳ ಬಣ್ಣದಂತಹ ವಸ್ತ್ರಗಳೇ ಇವೆ. (ಈ ನಾಲ್ಕು ಚಿಹ್ನೆಗಳೂ ಸೇರಿ ಚತುರಾತ್ಮನೆಂದು ತಾತ್ಪರ್ಯ). ಚೈತ್ರಮಾಸದಲ್ಲಿ ಪ್ರತಿನಿತ್ಯವೂ ಹೊಂಬಣ್ಣವುಳ್ಳ ಗಂಧ, ನೈವೇದ್ಯ, ಪುಷ್ಪ, ವಸ್ತ್ರ, ಇತ್ಯಾದಿಗಳಿಂದ ಗರುಡನನ್ನು ಪೂಜಿಸಬೇಕು

೬-೯. ಹಾಗೆಯೇ ವೈಶಾಖಮಾಸದಲ್ಲಿ ನೀಲವಾದ ಗಂಧಪುಷ್ಪನೈವೇದ್ಯಾದಿಗಳಿಂದ ತಾಲವನ್ನು ಪೂಜಿಸಬೇಕು. ಆಷಾಢಮಾಸದಲ್ಲಿ ರಕ್ತವರ್ಣದ ಗಂಧಮಾಲ್ಯಾದಿಗಳಿಂದ ಪೂಜಿಸಬೇಕು. ನಿತ್ಯವೂ ಹೊರಗಿನ ಜಲದಲ್ಲಿ ಸ್ನಾನಮಾಡಿ ಅಗ್ನಿಪೂಜೆಮಾಡಬೇಕು. ನಿತ್ಯವೂ ಬ್ರಾಹ್ಮಣರನ್ನು ತೃಪ್ತಿಪಡಿಸಬೇಕು. ತೈಲವಿಲ್ಲದ ಆಹಾರದಿಂದ ಪ್ರಾಣಯಾತ್ರೆ ನಡೆಸಬೇಕು. ಅಧಃಶಯನ ಬ್ರಹ್ಮಚರ್ಯಗಳಿಂದಿರಬೇಕು. ಹೀಗೆಯೇ ನಾಲ್ಕುತಿಂಗಳು ಪೂರ್ತಿಯಾಗಿ ವ್ರತವನ್ನಾಚರಿಸಬೇಕು.

1 ಇಲ್ಲಿ ಜ್ಯೇಷ್ಠಮಾಸದ ಮಕರಪೂಜೆಯು ಮೂಲದಲ್ಲಿಯೇ ಬಿಟ್ಟುಹೋಗಿದೆ.

ವ್ರತಮೇತತ್ತಥಾ ಕುರ್ಯಾನ್ನಿತ್ಯಂ ಮಾಸಚತುಷ್ಟಯಂ ।
ಬ್ರಾಹ್ಮಣಾನ್ಪೂಜಯೇಚ್ಛಕ್ತ್ಯಾ ಚಾಷಾಢಚರಮೇಽಹನಿ ॥ ೧೦ ॥

ವಸ್ತ್ರಾಣ್ಯರ್ಥಾನಿ ಧರ್ಮಜ್ಞ ದದ್ಯಾದ್ವಿಪ್ರೇಷು ದಕ್ಷಿಣಾಂ ।
ಕೃತ್ವೈಕಂ ಪಾರಣಂ ರಾಜನ್ ಸ್ವರ್ಗಲೋಕೇ ಮಹೀಯತೇ ॥ ೧೧ ॥

ದ್ವಿತೀಯಂ ಪಾರಣಂ ಕೃತ್ವಾ ಶಕ್ರಲೋಕೇ ಮಹೀಯತೇ ।
ತೃತೀಯಂ ಪಾರಣಂ ಕೃತ್ವಾ ಬ್ರಹ್ಮಲೋಕೇ ಮಹೀಯತೇ ॥ ೧೨ ॥

ಕೃತ್ವಾ ಪಾರಣಷಟ್ಕಂ ತು ರುದ್ರಲೋಕೇ ಮಹೀಯತೇ ।
ವಿಷ್ಣುಲೋಕಮವಾಪ್ನೋತಿ ಕೃತ್ವಾ ದ್ವಾದಶಪಾರಣಂ ॥ ೧೩ ॥

ಧ್ವಜವ್ರತಂ ದ್ವಾದಶವತ್ಸರಾಣಿ
ಕೃತ್ವಾ ನರೋ ಭಾರ್ಗವವಂಶಮುಖ್ಯ ।
ಸಾಯುಜ್ಯಮಾಯಾತಿ ಜನಾರ್ದನಸ್ಯ
ದೇವಸ್ಯ ವಿಷ್ಣೋಃ ಪರಮೇಶ್ವರಸ್ಯ ॥ ೧೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಚತುರ್ಮೂರ್ತಿಕಲ್ಪೇ ಧ್ವಜವ್ರತವರ್ಣನೋ
ನಾಮ ಷಟ್ ಚತ್ವಾರಿಂಶದುತ್ತರಶತತಮೋಽಧ್ಯಾಯಃ

---

೧೦-೧೪. ಆಷಾಢಮಾಸದ ಕೊನೆಯದಿನಲ್ಲಿ ಬ್ರಾಹ್ಮಣರನ್ನು ಯಥಾಶಕ್ತಿ ಪೂಜಿಸಬೇಕು. ವಸ್ತ್ರಗಳನ್ನೂ ದ್ರವ್ಯವನ್ನೂ ಯಥಾಶಕ್ತಿ ದಕ್ಷಿಣೆಯನ್ನಾಗಿ ಕೊಡಬೇಕು. ಹೀಗೆ ಪಾರಣಮಾಡಿದವನು ಸ್ವರ್ಗಲೋಕಕ್ಕೆ ಭಾಗಿಯಾಗುತ್ತಾನೆ. ಎರಡನೆಯ ಪಾರಣೆ ಮಾಡಿದವನು ಇಂದ್ರಲೋಕಕ್ಕೆ ಭಾಗಿಯಾಗುತ್ತಾನೆ. ಮೂರನೆಯ ಪಾರಣೆ ಮಾಡಿದವನು ಬ್ರಹ್ಮಲೋಕಕ್ಕೆ ಹೋಗುತ್ತಾನೆ ಆರುಪಾರಣೆ ಮಾಡಿದವನು ರುದ್ರಲೋಕಕ್ಕೆ ಹೋಗಿಸೇರುತ್ತಾನೆ. ಹನ್ನೆರಡು ಪಾರಣೆ ಮಾಡಿದವನು ವಿಷ್ಣುಲೋಕವನ್ನೇ ಹೊಂದುತ್ತಾನೆ. ಈ ಧ್ವಜವ್ರತವನ್ನು ಹನ್ನೆರಡುವರ್ಷ ಪರ್ಯಂತವೂ ಯಾವನು ಆಚರಿಸುತ್ತಾನೆಯೋ ಅಂತಹವನು ಪರಮೇಶ್ವರನೂ ಜನಾರ್ಧನಮೂರ್ತಿಯೂ ಆದ ಮಹಾವಿಷ್ಣುವಿನ ಸಾಯುಜ್ಯವನ್ನೇ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಚತುರ್ಮೂರ್ತಿಕಲ್ಪದ ಧ್ವಜವ್ರತವರ್ಣನವೆಂಬ
ನೂರ ನಲವತ್ತಾರನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಸಪ್ತಚತ್ವಾರಿಂಶದುತ್ತರಶತತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಇದಮನ್ಯತ್ಪ್ರವಕ್ಷ್ಯಾಮಿ ಚತುರ್ಮೂರ್ತಿವ್ರತಂ ತವ ।**
**ಈಶಾನಂ ಚ ತಥಾ ವಹ್ನಿಂ ವಿರೂಪಾಕ್ಷಂ ಸಮೀರಣಂ || ೧ ||**

**ವಿಜ್ಞೇಯಂ ಯದುಶಾರ್ದೂಲ ದೇವಮೂರ್ತಿಚತುಷ್ಟಯಂ ।**
**ತೇಷಾಂ ತು ರೂಪನಿರ್ಮಾಣಂ ಕೃತ್ವಾ ತಾನರ್ಚಯೇದ್ಬುಧಃ || ೨ ||**

**ಗಂಧಮಾಲ್ಯನಮಸ್ಕಾರ ಧೂಪದೀಪಾನ್ನಸಂಪದಾ ।**
**ಚೈತ್ರಶುಕ್ಲೇ ಮಹಾಭಾಗಂ ಪ್ರತಿಪತ್ಪ್ರಭೃತಿಕ್ರಮಾತ್ || ೩ ||**

---

### ನೂರ ನಲವತ್ತೇಳನೆಯ ಅಧ್ಯಾಯ.

೧-೪. ಮಾರ್ಕಂಡೆಯರು ಹೇಳುತ್ತಾರೆ :— ಮತ್ತೊಂದು ಚತುರ್ಮೂರ್ತಿ ವ್ರತವನ್ನೂ ಹೇಳುತ್ತೇನೆ. ಈಶಾನ, ಅಗ್ನಿ, ವಿರೂಪಾಕ್ಷ, ವಾಯು ನಾಲ್ಕುವಿಧ ವಾದ ಈ ಮೂರ್ತಿಗಳೂ ವಾಸುದೇವನ ಮೂರ್ತಿಚತುಷ್ಟಯವೆಂದು ಭಾವಿಸಬೇಕು. ಇವರುಗಳ ರೂಪಗಳನ್ನು ಯಥಾವಿಧಿಯಾಗಿ ಮಾಡಿ ಇವರನ್ನು ಗಂಧಪುಷ್ಪಧೂಪ ದೀಪನೈವೇದ್ಯಾದಿಗಳಿಂದ ಪೂಜಿಸಬೇಕು. ಚೈತ್ರಶುಕ್ಲ ಪ್ರತಿಪತ್ತು ಮೊದಲು

ಭೌಮನಾದೇಯತಾಡಾಕಸಾರಸ್ಯೈಃ ಸ್ನಾನಮಾಚರೇತ್ ।
ದಧ್ನಾ ತಿಲೈರ್ಯವೈರ್ಹೋಮೋ ಘೃತೇನ ಚ ತಥಾ ಭವೇತ್ ॥ ೪ ॥

ಕರ್ಪೂರಂ ಕುಂಕುಮಂ ಚೈವ ತಥೈವಾಗುರುಚಂದನೇ ।
ಬ್ರಾಹ್ಮಣೇಷು ಪ್ರದಾತವ್ಯಂ ತಥಾ ರಾಜನ್ ದಿನಕ್ರಮಾತ್ ॥ ೫ ॥

ದಿನತ್ರಯಂ ತಥಾಶ್ನೀಯಾತ್ಸಾಯಂ ಪ್ರಾತರಯಾಚಿತಂ ।
ದಿನಮೇಕಂ ತಥಾಶ್ನೀಯಾದ್ಬ್ರಹ್ಮಚಾರೀ ನರೋತ್ತಮ ॥ ೬ ॥

ಏವಂ ಸಂವತ್ಸರಂ ಕೃತ್ವಾ ವ್ರತಂ ಪುರುಷಸತ್ತಮ ।
ಸರ್ವಕಾಮಸಮೃದ್ಧಸ್ಯ ಯಜ್ಞಸ್ಯ ಫಲಮಶ್ನುತೇ ॥ ೭ ॥

ಮಾನುಷ್ಯಮಾಸಾದ್ಯ ಭವತ್ಯರೋಗೋ
ವಸುಂಧರೇಶೋ ವಿಜಿತಾರಿಪಕ್ಷಃ ।

---

ಮಾಡಿಕೊಂಡು ಕ್ರಮವಾಗಿ ಪೂಜಿಸಬೇಕು. ಭಾವಿ, ನದಿ, ತಟಾಕ, ಸರಸ್ಸು ಇವುಗಳ ಜಲದಿಂದ ಕ್ರಮವಾಗಿ ನಾಲ್ಕು ದಿನಗಳಲ್ಲಿಯೂ, ಸ್ನಾನಮಾಡಬೇಕು. ಮೊಸರು, ಎಳ್ಳು, ಯವ, ತುಪ್ಪ ಇವುಗಳಿಂದ ಕ್ರಮವಾಗಿ ಹೋಮಮಾಡಬೇಕು.

೫-೮. ಕರ್ಪೂರ, ಕುಂಕುಮಕೇಸರಿ, ಅಗುರು, ಚಂದನ ಇವುಗಳನ್ನು ಕ್ರಮವಾಗಿ ಆಯಾಯ ದಿನಗಳಲ್ಲಿ ಬ್ರಾಹ್ಮಣರಿಗೆ ದಾನವಮಾಡಬೇಕು. ಮೂರು ದಿನಗಳಲ್ಲಿ ಯಾಚನೆ ಮಾಡದಂತೆ ಉಚಿತವಾದ ಆಹಾರದಿಂದ ಸಾಯಂಕಾಲ ಮತ್ತು ಪ್ರಾತಃಕಾಲ ಭೋಜನಮಾಡಬಹುದು. ಒಂದು ದಿನ ಮಾತ್ರ ಬ್ರಹ್ಮಚರ್ಯ ದಿಂದಿದ್ದು ಭುಂಜಿಸಬೇಕು. ಹೀಗೆ ಒಂದು ವರ್ಷ ವ್ರತವನ್ನಾಚರಿಸಿದವನು ಸರ್ವ ಸಮೃದ್ಧಿಯುಳ್ಳ ಯಜ್ಞದ ಫಲವನ್ನೇ ಹೊಂದುತ್ತಾನೆ. ಪುನಃ ಮನುಷ್ಯನಾಗಿ

ಜನ್ಮಾಂತರೇ ಸ್ಯಾದ್ದ್ವಿಜಯರ್ಯಮುಖ್ಯಃ
ವೇದಪ್ರಸಕ್ತೋ ಬಹುಯಜ್ಞಯಾಜೀ ॥ ೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಚತುರ್ಮೂರ್ತಿಕಲ್ಪೇ ದೇವಮೂರ್ತಿವ್ರತ
ವರ್ಣನೋ ನಾಮ
ಸಪ್ತಚತ್ವಾರಿಂಶದುತ್ತರಶತತಮೋಽಧ್ಯಾಯಃ

---

ಹುಟ್ಟಿದರೂ ಅರೋಗನಾಗಿಯೂ, ಶತ್ರುವಿಜಯವುಳ್ಳ ಭೂಪತಿಯಾಗಿಯೂ ಹುಟ್ಟುತ್ತಾನೆ. ಜನ್ಮಾಂತರದಲ್ಲಿ ಶಿಷ್ಟನಾಗಿಯೂ, ಯಜ್ಞಶೀಲನಾಗಿಯೂ, ವೇದಾಸಕ್ತನಾಗಿಯೂ, ಇರುವ ಬ್ರಾಹ್ಮಣನಾಗಿ ಹುಟ್ಟುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದದಲ್ಲಿ ಚತುರ್ಮೂರ್ತಿಕಲ್ಪದಲ್ಲಿ ದೇವಮೂರ್ತಿವ್ರತವರ್ಣನವೆಂಬ
ನೂರನಲವತ್ತೇಳನೆಯ ಅಧ್ಯಾಯ ಮುಗಿದಿದೆ.



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಅಷ್ಟಚತ್ವಾರಿಂಶದುತ್ತರಶತತಮೋಽಧ್ಯಾಯಃ ॥

**॥ ಮಾರ್ಕಂಡೇಯ ಉವಾಚ ॥**

**ಇದಮನ್ಯತ್ಪ್ರವಕ್ಷ್ಯಾಮಿ ಚತುರ್ಮೂರ್ತಿವ್ರತಂ ತವ ।**
**ಶಂಖಚಕ್ರಗದಾಪದ್ಮೈಶ್ಚತುರಾತ್ಮಾ ಪ್ರಕೀರ್ತಿತಃ ॥ ೧ ॥**

**ವಾಸುದೇವಃ ಸ್ಮೃತಃ ಶಂಖಶ್ಚಕ್ರಂ ಸಂಕರ್ಷಣಸ್ತಥಾ ।**
**ಪ್ರದ್ಯುಮ್ನಶ್ಚ ಗದಾ ಪದ್ಮಮನಿರುದ್ಧೋ ಜಗದ್ಗುರುಃ ॥ ೨ ॥**

**ಶ್ರಾವಣಾದಿಷು ಮಾಸೇಷು ಬಹಿಃಸ್ನಾನಸ್ತು ಭಕ್ತಭುಕ್ ।**
**ತೇಷಾಂ ಸಂಪೂಜನಂ ಕುರ್ಯಾತ್ಪ್ರತಿಮಾಸಮತಃಕ್ರಮಾತ್ ॥ ೩ ॥**

### ನೂರ ನಲವತ್ತೆಂಟನೆಯ ಅಧ್ಯಾಯ.

೧–೬. ಮಾರ್ಕಂಡೇಯರು ಹೇಳುತ್ತಾರೆ :—ಮತ್ತೊಂದು ಚತುರ್ಮೂರ್ತಿ ವ್ರತವನ್ನೂ ಹೇಳುತ್ತೇನೆ ಶಂಖಚಕ್ರಗದಾಪದ್ಮಗಳೆಂಬ ನಾಲ್ಕು ಆಯುಧಗಳಿಂದ ಹರಿಯು ಚತುರಾತ್ಮನಾಗುತ್ತಾನೆ. ಇದರಲ್ಲಿ ಶಂಖವೇ ವಾಸುದೇವನ ಅಂಶ. ಚಕ್ರವು ಸಂಕರ್ಷಣನ ಅಂಶ. ಗದೆಯು ಪ್ರದ್ಯುಮ್ನನ ಅಂಶ. ಪದ್ಮವು ಅನಿರುದ್ಧನ ಅಂಶ. ಶ್ರಾವಣಾದಿ ನಾಲ್ಕು ಮಾಸಗಳಲ್ಲಿ ಹೊರಗೆ ಸ್ನಾನಮಾಡಿ ಅನ್ನಭೋಜನ ಮಾಡಿದ ನಂತರ ಪ್ರತಿಮಾಸದಲ್ಲಿಯೂ ಕ್ರಮವಾಗಿ ಈ ಶಂಖಾದಿಗಳನ್ನು ಪೂಜಿಸಬೇಕು. ಗಂಧಪುಷ್ಪ ನಮಸ್ಕಾರ ಧೂಪದೀಪ ನೈವೇದ್ಯಾದಿಗಳಿಂದ ಪೂಜಿಸಿ ವ್ರತ

ಗಂಧಮಾಲ್ಯನಮಸ್ಕಾರ ಧೂಪದೀಪಾನ್ನಸಂಪದಾ ।
ತತಸ್ತು ಕಾರ್ತಿಕಸ್ಯಾಂತೇ ಸಮಾಪ್ತೇ ತು ತಥಾವ್ರತೇ ॥ ೪ ॥

ಬ್ರಾಹ್ಮಣಾನ್ಭೋಜಯೇದ್ಭಕ್ತ್ಯಾ ದದ್ಯಾಚ್ಛಕ್ತ್ಯಾ ಚ ದಕ್ಷಿಣಾಂ ।
ಕಾಂಸ್ಯಪಾತ್ರಂ ಚ ಸಘೃತಂ ಸಸುವರ್ಣಂ ತಥೈವ ಚ ॥ ೫ ॥

ಕೃತ್ವಾ ವ್ರತಂ ಮಾಸಚತುಷ್ಟಯಂ ತು
ಪ್ರಾಪ್ನೋತಿ ಲೋಕಂ ತ್ರಿದಶೇಶ್ವರಸ್ಯ ।
ಮಾನುಷ್ಯಮಾಸಾದ್ಯ ತಥೇಹಪಶ್ಚಾ-
ದ್ವಸುಂದರೇಶೋ ಭವತೀಹ ವೀರಃ ॥ ೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಚತುರ್ಮೂರ್ತಿವ್ರತಕಲ್ಪೇ ಆಯುಧವ್ರತವರ್ಣನೋನಾಮಾಷ್ಟಚತ್ವಾರಿಂಶದುತ್ತರಶತತಮೋಽಧ್ಯಾಯಃ

---

ಸಮಾಪ್ತಿಯಾದ ಮೇಲೆ ಕಾರ್ತಿಕಮಾಸದ ಕೊನೆಯಲ್ಲಿ ಬ್ರಾಹ್ಮಣಭೋಜನ ಮಾಡಿಸಬೇಕು. ಯಥಾಶಕ್ತಿ ದಕ್ಷಿಣೆಯನ್ನೂ ಕೊಟ್ಟು ಕಂಚಿನ ಪಾತ್ರೆಯಲ್ಲಿ ತುಪ್ಪವನ್ನು ತುಂಬಿ ಸುವರ್ಣದಕ್ಷಣೆಯೊಡನೆ ಕೊಡಬೇಕು. ಈ ರೀತಿ ನಾಲ್ಕು ಮಾಸಗಳಲ್ಲಿಯೂ ವ್ರತಮಾಡಿದವನು ವಿಷ್ಣುಲೋಕವನ್ನು ಹೊಂದುತ್ತಾನೆ. ಪುನಃ ಮನುಷ್ಯನಾಗಿ ಜನಿಸಿದಲ್ಲಿ ಶೂರನಾದ ಭೂಪತಿಯಾಗಿಯೇ ಆಗುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದದಲ್ಲಿ ಚತುರ್ಮೂರ್ತಿವ್ರತಕಲ್ಪದಲ್ಲಿ ಆಯುಧವ್ರತವರ್ಣನವೆಂಬ ನೂರ ನಲವತ್ತೆಂಟನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕೋನಪಂಚಾಶದುತ್ತರ ಶತತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಇದಮನ್ಯತ್ಪ್ರವಕ್ಷ್ಯಾಮಿ ಚತುರ್ಮೂರ್ತಿವ್ರತಂ ತವ ।**
**ತ್ರಿರಾತ್ರೋಪೋಷಿತಃ ಸಮ್ಯಗ್ವಸಂತೇ ವಿಷುವದ್ದಿನೇ ॥ ೧ ॥**

**ಪೂಜಾಂ ಕೃತ್ವಾ ಯಥಾಶಕ್ತಿ ವಾಸುದೇವಸ್ಯ ಶತ್ರುಹನ್ ।**
**ತತೋ ಮಾಸತ್ರಯಂ ನಿತ್ಯಂ ವಾಸುದೇವಂ ತು ಪೂಜಯೇತ್ ॥ ೨ ॥**

**ತಚ್ಚ ಮಾಸತ್ರಯಂ ತಿಷ್ಠೇತ್ಫಲಾಹಾರೋ ವಿಚಕ್ಷಣಃ ।**
**ತತಃ ಶಾರದಮಾಸಾದ್ಯ ಧರ್ಮಜ್ಞ ವಿಷುವದ್ದಿನಂ ॥ ೩ ॥**

---

### ನೂರ ನಲವತ್ತೊಂಭತ್ತನೆಯ ಅಧ್ಯಾಯ.

೧-೪. ಮಾರ್ಕಂಡೇಯರು ಹೇಳುತ್ತಾರೆ:—ಮತ್ತೊಂದು ಚತುರ್ಮೂರ್ತಿ ವ್ರತವನ್ನೂ ನಿನಗೆ ಹೇಳುತ್ತೇನೆ:—ವಸಂತಋತುವಿನಲ್ಲಿ ಮೂರು ದಿನ ಉಪವಾಸ ಮಾಡಿ ವಿಷುವದ್ದಿನದಲ್ಲಿ ಯಥಾಶಕ್ತಿ ವಾಸುದೇವನ ಪೂಜೆಯನ್ನು ಮಾಡಿ ಅನಂತರವೂ ಮೂರು ತಿಂಗಳು ನಿತ್ಯವೂ ವಾಸುದೇವನನ್ನು ಪೂಜಿಸಬೇಕು. ಈ ಮೂರು ತಿಂಗಳೂ ಫಲಗಳನ್ನೇ ಆಹಾರವನ್ನಾಗಿ ಉಪಯೋಗಿಸಬೇಕು. ಅನಂತರ ಶರದೃತುವಿನಲ್ಲಿ ಅಂತಹ ವಿಷುವದ್ದಿನದಲ್ಲಿ ಸ್ನಾನಾದಿಗಳನ್ನು ಮಾಡಿ ಮೂರು ರಾತ್ರಿ

ತ್ರಿರಾತ್ರೋಪೋಷಿತಃ ಸ್ನಾತ್ವಾ ಪ್ರದ್ಯುಮ್ನಂ ಪೂಜಯೇತ್ಪ್ರಿಯಂ ।
ಹೋಮಂ ಕೃತ್ವಾ ತತೋಽಶ್ನೀಯಾದ್ದತ್ವಾ ದಾನಂ ಚ ಶಕ್ತಿತಃ　　　　॥ ೪ ॥

ಪ್ರಾಣಾಯಾತ್ರಾಂ ತು ಕುರ್ವೀತ ಯಾವಕೇನ ಮಹಾಮತೇ ।
ವ್ರತಾವಸಾನಮಾಸಾದ್ಯ ಮಾಸನ್ತಂ ವಿಷುವದ್ದಿನಂ ।
ಬ್ರಾಹ್ಮಣಂ ಭೋಜಯೇಚ್ಛಕ್ತ್ಯಾ ದದ್ಯಾದ್ವಿಪ್ರೇಷು ದಕ್ಷಿಣಾಂ　　　　॥ ೫ ॥

ಕಾಂಚನಂ ರಜತಂ ವಸ್ತ್ರಂ ಗಾಂ ಚ ಯಾದವನಂದನ ।
ಏತತ್ಸಂವತ್ಸರಂ ಕೃತ್ವಾ ವ್ರತಂ ನಾಮ ಹರಿಪ್ರಿಯಂ　　　　॥ ೬ ॥

ಸ್ವರ್ಗಲೋಕಮವಾಪ್ನೋತಿ ಬಹುಕಾಲಮಸಂಶಯಂ ।
ತತೋಽಶ್ವಿಲೋಕಾನ್ ಪ್ರಾಪ್ನೋತಿ ವಸುಲೋಕಂ ತತೋ ದ್ವಿಜಃ　॥ ೭ ॥

ವಿಶ್ವೇಷಾಂ ಚೈವ ದೇವಾನಾಂ ತಥೈವಾಂಗಿರಸಾಂ ದ್ವಿಜಃ ।
ರುದ್ರಾಣಾಮಥ ಸಾಧ್ಯಾನಾಂ ಭೃಗೂಣಾಂ ಸವಿತುಸ್ತಥಾ　　　　॥ ೮ ॥

---

ಉಪವಾಸವಿದ್ದು ಪ್ರಿಯನಾದ ಪ್ರದ್ಯುಮ್ನನನ್ನು ಪೂಜಿಸಬೇಕು. ಹೋಮಮಾಡಿ ಯಥಾಶಕ್ತಿ ದಾನಮಾಡಿ ನಂತರ ಭೋಜನಮಾಡಬೇಕು.

೫-೭ ಹಲಸಂದೆಕಾಳಿನಿಂದ ಪ್ರಾಣಯಾತ್ರೆ ಹೊಂದಬೇಕು ವಸಂತ ಋತುವಿನ ವಿಷುವದ್ದಿನಪರ್ಯಂತ ವ್ರತವನ್ನು ಮುಗಿಸಿ, ಬ್ರಾಹ್ಮಣಭೋಜನವನ್ನೂ, ಯಥಾಶಕ್ತಿ ದಕ್ಷಿಣಾದಿಗಳನ್ನೂ, ಚಿನ್ನ, ಬೆಳ್ಳಿ, ವಸ್ತ್ರ, ಗೋವು ಇವುಗಳನ್ನು ದಾನಮಾಡಬೇಕು. ಹರಿಪ್ರೀತಿಕರವಾದ ಈ ವ್ರತವನ್ನು ಸಂವತ್ಸರಪರ್ಯಂತವೂ ಮಾಡಿದಲ್ಲಿ ಬಹುಕಾಲಪರ್ಯಂತ ಸ್ವರ್ಗಲೋಕದ ಸುಖಕ್ಕೆ ಭಾಗಿಯಾಗುತ್ತಾನೆ. ಅನಂತರ ಅಶ್ವಿನೀದೇವತೆಗಳ ಮತ್ತು ವಸುಗಳ ಲೋಕವನ್ನೂ ಹೊಂದುತ್ತಾನೆ. ವಿಶ್ವೇದೇವತೆಗಳ ಮತ್ತು ಆಂಗಿರಸರ ಲೋಕಗಳನ್ನೂ ಹೊಂದುತ್ತಾನೆ.

೮-೧೦. ರುದ್ರರ ಮತ್ತು ಸಾಧ್ಯರ, ಭೃಗುಗಳ ಮತ್ತು ಸವಿತೃದೇವತೆಯ ಹಾಗೂ ಮರುತ್ತುಗಳು, ಚಂದ್ರ ಇವರ ಲೋಕಗಳನ್ನೂ, ದೇವಲೋಕವನ್ನೂ

ಮರುತಾಮಪಿ ಧರ್ಮಜ್ಞ ಶಿಶಿರಾಂಶೋಸ್ತಥೈವ ಚ ।
ಪ್ರಾಪ್ನೋತಿ ದೇವಲೋಕಂ ಚ ಕಾಮಚಾರೀ ವಿಹಂಗಮಃ ॥ ೯ ॥

ಪ್ರಾಪ್ನೋತಿ ಲೋಕಂ ಸ ಹುತಾಶನಸ್ಯ
ಶಕ್ರಸ್ಯ ದೇವಸ್ಯ ತಥಾ ಹರಸ್ಯ ।
ಲೋಕಂ ಸಮಾಸಾದ್ಯ ಪಿತಾಮಹಸ್ಯ
ತತಃ ಸ ವಿಷ್ಣೋಃ ಪುರುಷಃ ಪ್ರಯಾತಿ ॥ ೧೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಚತುರ್ಮೂರ್ತಿವ್ರತಕಲ್ಪೇ ಫಲಾಹಾರಹರಿಪ್ರಿಯ ವರ್ಣನೋ ನಾಮೈಕೋನಪಂಚಾಶದುತ್ತರ ಶತತಮೋಽಧ್ಯಾಯಃ

---

ಕಾಮಚಾರಿಯಾಗಿಯೂ, ಗಗನಚಾರಿಯಾಗಿಯೂ ಇದ್ದು ಹೊಂದುತ್ತಾನೆ. ಹೀಗೆಯೇ, ಅಗ್ನಿ, ಇಂದ್ರ, ಹರ, ಪಿತಾಮಹ ಇವರ ಲೋಕಗಳನ್ನೂ ಹೊಂದಿ, ವಿಷ್ಣುಲೋಕವನ್ನೂ ಸೇರುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಚತುರ್ಮೂರ್ತಿ ವ್ರತಕಲ್ಪದ ಫಲಹಾರ ಹರಿಪ್ರಿಯವ್ರತವರ್ಣನವೆಂಬ ನೂರ ನಲವತ್ತೊಂಭತ್ತನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಪಂಚಾಶದುತ್ತರ ಶತತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಇದಮನ್ಯತ್ಪ್ರವಕ್ಷ್ಯಾಮಿ ಚತುರ್ಮೂರ್ತಿವ್ರತಂ ತವ ।**
**ತಸ್ಮಿನ್ನೇವ ವ್ರತೇ ರಾಜನ್ ಮಯಾ ಪೂರ್ವೋದಿತೇ ಶುಭೇ || ೧ ||**

**ವಿಷ್ಣೋಃ ಸ್ಥಾನೇತ್ವನಂತಸ್ಯ ಪೂಜಾ ಕಾರ್ಯಾ ವಿಜಾನತಾ ।**
**ತಸ್ಯ ಸಂಪೂಜನಂ ಕೃತ್ವಾ ಮಹೀಗಗನವೇಧಸಾಂ || ೨ ||**

**ದ್ವಿತೀಯಾದಿಷು ಕುರ್ವೀತ ಯಥಾವದ್ವಿಜಿತೇಂದ್ರಿಯಃ ।**
**ಅನಂತಂ ಪೂಜಯೇದ್ವಿದ್ವಾನ್ ಪ್ರಥಮೇಽಹ್ನಿ ಯಥಾವಿಧಿ || ೩ ||**

---

### ನೂರ ಐವತ್ತನೆಯ ಅಧ್ಯಾಯ

೧-೫. ಮಾರ್ಕಂಡೇಯರು ಹೇಳುತ್ತಾರೆ :—ಮತ್ತೊಂದು ಚತುರ್ಮೂರ್ತಿ ವ್ರತವನ್ನು ನಿನಗೆ ಹೇಳುತ್ತೇನೆ. ನಾನು ಹಿಂದೆ ಹೇಳಿರುವ ವ್ರತಗಳಲ್ಲೇ ಇದು ವಿಶೇಷ ವಿಧಿರೂಪವಾಗುತ್ತದೆ. ವಿಷ್ಣುವಿನ ಸ್ಥಾನದಲ್ಲಿ ಅನಂತನ ಪೂಜೆಯನ್ನು ಮಾಡಬಹುದು. ಅವನ ಪೂಜೆ ಮಾಡಿದ ನಂತರ ಭೂಮಿ, ಗಗನ ಮತ್ತು ಚತುರ್ಮುಖ ಇವರ ಪೂಜೆಗಳನ್ನೂ ದ್ವಿತೀಯಾದಿ ದಿನಗಳಲ್ಲಿ ಯಥಾವಿಧಿಯಾಗಿ ಜಿತೇಂದ್ರಿಯನಾಗಿದ್ದು ಮಾಡಬೇಕು. ಮೊದಲನೆಯ ದಿನದಲ್ಲಿ ಅನಂತನನ್ನು ಯಥಾವಿಧಿ ಪೂಜಿಸಬೇಕು. ಈ ವ್ರತನನ್ನು ಈ ರೀತಿ ಸಂವತ್ಸರ ಪೂರ್ತಿ ಆಚರಿಸಿದಲ್ಲಿ ಚತುರ್ದಶ ಇಂದ್ರರಿರುವವರೆಗೂ ವಿಷ್ಣುಲೋಕವನ್ನು ಹೊಂದಿ ಸುಖಿಸುತ್ತಾನೆ.

ವ್ರತಮೇತನ್ನರಃ ಕೃತ್ವಾ ಪೂರ್ಣಂ ಸಂವತ್ಸರಂ ತತಃ ।
ವಿಷ್ಣುಲೋಕಮವಾಪ್ನೋತಿ ಯಾವದಿಂದ್ರಾಶ್ಚತುರ್ದಶ ॥ ೪ ॥

ಮಾನುಷ್ಯಮಾಸಾದ್ಯ ಭವತ್ಯರೋಗೋ
ಜಿತೇಂದ್ರಿಯಃ ಸತ್ಯಪರೋ ವಿನೀತಃ ।
ಧನೇನ ರೂಪೇಣ ಸುಖೇನ ಯುಕ್ತೋ
ಜನಾಭಿರಾಮಃ ಪ್ರಮದಾಪ್ರಿಯಶ್ಚ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಚತುರ್ಮೂರ್ತಿಕಲ್ಪೇ ಅನಂತವ್ರತವರ್ಣನೋ
ನಾಮ ಪಂಚಾಶದುತ್ತರ ಶತತಮೋಽಧ್ಯಾಯಃ

---

ಮನುಷ್ಯನಾಗಿ ಹುಟ್ಟಿದರೂ ಆರೋಗನಾಗಿಯೂ, ಜಿತೇಂದ್ರಿಯನಾಗಿಯೂ, ಸತ್ಯವಂತನಾಗಿಯೂ, ವಿನೀತನಾಗಿಯೂ ಇದ್ದು ಧನ, ರೂಪ ಇವುಗಳಿಂದಲೂ ಕೂಡಿ ಜನಪ್ರಿಯನಾಗಿಯೂ, ಪ್ರೇಯಸೀಪ್ರಿಯನಾಗಿಯೂ ಸುಖಿಯಾಗಿರುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಚತುರ್ಮೂರ್ತಿಕಲ್ಪದ ಅನಂತವ್ರತವರ್ಣನವೆಂಬ
ನೂರ ಐವತ್ತನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕಪಂಚಾಶದುತ್ತರ ಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಇದಮನ್ಯತ್ಪ್ರವಕ್ಷ್ಯಾಮಿ ಚತುರ್ಮೂರ್ತಿವ್ರತಂ ತವ ।**
**ವಾಸುದೇವಾಂಶಕಾಜ್ಜಾತಾಃ ಸರ್ವೇ ದೇವಗಣಾ ನೃಪ** || ೧ ||

**ಅಧಿಕೇನ ತದಂಶೇನ ಸಾಧ್ಯಾ ಜಾತಾಸ್ತಥಾ ಸುರಾಃ ।**
**ತತ್ರಾಪಿ ಚಾಧಿಕಾಂಶೇನ ಚತುರಾತ್ಮಾ ಹರಿಃ ಸ್ಮೃತಃ** || ೨ ||

**ನರೋ ನಾರಾಯಣಶ್ಚೈವ ಹಯೋ ಹಂಸಶ್ಚ ವೀರ್ಯವಾನ್ ।**
**ಹಯೋ ಹರಿರಿತಿ ಖ್ಯಾತೋ ಹಂಸಃ ಕೃಷ್ಣಶ್ಚ ಕೀರ್ತಿತಃ** || ೩ ||

---

### ನೂರ ಐವತ್ತೊಂದನೆಯ ಅಧ್ಯಾಯ.

೧-೫. ಮಾರ್ಕಂಡೇಯರು ಹೇಳುತ್ತಾರೆ:— ಮತ್ತೊಂದು ಚತುರ್ಮೂರ್ತಿ ವ್ರತವನ್ನೂ ನಿನಗೆ ಹೇಳುತ್ತೇನೆ. ಎಲ್ಲಾ ದೇವಗಣಗಳೂ ವಾಸುದೇವನ ಅಂಶದಿಂದಲೇ ಹುಟ್ಟಿದವರು. ಅದರಲ್ಲಿ ಅಧಿಕವಾದ ಅಂಶದಿಂದ ಸಾಧ್ಯರೂ, ಸುರರೂ ಉಂಟಾದರು. ಚತುರಾತ್ಮನಾದ ಹರಿಯು ಅದಕ್ಕಿಂತಲೂ ಹೆಚ್ಚಾದ ಅಂಶದಿಂದ ಆವಿರ್ಭವಿಸಿದವನು, ನರ, ನಾರಾಯಣ, ಹಯಮುಖ, ಹಂಸ ಈ ನಾಲ್ಕು ರೂಪಗಳೇ ಆ ಅಧಿಕಾಂಶಕ್ಕೆ ಸೇರಿದ ಹರಿಯ ಆವಿರ್ಭಾವಗಳು, ಇವುಗಳಲ್ಲಿ ಹಯಮುಖನೇ ಸಾಕ್ಷಾತ್ತಾದ ಅಂಶವೆಂದೂ, ಹಂಸವೇ ಕೃಷ್ಣನ ಸಾಕ್ಷಾತ್ತಾದ ಅಂಶವೆಂದೂ ಹೇಳಲ್ಪಡುತ್ತವೆ. ಈ ರೀತಿ ಚತುರ್ಮುಖನಾದ ಹರಿಯು ಗೃಹಸ್ಥಧರ್ಮಕ್ಕೆ

ಚತುರಾತ್ಮಾ ಹರಿರ್ಜಾತೋ ಗೃಹೇ ಧರ್ಮಸ್ಯ ಯಾದವ ।
ಆದಿತ್ಯೇಷು ತಥಾ ಯುಕ್ತೋ ಮಿತ್ರಾವರುಣಸಂಜ್ಞಕೌ ॥ ೪ ॥

ತಾವೇವ ಸಾಧ್ಯೌ ಜಾನೀಹಿ ಹರಿಂ ಕೃಷ್ಣಂ ಚ ಯಾದವ ।
ಆದಿತ್ಯೇಷು ತು ಯಾವುಕ್ತೌ ಶಕ್ರವಿಷ್ಣೂ ಸುರೋತ್ತಮೌ ॥ ೫ ॥

ತಾವೇವ ಸಿದ್ಧಸಾಧ್ಯೇಷು ನರನಾರಾಯಣೌ ಪುನಃ ।
ಚೈತ್ರಶುಕ್ಲಚತುರ್ಥ್ಯಾಂ ತು ಸೋಪವಾಸಸ್ತು ಪೂಜಯೇತ್ ॥ ೬ ॥

ದೇವೇಶಂ ಚತುರಾತ್ಮಾನಂ ವಿತ್ತಶಕ್ತ್ಯಾ ನರಾಧಿಪ ।
ವ್ರತಮೇತನ್ನರಃ ಕೃತ್ವಾ ಪೂರ್ಣಂ ದ್ವಾದಶವತ್ಸರಂ ।
ನ ದುರ್ಗತಿಮವಾಪ್ನೋತಿ ಮೋಕ್ಷೋಪಾಯಂ ಚ ವಿಂದತಿ ॥ ೭ ॥

ತತಃ ಸಮಾಸಾದ್ಯ ಚ ನಿಷ್ಕಲತ್ವಂ
ಪರೇಣ ಪುಂಸಾ ಚ ಸಮತ್ವಮೇತಿ ।

---

ತಕ್ಕಂತೆ ಪೂಜಿಸಲ್ಪಡುತ್ತಾನೆ. ಈ ಹರಿಯೇ ದೇವತೆಗಳಲ್ಲಿ ಸೇರಿ, ಮಿತ್ರಾವರುಣ ರೆಂಬ ಅಭಿಧಾನಹೊಂದುತ್ತಾನೆ. ಇವರೇ ಸಾಧ್ಯರೆಂಬ ಹರಿಕೃಷ್ಣರ ರೂಪಗಳೆಂದು ತಿಳಿಯಬೇಕು ಈ ದೇವತೆಗಳಲ್ಲಿ ಶಕ್ರ, ವಿಷ್ಣು ಎಂಬ ಯಾವ ದೇವತೆಗಳು ಹೇಳಲ್ಪಟ್ಟಿರುವರೋ ಇವರೇ ಸಿದ್ಧಸಾಧ್ಯರೆಂದು ಹೇಳಲಾದ ಪ್ರಭೇದಗಳಲ್ಲಿ ಸೇರಿದ ನರನಾರಾಯಣರು

೬-೮. ಚೈತ್ರಶುಕ್ಲಚತುರ್ಥಿಯಲ್ಲಿ ಉಪವಾಸದಿಂದಿದ್ದು ದೇವಾಧಿಪನಾದ ಹರಿಯನ್ನು ಈ ರೀತಿ ಚತುರಾತ್ಮನನ್ನಾಗಿ ಭಾವಿಸಿ ಯಥಾಶಕ್ತಿ ದ್ರವ್ಯಾದಿಗಳಿಂದ ಪೂಜಿಸಬೇಕು. ಈ ವ್ರತವನ್ನು ಹನ್ನೆರಡುವರ್ಷ ಪೂರ್ತಿ ಯಾವನು ಮಾಡುತ್ತಾನೆಯೋ ಅವನು ದಾರಿದ್ರ್ಯದೋಷಕ್ಕೆ ಗುರಿಯಾಗುವುದಿಲ್ಲ ಮೋಕ್ಷೋಪಾಯವನ್ನೂ ಹೊಂದುತ್ತಾನೆ. ಆನಂತರ ಪುಣ್ಯಪಾಪಫಲ ಸಂಬಂಧರಹಿತನಾಗಿ

**ಸರ್ವೇಶ್ವರಶ್ಚಾಪ್ರತಿಮಪ್ರಭಾವೋ**
**ವಿಮುಕ್ತದುಃಖೋ ಭುವನಸ್ಯ ಗೋಪ್ತಾ　　　|| ೮ ||**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಚತುರ್ಮೂರ್ತಿವ್ರತೇ ಶ್ರೀವಿಷ್ಣುವ್ರತವರ್ಣನೋ**
**ನಾಮೈಕಪಂಚಾಶದಧಿಕಶತತಮೋಽಧ್ಯಾಯಃ**

---

ಪರಮಾತ್ಮನೊಡನೆ ಸಾಮ್ಯವನ್ನೇ ಹೊಂದುತ್ತಾನೆ. ಸರ್ವೇಶ್ವರನಾದ ಪರಮಾತ್ಮ ನಾವರೋ ಅಸದೃಶಪ್ರಭಾವನಾಗಿಯೂ ದುಃಖಗಂಧವಿಲ್ಲದೆಯೂ, ಜಗದ್ರಕ್ಷಕ ನಾಗಿಯೂ ಇರುವನಷ್ಟೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಚತುರ್ಮೂರ್ತಿಕಲ್ಪದ ಶ್ರೀ ವಿಷ್ಣುವರ್ಣವೆಂಬ
ನೂರ ಐವತ್ತೊಂದನೆಯ ಅಧ್ಯಾಯ ಮುಗಿದಿದೆ.



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ದ್ವಿಪಂಚಾಶದುತ್ತರಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

**ಅತಃಪರಂ ಪ್ರವಕ್ಷ್ಯಾಮಿ ಪಂಚಮೂರ್ತೇಸ್ತಥಾರ್ಚನಂ ।**
**ಪೃಥಿವ್ಯಾಪಸ್ತಥಾ ತೇಜೋ ವಾಯುರಾಕಾಶಮೇವ ಚ ॥ ೧ ॥**

**ವಾಸುದೇವಸ್ಯ ದೇವಸ್ಯ ಕಥಿತಾಃ ಪಂಚಮೂರ್ತಯಃ ।**
**ಚೈತ್ರೇ ತು ಪಂಚಮೀಂ ಶುಕ್ಲಾಂ ಸಮಾಸಾದ್ಯ ವಿಚಕ್ಷಣಃ ॥ ೨ ॥**

**ಸೋಪವಾಸೋ ಹರಿಂ ದೇವಂ ಪಂಚಾತ್ಮಾನಂ ಸಮರ್ಚಯೇತ್ ।**
**ಪಂಚಮಂಡಲಗಾಃ ಕಾರ್ಯಾಃ ಪಂಚಭಿಃ ವರ್ಣಕೈಃ ಪೃಥಕ್ ॥ ೩ ॥**

---

### ನೂರ ಐವತ್ತೆರಡನೆಯ ಅಧ್ಯಾಯ.

೧-೪. ಮಾರ್ಕಂಡೇಯ ಹೇಳುತ್ತಾರೆ :— ಇನ್ನು ಮುಂದೆ ಪಂಚಮೂರ್ತಿಯ ಪೂಜಾಕ್ರಮವನ್ನು ಹೇಳುತ್ತೇನೆ. ಭೂಮಿ, ಜಲ, ತೇಜಸ್ಸು, ವಾಯು, ಆಕಾಶ ಎಂಬ ಪಂಚ ಮಹಾಭೂತಗಳೂ ಪ್ರಭುವಾದ ವಾಸುದೇವನ ಐದು ಮೂರ್ತಿಗಳು ಚೈತ್ರ ಶುಕ್ಲಪಂಚಮಿಯ ದಿನ ಉಪವಾಸದಿಂದಿದ್ದು ಪಂಚಮೂರ್ತ್ಯಾತ್ಮಕನಾದ ಹರಿಯನ್ನು ಪೂಜಿಸಬೇಕು ಬೇರೆ ಬೇರೆ ಬಣ್ಣಗಳಿಂದ ಐದು ಮಂಡಲಗಳನ್ನು ಮಾಡಿ ಆ ಮಂಡಲಗಳನ್ನು ಹೊಂದಿರುವಂತೆ ಆ ಮೂರ್ತಿಗಳನ್ನು ಭಾವಿಸಿ

ಪಾರ್ಥಿವಂ ಮಂಡಲಂ ಕಾರ್ಯಂ ಶುಕ್ಲವರ್ಣಂ ಮಹೀಪತೇ ।
ವಾರುಣಂ ಚ ತಥಾ ಶ್ವೇತಂ ರಕ್ತಮಾಗ್ನೇಯಮಿಷ್ಯತೇ ॥ ೪ ॥

ಪೀತಂ ಭವತಿ ವಾಯವ್ಯಂ ಕೃಷ್ಣಮಾಕಾಶದೈವತಂ ।
ಸಮಾನವರ್ಣೈಃ ಗಂಧೈಸ್ತು ಪುಷ್ಪೈಸ್ತಾನರ್ಚಯೇತ್ಪೃಥಕ್ ॥ ೫ ॥

ಶಕ್ತ್ಯಾ ಚ ಧೂಪದೀಪಾದ್ಯೈರ್ಯಥಾಲಾಭಮರಿಂದಮ ।
ಯವೈರ್ವಾ[1]ನ್ಯೈಸ್ತಿಲೈಶ್ಚೈವ ಸರ್ಷಪೈಶ್ಚ ಘೃತೇನ ಚ ॥ ೬ ॥

ಪಂಚಭಿರ್ಜುಹುಯಾನ್ಮಿಶ್ರೈಃ ಸರ್ವೇಷಾಂ ಚ ಪೃಥಕ್ ಪೃಥಕ್ ।
ತಲ್ಲಿಂಗೈರಥಮಂತ್ರೈರ್ವಾ ತ್ವಥವಾ ನೃಪಸಾಮಭಿಃ ॥ ೭ ॥

ಓಂಕಾರಪೂರ್ವಕೈರ್ಹುತ್ವಾ ಶಕ್ತ್ಯಾ ವಿಪ್ರಾಂಸ್ತು ಪೂಜಯೇತ್ ।
ಏವಂ ಸಂವತ್ಸರಂ ಕೃತ್ವಾ ಪೂರ್ಣೇ ಸಂವತ್ಸರೇ ತತಃ ॥ ೮ ॥

---

ಪೂಜಿಸಬೇಕು  ಪೃಥಿವಿಯ, ಮಂಡಲವನ್ನು ಬಿಳಿಯಬಣ್ಣದಿಂದಲೂ ಜಲದ ಮಂಡಲವನ್ನು ಶ್ವೇತವರ್ಣದಿಂದಲೂ, ಅಗ್ನಿಯಮಂಡಲವನ್ನು ಕೆಂಪುಬಣ್ಣದಿಂದಲೂ ಮಾಡಬೇಕು

೫-೮. ವಾಯುವಿಗೆ ಹೊಂಬಣ್ಣದ ಮಂಡಲ. ಆಕಾಶದೇವತೆಗೆ ಕೃಷ್ಣವರ್ಣದ ಮಂಡಲ. ಈ ರೀತಿ ಮಂಡಲವ್ಯವಸ್ಥೆಯಿಂದ ಆಯಾಯ ಮಂಡಲಗಳ ವರ್ಣವಂತಹ ಗಂಧಪುಷ್ಪಗಳಿಂದಲೂ, ಧೂಪದೀಪಾದಿಗಳಿಂದ, ಯಥಾಶಕ್ತಿ ಪ್ರತ್ಯೇಕವಾಗಿ ಪೂಜಿಸಬೇಕು. ಯವ, ಆರಣ್ಯದಲ್ಲಿ ಬೆಳೆದ ಧಾನ್ಯ, ತಿಲ, ಸಾಸವೆ, ಘೃತ ಇವುಗಳನ್ನು ಮಿಶ್ರಮಾಡಿ ಎಲ್ಲಾ ಮಂಡಲಗಳಲ್ಲಿಯೂ ಬೇರೆಬೇರೆ ಹೋಮಮಾಡಬೇಕು ಆಯಾಯ ಭೂತಗಳ ಲಿಂಗ (ವಾಚಕಶಬ್ದ) ಗಳಿರುವ ಮಂತ್ರಗಳಿಂದಾಗಲಿ ಅಥವಾ ಸಾಮಗಳಿಂದಲೇ ಆಗಲಿ, ಓಂಕಾರಪೂರ್ವಕವಾಗಿ ಹೋಮಮಾಡಿ ಶಕ್ತಿಗೆ ತಕ್ಕಂತೆ ಬ್ರಾಹ್ಮಣರನ್ನು ಪೂಜಿಸಬೇಕು. ಹೀಗಿ ಆ ವರ್ಷಪೂರ್ತಿಯಾಗಿ ಆಚರಿಸಿ ವರ್ಷವು ಪೂರ್ತಿಯಾದ ಮೇಲೆ ಬ್ರಾಹ್ಮಣರಿಗೆ ಆಯಾಯ ದೇವತೆಗಳ ವರ್ಣಕ್ಕೆ ಸಮಾನವಾದ ವರ್ಣಗಳುಳ್ಳ ವಸ್ತುಗಳನ್ನು ದಾನಮಾಡಬೇಕು.

---

[1] ಇಲ್ಲಿ ವನ್ಯೈಃ ಎಂದು ಪಾಠವಿರಬೇಕೆಂದು ತೋರುತ್ತದೆ.

ದತ್ವಾ ವಿಪ್ರೇಷು ವಸ್ತ್ರಾಣಿ ದೇವರಂಗಸಮಾನಿ ಚ ।
ಮಹಾಭೂತವ್ರತಮಿದಂ ಯಃ ಕರೋತ್ಯಥ ಪಂಚಕಂ ॥ ೯ ॥

ಪಂಚಯಜ್ಞಮವಾಪ್ನೋತಿ ಕ್ರಮಶೋ ಯೇಽನುಕೀರ್ತಿತಾಃ ।
ಬಹೂನ್ಯಬ್ದಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥ ೧೦ ॥

ಮಾನುಷ್ಯಮಾಸಾದ್ಯ ಭವತ್ಯರೋಗೋ
ಬಲಾನ್ವಿತೋ ವೈರಿಗಣಾಪಹರ್ತಾ ।
ಶ್ರುತೇನ ರೂಪೇಣ ಗುಣೇನ ಯುಕ್ತೋ
ಜನಾಭಿರಾಮಃ ಪ್ರಮದಾಪ್ರಿಯಶ್ಚ ॥ ೧೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಪಂಚಮೂರ್ತಿ ಪಂಚಮಹಾಭೂತವ್ರತವರ್ಣನೋನಾಮ ದ್ವಿಪಂಚಾಶದುತ್ತರಶತತಮೋಽಧ್ಯಾಯಃ

೯-೧೧. ಈ ಮಹಾಭೂತವ್ರತವನ್ನು ಐದು ಬಾರಿ ಯಾರು ಮಾಡುತ್ತಾರೆಯೋ ಅವರು ಕ್ರಮವಾಗಿ ಹೇಳಲ್ಪಟ್ಟಿರುವ ಪಂಚಮಹಾಯಜ್ಞಗಳ ಫಲವನ್ನು ಹೊಂದುತ್ತಾರೆ. ಬಹುಸಹಸ್ರವರ್ಷ ಪರ್ಯಂತವೂ ಸ್ವರ್ಗಸುಖಕ್ಕೆ ಭಾಗಿಯಾಗುತ್ತಾರೆ. ಮನುಷ್ಯನಾಗಿ ಜನಿಸಿದರೂ ಆರೋಗನಾಗಿಯೂ, ಬಲಶಾಲಿಯಾಗಿಯೂ, ವೈರಿವಿಜಯಿಯಾಗಿಯೂ, ಶಾಸ್ತ್ರಜ್ಞಾನದಿಂದಲೂ, ಸುರೂಪದಿಂದಲೂ ಕೂಡಿ ಜನಪ್ರಿಯನಾಗಿಯೂ, ಪ್ರೇಯಸೀಪ್ರಿಯನಾಗಿಯೂ ಸುಖಿಯಾಗಿರುತ್ತಾನೆ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಪಂಚಮೂರ್ತಿ ಪಂಚಮಹಾಭೂತವ್ರತವರ್ಣನವೆಂಬ ನೂರ ಐವತ್ತೆರಡನೆಯ ಅಧ್ಯಾಯ ಮುಗಿದಿದೆ.

॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ತ್ರಿಪಂಚಾಶದುತ್ತರ ಶತತಮೋಽಧ್ಯಾಯಃ ॥

**॥ ಮಾರ್ಕಂಡೇಯ ಉವಾಚ ॥**

**ಇದಮನ್ಯತ್ಪ್ರವಕ್ಷ್ಯಾಮಿ ಪಂಚಮೂರ್ತಿವ್ರತಂ ತವ ।**
**ಸಂವತ್ಸರಃ ಸ್ಮೃತೋ ವಹ್ನಿಃ ತಥಾರ್ಕಃ ಪರಿವತ್ಸರಃ ॥ ೧ ॥**

**ಇಡಾಪೂರ್ವಸ್ತಥಾಸೋಮ ಅನುಪೂರ್ವಃ ಪ್ರಜಾಪತಿಃ ।**
**ತತ್ಪೂರ್ವಶ್ಚ ತಥಾಪ್ರೋಕ್ತೋ ದೇವದೇವೋ ಮಹೇಶ್ವರಃ ॥ ೨ ॥**

**ತೇಷಾಂ ಮಂಡಲವಿನ್ಯಾಸೈಃ ಪ್ರಾಗ್ವದೇವ ವಿಧೀಯತೇ ।**
**ಪ್ರಾಗ್ವಚ್ಚ ಪೂಜನಂ ಕಾರ್ಯಂ ಹೋಮಃ ಕಾರ್ಯಸ್ತಥಾವಿಧಃ ॥ ೩ ॥**

---

### ನೂರ ಐವತ್ತಮೂರನೆಯ ಅಧ್ಯಾಯ.

೧-೪. ಮಾರ್ಕಂಡೇಯರು ಹೇಳುತ್ತಾರೆ :—ಮತ್ತೊಂದು ಪಂಚಮೂರ್ತಿ ವ್ರತವನ್ನೂ ನಿನಗೆ ಹೇಳುತ್ತೇನೆ ಸಂವತ್ಸರವೇ ವಹ್ನಿಯ ಸ್ವರೂಪ. ಇಡಾವತ್ಸರವೇ ಚಂದ್ರನ ಸ್ವರೂಪ, ಅನುವತ್ಸರವೇ ಪ್ರಜಾಪ್ರತಿಯ ಸ್ವರೂಪ. ತದ್ವತ್ಸರವೇ ದೇವಶ್ರೇಷ್ಠನಾದ ಮಹೇಶ್ವರ ಸ್ವರೂಪ, ಈ ರೀತಿ ಭಾವಿಸಿ ಇವರುಗಳನ್ನು ಹಿಂದೆ ಹೇಳಿರುವ ಮಂಡಲವಿನ್ಯಾಸ ಕ್ರಮದಿಂದ ಹಿಂದೆ ಹೇಳಿರುವಂತೆಯೇ ಪೂಜಿಸಬೇಕು. ಹೋಮವನ್ನೂ ಸಹ ಅದೇ ರೀತಿ ಮಾಡಬೇಕು. ಎಳ್ಳು, ಭತ್ತ, ಯವ, ಆಜ್ಯ,

ತಿಲವ್ರೀಹಿಯವೈಶ್ಚೈವ ಘೃತೇನ ಸಿತಸರ್ಷಪೈಃ ।
ತಲ್ಲಿಂಗೈರಥವಾ ಮಂತ್ರೈಃ ನಾಮಭಿಃ ಪ್ರತ್ಯಹಂ ಕ್ರಮಾತ್ ॥ ೪ ॥

ನಕ್ತಾಶನಸ್ತಥಾ ತಿಷ್ಠೇತ್ಪ್ರಾಗ್ವದ್ದಿವಸಪಂಚಕಂ ।
ಸಂವತ್ಸರಾಖ್ಯೇ ವರ್ಷೇತು ವ್ರತಮೇತತ್ಸಮಾರಭೇತ್ ॥ ೫ ॥

ವ್ರತಾವಸಾನೇ ದಾತವ್ಯಂ ಸುವರ್ಣಂ ಪಂಚ ಯಾದವ ।
ಚತುರ್ವೇದವಿದಾಂ ದೇಯಂ ಶಾಖಾಭೇದೇನ ಯಾದವ ॥ ೬ ॥

ಏಕೈಕಂ ಪಂಚಕಂ ದೇಯಂ ತಥಾ ಕಾಲವಿದೊ ಭವೇತ್ ।
ಅಶ್ವಮೇಧಫಲಂ ಹ್ಯೇತದ್ವ್ರತಂ ತವ ಮಯೇರಿತಂ ॥ ೭ ॥

ಯಥೇಷ್ಟಂ ಲೋಕಮಾಪ್ನೋತಿ ಕಾಮಚಾರೀ ವಿಹಂಗಮಃ ।
ಕೃತೇನಾನೇನ ಧರ್ಮಜ್ಞ ಪೂಜ್ಯಮಾನಃ ಸುರಾಸುರೈಃ ॥ ೮ ॥

ಮಾನುಷ್ಯಮಾಸಾದ್ಯ ಭವತ್ಯರೋಗೋ
ವರ್ಣೇನ ರೂಪೇಣ ಬಲೇನ ಯುಕ್ತಃ ।

---

ಬಿಳಿಯ ಸಾಸವೆ ಇವನ್ನು ಮಿಶ್ರಮಾಡಿ ಆಯಾಯ ಲಿಂಗಗಳುಳ್ಳ ಮಂತ್ರಗಳಿಂದಾಗಲಿ, ನಾಮಗಳಿಂದಾಗಲಿ ಪ್ರತಿನಿತ್ಯವೂ ಕ್ರಮವಾಗಿ ನಡೆಸಬೇಕು

೫-೯. ರಾತ್ರಿಯಲ್ಲೇ ಭೋಜನಮಾಡುತ್ತಾ ಮೊದಲಿನಂತೆಯೇ ಐದು ದಿನಗಳೂ ಇರಬೇಕು. ಸಂವತ್ಸರವೆಂಬ ವರ್ಷದಲ್ಲಿ ಈ ವ್ರತವನ್ನಾರಂಭಿಸಬೇಕು. ವ್ರತವು ಮುಗಿದ ಮೇಲೆ ಚತುರ್ವೇದವನ್ನೂ ತಿಳಿದಿರುವ ಬ್ರಾಹ್ಮಣರಿಗೆ ಆಯಾಯ ಶಾಖಾಭೇದದಿಂದ ಸುವರ್ಣಪಂಚಕವನ್ನು ದಕ್ಷಿಣೆಯಾಗಿ ಕೊಡಬೇಕು. ಕಾಲಜ್ಞನಾದ ಜ್ಯೋತಿಷಿಕನಿಗೆ ಐದು ಸುವರ್ಣವನ್ನೂ ಒಟ್ಟಾಗಿ ಕೊಡಬೇಕು. ನಿನಗೆ ಹೇಳಿರುವ ವ್ರತವು ಅಶ್ವಮೇಧಕ್ಕೆ ಸಮಾನವಾದ ಫಲವುಳ್ಳದ್ದು. ಈ ವ್ರತದಿಂದ ಸಂತುಷ್ಟನಾದ ಸುರಾಸುರವಂದ್ಯನಾದ ಪ್ರಭುವು ವ್ರತವನ್ನು ಮಾಡಿದವನಿಗೆ ಕಾಮ

ನೃಪಃ ಪ್ರತಾಪಾನತಶತ್ರುಸಂಘೋ
ದೇವೋತ್ತಮೋ ವಾ ಬಹುಯಜ್ಞಯಾಜೀ ॥ ೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಪಂಚವ್ರತವಿಧೌ ಸಂವತ್ಸರಪೂಜಾಯಾಮಶ್ವಮೇಧಫಲ ವರ್ಣನೋನಾಮ ತ್ರಿಪಂಚಾಶದುತ್ತರ ಶತತಮೋಽಧ್ಯಾಯಃ

---

ಚಾರತ್ವವನ್ನೂ ಗಗನಸಂಚಾರಿತ್ವವನ್ನೂ ಕೊಟ್ಟು ಯಥೇಷ್ಟ ಲೋಕಸಂಚಾರವನ್ನೂ ಅನುಗ್ರಹಿಸುತ್ತಾನೆ. ಮನುಷ್ಯನಾಗಿ ಹುಟ್ಟಿದರೂ ಆರೋಗನಾಗಿಯೂ, ರೂಪ ಬಲಾದಿಗಳಿಂದ ಕೂಡಿಯೂ, ಶತ್ರುನಾಶಕನಾಗಿಯೂ ಇರುವ ರಾಜನಾಗುತ್ತಾನೆ. ಯಜ್ಞಯಾಗಾದಿಗಳಿಂದ ಪ್ರಸಿದ್ಧಿಹೊಂದುತ್ತಾನೆ. ದೇವತೋತ್ತಮನಾಗಿಯಾದರೂ ಆಗುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಪಂಚವ್ರತವಿಧಿಯ ಸಂವತ್ಸರ ಪೂಜೆಯಲ್ಲಿ
ಅಶ್ವಮೇಧಫಲವರ್ಣನವೆಂಬ ನೂರ ಐವತ್ತಮೂರನೆಯ
ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಚತುಷ್ಪಂಚಾಶದುತ್ತರಶತತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಅಥಾತಃ ಸಂಪ್ರವಕ್ಷ್ಯಾಮಿ ಶ್ರೀವ್ರತಂ ನಾಮ ತೇ ವ್ರತಂ ।**
**ಚೈತ್ರಶುಕ್ಲತೃತೀಯಾಯಾಂ ಸ್ನಾನಮಭ್ಯಂಗಪೂರ್ವಕಂ || ೧ ||**

**ಕೃತ್ವಾ ಶುಕ್ಲಾಂಬರೋ ರಾಜನ್ ಶುಕ್ಲಮಾಲ್ಯಾನುಲೇಪನಃ ।**
**ತಿಷ್ಠೇತ್ ಘೃತೌದನಾಹಾರೋ ಭೂಮೌ ಸ್ವಪ್ಯಾಚ್ಚ ತಾಂ ನಿಶಾಂ || ೨ ||**

**ಚತುರ್ಥ್ಯಾಂ ಚ ತಥಾ ಸ್ನಾನಂ ಬಹಿರ್ಗತ್ವಾ ಸಮಾಚರೇತ್ ।**
**ಪದ್ಮಿನ್ಯಾಂ ಚ ವಿಶೇಷೇಣ ತತಃ ಶುಕ್ಲಾಂಬರಃ ಶುಚಿಃ || ೩ ||**

---

**ನೂರ ಐವತ್ತನಾಲ್ಕನೆಯ ಅಧ್ಯಾಯ.**

೧-೫. ಮಾರ್ಕಂಡೇಯರು ಹೇಳುತ್ತಾರೆ :—ಇನ್ನು ಮುಂದೆ ಶ್ರೀವ್ರತವೆಂಬ ವ್ರತವನ್ನು ನಿನಗೆ ಹೇಳುತ್ತೇನೆ. ಚೈತ್ರಶುದ್ಧ ತೃತೀಯೆಯಲ್ಲಿ ಅಭ್ಯಂಗನಸ್ನಾನ ಮಾಡಿ ಬಿಳುಪಾದ ವಸ್ತ್ರವನ್ನು ಧರಿಸಿ ಬಿಳುಪಾದ ಗಂಧ ಪುಷ್ಪಗಳನ್ನೂ ಧರಿಸಿ ತುಪ್ಪದ ಅನ್ನದಿಂದ ಆಹಾರ ಹೊಂದಿದ್ದು ರಾತ್ರಿಯಲ್ಲಿ ಭೂಮಿಯ ಮೇಲೆ ಮಲಗಿರ ಬೇಕು. ಮಾರನೆಯ ಚತುರ್ಥಿ ದಿನ ಹೊರಗೆ ಕಮಲಗಳಿರುವ ಸರೋವರದಲ್ಲಿ ಸ್ನಾನಮಾಡಬೇಕು. ಬಿಳಿಯ ವಸ್ತ್ರವನ್ನೇ ಧರಿಸಿ ಶುಚಿಯಾಗಿದ್ದು ಸ್ವಾಭಾವಿಕ

ಲಕ್ಷ್ಮೀಂ ಸಂಪೂಜಯೇತ್ಪದ್ಮೇ ಕೃತಕೇಽಕೃತಕೇಽಪಿ ವಾ ।
ಶುಕ್ಲೇನ ಗಂಧಮಾಲ್ಯೇನ ಘೃತದೀಪೇನ ಚಾಪ್ಯಥ ॥ ೪ ॥

ದಧ್ನಾ ಚ ಪರಮಾನ್ನೇನ ಆರ್ದ್ರಕೇಣ ಗುಡೇನ ಚ ।
ಇಕ್ಷುಣೇಕ್ಷುವಿಕಾರೈಶ್ಚ ಲವಣೇನ ಚ ಭೂರಿಣಾ ॥ ೫ ॥

ಸ್ವಶಕ್ತ್ಯಾ ಚ ಮಹಾರಾಜ ಭೂಯಸಾ ಬಲಿಕರ್ಮಣಾ ।
ಶ್ರೀಸೂಕ್ತೇನ ತತೋ ವಹ್ನೌ ಪದ್ಮಾನಿ ಜುಹುಯಾಚ್ಛುಚಿಃ ॥ ೬ ॥

ತದಲಾಭೇ ಚ ಬಿಲ್ವಾನಿ ತದಲಾಭೇ ತಥಾ ಘೃತಂ ।
ಬ್ರಾಹ್ಮಣಾನ್ ಗೋರಸಪ್ರಾಯಂ ಘೃತಂ ಭೋಜಯಿಷ್ಯಮಾಶಯೇತ್ ॥ ೭ ॥

ಸುವರ್ಣಮಾಷಕಂ ದದ್ಯಾದ್ಬ್ರಾಹ್ಮಣೇಭ್ಯಶ್ಚ ದಕ್ಷಿಣಾಂ ।
ಅನಾಹಾರಸ್ತತಃ ಸ್ವಪ್ಯಾಚ್ಛುಚೌ ದೇಶೇ ಯಥಾವಿಧಿ ॥ ೮ ॥

ತತಸ್ತು ಪಂಚಮೀಂ ಪ್ರಾಪ್ಯ ಪೂರ್ವಾಹ್ಣೇ ಪದ್ಮಿನೀಜಲೇ ।
ಸ್ನಾತ್ವಾ ಸಂಪೂಜನಂ ಕುರ್ಯಾತ್ಪ್ರಾಗ್ವದೇವ ತಥಾ ಪ್ರಿಯಃ ॥ ೯ ॥

---

ವಾದ ಅಥವಾ ಕೃತಕವಾದ ಕಮಲದಲ್ಲಿ ಲಕ್ಷ್ಮಿಯನ್ನು ಪೂಜಿಸಬೇಕು ಪೂಜೆಯನ್ನೂ ಸಹ ಬಿಳುಪಾದ ಗಂಧಕುಸುಮಗಳಿಂದಲೂ, ತುಪ್ಪದ ದೀಪದಿಂದಲೂ, ಮೊಸರು, ಪರಮಾನ್ನ, ಹಸಿಯುಶುಂಠಿ, ಬೆಲ್ಲ, ಕಬ್ಬು, ಮತ್ತು ಕಬ್ಬಿನ ವಿಕಾರವಾದ ಸಿಹಿಭಕ್ಷ್ಯ ಹೆಚ್ಚಾದ ಲವಣ ಇತ್ಯಾದಿಗಳಿಂದಲೇ ಮಾಡಬೇಕು.

೬-೧೦. ಸ್ವಶಕ್ತಿಗೆ ತಕ್ಕಂತೆ ಹೆಚ್ಚಾಗಿ ಬಲಿಕರ್ಮವನ್ನೂ ಆಚರಿಸಬೇಕು. ಶ್ರೀಸೂಕ್ತದಿಂದ ಕಮಲಗಳನ್ನು ಅಗ್ನಿಯಲ್ಲಿ ಹೋಮಮಾಡಬೇಕು. ಅದು ಲಭಿಸದಿದ್ದಲ್ಲಿ ಬಿಲ್ವಗಳಿಂದ ಅದೂ ಲಭಿಸದಿದ್ದಲ್ಲಿ ಆಜ್ಯದಿಂದಲೇ ಹೋಮಮಾಡಬೇಕು. ಹಾಲು, ಮೊಸರು, ತುಪ್ಪ ಇವುಗಳಿಂದ ಪ್ರಚುರವಾಗಿರುವ ಭೋಜನವನ್ನು ಬ್ರಾಹ್ಮಣರಿಗೆ ಮಾಡಿಸಬೇಕು. ಮತ್ತು ಮಾಷಕವೆಂಬ ಪರಿಮಾಣ ಉಳ್ಳ ಸುವರ್ಣ ನಾಣ್ಯವನ್ನು ದಕ್ಷಿಣೆಯನ್ನಾಗಿ ಕೊಡಬೇಕು. ನಿರಾಹಾರನಾಗಿಯೇ ಇದ್ದು ಶುಚಿಯಾದ ಪ್ರದೇಶದಲ್ಲಿ ಮಲಗಿ ರಾತ್ರಿಯನ್ನು ಕಳೆಯಬೇಕು. ಮಾರನೆಯ

ಭೂಯ ಏವ ದ್ವಿಜೇ ದದ್ಯಾತ್ಪೂರ್ವಂ ಕನಕಮಾಷಕಂ ।
ಪದ್ಮಾಕ್ಷಮಥವಾ ಬಿಲ್ವಂ ಪ್ರಾಶ್ನೀಯಾತ್ತದನಂತರಂ ॥ ೧೦ ॥

ತತೋ ಹವಿಷ್ಯಮಶ್ನೀಯಾದ್ವಾಗ್ಯತೋ ಮಾನವೋತ್ತಮಃ ।
ಸಂವತ್ಸರಮಿದಂ ಬಿಲ್ವಂ ಪ್ರಾಶ್ನೀಯಾತ್ತದನಂತರಂ ।
ಸಂವತ್ಸರಮಿದಂ ಕೃತ್ವಾ ವ್ರತಂ ಪಾರ್ಥಿವಸತ್ತಮ ॥ ೧೧ ॥

ಫಲಮಾಪ್ನೋತಿ ವಿಪುಲಂ ರಾಜಸೂಯಾಶ್ವಮೇಧಯೋಃ ।
ವಿನಾ ಕನಕದಾನೇನ ವ್ರತಮೇತತ್ಸಮಾಚರೇತ್ ॥ ೧೨ ॥

ವ್ರತಾಂತೇ ಮಾಷಕಂ ದದ್ಯಾದ್ವಹ್ನಿಷ್ಟೋಮಫಲಂ ಲಭೇತ್ ।
ಸಂಪೂಜ್ಯ ಸೋಪವಾಸಸ್ತು ಶುಕ್ಲಪಕ್ಷಸ್ಯ ಪಂಚಮೀಂ ॥ ೧೩ ॥

ನಿತ್ಯಮೇವ ಶ್ರಿಯಂ ದೇವೀಂ ಶ್ರಿಯಮಾಪ್ನೋತ್ಯನುತ್ತಮಾಂ ।
ಬಲಮುತ್ತಮಮಾಪ್ನೋತಿ ರೂಪಮಾರೋಗ್ಯಮೇವ ಚ ॥ ೧೪ ॥

---

ಪಂಚಮಿಯಲ್ಲಿ ಪೂರ್ವಾಹ್ನದಲ್ಲಿ ಕಮಲಸರೋವರದಲ್ಲಿ ಸ್ನಾನಮಾಡಿ ಮೊದಲಿನಂತೆ ಭಕ್ತಿಯಿಂದ ಲಕ್ಷ್ಮಿಯನ್ನು ಪೂಜಿಸಬೇಕು. ಮೊದಲಿನಂತೆಯೇ ಬ್ರಾಹ್ಮಣನಿಗೆ ಚಿನ್ನದ ನಾಣ್ಯವನ್ನು ದಕ್ಷಿಣೆ ಕೊಡಬೇಕು. ಪದ್ಮಾಕ್ಷವನ್ನಾಗಲೀ, ಬಿಲ್ವವನ್ನಾಗಲೀ, ಮಧ್ಯಾಹ್ನ ಪ್ರಾಶನಮಾಡಿ ರಾತ್ರಿಯಲ್ಲಿ ಹವಿಷ್ಯಾನ್ನವನ್ನು ಮೌನದಿಂದಿದ್ದು ಭುಂಜಿಸಬೇಕು.

೧೧–೧೪. ಅನಂತರ ಸಂವತ್ಸರಪರ್ಯಂತವೂ ಬಿಲ್ವವನ್ನೇ ಭಕ್ಷಿಸುತ್ತಿರಬೇಕು. ಈ ವ್ರತವನ್ನು ಸಂವತ್ಸರ ಪೂರ್ತಿಯಾಗಿ ಮಾಡಿದವನು ರಾಜಸೂಯಾಶ್ವಮೇಧಗಳ ಫಲವನ್ನೇ ಹೊಂದುತ್ತಾನೆ. ಮೊದಲು ಚಿನ್ನವನ್ನು ದಾನಮಾಡದೆ ವ್ರತಮಾಡಿದಲ್ಲಿ, ವ್ರತವು ಮುಗಿಯುವಾಗ ಮಾತ್ರ ಮಾಷಕವೆಂಬ ಸುವರ್ಣದ ನಾಣ್ಯವನ್ನು ದಾನಮಾಡಿದಲ್ಲಿ ಅಂತಹವನು ಅಗ್ನಿಷ್ಟೋಮದ ಫಲವನ್ನು ಹೊಂದುತ್ತಾನೆ. ಪ್ರತಿಯೊಂದು ಶುಕ್ಲಪಕ್ಷದ ಪಂಚಮಿಯ ದಿನ ಉಪವಾಸವಿದ್ದು ಲಕ್ಷ್ಮೀದೇವಿಯನ್ನು ನಿತ್ಯವಾಗಿಯೂ ಪೂಜಿಸಿದಲ್ಲಿ ಉತ್ತಮವಾದ ಸಂಪತ್ತನ್ನು ಹೊಂದುತ್ತಾನೆ. ಒಳ್ಳೆಯ ಬಲವನ್ನೂ, ಸುರೂಪವನ್ನೂ, ಆರೋಗ್ಯವನ್ನೂ ಸಹ ಹೊಂದು

ಜಗತ್ಪ್ರಧಾನಾಂ ವರದಾಂ ವರೇಣ್ಯಾಂ
ವಿಭಾವರೀಂ ಸರ್ವಗತಾಂ ನರೇಂದ್ರ ।
ಶ್ರದ್ಧಾನ್ವಿತೈಃ ಪೂಜಯತೀಹ ಯಸ್ತು
ಕಾಮಾನವಾಪ್ನೋತಿ ಸ ಸರ್ವಕಾಲಂ ॥ ೧೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಪಂಚಮೂರ್ತಿವಿಧೌ ಲಕ್ಷ್ಮೀವ್ರತವರ್ಣನೋ ನಾಮ ಚತುಷ್ಪಂಚಾಶದುತ್ತರ ಶತತಮೋಽಧ್ಯಾಯಃ

---

ತ್ತಾನೆ. ಜಗತ್ತಿನಲ್ಲೇ ಪ್ರಧಾನಳಾಗಿಯೂ, ವರಪ್ರದಳಾಗಿಯೂ, ಆಶ್ರಯಣೀಯಳಾಗಿಯೂ, ವಿಭಾವರೀರೂಪಳಾಗಿಯೂ, ಸರ್ವವ್ಯಾಪಕಳಾಗಿಯೂ ಇರುವ ಲಕ್ಷ್ಮೀದೇವಿಯನ್ನು ಶ್ರದ್ಧೆಯಿಂದ ಯಾವನು ಪೂಜಿಸುತ್ತಾನೆಯೋ ಅವನು ಸರ್ವಕಾಲದಲ್ಲಿಯೂ ಸರ್ವಮನೋರಥಗಳನ್ನೂ ಸಫಲಗೊಳಿಸಿಕೊಳ್ಳುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದದಲ್ಲಿ ಪಂಚಮೂರ್ತಿ ವಿಧಿಯ ಲಕ್ಷ್ಮೀವ್ರತವರ್ಣವೆಂಬ ನೂರ ಐವತ್ತನಾಲ್ಕನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಪಂಚಪಂಚಾಶದುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಅಥಾಪರಂ ಪ್ರವಕ್ಷ್ಯಾಮಿ ಪಂಚಮೂರ್ತಿವ್ರತಂ ತವ ।**
**ಶಂಖಂ ಚಕ್ರಂ ಗದಾಂ ಪದ್ಮಂ ಪೃಥಿವೀಂ ಚ ಮಹಾಭುಜ || ೧ ||**

**ಗಂಧೈರ್ಮಂಡಲಕಾನ್ ಕೃತ್ವಾ ಪಂಚ ಪಂಚಸು ಪೂಜಯೇತ್ ।**
**ಚೈತ್ರಶುಕ್ಲಾಂತಮಾರಭ್ಯ ಪಂಚಮಿಪ್ರಭೃತೀನ್ನೃಪ || ೨ ||**

**ಸೋಪವಾಸೋ ಬಹಿಃಸ್ನಾತಸ್ತಥಾ ಶುಕ್ಲಾಂಬರಃ ಶುಚಿಃ ।**
**ಗಂಧಮಾಲ್ಯನಮಸ್ಕಾರ ಧೂಪದೀಪಾನ್ನಸಂಪದಾ || ೩ ||**

---

### ನೂರ ಐವತ್ತೈದನೆಯ ಅಧ್ಯಾಯ.

೧-೪. ಮಾರ್ಕಂಡೇಯರು ಹೇಳುತ್ತಾರೆ:—ಮತ್ತೊಂದು ಪಂಚಮೂರ್ತಿ ವ್ರತವನ್ನೂ ನಿನಗೆ ಹೇಳುತ್ತೇನೆ;—ಶಂಖ, ಚಕ್ರ, ಗದಾ, ಪದ್ಮ, ಪೃಥಿವೀ ಇವುಗಳನ್ನು ಗಂಧದಿಂದ ಐದು ಮಂಡಲಗಳನ್ನು ಮಾಡಿ ಈ ಐದು ದೇವತೆಗಳನ್ನೂ ಪೂಜಿಸಬೇಕು. ಚೈತ್ರಶುದ್ಧ ಪೂರ್ಣಿಮೆಯು ಕಳೆದ ಮೇಲೆ ಮುಂದಿನ

ಸರ್ವೇಷಾಂ ಪೂಜನಂ ಕೃತ್ವಾ ಜುಹುಯಾಜ್ಜಾತವೇದಸಿ ।
ಸರ್ವೇಷಾಮೇವ ದೇವಾನಾಂ ನಾಮಭಿಸ್ತು ತಥಾಘೃತಂ ॥ ೪ ॥

ಬ್ರಾಹ್ಮಣಾನ್ಭೋಜಯೇಚ್ಚಾತ್ರ ತದಾ ಮಧುರಭೋಜನಂ ।
ಸಂವತ್ಸರಮಿದಂ ಕೃತ್ವಾ ವ್ರತಾಂತೇ ವಸ್ತ್ರಪಂಚಕಂ ॥ ೫ ॥

ಅಶ್ವಮೇಧಮವಾಪ್ನೋತಿ ಪಂಚರಾತ್ರವಿದೇ ದದತ್ ।
ಪಂಚವರ್ಣಂ ಚ ರಾಜೇಂದ್ರ ರಾಜಸೂಯಫಲಂ ಲಭೇತ್ ॥ ೬ ॥

ಮಾನುಷ್ಯಮಾಸಾದ್ಯ ಭವತ್ಯರೋಗೋ
ಬಲಾನ್ವಿತೋ ಧರ್ಮಪರೋ ವಿನೀತಃ ।

---

ಪಂಚಮಿಯ ವರೆಗೂ, ಉಪವಾಸದಿಂದಿದ್ದು, ಹೊರಗೆ ಸ್ನಾನಮಾಡುತ್ತಾ ಬಿಳಿಯ ವಸ್ತ್ರವನ್ನು ಧರಿಸಿ ಗಂಧಪುಷ್ಪ ನಮಸ್ಕಾರ ಧೂಪದೀಪ ನೈವೇದ್ಯಾದಿಗಳಿಂದ ಎಲ್ಲಾ ದೇವತೆಗಳಿಗೂ ಪೂಜೆಯನ್ನರ್ಪಿಸಿ ಅವರವರ ನಾಮಮಂತ್ರಗಳಿಂದ ಆಜ್ಯವನ್ನು ಅಗ್ನಿಯಲ್ಲಿ ಹೋಮ ಮಾಡಬೇಕು.

೫-೭. ಬ್ರಾಹ್ಮಣರಿಗೆ ಮಧುರವಾದ ಭಕ್ಷ್ಯಭೋಜ್ಯಗಳಿಂದ ಭೋಜನ ಮಾಡಿಸಬೇಕು. ವತ್ಸರಪರ್ಯಂತವೂ ಈ ವ್ರತವನ್ನಾಚರಿಸಿ ಕೊನೆಯಲ್ಲಿ ಐದು ವಸ್ತ್ರಗಳನ್ನು, ಪಂಚರಾತ್ರವೆಂಬ ಭಗವಚ್ಛಾಸ್ತ್ರವನ್ನು ತಿಳಿದವನಿಗೆ ದಾನಮಾಡಿದಲ್ಲಿ ಅಶ್ವಮೇಧದ ಫಲವೇ ಅವನಿಗೆ ಉಂಟಾಗುತ್ತದೆ. ಐದು ಬಣ್ಣಗಳುಳ್ಳ ವಸ್ತ್ರಗಳನ್ನು ದಾನಮಾಡಿದ್ದೇ ಆದರೆ, ರಾಜಸೂಯಯಾಗದ ಫಲವನ್ನು ಹೊಂದುತ್ತಾನೆ. ಮನುಷ್ಯನಾಗಿ ಜನಿಸಿದರೂ, ಆರೋಗನಾಗಿಯೂ, ಬಲಿಷ್ಠನಾಗಿಯೂ, ಧಾರ್ಮಿಕ

**ಧನೇನ ರೂಪೇಣ ಸುಖೇನ ಯುಕ್ತೋ**
**ರಾಜಾಧಿರಾಜೋಽಪ್ಯಥವಾ ನರೇಂದ್ರಃ ॥ ೭ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಪಂಚಮೂರ್ತಿವ್ರತೇ ಆಯುಧಾದಿವ್ರತ**
**ನಿರೂಪಣೋ ನಾಮ**
**ಪಂಚಪಂಚಾಶದುತ್ತರಶತತಮೋಽಧ್ಯಾಯಃ**

---

ನಾಗಿಯೂ, ವಿನೀತನಾಗಿಯೂ, ಧನ, ರೂಪ ಇವುಗಳಿಂದ ಕೂಡಿ ಸುಖಿಯಾದ ರಾಜಾಧಿರಾಜನಾಗಿಯೇ ಆಗಲಿ, ಸಾಮಾನ್ಯವಾದ ರಾಜಶ್ರೇಷ್ಠನಾಗಿಯೇ ಆಗಲಿ ಆಗುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದದಲ್ಲಿ ಪಂಚಮೂರ್ತಿವ್ರತದ ಆಯುಧಾದಿವ್ರತನಿರೂಪಣವೆಂಬ
ನೂರ ಐವತ್ತೈದನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

|| ಷಟ್‌ಪಂಚಾಶದುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

ಅಥಾತಃ ಸಂಪ್ರವಕ್ಷ್ಯಾಮಿ ಷಣ್ಮೂರ್ತೇರರ್ಚನಂ ತವ |
ವಸಂತೇ ಪೂಜಯೇನ್ನಿತ್ಯಂ ದ್ವೌ ಮಾಸೌ ಮಧುಮಾಧವೌ || ೧ ||

ಫಲೈಃ ಪುಷ್ಪೈಃ ಕಷಾಯೈಸ್ತು ಗ್ರೀಷ್ಮೇ ಗ್ರೀಷ್ಮೇ ಚ ಪೂಜಯೇತ್ |
ಮಧುರೇಣ ಮಹಾರಾಜ ಪ್ರಾವೃಟ್ಕಾಲೇ ಹಿತೇ ಚ ತಂ || ೨ ||

ಅಮ್ಲೇನ ಪೂಜಯೇನ್ನಿತ್ಯಂ ಶರದಂ ಲವಣೇನ ಚ |
ವಟುಕೇನ ಚ ಹೇಮಂತೇ ತಿಕ್ತೇನ ಶಿಶಿರೇ ತಥಾ || ೩ ||

---

### ನೂರ ಐವತ್ತಾರನೆಯ ಅಧ್ಯಾಯ.

೧–೪ ಮಾರ್ಕಂಡೇಯರು ಹೇಳುತ್ತಾರೆ :— ಇನ್ನು ಮುಂದೆ ಆರು ಮೂರ್ತಿಗಳ ಪೂಜೆಯನ್ನು ನಿನಗೆ ಹೇಳುತ್ತೇನೆ. ವಸಂತಋತುವಿನಲ್ಲಿ ಚೈತ್ರವೈಶಾಖಗಳನ್ನು ಫಲಪುಷ್ಪಗಳಿಂದ ಪೂಜಿಸಬೇಕು. ಗ್ರೀಷ್ಮದ ಎರಡು ಮಾಸಗಳನ್ನು ಕಷಾಯ (ಪಾನಕಾದಿ) ಗಳಿಂದಲೂ, ವರ್ಷಾಕಾಲದ ಎರಡು ಮಾಸಗಳನ್ನು ಮಧುರರಸದಿಂದಲೂ, ಶರತ್ಕಾಲದ ಎರಡು ಮಾಸಗಳನ್ನು ಹುಳಿ, ಉಪ್ಪು ಇವುಗಳಿಂದ ಕೂಡಿದ ಭೋಜ್ಯವಸ್ತುಗಳಿಂದಲೂ, ಹೇಮಂತದ ಎರಡು ಮಾಸಗಳನ್ನು ವಟುಕವೆಂಬ (ಒಬ್ಬಟ್ಟು ಮೊದಲಾದ್ದು) ಭಕ್ಷ್ಯದಿಂದಲೂ, ಶಿಶಿರಮಾಸಗಳನ್ನು ಒಗರಾದ

ನಕ್ತಾಶನಸ್ತಥಾ ತಿಷ್ಠೇದೃತೂಕ್ತಂ ವರ್ಜಯೇದ್ರಸಂ ।
ಬ್ರಾಹ್ಮಣಾನ್ಭೋಜಯೇಚ್ಚಾತ್ರ ಋತೂಕ್ತಂ ರಸಭೋಜನಂ ॥ ೪ ॥

ಸಂವತ್ಸರಮಿದಂ ಕೃತ್ವಾ ವ್ರತಂ ಪರಮಪಾವನಂ ।
ಅಶ್ವಮೇಧಮವಾಪ್ನೋತಿ ರಾಜಸೂಯಂ ಚ ವಿಂದತಿ ॥ ೫ ॥

ಸರ್ವಾನ್ಕಾಮಾನವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಫಲಮಕ್ಷಯ್ಯಮಾಪ್ನೋತಿ ವ್ರತಸ್ಯಾಸ್ಯ ನರೋತ್ತಮ ॥ ೬ ॥

ಚೈತ್ರಾದಥಾರಭ್ಯ ಸಿತೇ ಚ ಷಷ್ಠೀಂ
ಸಂಪೂಜಯೇದ್ಯೋ ಋತುಷಟ್ಕಮೇವಂ ।
ಕೃತೋಪವಾಸಸ್ತು ಯಥೋಕ್ತಮೇತ-
ತ್ಫಲಂ ಲಭೇತ್ಪೂರ್ಣಮಿತೀದಮುಕ್ತಂ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಷಣ್ಮೂರ್ತಿವ್ರತವರ್ಣನೋ ನಾಮ
ಷಟ್ಪಂಚಾಶದುತ್ತರ ಶತತಮೋಽಧ್ಯಾಯಃ

---

ವಸ್ತುಗಳಿಂದಲೂ ಪೂಜಿಸಬೇಕು. ಬ್ರಾಹ್ಮಣರನ್ನೂ ಆಯಾಯ ಋತುಗಳಲ್ಲಿ ಹೇಳಿರುವ ರಸಗಳಿಂದ ಭೋಜನಮಾಡಿಸಬೇಕು. ತಾನು ಮಾತ್ರ ಆಯಾಯ ಋತುಗಳಿಗೆ ಹೇಳಿರುವ ರಸಗಳನ್ನು ಬಿಟ್ಟು ಉಳಿದ ವಸ್ತುಗಳಿಂದ ರಾತ್ರಿಯಲ್ಲಿಯೇ ಭೋಜನಮಾಡಬೇಕು.

೫-೭. ಬಹುಪವಿತ್ರವಾದ ಈ ವ್ರತವನ್ನು ಸಂವತ್ಸರ ಪೂರ್ತಿಯಾಗಿ ಮಾಡಿದವನು ಅಶ್ವಮೇಧಯಾಗಗಳ ಫಲವನ್ನು ಹೊಂದುತ್ತಾನೆ ಅಕ್ಷಯ್ಯ ಫಲವು ಈ ವ್ರತಕ್ಕೆ ಉಂಟು. ಇದನ್ನು ವಿಚಾರಮಾಡಬೇಕಾಗಿಲ್ಲ. ಚೈತ್ರಶುದ್ಧ ಷಷ್ಠಿಯಲ್ಲಿ ಪ್ರಾರಂಭಿಸಿ ಈ ರೀತಿ ಷಡೃತುಗಳನ್ನು ಉಪವಾಸ ನಿಯಮದಿಂದಿದ್ದು ಪೂಜಿಸಿದಲ್ಲಿ ಈ ಫಲಗಳನ್ನು ಜಾಗ್ರತೆಯಾಗಿ ಹೊಂದುತ್ತಾನೆ. ಎಂದೂ ಹೇಳಲ್ಪಟ್ಟಿದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಷಣ್ಮೂರ್ತಿವ್ರತವರ್ಣನವೆಂಬ
ನೂರ ಐವತ್ತಾರನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಸಪ್ತಪಂಚಾಶದುತ್ತರ ಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

ಅತಃ ಪರಂ ಪ್ರವಕ್ಷ್ಯಾಮಿ ಸಪ್ತಮೂರ್ತಿವ್ರತಂ ತವ ।
ಚೈತ್ರಮಾಸಾದಥಾರಭ್ಯ ಪ್ರತಿಪತ್ಪ್ರಭೃತಿ ಕ್ರಮಾತ್ || ೧ ||

ಸುಭಾಸ್ವರಾ ಬರ್ಹಿಷದೋ ಹ್ಯಗ್ನಿಷ್ವಾತ್ತಾಸ್ತಥೈವ ಚ ।
ಕ್ರವ್ಯಾದಾನುಪಹೂತಾಶ್ಚ ಆಜ್ಯಪಾಶ್ಚ ಸುಕಾಲಿನಃ || ೨ ||

ಪೂಜಯೇತ್ಪ್ರತ್ಯಹಂ ರಾಜನ್ ಗಂಧಮಾಲ್ಯಾನುಲೇಪನೈಃ ।
ನೈವೇದ್ಯಂ ಕೃಸರಂ ಕುರ್ಯಾತ್ತಿಲಾನಗ್ನೌ ಚ ಹೋಮಯೇತ್ || ೩ ||

---

### ನೂರ ಐವತ್ತೇಳನೆಯ ಅಧ್ಯಾಯ

೧-೪. ಮಾರ್ಕಂಡೇಯರು ಹೇಳುತ್ತಾರೆ: — ಇನ್ನು ಮುಂದೆ ಸಪ್ತಮೂರ್ತಿ ವ್ರತವನ್ನು ಹೇಳುತ್ತೇನೆ. ಚೈತ್ರಮಾಸದಿಂದ ಪ್ರಥಮೆಯ ಮೊದಲು ಮಾಡಿ ಕ್ರಮವಾಗಿ ಇವರನ್ನು ಪೂಜಿಸಬೇಕು. ಭಾಸ್ವರ, ಬರ್ಹಿಷದ, ಅಗ್ನಿಷ್ವಾತ್ತಾ, ಕ್ರವ್ಯಾದ, ಅನುಪಹೂತ, ಆಜ್ಯಪಾ, ಸುಕಾಲಿ ಈ ಏಳು ದೇವತೆಗಳನ್ನೂ ಗಂಧ ಪುಷ್ಪಾದಿಗಳಿಂದ ಪೂಜಿಸಿ ಕೃಸರ (ಚಿಗಳಿ) ವನ್ನು ನೈವೇದ್ಯಕ್ಕೆ ಅರ್ಪಿಸಬೇಕು. ತಿಲಗಳಿಂದ ಅಗ್ನಿಯಲ್ಲಿ ಹೋಮಮಾಡಬೇಕು. ಬ್ರಾಹ್ಮಣರಿಗೆ ಕೃಸರದಿಂದ

ಕೃಸರಂ ಭೋಜಯೇದ್ವಿಪ್ರಾನ್ ತಿಲಾನ್ ದದ್ಯಾಚ್ಚ ದಕ್ಷಿಣಾಂ ।
ನಕ್ತಾಶನಸ್ತಥಾ ತಿಷ್ಠೇದ್ಧವಿಷ್ಯಾಶೀ ನರಾಧಿಪ ॥ ೪ ॥

ಸಂವತ್ಸರಮಿದಂ ಕೃತ್ವಾ ವ್ರತಂ ಪುರುಷಸತ್ತಮ ।
ವ್ರತಾವಸಾನೇ ದದ್ಯಾಚ್ಚ ರಜತಸ್ಯ ಪಲಂ ದ್ವಿಜೇ ॥ ೫ ॥

ವ್ರತೇನಾನೇನ ಚೀರ್ಣೇನ ಸೂರ್ಯಲೋಕಗತಿರ್ಭವೇತ್ ।
ತ್ರಿದಶೈಃ ಪೂಜ್ಯಮಾನಸ್ತು ಕಾಮಚಾರೀ ವಿಹಂಗಮಃ ॥ ೬ ॥

ವರ್ಷಂ ಸಮಗ್ರಂ ಪುರುಷಸ್ತು ಕೃತ್ವಾ
ಸಂಸಾರಮೋಕ್ಷಂ ಲಭತೇ ನರೇಂದ್ರ ।
ಕೃತ್ವಾ ತಥಾ ದ್ವಾದಶವತ್ಸರಾಣಿ
ಮಾನುಷ್ಯಮಾಸಾದ್ಯ ಮಹೀಪತಿಃ ಸ್ಯಾತ್ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಸುಭಾಸ್ವರಾದಿ ಪಿತೃವ್ರತವರ್ಣನೋ ನಾಮ
ಸಪ್ತಪಂಚಾಶದುತ್ತರಶತತಮೋಽಧ್ಯಾಯಃ

---

ಭೋಜನಮಾಡಿಸಿ ತಿಲಗಳನ್ನೇ ದಕ್ಷಿಣೆಯನ್ನಾಗಿ ಕೊಡಬೇಕು. ಹವಿಷ್ಯವಾದ ಅನ್ನವನ್ನು ರಾತ್ರಿಯಲ್ಲಿ ಮಾತ್ರ ಭೋಜನಮಾಡಬೇಕು.

೫-೭. ಈ ವ್ರತವನ್ನು ಒಂದು ಸಂವತ್ಸರ ಮಾಡಿ ವ್ರತದ ಕೊನೆಯಲ್ಲಿ ಒಂದು ಪಲ ರಜತವನ್ನು (ಬೆಳ್ಳಿ) ಬ್ರಾಹ್ಮಣನಿಗೆ ದಾನಮಾಡಬೇಕಾಗಿದೆ. ಈ ವ್ರತವನ್ನಾಚರಿಸಿದವನಿಗೆ ಸೂರ್ಯಲೋಕಪ್ರಾಪ್ತಿಯುಂಟಾಗುತ್ತದೆ. ದೇವತೆಗಳಿಂದಲೂ ಪೂಜಿಸಲ್ಪಟ್ಟು ಕಾಮಚಾರಿಯಾಗಿಯೂ, ಗಗನಸಂಚಾರಿಯಾಗಿಯೂ ಆಗುತ್ತಾನೆ. ಒಂದು ವರ್ಷ ಸಮಗ್ರವಾಗಿ ವ್ರತವನ್ನಾಚರಿಸಿದವನು ಸಂಸಾರದಿಂದ ಮುಕ್ತನೇ ಆಗುತ್ತಾನೆ. ಹನ್ನೆರಡು ವರ್ಷ ಆಚರಿಸಿದಲ್ಲಿ ಪುನಃ ಮನುಷ್ಯನಾಗಿ ಹುಟ್ಟುವುದಾದರೆ ದೊರೆಯಾಗಿಯೇ ಹುಟ್ಟುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಸುಭಾಸ್ವರಾದಿಪಿತೃವ್ರತವರ್ಣನವೆಂಬ
ನೂರ ಐವತ್ತೇಳನೆಯ ಅಧ್ಯಾಯ ಮುಗಿದುದು.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಅಷ್ಟಪಂಚಾಶದುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಚೈತ್ರಮಾಸಾದಥಾರಭ್ಯ ಕೃಷ್ಣಪಕ್ಷ ದಿನೇ ದಿನೇ |**
**ಪಾತಾಲಪೂಜನಂ ಕುರ್ಯಾತ್ಪ್ರತಿಪತ್ಪ್ರಭೃತಿ ಕ್ರಮಾತ್ || ೧ ||**

**ರುಕ್ಮಭೌಮಂ ತಥಾ ಭೌಮಂ ಪಾತಾಲಂ ನೀಲಮೃತ್ತಿಕಂ |**
**ರಕ್ತಭೌಮಂ ಪೀತಭೌಮಂ ಶ್ವೇತಕೃಷ್ಣಮೃದಾವಪಿ || ೨ ||**

**ಸುವರ್ಣೈಃ ಗಂಧಮಾಲ್ಯೈಶ್ಚ ನೈವೇದ್ಯೇನ ಚ ಭೂರಿಣಾ |**
**ಘೃತದೀಪಪ್ರದಾನೇನ ವಹ್ನಿಸಂತರ್ಪಣೇನ ಚ || ೩ ||**

---

### ನೂರ ಐವತ್ತೆಂಟನೆಯ ಅಧ್ಯಾಯ.

೧-೭. ಮಾರ್ಕಂಡೇಯರು ಹೇಳುತ್ತಾರೆ:—ಚೈತ್ರಮಾಸದ ಕೃಷ್ಣಪಕ್ಷದಲ್ಲಿ ಪ್ರತಿಪತ್ತು ಮೊದಲು ಮಾಡಿಕೊಂಡು ಪ್ರತಿದಿನದಲ್ಲಿಯೂ ಪಾತಾಲಪೂಜೆಯನ್ನು ಮಾಡಬೇಕು. ರುಕ್ಮಭೌಮ, ಭೌಮ, ನೀಲಮೃತ್ತಿಕ, ರಕ್ತಭೌಮ, ಪೀತಭೌಮ, ಶ್ವೇತಮೃತ್, ಕೃಷ್ಣಮೃತ್ ಎಂಬ ಪಾತಾಲಗಳನ್ನು ಸುವರ್ಣಗಂಧಪುಷ್ಪನೈವೇದ್ಯ ಇವುಗಳಿಂದ ಪೂಜಿಸಿ ತುಪ್ಪದ ದೀಪವನ್ನೂ ಅರ್ಪಿಸಿ, ಹೋಮದಿಂದ ಅಗ್ನಿಯ ಪ್ರೀತಿಯನ್ನೂ ಉಂಟುಮಾಡಬೇಕು. ಈ ರೀತಿ ರಾತ್ರಿಯಲ್ಲಿ ಮಾತ್ರ ಭೋಜನ ಮಾಡುತ್ತಾ ಸಂವತ್ಸರ ಪರ್ಯಂತವಾಗಿಯೂ ವ್ರತವನ್ನಾಚರಿಸಿ ಅನಂತರ ಕೊನೆಯಲ್ಲಿ ಬ್ರಾಹ್ಮಣ ಗೃಹಗಳಿಗೆ ದೀಪ ಹಚ್ಚಬೇಕು. ಆಯಾಯ ದೇವತೆಯ

ಏವಂ ನಕ್ತಾಶನಂ ಕೃತ್ವಾ ವ್ರತಂ ಸಂವತ್ಸರಂ ತದಾ ।
ವ್ರತಾವಸಾನೇ ದದ್ಯಾಚ್ಚ ದೀಪಕಂ ದ್ವಿಜವೇಶ್ಮಸು । ೪ ॥

ಸತು ವಸ್ತ್ರಾಣಿ ರಾಜೇಂದ್ರ ಯಥಾವರ್ಣಾನಿ ಚಾಪ್ಯಥ ।
ವ್ರತಮೇತನ್ನರಃ ಕೃತ್ವಾ ನೃಣಾಮಧಿಪತಿರ್ಭವೇತ್ ॥ ೫ ॥

ಪತಿಂ ಲಭಂತೇ ನರದೇವಕನ್ಯಾಃ[1] ಶತಸಹಸ್ರಶಃ ।
ರಮಯಂತಿ ಮಹಾರಾಜ ಯಥೈವೇಡವಿಡಸ್ತಥಾ ॥ ೬ ॥

ಕಾಲೇನ ಚಾಸಾದ್ಯ ಮನುಷ್ಯಲೋಕಂ
ರಾಜಾಭವೇಚ್ಛತ್ರುಗಣಪ್ರಮಾಥೀ ।
ಬಲೇನ ರೂಪೇಣ ಧನೇನ ಯುಕ್ತೋ
ಮಹಾಮತಿಃ ಸರ್ವಜಗತ್ಪ್ರಧಾನಃ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪಾತಾಲಾನಾಂ ವ್ರತವರ್ಣನೋ
ನಾಮಾಷ್ಟಪಂಚಾಶದಧಿಕಶತತಮೋಽಧ್ಯಾಯಃ

---

ವರ್ಣಕ್ಕೆ ಸಮಾನವಾದ ವರ್ಣವುಳ್ಳ ವಸ್ತ್ರಗಳನ್ನು ದಾನಮಾಡಬೇಕು. ಈ ವ್ರತವನ್ನು ಹೀಗೆ ಸಾಂಗವಾಗಿ ಮಾಡಿದವನು ಪ್ರಜೆಗಳಿಗೆ ಒಡೆಯನಾಗಿ ಧೊರೆಯಾಗುತ್ತಾನೆ. ಆ ಧೊರೆಯ ಕನ್ಯಕೆಗಳೂ ತಮಗೆ ಅಭಿಮತರಾದ ಪತಿಗಳನ್ನೂ ಹೊಂದುತ್ತಾರೆ. ಏಡಬಿಡದಂತೆ ಸಂತೋಷದಿಂದಿರುತ್ತಾರೆ. ಮನುಷ್ಯನಾಗಿ ಹುಟ್ಟಿದಾಗಲೂ ಧೊರೆಯಾಗಿ ಪರಾಕ್ರಮಿಯಾಗಿಯೂ, ಬಲ, ರೂಪ, ಧನ ಇವುಗಳಿಂದ ಕೂಡಿ ಜಗತ್ತಿಗೇ ಪ್ರಧಾನಪುರುಷನಾಗಿಯೂ ಬದುಕುತ್ತಾನೆ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಪಾತಾಲಗಳ ವ್ರತವರ್ಣನವೆಂಬ
ನೂರ ಐವತ್ತೆಂಟನೆಯ ಅಧ್ಯಾಯ ಮುಗಿದಿದೆ.



---

1 ವೃತ್ತಭಂಗ ಉಂಟಾಗಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕೋನಷಷ್ಟ್ಯುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಅಥಾತಃ ಸಂಪ್ರವಕ್ಷ್ಯಾಮಿ ಸಪ್ತದ್ವೀಪವ್ರತಂ ಶುಭಂ ।**
**ಚೈತ್ರಶುಕ್ಲಾದಥಾರಭ್ಯ ಪ್ರತ್ಯಹಂ ದಿನಸಪ್ತಕಂ ॥ ೧ ॥**

**ಜಂಬೂಶಾಕಕುಶಕ್ರೌಂಚ ಶಾಲ್ಮಲಿದ್ವೀಪಸಂಜ್ಞಿತಂ ।**
**ಗೋಮೇದಂ ಪುಷ್ಕರಂ ಚೈವ ಪ್ರತ್ಯಹಂ ಪೂಜಯೇತ್ಕ್ರಮಾತ್ ॥ ೨ ॥**

**ನಿತ್ಯಮೇವ ತಥಾಸ್ನಾನಂ ಬಹಿರೇವ ಸಮಾಚರೇತ್ ।**
**ಘೃತೇನ ಹೋಮಂ ಕುರ್ವೀತ ಸಪ್ತಸಸ್ಯಂ ಚ ದಾಪಯೇತ್ ॥ ೩ ॥**

### ನೂರ ಐವತ್ತೊಂಭತ್ತನೆಯ ಅಧಾಯ.

೧-೩. ಮಾರ್ಕಂಡೇಯರು ಹೇಳುತ್ತಾರೆ:—ಇನ್ನು ಮುಂದೆ ಸಪ್ತದ್ವೀಪ ವ್ರತವೆಂಬ ಶುಭವ್ರತವನ್ನೂ ನಿನಗೆ ಹೇಳುತ್ತೇನೆ. ಚೈತ್ರ ಶುಕ್ಲ ಪ್ರತಿಪತ್ತಿನಲ್ಲಿ ಪ್ರಾರಂಭಿಸಿ ಪ್ರತಿನಿತ್ಯವೂ ಏಳು ದಿನಗಳ ಪರ್ಯಂತ ಜಂಬೂ, ಶಾಕ, ಕುಶ, ಕ್ರೌಂಚ, ಶಾಲ್ಮಲಿ, ಗೋಮೇದ, ಪುಷ್ಕರವೆಂಬ ಏಳು ದ್ವೀಪಗಳನ್ನೂ ಕ್ರಮವಾಗಿ ಪೂಜಿಸಬೇಕು. ನಿತ್ಯವೂ ಹೊರಗೆ ಸ್ನಾನಮಾಡಬೇಕು. ಆಜ್ಯದಿಂದ ಹೋಮ ಮಾಡಿ ಏಳು ವಿಧ ಸಸ್ಯಗಳನ್ನು ದಾನಮಾಡಬೇಕು. ರಾತ್ರಿಯಲ್ಲಿ ಒಂದೇ ಬಾರಿ ಅನ್ನವನ್ನು ಭುಂಜಿಸಬೇಕು. ಆ ಪೂಜಾಸ್ಥಳದಲ್ಲಿಯೇ ಮೂರು ದಿನ ಪರ್ಯಂತ ನೆಲದ ಮೇಲೆಯೇ ಮಲಗಬೇಕು ಒಂದು ವರ್ಷ ಮುಗಿದ ನಂತರ ನೂರುಪಲ

ಏಕಮನ್ನಂ ತಥಾನಕ್ತಂ ಸಕೃದೇವ ಸಮಾಚರೇತ್ ।
ಅಧಃಶಾಯೀ ಭವೇನ್ನಿತ್ಯಂ ತದ್ದೇಶೇ ದಿವಸತ್ರಯಂ ॥ ೪ ॥

ಪೂರ್ಣೇ ಸಂವತ್ಸರೇ ದದ್ಯಾದ್ರಜತಸ್ಯ ವಿನಿರ್ಮಿತಂ ।
ಪಲಾನಾಂ ತು ಶತೇನೈವ ಸಂಸ್ಥಾನಂ ದ್ವೀಪಸಪ್ತಕಂ ॥ ೫ ॥

ವ್ರತಮೇತನ್ನರಃ ಕೃತ್ವಾ ಪೂರ್ಣಂ ಸಂವತ್ಸರಂ ಶುಚಿಃ ।
ಸ್ವರ್ಗಲೋಕಮವಾಪ್ನೋತಿ ಯಾವದಾಭೂತಸಂಪ್ಲವಂ ॥ ೬ ॥

ಮಾನುಷ್ಯಮಾಸಾದ್ಯ ಸಮಸ್ತದ್ವೀಪಾ-
ನ್ಭುನಕ್ತಿ ಭೂಮಿಂ ವಿಜಿತಾರಿಪಕ್ಷಃ ।
ಸಂಪೂಜ್ಯಮಾನಃ ತ್ರಿದಶೈಃ ಸದೈವ
ಮಹರ್ಷಿಭಿಃ ಬ್ರಾಹ್ಮಣಪುಂಗವೈಶ್ಚ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯ ಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಜಂಬೂದ್ವೀಪಾದಿಸಪ್ತದ್ವೀಪವ್ರತವರ್ಣನೋ ನಾಮೈಕೋನಷಷ್ಟ್ಯುತ್ತರ ಶತತಮೋಽಧ್ಯಾಯಃ

---

ತೂಕದ ಬೆಳ್ಳಿಯಿಂದ ಮಾಡಿದ ಸಪ್ತದ್ವೀಪದ ಪ್ರತಿಕೃತಿಯನ್ನು ದಾನಮಾಡಬೇಕು. ಈ ವ್ರತವನ್ನು ಸಂವತ್ಸರ ಪೂರ್ತಿ ಆಚರಿಸಿದವನು ಪ್ರಳಯ ಪರ್ಯಂತರವೂ ಸ್ವರ್ಗ ಸುಖಿಯಾಗುತ್ತಾನೆ. ಪುನಃ ಮನುಷ್ಯನಾಗಿ ಹುಟ್ಟಿದರೂ ವಿಜಯಶಾಲಿಯಾಗಿಯೂ, ದೇವತೆಗಳಿಂದಲೂ, ಮಹರ್ಷಿಗಳಿಂದಲೂ, ಬ್ರಾಹ್ಮಣೋತ್ತಮರಿಂದಲೂ ಸತ್ಕರಿಸಲ್ಪಡುತ್ತಾ ಸಪ್ತದ್ವೀಪಗಳ ಅಖಂಡ ಭೂಮಂಡಲವನ್ನೂ ಆಳುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಜಂಬೂದ್ವೀಪಾದಿಸಪ್ತದ್ವೀಪವ್ರತವರ್ಣನವೆಂಬ ನೂರ ಐವತ್ತೊಂಭತ್ತನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಷಷ್ಟ್ಯುತ್ತರ ಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಅಥಾತಃ ಸಂಪ್ರವಕ್ಷ್ಯಾಮಿ ಸಮುದ್ರವ್ರತಮೇವ ತೇ ।**
**ಚೈತ್ರಶುಕ್ಲಾದಥಾರಭ್ಯ ಪ್ರತ್ಯಹಂ ದಿವಸತ್ರಯಂ || ೧ ||**

**ಲವಣಕ್ಷೀರ ಆಜ್ಯಾಖ್ಯದಧಿಮಂಡಸುರೋದಕಂ ।**
**ತಥೈವೇಕ್ಷು ಸುರೋದಂ ಚ ಸ್ವಾದೂದಂ ಚೈವ ಪೂಜಯೇತ್ || ೨ ||**

**ಆಚರೇತ್ಪ್ರತ್ಯಹಂ ಸ್ನಾನಂ ನಿತ್ಯಮೇವ ಗೃಹಾದ್ಬಹಿಃ ।**
**ಘೃತೇನ ಹೋಮಂ ಕುರ್ವೀತ ಸಪ್ತಸಸ್ಯಂ ಚ ದಾಪಯೇತ್ || ೩ ||**

---

### ನೂರ ಅರವತ್ತನೆಯ ಅಧ್ಯಾಯ.

೧–೭. ಮಾರ್ಕಂಡೇಯರು ಹೇಳುತ್ತಾರೆ:—ಇನ್ನು ಮುಂದೆ ಸಪ್ತ ಸಮುದ್ರ ವ್ರತವನ್ನು ಹೇಳುತ್ತೇನೆ. ಚೈತ್ರ ಶುದ್ಧದಲ್ಲಿ ಪ್ರಾರಂಭಿಸಿ ಪ್ರತಿನಿತ್ಯವೂ ಮೂರುದಿನಗಳು, ಲವಣ, ಕ್ಷೀರ, ಆಜ್ಯ, ದಧಿ, ಇಕ್ಷು, ಸುರಾ, ಸ್ವಾದೂದಕವೆಂಬ ಸಪ್ತಸಮುದ್ರಗಳನ್ನೂ ಪೂಜಿಸಬೇಕು. ನಿತ್ಯವೂ ಮನೆಗಿಂತ ಹೊರಗಡೆಯೇ ಸ್ನಾನಮಾಡಬೇಕು. ಆಜ್ಯದಿಂದ ಹೋಮಮಾಡಿ ಏಳು ವಿಧವಾದ ಸಸ್ಯಗಳನ್ನು ದಾನಮಾಡಬೇಕು. ನಿತ್ಯವೂ ರಾತ್ರಿಯಲ್ಲಿ ಹವಿಷ್ಯಾನ್ನವನ್ನೇ ಭುಂಜಿಸಬೇಕು. ಹೀಗೆಯೇ ಸಂವತ್ಸರ ಪೂರ್ತಿ ನಡೆಸಬೇಕು. ವರ್ಷದ ಕೊನೆಯಲ್ಲಿ ಕರೆಯುವ ಹಸುವನ್ನು ದಾನಮಾಡಬೇಕು. ಈ ರೀತಿ ಈ ವ್ರತವನ್ನು ಮಾಡಿದವನು ಸಪ್ತಸಾಗರಪರ್ಯಂತವಾದ

ಹವಿಷ್ಯಾಶೀ ಭವೇನ್ನಕ್ತಂ ಕುರ್ಯಾತ್ಸಂವತ್ಸರಂ ವ್ರತಂ ।
ಸಂವತ್ಸರಾಂತೇ ದದ್ಯಾಚ್ಚ ತಥಾ ಧೇನುಂ ಪಯಸ್ವಿನೀಂ ॥ ೪ ॥

ವ್ರತೇನಾನೇನ ಚೀರ್ಣೇನ ಸಪ್ತಸಾಗರಮೇಖಲಾಂ ।
ಭುನಕ್ತಿ ವಸುಧಾಂ ರಾಜಾ ಸಪ್ತಜನ್ಮಾಂತರಾಣಿ ಚ ॥ ೫ ॥

ಆರೋಗ್ಯಕಾಮಃ ಕುರ್ವೀತ ವ್ರತಮೇತತ್ತಥೋತ್ತಮಂ ।
ಧರ್ಮಕಾಮೋ ಯಶಃಕಾಮಃ ಶ್ರೀಕಾಮಶ್ಚ ತಥಾಪರಃ ॥ ೬ ॥

ಮಂಗಲ್ಯಮೇತತ್ಪರಮಂ ಪವಿತ್ರಂ
ಶ್ರೀವರ್ಧನಂ ಧರ್ಮವಿವೃದ್ಧಿಕಾರಿ ।
ಕರ್ತವ್ಯಮೇತತ್ಪ್ರಯತೈರ್ಮನುಷ್ಯೈಃ
ಯೇ ರಾಜ್ಯಕಾಮಾಸ್ತು ವಿಶೇಷತಸ್ತೈಃ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಲವಣಸಮುದ್ರಾದಿ ಸಪ್ತಸಮುದ್ರವರ್ಣನೋ
ನಾಮ ಷಷ್ಟ್ಯುತ್ತರಶತತಮೋಽಧ್ಯಾಯಃ

---

ಭೂಮಂಡಲದಲ್ಲಿ ರಾಜನಾಗಿದ್ದು ಏಳು ಜನ್ಮದವರಿಗೂ ಅನುಭವಿಸುತ್ತಾನೆ. ಆರೋಗ್ಯಕಾಮನೂ, ಯಶಃಕಾಮನೂ, ಧರ್ಮಕಾಮನೂ, ಸಂಪತ್ಕಾಮನೂ, ಈ ವ್ರತವನ್ನಾಚರಿಸಿ ಕೃತಾರ್ಥರಾಗುತ್ತಾರೆ. ಇದು ಮಂಗಲಪ್ರದವೂ, ಲಕ್ಷ್ಮೀಪ್ರದವೂ, ಧರ್ಮವೃದ್ಧಿಕಾರಕವೂ ಆಗಿರುವುದರಿಂದ ಶುದ್ಧರಾದ ಮನುಷ್ಯರು ಇದನ್ನು ಆಚರಿಸಬೇಕು. ರಾಜ್ಯಾಪೇಕ್ಷೆಯುಳ್ಳವರು ವಿಶೇಷತಃ ಆಚರಿಸಲೇಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಲವಣಸಮುದ್ರಾದಿ ಸಪ್ತಸಮುದ್ರ
ವ್ರತವರ್ಣನವೆಂಬ ನೂರ ಅರವತ್ತನೆಯ
ಅಧ್ಯಾಯವು ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕಷಷ್ಟ್ಯುತ್ತರಶತತಮೋಽಧ್ಯಾಯಃ ||

### || ಮಾರ್ಕಂಡೇಯ ಉವಾಚ ||

**ಅಥಾತಃ ಸಂಪ್ರವಕ್ಷ್ಯಾಮಿ ತವ ಶೈಲವ್ರತಂ ಶುಭಂ ।**
**ಮಹೇಂದ್ರೋ ಮಲಯಃ ಸಹ್ಯಃ ಶುಕ್ತಿಮಾನೃಕ್ಷವಾನಪಿ || ೧ ||**

**ವಿಂಧ್ಯಶ್ಚ ಪಾರಿಯಾತ್ರಶ್ಚ ಸಪ್ತೈತೇ ಕುಲಪರ್ವತಾಃ ।**
**ಚೈತ್ರಶುಕ್ಲಸಮಾರಂಭಾತ್ಪ್ರತ್ಯಹಂ ದಿನಸಪ್ತಕಂ || ೨ ||**

**ತೇಷಾಂ ಸಂಪೂಜನಂ ಕುರ್ಯಾದ್ಬಹಿಃ ಸ್ನಾನಂ ಸಮಾಚರೇತ್ ।**
**ಗಂಧಮಾಲ್ಯನಮಸ್ಕಾರ ಧೂಪದೀಪಾನ್ನಸಂಪದಾ || ೩ ||**

---

### ನೂರ ಅರವತ್ತೊಂದನೆಯ ಅಧ್ಯಾಯ.

೧-೭ ಮಾರ್ಕಂಡೇಯರು ಹೇಳುತ್ತಾರೆ. ಇನ್ನು ಮುಂದೆ ಶುಭವಾದ ಶೈಲವ್ರತವನ್ನು ನಿನಗೆ ಹೇಳುತ್ತೇನೆ. ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಾನ್ ವಿಂಧ್ಯ, ಪಾರಿಯಾತ್ರ ಈ ಏಳೂ ಕುಲಪರ್ವತಗಳೆಂದು ಹೇಳಲ್ಪಟ್ಟಿವೆ. ಚೈತ್ರ ಶುಕ್ಲದಲ್ಲಿ ಪ್ರಾರಂಭಿಸಿ ಏಳು ದಿವಸಗಳವರಿಗೂ, ನಿತ್ಯವೂ ಈ ಪರ್ವತಗಳನ್ನು ಗಂಧಪುಷ್ಪ ನಮಸ್ಕಾರ ಧೂಪದೀಪನೈವೇದ್ಯಾದಿಗಳಿಂದ ಯಥಾವಿಧಿ ಪೂಜಿಸಬೇಕು. ಹೊರಗೇ ಸ್ನಾನಮಾಡಬೇಕು ಯವಗಳಿಂದ ಹೋಮಮಾಡಿ ಬ್ರಾಹ್ಮಣರಿಗೆ ದಕ್ಷಿಣೆಯನ್ನೂ ಕೊಡಬೇಕು. ರಾತ್ರಿಯಲ್ಲಿ ಯವಾನ್ನವನ್ನು ಭುಂಜಿಸಬೇಕು. ಸಂವತ್ಸರವೂ ಈ ರೀತಿ ವ್ರತವನ್ನಾಚರಿಸಿ ಕೊನೆಯಲ್ಲಿ ಯವದಿಂದ ತುಂಬಿದ

ಯೆವೈರ್ಹೋಮಸ್ತಥಾ ಕಾರ್ಯೋ ದದ್ಯಾದ್ವಿಪ್ರೇಷು ದಕ್ಷಿಣಾಂ ।
ನಕ್ತಂ ಯವಾನ್ನಮಶ್ನೀಯಾತ್ಕುರ್ಯಾತ್ಸಂವತ್ಸರಂ ವ್ರತಂ ॥ ೪ ॥

ವ್ರತಾವಸಾನೇ ದದ್ಯಾಚ್ಚ ಯವಸ್ಥಾಲೀಶ್ಚ ವಿಂಶತಿಂ ।
ವಾಚಕಾಯ ದ್ವಿಜೇಂದ್ರಾಯ ಸುವರ್ಣಂ ಗಾಂ ಚ ತಸ್ಯ ತು ॥ ೫ ॥

ವ್ರತೇನಾನೇನ ಚೀರ್ಣೇನ ಸರ್ವಾಂ ಸಾಗರಮೇಖಲಾಂ ।
ಭುನಕ್ತಿ ವಸುಧಾಂ ರಾಜಾ ವಶೀಕೃತ್ಯ ರಿಪೂನ್ನೃಪ ॥ ೬ ॥

ಭೋಗಾಂಶ್ಚ ಭುಕ್ತ್ವಾ ತ್ರಿದಿವೇ ಚ ರಾಜ-
ನ್ಮಾನುಷ್ಯಮಾಸಾದ್ಯ ಯಥೋಕ್ತಮೇತತ್ ।
ಪ್ರಾಪ್ನೋತಿ ಸರ್ವಂ ಹಿ ಮಯೇರಿತಂಯ
ಜ್ಜನ್ಮಾಂತರಾಣ್ಯೇವ ನರೇಂದ್ರಸಪ್ತ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ। ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಸಪ್ತಶೈಲವ್ರತವರ್ಣನೋ
ನಾಮೈಕಷಷ್ಟ್ಯುತ್ತರಶತತಮೋಽಧ್ಯಾಯಃ

---

ಇಪ್ಪತ್ತು ಸ್ಥಾಲಿಗಳನ್ನು ದಾನಮಾಡಬೇಕು. ಇದರ ಮಾಹಾತ್ಮ್ಯವನ್ನು ಪಠಿಸಿದ ಬ್ರಾಹ್ಮಣನಿಗೆ ಗೋವನ್ನೂ, ಸುವರ್ಣವನ್ನೂ ದಾನಮಾಡಬೇಕು. ಈ ವ್ರತವನ್ನು ಹೀಗೆ ಆಚರಿಸಿದವನು ರಾಜನಾಗಿ ಸಪ್ತಸಾಗರಪರ್ಯಂತವಾದ ಭೂಮಿಯನ್ನು ವಿಜಯಶಾಲಿಯಾಗಿದ್ದು ಅನುಭವಿಸುತ್ತಾನೆ. ಸ್ವರ್ಗವಾಸಿಯಾಗಿದ್ದು ಎಲ್ಲಾ ಭೋಗಗಳನ್ನೂ ಅನುಭವಿಸಿ ಅನಂತರ ಮನುಷ್ಯನಾಗಿ ಹುಟ್ಟಿ ನಾನು ಹೇಳಿರುವ ಈ ಫಲಗಳನ್ನು ಏಳು ಜನ್ಮಗಳವರಿಗೂ ಅನುಭವಿಸುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಸಪ್ತಶೈಲವ್ರತವರ್ಣನವೆಂಬ
ನೂರ ಅರವತ್ತೊಂದನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ದ್ವಿಷಷ್ಟ್ಯುತ್ತರಶತತಮೋऽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಅತಃ ಪರಂ ಪ್ರವಕ್ಷ್ಯಾಮಿ ತವ ಲೋಕವ್ರತಂ ಶುಭಂ ।**
**ಯಾಸ್ತು ವ್ಯಾಹೃತಯಃ ಸಪ್ತ ತ್ರೈಲೋಕ್ಯಾಂ ತು ಪ್ರಕೀರ್ತಿತಾಃ || ೧ ||**

**ಆಚರೇತ್ಪ್ರತ್ಯಹಂ ಸ್ನಾನಂ ಬಹಿರ್ನಿತ್ಯಮತಂದ್ರಿತಃ ।**
**ಚೈತ್ರಶುಕ್ಲಾದಥಾರಭ್ಯ ಕ್ರಮೇಣ ದಿನಸಪ್ತಕಂ || ೨ ||**

**ಗೋಮೂತ್ರಂ ಗೋಮಯಂ ಕ್ಷೀರಂ ದಧಿ ಸರ್ಪಿಃ ಕುಶೋದಕಂ ।**
**ಏಕರಾತ್ರೋಪವಾಸಶ್ಚ ಕ್ರಮೇಣೈವಂ ಸಮಾಚರೇತ್ || ೩ ||**

---

### ನೂರ ಅರವತ್ತೆರಡನೆಯ ಅಧ್ಯಾಯ.

೧-೭. ಮಾರ್ಕಂಡೇಯರು ಹೇಳುತ್ತಾರೆ. ಇನ್ನು ಮುಂದೆ ಸಪ್ತಲೋಕ ವ್ರತವನ್ನೂ ಲೋಕದಲ್ಲಿ ಪ್ರಖ್ಯಾತಿಹೊಂದಿರುವ ಸಪ್ತವ್ಯಾಹೃತಿವ್ರತವನ್ನೂ ನಿನಗೆ ಹೇಳುತ್ತೇನೆ. ನಿತ್ಯವೂ ಹೊರಗೇ ಸ್ನಾನವಮಾಡುತ್ತಾ ಚೈತ್ರಶುಕ್ಲಮೊದಲುಮಾಡಿ ಏಳುದಿನ ಪರ್ಯಂತವೂ ಗೋಮೂತ್ರ, ಗೋಮಯ, ಕ್ಷೀರ, ಮೊಸರು, ತುಪ್ಪ ಶುದ್ಧೋದಕ ಇವುಗಳಿಂದಲೂ ಒಂದು ರಾತ್ರಿ ಉಪವಾಸದಿಂದಲೂ ಇದ್ದು ಈ ವ್ರತ ವನ್ನಾಚರಿಸಬೇಕು. ಪ್ರತಿದಿನದಲ್ಲಿಯೂ ಮಹಾವ್ಯಾಹೃತಿಗಳಿಂದ ತಿಲಹೋಮ ವನ್ನೂ ಮಾಡುತ್ತಿರಬೇಕು. ಸಂವತ್ಸರದ ಕೊನೆಯಲ್ಲಿ ಬ್ರಾಹ್ಮಣರಿಗೆ ದಕ್ಷಿಣೆಯನ್ನೂ ಕೊಡಬೇಕು. ಆ ದಕ್ಷಿಣೆಯೂ ಸಹ, ಸುವರ್ಣ, ಹೊಸವಸ್ತ್ರ, ಕಾಂಸ್ಯಸಹಿತವಾದ

ಮಹಾವ್ಯಾಹೃತಿಭಿರ್ಹೋಮಃ ತಿಲೈಃ ಕಾರ್ಯೋ ದಿನೇ ದಿನೇ ।
ಸಂವತ್ಸರಾಂತೇ ದದ್ಯಾಚ್ಚ ತಥಾ ವಿಪ್ರೇಷು ದಕ್ಷಿಣಾಂ ॥ ೪ ॥

ಸುವರ್ಣಮಹತಂ ವಾಸಃಕಾಂಸ್ಯಂ ಧೇನುಂ ಪಯಸ್ವಿನೀಂ ।
ಸಂವತ್ಸರಮಿದಂ ಕೃತ್ವಾ ವ್ರತಂ ಪುರುಷಸತ್ತಮ ॥ ೫ ॥

ಸರ್ವಲೋಕಚರಃ ಶ್ರೀಮಾನ್ ಸ್ವೇಚ್ಛಯಾ ಸ್ಯಾನ್ನರಾಧಿಪ ।
ಯಾವತ್ಕಲ್ಪಾವಸಾನಂ ತು ಕಲ್ಪಾದೌ ಪಾರ್ಥಿವೋ ಭವೇತ್ ॥ ೬ ॥

ಸ ಚಕ್ರವರ್ತೀ ನೃಪವರ್ಯಪೂಜ್ಯಃ
ಸುರಾಸುರಾಣಾಮಧಿಕಪ್ರಭಾವಃ ।
ಸಂವತ್ಸರಾಣಾಮಯುತಂ ಶತಾನಾಂ
ಸಂಪಾತಿಪೃಥ್ವೀಂ ಸಕಲಾಭಿರಾಮಃ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಸಪ್ತವ್ಯಾಹೃತಿ ಸಪ್ತಲೋಕವರ್ಣನೋ ನಾಮ
ದ್ವಿಷಷ್ಟ್ಯುತ್ತರಶತತಮೋಽಧ್ಯಾಯಃ

---

ಕರೆಯುವಹಸು, ಇವುಗಳಾಗಿರಬೇಕು. ಈ ವ್ರತವನ್ನ ಸಂವತ್ಸರದ ಪೂರ್ತಿಯಾಗಿ ನಡೆಸಿದವನು ಸ್ವೇಚ್ಛೆಯಿಂದ ಸರ್ವಲೋಕಸಂಚಾರಿಯಾಗಿಯೂ ಶ್ರೀಮಂತನಾಗಿಯೂ, ಕಲ್ಪಪರ್ಯಂತವೂ ಇದ್ದು ಅನಂತರ ಮುಂದಿನ ಕಲ್ಪದಲ್ಲಿ ರಾಜನಾಗಿ ಜನಿಸುತ್ತಾನೆ. ಇವನು ರಾಜರುಗಳಿಂದ ಪೂಜಿಸಲ್ಪಡುವ ಚಕ್ರವರ್ತಿಯಾಗಿಯೂ, ಸುರಾಸುರರಂತೆ ಪ್ರಭಾವಶಾಲಿಯಾಗಿಯೂ ಅನೇಕ ಶತಸಹಸ್ರವರ್ಷಪರ್ಯಂತವಾಗಿಯೂ ಜನಪ್ರಿಯನಾಗಿ ಭೂಮಿಯನ್ನೂ ಆಳುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಸಪ್ತವ್ಯಾಹೃತಿ ಸಪ್ತಲೋಕವ್ರತವರ್ಣನವೆಂಬ
ನೂರ ಅರವತ್ತೆರಡನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ತ್ರಿಷಷ್ಟ್ಯುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಚೈತ್ರಶುಕ್ಲಾದಥಾರಭ್ಯ ಪ್ರತ್ಯಹಂ ದಿನಸಪ್ತಕಂ ।**
**ಹ್ಲಾದಿನೀಂ ಹ್ರಾದಿನೀಂ ಚೈವ ಪಾವನೀಂ ಚೈವ ಪೂಜಯೇತ್ || ೧ ||**

**ಸೀತಾಂ ರಾಮಂ ತಥಾ ಸಿಂಧುಂ ತಥಾ ಭಾಗೀರಥೀಂ ಕ್ರಮಾತ್ ।**
**ಬಹಿಃ ಸ್ನಾನಂ ನರಃ ಕುರ್ಯಾನ್ನಿತ್ಯಂ ನಕ್ತಾಶನೋ ಭವೇತ್ || ೨ ||**

**ಜಲೇ ತು ಜುಹುಯಾತ್ಕ್ಷೀರಂ ತಾಸಾಂ ನಾಮ್ನಾ ದಿನೇದಿನೇ ।**
**ಕ್ಷೀರಪೂರ್ಣಾಶ್ಚ ದಾತವ್ಯಾ ವಾರಿಧಾನ್ಯೋ ದ್ವಿಜಾತಿಷು || ೩ ||**

---

### ನೂರ ಅರವತ್ತಮೂರನೆಯ ಅಧ್ಯಾಯ.

೧-೭. ಮಾರ್ಕಂಡೇಯರು ಹೇಳುತ್ತಾರೆ:— ಚೈತ್ರಶುಕ್ಲ ಮೊದಲು ಮಾಡಿ ಏಳು ದಿನಗಳ ಪರ್ಯಂತವೂ ಪ್ರತಿನಿತ್ಯವೂ, ಹ್ಲಾದಿನೀ, ಹ್ರಾದಿನೀ, ಪಾವನೀ, ಸೀತಾ, ರಾಮ, ಸಿಂಧು, ಭಾಗೀರಥೀ ಇವುಗಳನ್ನು ಕ್ರಮವಾಗಿ ಪೂಜಿಸಬೇಕು. ಹೊರಗೇ ಸ್ನಾನಮಾಡುತ್ತಾ ರಾತ್ರಿಯಲ್ಲಿಯೇ ಭುಂಜಿಸಬೇಕು ಆಯಾಯ ನದಿಗಳ ನಾಮಮಂತ್ರಗಳಿಂದ ಪ್ರತಿದಿನವೂ ಜಲದಲ್ಲಿ ಕ್ಷೀರವನ್ನು ಹೋಮಮಾಡಬೇಕು. ಕ್ಷೀರದಿಂದ ತುಂಬಿದ ತಂಬಿಗೆಗಳನ್ನು ಬ್ರಾಹ್ಮಣರಿಗೆ ದಾನಮಾಡಬೇಕು ಏಳು ದಿನಗಳಲ್ಲಿಯೂ ಕ್ಷೀರವನ್ನೇ ಸೇವಿಸುತ್ತಿರಬೇಕು. ಈ ರೀತಿ ಆ ಸಂವತ್ಸರ ಪೂರ್ತಿ ಆಚರಿಸಿ, ಆ ಸಂವತ್ಸರವು ಮುಗಿದ ಮೇಲೆ ಬ್ರಾಹ್ಮಣರಿಗೆ ರಜತದ ಒಂದೊಂದು

ಕ್ಷೀರಾಶನಸ್ತು ತಿಷ್ಠೇತ್ತು ತತ್ರಥಾ ದಿನಸಪ್ತಕಂ ।
ಏವಂ ಸಂವತ್ಸರಂ ಕೃತ್ವಾ ಪೂರ್ಣೇ ಸಂವತ್ಸರೇ ನರಃ ॥ ೪ ॥

ದ್ವಿಜಾತಿಷು ತತೋ ದದ್ಯಾದ್ರಜತಸ್ಯ ಪಲಂಪಲಂ ।
ಫಾಲ್ಗುನಸ್ಯ ಸಿತೇ ಪಕ್ಷೇ ಸಪ್ತಮ್ಯಾಂ ದಿವಸಕ್ರಮಾತ್ ॥ ೫ ॥

ತಂಲೋಕಮಾಪ್ನೋತಿ ನರೋ ಯತ್ರ ಪಾಯಸಕರ್ದಮಂ ।
ನದ್ಯಃ ಕ್ಷೀರವಹಾ ದಿವ್ಯಾಃ ಸರ್ವಕಾಮಫಲಪ್ರದಾಃ ॥ ೬ ॥

ತತ್ರೋಷ್ಯಕಾಲಂ ಸುಚಿರಂ ಮಹಾತ್ಮಾ
ಮಾನುಷ್ಯಮಾಸಾದ್ಯ ಭವತ್ಯರೋಗಃ ।
ರೂಪೇಣ ಶೀಲೇನ ಧನೇನ ಯುಕ್ತೋ
ರಾಜಾಥವಾ ಬ್ರಾಹ್ಮಣಪುಂಗವಶ್ಚ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ನದೀವ್ರತವರ್ಣನೋನಾಮ ತ್ರಿಷಷ್ಟ್ಯುತ್ತರ
ಶತತಮೋಽಧ್ಯಾಯಃ

---

ಪಲ ತೂಕವನ್ನು ಒಬ್ಬೊಬ್ಬರಿಗೂ ದಾನಮಾಡಬೇಕು. ಈ ದಾನವನ್ನೂ ಸಹ ಫಾಲ್ಗುನಮಾಸದ ಶುಕ್ಲಪಕ್ಷದ ಸಪ್ತಮಿಯಲ್ಲಿ ಮೊದಲುಮಾಡಿ, ಕ್ರಮವಾಗಿ ಮಾಡಬೇಕು. ಯಾವ ಲೋಕದಲ್ಲಿ ಪಾಯಸವೇ ಕೆಸರಿನಂತೆ ತುಂಬಿರುವುದೋ, ನದಿಗಳೂ ಸಹ ಇಷ್ಟಾರ್ಥಪ್ರದಗಳಾಗಿಯೂ, ಕ್ಷೀರಪೂರ್ಣಗಳಾಗಿಯೂ ಇರುತ್ತವೆಯೋ ಈ ವ್ರತವನ್ನಾಚರಿಸಿದವನು ಅಂತಹ ಲೋಕಕ್ಕೆ ಹೋಗಿ ಸುಖಿಸುತ್ತಾನೆ. ಅಲ್ಲಿ ಸುಖದಿಂದಿದ್ದು ಮನುಷ್ಯನಾಗಿ ಹುಟ್ಟುವಾಗ ಆರೋಗನಾಗಿಯೂ, ರೂಪ, ಶೀಲ, ಧನಗಳಿಂದ ಕೂಡಿಯೂ ಇರುವ ರಾಜನಾಗಿಯೋ ಪ್ರಶಸ್ತನಾದ ಬ್ರಾಹ್ಮಣನಾಗಿಯೋ ಆಗುತ್ತಾನೆ

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ನದೀವ್ರತವರ್ಣನವೆಂಬ
ನೂರ ಅರವತ್ತಮೂರನೆಯ ಅಧ್ಯಾಯ
ಮುಗಿದಿದೆ.

॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಚತುಃಷಷ್ಟ್ಯುತ್ತರಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

**ಚೈತ್ರಶುಕ್ಲಾದಥಾರಭ್ಯ ಪ್ರತ್ಯಹಂ ದಿನಸಪ್ತಕಂ ।**
**ಸುಪ್ರಭಾಂ ಕಾಂಚನಾಕ್ಷೀಂ ಚ ವಿಶಾಲಾಂ ಮಾನಸಂ ಹ್ರದಂ ॥ ೧ ॥**

**ತಾಂ ತ್ರಿನಾದಾಂ ಸುವೇಣುಂ ಚ ತಥೈವ ವಿಮಲೋದಕಾಂ ।**
**ನಿತ್ಯಂ ಸಂಪೂಜಯೇದ್ಭಕ್ತ್ಯಾ ಬಹಿಃ ಸ್ನಾನಂ ಸಮಾಚರೇತ್ ॥ ೨ ॥**

**ತಾಸಾಂ ಚ ಪ್ರತ್ಯಹಂ ನಾಮ್ನಾ ದಧ್ನಾ ಹೋಮಂ ಸಮಾಚರೇತ್ ।**
**ಬ್ರಾಹ್ಮಣಾನ್ ಭೋಜಯೇಚ್ಚಾತ್ರ ದಧ್ನಾಮಿಶ್ರಂ ಚ ಭೋಜನಂ ॥ ೩ ॥**

---

### ನೂರ ಅರವತ್ತನಾಲ್ಕನೆಯ ಅಧ್ಯಾಯ.

೧-೩. ಮಾರ್ಕಂಡೇಯರು ಹೇಳುತ್ತಾರೆ :—ಚೈತ್ರ ಶುದ್ಧದಲ್ಲಿ ಪ್ರಾರಂಭಿಸಿ ಏಳು ದಿನಗಳ ಪರ್ಯಂತ ಪ್ರತಿದಿನವೂ ಸುಪ್ರಭಾ, ಕಾಂಚನಾಕ್ಷೀ, ವಿಶಾಲಾ, ಮಾನಸ, ತ್ರಿನಾದಾ, ಸುವೇಣು, ವಿಮಲೋದಕಾ ಎಂಬ ಏಳು ಸರಸ್ಸುಗಳನ್ನೂ ಭಕ್ತಿಯಿಂದ ಪೂಜಿಸಬೇಕು. ಹೊರಗೇ ಸ್ನಾನಮಾಡುತ್ತಿರಬೇಕು. ಈ ಸರೋವರಗಳ ನಾಮಮಂತ್ರದಿಂದ ಪ್ರತಿದಿನದಲ್ಲಿಯೂ ಹೋಮವನ್ನು ಮೊಸರಿನಿಂದ ಮಾಡಬೇಕು. ಈ ದಿನಗಳಲ್ಲಿ ಬ್ರಾಹ್ಮಣರಿಗೆ ಮೊಸರಿನಿಂದ ಮಿಶ್ರವಾದ ಭೋಜನವನ್ನು ಮಾಡಿಸಬೇಕು. ರಾತ್ರಿಯಲ್ಲಿ ಒಂದೇ ಬಾರಿ ಘೃತಾನ್ನವನ್ನು ಭುಂಜಿಸಬೇಕು. ಈ ರೀತಿ

ಘೃತೌದನಂ ತಥಾಶ್ನೀಯಾತ್ಸಕೃದೇವ ತಥಾ ನಿಶಿ ।
ಏವಂ ಸಂವತ್ಸರಂ ಕೃತ್ವಾ ಪೂರ್ಣೇ ಸಂವತ್ಸರೇ ನರಃ ॥ ೪ ॥

ಫಾಲ್ಗುನಾಮಲಪಕ್ಷೇ ತು ಪ್ರತ್ಯಹಂ ದಿವಸಕ್ರಮಾತ್ ।
ವಸ್ತ್ರಾಣಾಂ ಸಪ್ತಕಂ ದದ್ಯಾತ್ತೀರ್ಥಸ್ನಾತೇ ದ್ವಿಜೋತ್ತಮೇ ॥ ೫ ॥

ಏವಂ ಸಂವತ್ಸರಂ ಕೃತ್ವಾ ವ್ರತಂ ಸಾರಸ್ವತಂ [1]ಜಪೇತ್ ।
ತತ್ರೋಷ್ಯ ಸುಚಿರಂ ಕಾಲಂ ಮನುಷ್ಯೋ ಜಾಯತೇ ತದಾ ॥ ೬ ॥

ತದಾ ನರೇಂದ್ರೋ ವಿಜಿತಾರಿಪಕ್ಷೋ
ದ್ವಿಜೋತ್ತಮೋ ವಾ ಬಹುಯಜ್ಞಯಾಜೀ ।
ರೂಪೇಣ ಶೀಲೇನ ಧನೇನ ಯುಕ್ತಃ
ಶ್ರುತಾನ್ವಿತಃ ಸ್ಯಾಚ್ಚ ಜನಾಭಿರಾಮಃ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಸಾರಸ್ವತವ್ರತವರ್ಣನೋನಾಮ
ಚತುಃಷಷ್ಟ್ಯುತ್ತರಶತತಮೋಽಧ್ಯಾಯಃ

---

ಸಂವತ್ಸರ ಪರ್ಯಂತ ನಡೆಸಿ ಸಂವತ್ಸರವು ಪೂರ್ಣವಾಗುವಾಗ ಫಾಲ್ಗುನ ಶುಕ್ಲದಲ್ಲಿ ಪ್ರತಿನಿತ್ಯವೂ ಆಯಾಯ ಕ್ರಮದಿಂದ ಏಳು ವಸ್ತ್ರಗಳನ್ನು ತೀರ್ಥದಲ್ಲಿ ಸ್ನಾನ ಮಾಡಿದ ಬ್ರಾಹ್ಮಣನಿಗೆ ದಾನಮಾಡಬೇಕು ಈ ರೀತಿ ಸಂವತ್ಸರ ಪೂರ್ತಿಯಾಗಿ ವ್ರತವನ್ನಾಚರಿಸಿದವನು ಸಾರಸ್ವತಲೋಕವನ್ನು ಹೊಂದುತ್ತಾನೆ. ಅಲ್ಲಿ ಬಹುಕಾಲ ಸುಖಿಯಾಗಿದ್ದು ಮನುಷ್ಯನಾಗಿ ಜನಿಸುವಾಗ ವಿಜಯಶಾಲಿಯಾದ ರಾಜನೋ ಅಥವಾ ಯಜ್ಞಯಾಗಾದಿಗಳಿಂದ ಉತ್ಕೃಷ್ಟನಾದ ಬ್ರಾಹ್ಮಣೋತ್ತಮನೋ ಆಗಿ ಜನಿಸುತ್ತಾನೆ. ರೂಪ, ಧನ, ಶೀಲ ಇವುಗಳೊಡನೆ ಕೂಡಿ ಶಾಸ್ತ್ರಜ್ಞಾನಿಯಾಗಿಯೂ, ಜನಪ್ರಿಯನಾಗಿಯೂ ಬದುಕುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಸಾರಸ್ವತವ್ರತವರ್ಣನವೆಂಬ
ನೂರ ಅರವತ್ತನಾಲ್ಕನೆಯ ಅಧ್ಯಾಯ
ಮುಗಿದಿದೆ.

---

1 ಇಲ್ಲಿ ಲಭೇತ್ ಎಂದು ಪಾಠವಿರಬೇಕೆಂದು ತೋರುತ್ತದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಪಂಚಷಷ್ಟ್ಯುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

ಚೈತ್ರಶುಕ್ಲಾದಥಾರಭ್ಯ ಪ್ರತ್ಯಹಂ ದಿನಸಪ್ತಕಂ ।
ಮರೀಚಿಮತ್ರ್ಯಙ್ಗಿರಸೌ ಪುಲಸ್ತ್ಯಂ ಪುಲಹಂ ಕ್ರತುಂ || ೧ ||

ವಸಿಷ್ಠಂ ಚ ಮಹಾಭಾಗ ಪೂಜಯೇದ್ದಿವಸಕ್ರಮಾತ್ ।
ಕಾಲೋದ್ಭವೈಃ ಫಲೈಃ ಪುಷ್ಪೈರ್ಗೋರಸೈಶ್ಚ ಪೃಥಕ್ಪೃಥಕ್ || ೨ ||

ಆಚರೇತ್ಪ್ರತ್ಯಹಂ ಸ್ನಾನಂ ಬಹಿರ್ನಕ್ತಾಶನೋ ಭವೇತ್ ।
ಮಹಾವ್ಯಾಹೃತಿಭಿರ್ಹೋಮಂ ಫಲೈರ್ಮೂಲೈಃ ಸಗೋರಸೈಃ || ೩ ||

---

### ನೂರ ಅರವತ್ತೈದನೆಯ ಅಧ್ಯಾಯ.

೧-೭. ಮಾರ್ಕಂಡೇಯರು ಹೇಳುತ್ತಾರೆ :—ಚೈತ್ರ ಶುದ್ಧದಲ್ಲಿ ಪ್ರಾರಂಭಿಸಿ ಪ್ರತಿದಿನವೂ ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ ಇವರನ್ನು ಏಳು ದಿನಗಳಲ್ಲಿ ಕ್ರಮವಾಗಿ ಪೂಜಿಸಬೇಕು. ಪ್ರತಿನಿತ್ಯವೂ ಹೊರಗೆ ಸ್ನಾನವಾಡಿ ಆಯಾಯ ಕಾಲದಲ್ಲಿ ಲಭಿಸುವ ಫಲಪುಷ್ಪಗಳಿಂದಲೂ ಗೋರಸ (ಹಾಲು ಮೊಸರು) ದಿಂದಲೂ ಬೇರೆ ಬೇರೆ ಪೂಜಿಸಬೇಕು. ರಾತ್ರಿಯಲ್ಲಿಯೇ ಆಹಾರವನ್ನು ಸ್ವೀಕರಿಸಬೇಕು. ಮಹಾವ್ಯಾಹೃತಿಗಳಿಂದ ಗೋರಸದಿಂದ ಕೂಡಿದ ಫಲಮೂಲಗಳನ್ನು ಹೋಮಿಸಬೇಕು. ಕ್ಷೀರದಿಂದ ತುಂಬಿದ ಪಾತ್ರೆಗಳನ್ನು

ವಾರಿಧಾನ್ಯೈಶ್ಚ ದಾತವ್ಯಾಃ ಕ್ಷೀರಪೂರ್ಣಾ ದ್ವಿಜಾತಿಷು ।
ಏವಂ ಸಂವತ್ಸರಂ ಕೃತ್ವಾ ವ್ರತಾನ್ತೇ ಚಾಹಿತಾಗ್ನಯೇ ॥ ೪ ॥

ದದ್ಯಾತ್ಕೃಷ್ಣಾಜಿನಂ ರಾಜನ್ ಯಥಾಪೂರ್ವಂ ಮಯೇರಿತಂ ।
ವ್ರತಮೇತನ್ನರಃ ಕೃತ್ವಾ ಮೋಕ್ಷೋಪಾಯಂ ಚ ವಿಂದತಿ ॥ ೫ ॥

ಮೋಕ್ಷೋಪಾಯಂ ಸಮಾಸಾದ್ಯ ಮೋಕ್ಷಂ ಪ್ರಾಪ್ನೋತ್ಯಸಂಶಯಂ ॥ ೬ ॥

ಪ್ರಾಪ್ನೋತಿ ಲೋಕಂ ಯದಿವಾ ಮುನೀನಾಂ
ದೇವಸ್ಯ ವಿಷ್ಣೋರ್ಯದಿವೇಶ್ವರಸ್ಯ ।
ಪಿತಾಮಹಸ್ಯಾಪ್ರತಿಮಸ್ಯ ವಾಪಿ
ವ್ರತೇನ ಚೀರ್ಣೇನ ಮಹಾನುಭಾವ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಸಪ್ತರ್ಷಿವ್ರತವರ್ಣನೋ ನಾಮ
ಪಂಚಷಷ್ಟ್ಯುತ್ತರಶತತಮೋಽಧ್ಯಾಯಃ

---

ಬ್ರಾಹ್ಮಣರಿಗೆ ದಾನಮಾಡಬೇಕು. ಸಂವತ್ಸರಪರ್ಯಂತ ಹೀಗೆ ಮಾಡಿ ಕೊನೆಯಲ್ಲಿ ಆಹಿತಾಗ್ನಿಯಾದ ಬ್ರಾಹ್ಮಣನಿಗೆ ಕೃಷ್ಣಾಜಿನವನ್ನು ನಾನು ಹಿಂದೆ ಹೇಳಿರುವಂತೆ ದಾನಮಾಡಬೇಕು. ಈ ವ್ರತವನ್ನು ಈ ರೀತಿ ಮಾಡಿದವನಿಗೆ ಮೋಕ್ಷೋಪಾಯವು ಲಭಿಸುತ್ತದೆ. ಉಪಾಯಸಿದ್ಧಿಯಿಂದ ಅವನು ಮೋಕ್ಷವನ್ನೂ ಹೊಂದುತ್ತಾನೆ. ಈ ವ್ರತವನ್ನು ಮಾಡಿದವನು ಇಚ್ಛೆ ಇದ್ದಲ್ಲಿ ಮುನಿಗಳ ಅಥವಾ ಮಹಾವಿಷ್ಣುವಿನ ಅಥವಾ ಈಶ್ವರನ ಅಥವಾ ಚತುರ್ಮುಖನ ಲೋಕಗಳನ್ನೂ ಹೊಂದಬಹುದು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದದಲ್ಲಿ ಸಪ್ತರ್ಷಿವ್ರತವರ್ಣನವೆಂಬ ನೂರ ಅರವತ್ತೈದನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಷಟ್‌ಷಷ್ಟ್ಯುತ್ತರ ಶತತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಚೈತ್ರಶುಕ್ಲಸ್ಯ ಪಕ್ಷೇ ತು ಸಮ್ಯಕ್ ಷಷ್ಠ್ಯಾಮುಪೋಷಿತಃ |**
**ಸಪ್ತಮ್ಯಾಮರ್ಚನಂ ಕುರ್ಯಾನ್ಮರುತಾಂ ಪಾರ್ಥಿವೋತ್ತಮ || ೧ ||**

**ಸಪ್ತಶ್ರೇಣೀಗತಂ ಸಪ್ತಮಂಡಲಂ ನೃಪ ಕಾರಯೇತ್ |**
**ಶ್ರೇಣೀಶ್ರೇಣೀ ತಥಾ ಕಾರ್ಯಾ ಸಪ್ತಮಂಡಲಕಾನ್ವಿತಾ || ೨ ||**

**ಗನ್ಧೈರ್ಮಂಡಲಕಾಃ ಕಾರ್ಯಾ ನಾಮಚಿಹ್ನಾಃ ಪೃಥಕ್ ಪೃಥಕ್ |**
**ಏಕಜ್ಯೋತಿಶ್ಚ ದ್ವಿಜ್ಯೋತಿಸ್ತ್ರಿಜ್ಯೋತಿಶ್ಚ ಮಹಾಬಲ || ೩ ||**

---

### ನೂರ ಅರವತ್ತಾರನೆಯ ಅಧ್ಯಾಯ.

೧-೪. ಮಾರ್ಕಂಡೇಯರು ಹೇಳುತ್ತಾರೆ :—ಚೈತ್ರಶುಕ್ಲಪಕ್ಷದ ಷಷ್ಠೀ ದಿನ ಸರಿಯಾಗಿ ಉಪವಾಸವಿದ್ದು ಸಪ್ತಮಿ ದಿನ ಮರುತ್ತುಗಳನ್ನು ಪೂಜಿಸಬೇಕು. ಏಳು ಪಂಕ್ತಿಗಳನ್ನು ಏರ್ಪಡಿಸಿ ಅವುಗಳಲ್ಲಿ ಏಳು ಮಂಡಲಗಳನ್ನು ನಿರ್ಮಿಸಬೇಕು. ಪ್ರತಿಯೊಂದು ಪಂಕ್ತಿಯೂ ಏಳೇಳು ಮಂಡಲಗಳನ್ನು ಹೊಂದಿರಬೇಕು. ಗಂಧದಿಂದ ಆ ಮಂಡಲಗಳನ್ನು ನಿರ್ಮಿಸಿ ಬೇರೆಬೇರೆ ಆಯಾಯ ನಾಮಗಳನ್ನು ಚಿಹ್ನಿಸಬೇಕು.

ಏಕದ್ವಿತ್ರಿಚತುಃಶಕ್ತಿಕ್ರಮೇಣ ಚ ತಥಾ ನೃಪ ।
ವಿನ್ಯಸೇತ್ಪ್ರಥಮಾಂ ಶ್ರೇಣ್ಯಾಂ ಯಥಾವನ್ನೃಪಸತ್ತಮ ॥ ೪ ॥

ಇಂದ್ರಶ್ಚ ಗತ್ಯಾ ದೃಶ್ಯಶ್ಚ ತತಃ ಪ್ರತಿಶಕೃತ್ತಥಾ ।
ಮಿತಶ್ಚ ಸಂಮಿತಶ್ಚೈವ ಅಮಿತಶ್ಚ ಮಹಾಬಲಃ ॥ ೫ ॥

ದ್ವಿತೀಯಾಯಾಂ ತಥಾ ಶ್ರೇಣ್ಯಾಂ ದೇವಾನೇತಾಂಶ್ಚ ವಿನ್ಯಸೇತ್ ।
ಋತಜಿತ್ಸತ್ಯಜಿಚ್ಚೈವ ಸುಷೇಣಶ್ಚೈವ ವೀರ್ಯವಾನ್ ॥ ೬ ॥

ಅತಿಮಿತ್ರೋನಮಿತ್ರಶ್ಚ ಪುರುಮಿತ್ರಸ್ತಥೈವ ಚ ।
ತೃತೀಯಾಯಾಂ ತಥಾ ಶ್ರೇಣ್ಯಾಂ ದೇವಾನೇತಾಂಶ್ಚ ವಿನ್ಯಸೇತ್ ॥ ೭ ॥

ಋತಶ್ಚ ಋತವಾನ್ಧರ್ತಾ ವಿಧರ್ತಾ ವರುಣೋ ಧ್ರುವಃ ।
ವಿಧಾರಣಂ ಚತುರ್ಥ್ಯಾಂ ತು ಶ್ರೇಣ್ಯಾಂ ಪಾರ್ಥಿವ ವಿನ್ಯಸೇತ್ ॥ ೮ ॥

ಈದೃಕ್ಷಶ್ಚ ಸದೃಕ್ಷಶ್ಚ ಏತಾದೃಗಮಿತಾಶನಃ ।
ಕೀರ್ತಿತಃ ಪ್ರಸದೃಕ್ಷಶ್ಚ ಶರಭಶ್ಚ ಮಹಾಯಶಾಃ ॥ ೯ ॥

---

ಮೊದಲನೆಯ ಪಂಕ್ತಿಯ ಮಂಡಲಗಳಲ್ಲಿ, ಏಕಜ್ಯೋತಿ. ದ್ವಿಜ್ಯೋತಿ, ತ್ರಿಜ್ಯೋತಿ, ಏಕಶಕ್ತಿ, ದ್ವಿಶಕ್ತಿ, ತ್ರಿಶಕ್ತಿ, ಚತುಃಶಕ್ತಿ ಇವರುಗಳನ್ನು ಕ್ರಮವಾಗಿ ವಿನ್ಯಾಸ ಮಾಡಬೇಕು.

೫-೯. ಎರಡನೆಯ ಪಂಕ್ತಿಯ ಮಂಡಲಗಳಲ್ಲಿ ಇಂದ್ರ, ಗತ್ಯಾ, ದೃಶ್ಯ, ಪ್ರತಿಶಕೃತ್, ಮಿತ, ಸಂಮಿತ, ಅಮಿತ, ಈ ಏಳುದೇವತೆಗಳನ್ನು ನ್ಯಾಸಮಾಡಬೇಕು. ಮೂರನೆಯ ಪಂಕ್ತಿಯ ಮಂಡಲಗಳಲ್ಲಿ ಋತಜಿತ್, ಸತ್ಯಜಿತ್, ಸುಷೇಣ, ವೀರ್ಯವಾನ್, ಅತಿಮಿತ್ರ, ಅನಮಿತ್ರ, ಪುರುಮಿತ್ರ, ಈ ಏಳು ದೇವತೆಗಳನ್ನು ನ್ಯಾಸ ಮಾಡಬೇಕು. ನಾಲ್ಕನೆಯ ಪಙ್ಕ್ತಿಯ ಮಂಡಲಗಳಲ್ಲಿ ಋತ, ಋತವಾನ್, ಧರ್ತಾ, ವಿಧರ್ತಾ, ವರುಣ, ಧ್ರುವ, ವಿಧಾರಣ, ಈ ಏಳು ದೇವತೆಗಳನ್ನು ಕ್ರಮವಾಗಿ ನ್ಯಾಸಮಾಡಬೇಕು. ಐದನೇಪಙ್ಕ್ತಿಯ ಮಂಡಲಗಳಲ್ಲಿ ಈದೃಕ್ಷ, ಸದೃಕ್ಷ, ಏತಾದೃಕ್, ಅಮಿತಾಶನ, ಕೀರ್ತಿತ, ಪ್ರಸದೃಕ್ಷ, ಶರಭ ಈ ಏಳು ದೇವತೆಗಳನ್ನು ಕ್ರಮವಾಗಿ ವಿನ್ಯಾಸಮಾಡಬೇಕು.

ವಿನ್ಯಸೇತ್ಪಂಚಮಶ್ರೇಣ್ಯಾಂ ಸಪ್ತದೇವಾನ್ನರಾಧಿಪ ।
ಧರ್ಣಾ ದುಗ್ನೋ ಧ್ವನಿರ್ಭೀಮೋ ಅತಿಯುಕ್ತಃ ಕ್ಷಮಾಸಹಃ ॥ ೧೧ ॥

ಷಷ್ಠ್ಯಾಂ ಚ ವಿನ್ಯಸೇಚ್ಛ್ರೇಣ್ಯಾಂ ಸಪ್ತದೇವಾನ್ಯಥಾಕ್ರಮಂ ।
ದ್ಯುತಿರ್ವಸುರನಾಧೃಷ್ಯೋ ವಾಸಃ ಕಾಮೋಽಥ ಜಯೋ ವಿರಾಟ್ ॥ ೧೧ ॥

ಸಪ್ತಮ್ಯಾಂ ಚ ತಥಾ ಶ್ರೇಣ್ಯಾಂ ವಿನ್ಯಸೇತ್ಸಪ್ತ ಪಾರ್ಥಿವಾನ್ ।
ಪ್ರಥಮಾ ತು ಭವೇಚ್ಛ್ರೇಣೀ ಶುಕ್ಲಾ ಪಾರ್ಥಿವಸತ್ತಮ ॥ ೧೨ ॥

ದ್ವಿತೀಯಾ ಪದ್ಮಪತ್ರಾಭಾ ತೃತೀಯಾ ರುಧಿರೋಪಮಾ ।
ಪೀತವರ್ಣಾ ಚತುರ್ಥೀ ಸ್ಯಾತ್ಪಂಚಮಾ ಶುಕ್ಲಸನ್ನಿಭಾ ॥ ೧೩ ॥

ಆಕಾಶಸನ್ನಿಭಾ ಷಷ್ಠೀ ಕೃಷ್ಣವರ್ಣಾ ಚ ಸಪ್ತಮಿ ।
ಮಾಲ್ಯಾನುಲೇಪನಂ ದೇಯಂ ತಾಸಾಂ ವರ್ಣಸಮಂ ನೃಪ ॥ ೧೪ ॥

ಏಕೋನಾಸ್ತತ್ರ ದಾತವ್ಯಾ ದೀಪಾಃ ಪಂಚಾಶದೇವ ತು ।
ಪೃಥಕ್ಪೃಥಕ್ತು ದೇವಾನಾಂ ನೈವೇದ್ಯಂ ವಿನಿವೇದಯೇತ್ ॥ ೧೫ ॥

---

೧೦-೧೪ ಆರನೆಯ ಪಙ್ಕ್ತಿಯಲ್ಲಿ ಧರ್ಣ, ದುಗ್ಧ, ಧ್ವನಿ, ಭೀಮ, ಅತಿಭೀಮ, ಕ್ಷಮಾ, ಸಹ ಈ ಏಳು ದೇವತೆಗಳನ್ನೂ ಕ್ರಮವಾಗಿ ವಿನ್ಯಾಸಮಾಡಬೇಕು. ಏಳನೆಯ ಶ್ರೇಣಿಯಲ್ಲಿ ದ್ಯುತಿ, ವಸು, ಅನಾಧೃಷ್ಯ ವಾಸ, ಕಾಮ, ಜಯ, ವಿರಾಟ್ ಈ ಏಳು ದೇವತೆಗಳನ್ನು ನ್ಯಾಸಮಾಡಬೇಕು. ಮೊದಲನೆಯ ಶ್ರೇಣಿಯು ಬಿಳಿಯ ಬಣ್ಣದಿಂದಲೂ, ಎರಡನೆಯ ಶ್ರೇಣಿಯು ಪದ್ಮಪತ್ರದ ಬಣ್ಣದಿಂದಲೂ, ಮೂರನೆಯ ಶ್ರೇಣಿಯು ರಕ್ತದ ಬಣ್ಣದಿಂದಲೂ, ನಾಲ್ಕನೆಯ ಶ್ರೇಣಿಯು ಹೊಂಬಣ್ಣದಿಂದಲೂ, ಐದನೆಯ ಶ್ರೇಣಿಯು ಬಿಳುಪಾಗಿಯೂ, ಆರನೆಯ ಶ್ರೇಣಿಯು ಆಕಾಶವರ್ಣದಿಂದ ಕೂಡಿಯೂ, ಏಳನೆಯ ಶ್ರೇಣಿಯು ಕಪ್ಪುಬಣ್ಣದಿಂದ ಕೂಡಿಯೂ ಇರಬೇಕು. ಈ ದೇವತೆಗಳಿಗೆಲ್ಲಾ ಆಯಾಯ ಮಂಡಲಗಳ ಶ್ರೇಣಿಗೆ ಸರಿಯಾದ ಬಣ್ಣವುಳ್ಳ ಗಂಧಮಾಲ್ಯಾದಿಗಳನ್ನು ಅರ್ಪಿಸಬೇಕು.

೧೫-೨೦. ಈ ಪೂಜೆಯಲ್ಲಿ ನಲವತ್ತೊಂಭತ್ತು ದೀಪಗಳನ್ನು ಇಡಬೇಕು. ಎಲ್ಲಾ ದೇವತೆಗಳಿಗೂ ಬೇರೆಬೇರೆ ನೈವೇದ್ಯವನ್ನು ಅರ್ಪಿಸಬೇಕು. ಇವರ ನಾಮ

ಘೃತಂ ಚ ಜುಹುಯಾದ್ವಹ್ನೌ ನಾಮಭಿಶ್ಚ ಪೃಥಕ್ಪೃಥಕ್ ।
ಭೋಜಯೇದ್ಬ್ರಾಹ್ಮಣಾಂಶ್ಚಾತ್ರ ಸುರಸಂಖ್ಯಾಸಮನ್ವಿತಾನ್ ॥ ೧೬ ॥

ಸಂವತ್ಸರಮಿದಂ ಕೃತ್ವಾ ವ್ರತಂ ಪುರುಷಸತ್ತಮ ।
ಸುವರ್ಣಸಹಿತಂ ವಾಸೋ ಗಾಂ ಚ ದದ್ಯಾತ್ತಥೈವ ಚ ॥ ೧೭ ॥

ಪೌರಾಣಿಕಾಯ ವಿಪ್ರಾಯ ವ್ರತಾಂತೇ ವಿನಿವೇದಯೇತ್ ।
ವ್ರತಸ್ಯಾಸ್ಯ ತು ರಾಜೇಂದ್ರ ಸಮ್ಯಗ್ವಿಪ್ರೋ ವಿಧಾನವಿತ್ ॥ ೧೮ ॥

ಆರೋಗ್ಯಕಾಮಃ ಕುರ್ವೀತ ವ್ರತಮೇತನ್ನರೋತ್ತಮ ।
ಪುತ್ರಕಾಮೋಽರ್ಥಕಾಮಶ್ಚ ಧನಕಾಮೋಽಥವಾ ಪುನಃ ॥ ೧೯ ॥

ಸರ್ವಕಾಮಪ್ರದಂ ಹ್ಯೇತತ್ಪವಿತ್ರಂ ಪಾಪನಾಶನಂ ।
ಮಂಗಲ್ಯಂ ಸ್ವರ್ಗದಂ ಪ್ರೋಕ್ತಂ ವ್ರತಾನಾಮುತ್ತಮಂ ವ್ರತಂ ॥ ೨೦ ॥

ವ್ರತೇನಾನೇನ ಚೀರ್ಣೇನ ಚಿರಂ ಸ್ವರ್ಗಂ ಸಮಶ್ನುತೇ ।
ಮಾನುಷ್ಯಮಾಸಾದ್ಯ ಭವೇತ್ಸ್ವರ್ಗಭ್ರಷ್ಟಸ್ತಥಾ ಚಿರಾತ್ ॥ ೨೧ ॥

---

ಗಳನ್ನೇ ಉಚ್ಚರಿಸಿ ಬೇರೆಬೇರೆಯಾಗಿ ಅಗ್ನಿಯಲ್ಲಿ ಆಜ್ಯವನ್ನು ಹೋಮಿಸಬೇಕು. ದೇವತಾ ಸಂಖ್ಯೆಗೆ ಸಮಸಂಖ್ಯರಾದ ಬ್ರಾಹ್ಮಣರನ್ನು ಭೋಜನ ಮಾಡಿಸಬೇಕು. ಹೀಗೆ ಸಂವತ್ಸರ ಪರ್ಯಂತರ ವ್ರತವನ್ನಾಚರಿಸಿ ಕೊನೆಯಲ್ಲಿ ಪೌರಾಣಿಕನಾದ ಬ್ರಾಹ್ಮಣನಿಗೆ ಸುವರ್ಣದೊಡನೆ ವಸ್ತ್ರವನ್ನೂ, ಗೋವನ್ನೂ ದಾನಮಾಡಬೇಕು. ಈ ವ್ರತದ ವಿಧಾನ ಕ್ರಮವನ್ನು ಚನ್ನಾಗಿ ತಿಳಿದು ಆರೋಗ್ಯಕಾಮನಾಮಗಲಿ, ಪುತ್ರಕಾಮನಾಗಲಿ, ಅರ್ಥಕಾಮನಾಗಲಿ, ಲೌಕಿಕಧನಕಾಮನಾಗಲಿ ಆಚರಿಸಿದಲ್ಲಿ ತನ್ನ ಇಷ್ಟಸಿದ್ಧಿಯನ್ನು ಹೊಂದುತ್ತಾನೆ. ಪಾಪನಾಶಕವಾಗಿಯೂ, ಸರ್ವಮನೋರಥ ಫಲಪ್ರದವಾಗಿಯೂ ಇರುವ ಈ ವ್ರತವು ಮಂಗಲಪ್ರದವೂ, ಸ್ವರ್ಗಸುಖಪ್ರದವೂ ಆಗಿರುವುದರಿಂದ ಎಲ್ಲಾ ವ್ರತಗಳಲ್ಲಿಯೂ ಇದು ಉತ್ತಮವಾದುದು.

೨೧–೨೨ ಈ ವ್ರತವನ್ನಾಚರಿಸಿದವನು ಬಹುಕಾಲ ಸ್ವರ್ಗಸುಖವನ್ನು ಅನುಭವಿಸುತ್ತಾನೆ. ಸ್ವರ್ಗದಿಂದ ಭ್ರಷ್ಟನಾಗಿ ಮನುಷ್ಯ ಭಾವವನ್ನು ಹೊಂದಿದರೂ

ಧನೇನ ರೂಪೇಣ ಬಲೇನ ಯುಕ್ತೋ
ಜನಾಭಿರಾಮಃ ಪ್ರಮದಾಪ್ರಿಯಶ್ಚ ।
ವಿರೋಗದೇಹಃ ಕ್ಷತಶತ್ರುಪಕ್ಷೋ
ವಾಗ್ಮೀ ತಥಾ ಶಾಸ್ತ್ರಧರಶ್ಚ ಲೋಕೇ　　　॥ ೨೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಮರುದ್ವ್ರತವರ್ಣನೋ ನಾಮ
ಷಟ್ಷಷ್ಟ್ಯುತ್ತರಶತತಮೋಽಧ್ಯಾಯಃ

---

ಧನ, ರೂಪ, ಬಲಗಳಿಂದ ಕೂಡಿಯೂ, ಜನಪ್ರಿಯನೂ, ಪ್ರೇಯಸೀಪ್ರಿಯನೂ ಆಗಿ ಆರೋಗನಾಗಿಯೂ, ಜಯಶೀಲನಾಗಿಯೂ, ವಾಗ್ಮಿಯಾಗಿಯೂ, ಶಾಸ್ತ್ರಜ್ಞನಾಗಿಯೂ ಬದುಕುತ್ತಾನೆ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಮರುದ್ವ್ರತವರ್ಣನವೆಂಬ
ನೂರ ಅರವತ್ತಾರಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಸಪ್ತಷಷ್ಟ್ಯುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಚೈತ್ರ ಶುಕ್ಲಸ್ಯ ಪಕ್ಷೇತು ಸಮ್ಯಕ್ ಷಷ್ಠ್ಯಾಮುಪೋಷಿತಃ ।**
**ಸಪ್ತಮ್ಯಾಮರ್ಚನಂ ಕುರ್ಯಾದ್ದೇವದೇವಸ್ಯ ಗೋಪತೇಃ || ೧ ||**

**ಬಹಿಃ ಸ್ನಾನಂ ನರಃ ಕೃತ್ವಾ ಗೋಮಯೇನೋಪಲೇಪಿತಂ ।**
**ಲೇಪಯೇತ್ ಸ್ಥಂಡಿಲಂ ಸಮ್ಯಕ್ ಶುತೋ ಗೌರಮೃದಾನೃಪ || ೨ ||**

**ತತ್ರಾಷ್ಟಪತ್ರಂ ಕಮಲಂ ವರ್ಣಕೈಸ್ತು ಸಮಾಲಿಖೇತ್ ।**
**ಕರ್ಣಿಕಾಯಾಂ ನ್ಯಸೇತ್ತತ್ರ ದೇವದೇವಂ ವಿಭಾವಸುಂ || ೩ ||**

---

### ನೂರ ಅರವತ್ತೇಳನೆಯ ಅಧ್ಯಾಯ.

೧-೩. ಮಾರ್ಕಂಡೇಯರು ಹೇಳುತ್ತಾರೆ:—ಚೈತ್ರಶುಕ್ಲಷಷ್ಠಿಯ ದಿನ ಸರಿಯಾಗಿ ಉಪವಾಸವಿದ್ದು ಸಪ್ತಮಿಯಲ್ಲಿ ದೇವತೋತ್ತಮನಾದ ಸೂರ್ಯನನ್ನು ಪೂಜಿಸಬೇಕು. ಹೊರಗೆ ಸ್ನಾನಮಾಡಿ ಶುದ್ಧನಾಗಿದ್ದು ಸಗಣಿಯಿಂದ ಚನ್ನಾಗಿ ಸಾರಿಸಿದ ಸ್ಥಳದಲ್ಲಿ ಭೂಮಿಯಿಂದ ತೆಗೆದ ಬಿಳಿಯ ಮಣ್ಣಿನಿಂದ ಚನ್ನಾಗಿ ಲೇಪಿಸಿ ಸ್ಥಂಡಿಲವನ್ನು ಕಲ್ಪಿಸಬೇಕು. ಅಲ್ಲಿ ಎಂಟು ದಳಗಳುಳ್ಳ ಕಮಲವನ್ನು ಬಣ್ಣದಿಂದ ಬರೆಯಬೇಕು. ಮಧ್ಯದಕರ್ಣಿಕೆಯಲ್ಲಿ ಪ್ರಭುವಾದ ಸೂರ್ಯನನ್ನು ರಚಿಸಬೇಕು.

ಪೂರ್ವಪತ್ರೇ ನ್ಯಸೇದ್ದೇವೌ ದ್ವೌ ರಾಜನ್ನುತ್ತರೇ ದಲೇ ।
ಆಗ್ನೇಯೇ ಚ ನ್ಯಸೇತ್ಪತ್ರೇ ಗಂಧರ್ವೌ ಋತುಕಾರಕೌ ॥ ೪ ॥

ದಕ್ಷಿಣೇ ಚ ನ್ಯಸೇತ್ಪತ್ರೇ ತಥೈವಾಪ್ಸರಸೋರ್ದ್ವಯಂ ।
ರಾಕ್ಷಸೌ ದ್ವೌ ಮಹಾರಾಜ ಪತ್ರೇ ನೈಋತಕೇ ನ್ಯಸೇತ್ ॥ ೫ ॥

ಕಾದ್ರವೇಯೌ ಮಹಾನಾಗೌ ಪಶ್ಚಿಮೇ ಋತವಾರಿಕೌ ।
ವಾಯವ್ಯೇ ಯಾತುಧಾನೌ ದ್ವೌ ತಥೈವ ನೃಪಸತ್ತಮ ॥ ೬ ॥

ಉತ್ತರೇ ಚ ತಥಾ ಪತ್ರೇ ವಿನ್ಯಸೇಚ್ಚ ಋಷಿದ್ವಯಂ ।
ಐಶಾನ್ಯೇ ವಿನ್ಯಸೇತ್ಪತ್ರೇ ಗ್ರಹಮೇಕಂ ನರೋತ್ತಮ ॥ ೭ ॥

ತೇಷಾಂ ಸಂಪೂಜನಂ ಕಾರ್ಯಂ ಗಂಧಮಾಲ್ಯಾನುಲೇಪನೈಃ ।
ಧೂಪೈರ್ದೀಪೈಶ್ಚ ನೈವೇದ್ಯೈಃ ಪೃಥಕ್ಪೃಥಗರಿಂದಮ ॥ ೮ ॥

ಏವಂ ಸಂಪೂಜನಂ ಕೃತ್ವಾ ಸರ್ವೇಷಾಂ ತದನಂತರಂ ।
ಘೃತೇನ ಹೋಮಂ ಕುರ್ವೀತ ಸೂರ್ಯಸ್ಯಾಷ್ಟಶತೇನ ಚ ॥ ೯ ॥

ಪೂರ್ವಭಾಗದ ಪತ್ರದಲ್ಲಿ ಉತ್ತರದ ಕಡೆಯಲ್ಲಿ ಎರಡು ದೇವತೆಗಳನ್ನೂ ಆಗ್ನೇಯ ದಳದಲ್ಲಿ ಋತುಕಾರಕರೆಂಬ ಗಂಧರ್ವರನ್ನೂ, ದಕ್ಷಿಣದಳದಲ್ಲಿ ಎರಡು ಅಪ್ಸರೆಯರನ್ನೂ, ನೈಋತ್ಯದಳದಲ್ಲಿ ಎರಡು ರಾಕ್ಷಸರನ್ನೂ ರಚಿಸಬೇಕು.

೬-೧೦. ಪಶ್ಚಿಮಭಾಗದ ದಳದಲ್ಲಿ ಋತ, ವಾರಿಕರೆಂಬ ಕಾದ್ರವೇಯ ಸಂಜ್ಞೆಯುಳ್ಳ ಮಹಾಸರ್ಪಗಳನ್ನೂ, ವಾಯುವ್ಯಭಾಗದ ದಳದಲ್ಲಿ ರಾಕ್ಷಸ ದ್ವಯವನ್ನೂ, ಉತ್ತರಭಾಗದ ದಳದಲ್ಲಿ ಋಷಿಯುಗ್ಮವನ್ನೂ, ಈಶಾನ್ಯಭಾಗದ ದಳದಲ್ಲಿ ಒಂದು ಗ್ರಹವಿಶೇಷವನ್ನೂ ವಿನ್ಯಾಸಮಾಡಬೇಕು. ಇವರೆಲ್ಲರನ್ನೂ ಗಂಧಪುಷ್ಪ ಧೂಪದೀಪ ನೈವೇದ್ಯಾದಿಗಳಿಂದ ಬೇರೆಬೇರೆ ಪೂಜಿಸಬೇಕು. ಈ ರೀತಿ ಎಲ್ಲರಿಗೂ ಪೂಜೆ ಮಾಡಿದ ನಂತರ ಆಜ್ಯದಿಂದ ಸೂರ್ಯನನ್ನುದ್ದೇಶಿಸಿ ಎಂಟುನೂರು ಹೋಮ

ಅನ್ಯೇಷಾಂ ಚ ತಥಾ ದದ್ಯಾದಷ್ಟಾವಷ್ಟೌ ನರೇಶ್ವರ ।
ನಾಮ್ನಾ ತಥೈವ ಸರ್ವೇಷಾಂ ಚೈಕೈಕಂ ಭೋಜಯೇದ್ದ್ವಿಜಂ ॥ ೧೦ ॥

ಶಕ್ತ್ಯಾ ಚ ದಕ್ಷಿಣಾ ದೇಯಾ ತೇಷಾಮೇವ ಯಥೋತ್ತಮಾ ।
ಏವಂ ಸಂವತ್ಸರಂ ಕೃತ್ವಾ ವ್ರತಮೇತನ್ನರೋತ್ತಮ ॥ ೧೧ ॥

ಪೌರಾಣಿಕಾಯ ವಿಪ್ರಾಯ ವ್ರತಸ್ಯಾನ್ತೇ ಪಯಸ್ವಿನೀಂ ।
ವಿಧಿವಚ್ಚ ತತೋ ದದ್ಯಾತ್ಸುವರ್ಣಂ ಚ ಯಥೋತ್ತಮ ॥ ೧೨ ॥

ಸರ್ವಕಾಮಪ್ರದಂ ಚೈವ ವ್ರತಮುಕ್ತಂ ಸ್ವಯಂಭುವಾ ।
ವ್ರತೇನಾನೇನ ಚೀರ್ಣೇನ ಸೂರ್ಯಲೋಕಮವಾಪ್ನುಯಾತ್ । ॥ ೧೩ ॥

ಅಥ ದ್ವಾದಶವರ್ಷಾಣಿ ಕರೋತ್ಯೇತನ್ಮಹಾವ್ರತಂ ।
ಭಿತ್ವಾರ್ಕಮಂಡಲಂ ರಾಜಾ ವಿಷ್ಣೋಃ ಸಾಯುಜ್ಯಮಾಪ್ನುಯಾತ್ ॥೪೦॥

ಏತದ್ವ್ರತಂ ಪಾಪವಿನಾಶಕಾರಿ
ಧನ್ಯಂ ಯಶಸ್ಯಂ ರಿಪುನಾಶಕಾರೀ ।

---

ವನ್ನೂ, ಇತರ ದೇವತೆಗಳನ್ನುದ್ದೇಶಿಸಿ ಅರವತ್ತನಾಲ್ಕು ಹೋಮಗಳನ್ನೂ ಆಯಾಯ ದೇವತೆಗಳ ನಾಮಮಂತ್ರದಿಂದ ಮಾಡಬೇಕು. ಒಂದೊಂದು ದೇವತೆಗೆ ಒಬ್ಬೊಬ್ಬನಂತೆ ಬ್ರಾಹ್ಮಣರನ್ನು, ಭೋಜನಮಾಡಿಸಬೇಕು.

೧೧-೧೫. ಆ ಬ್ರಾಹ್ಮಣರಿಗೆ ಯಥಾಶಕ್ತಿ ದಕ್ಷಿಣೆಯನ್ನು ಕೊಡಬೇಕು. ಈ ರೀತಿ ಸಂವತ್ಸರಪರ್ಯಂತವೂ ಈ ವ್ರತವನ್ನಾಚರಿಸಿ, ಕೊನೆಯಲ್ಲಿ ಪೌರಾಣಿಕ ನಾದ ಬ್ರಾಹ್ಮಣನಿಗೆ ಕರೆಯುವ ಹಸುವನ್ನು ಸುವರ್ಣ ದಕ್ಷಿಣೆಯೊಡನೆ ಯಥಾ ವಿಧಿಯಾಗಿ ದಾನಮಾಡಬೇಕು. ಸರ್ವಫಲಪ್ರದವಾದ ಈ ವ್ರತವು ಬ್ರಹ್ಮನಿಂದಲೇ ಹೇಳಲ್ಪಟ್ಟದ್ದು. ಈ ವ್ರತವನ್ನು ಸಾಂಗವಾಗಿ ನೆರವೇರಿಸಿದವನು ಸೂರ್ಯಲೋಕ ವನ್ನು ಹೊಂದುತ್ತಾನೆ. ಹನ್ನೆರಡು ವರ್ಷಕಾಲ ಈ ವ್ರತವನ್ನು ಮಾಡಿದವನು

ಲೋಕೇ ತಥಾಸ್ಮಿಂಶ್ಚ ಪರೇ ಚ ರಾಜನ್
ಸ್ವರ್ಗಪ್ರದಂ ಮೋಕ್ಷಕರಂ ತಥೈವ || ೧೫ ||

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಸೂರ್ಯವ್ರತವರ್ಣನೋನಾಮ ಸಪ್ತಷಷ್ಟ್ಯುತ್ತರ ಶತತಮೋಽಧ್ಯಾಯಃ

---

ಸೂರ್ಯಮಂಡಲವನ್ನು ಭೇದಿಸಿ ವಿಷ್ಣುವಿನ ಸಾಯುಜ್ಯವನ್ನೇ ಹೊಂದುತ್ತಾನೆ. ಈ ವ್ರತವು ಪಾಪನಾಶಕವೂ, ಯಶಸ್ಕರವೂ, ಶತ್ರುನಾಶಕವೂ, ಇಹಲೋಕದ ಎಲ್ಲಾ ಸುಖಕ್ಕೂ, ಪರಲೋಕದ ಸ್ವರ್ಗಮೋಕ್ಷಾದಿಗಳಿಗೂ ಸಾಧಕವಾಗುತ್ತದೆ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಸೂರ್ಯ ವ್ರತವರ್ಣನವೆಂಬ
ನೂರ ಅರವತ್ತೇಳನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಅಷ್ಟಷಷ್ಟ್ಯುತ್ತರ ಶತತಮೋಽಧ್ಯಾಯಃ ||

|| ವಜ್ರ ಉವಾಚ ||

**ಯಸ್ಮಿನ್ಯಸ್ಮಿನ್ ಋತೌ ಬ್ರಹ್ಮನ್ನನುಯಾಂತಿ ರವಿಂ ಪ್ರಭುಂ |**
**ಯೇ ಯೇ ದೇವಪ್ರಭೃತಯಸ್ತನ್ಮೇ ತ್ವಂ ವಕ್ತುಮರ್ಹಸಿ || ೧ ||**

|| ಮಾರ್ಕಂಡೇಯ ಉವಾಚ ||

**ಧಾತಾರ್ಯಮಾ ಚ ರಾಜೇಂದ್ರ ವಸಂತೇ ದೇವತಾದ್ವಯಂ |**
**ತುಂಬುರುರ್ನಾರದಶ್ಚೈವ ಗಂಧರ್ವೌ ಗಾಯನೌ ವರೌ || ೨ ||**

**ಕೃತಸ್ಥಲಾಪ್ಸರಾಶ್ಚೈವ ತಥಾ ಯಾ ಪುಂಜಿಕಸ್ಥಲಾ |**
**ಹೋತಾ ಪ್ರಹೋತಾ ಚ ತಥಾ ರಕ್ಷೋಘ್ನೌ ಮಣಿಪುಂಗವೌ || ೩ ||**

---

### ನೂರ ಅರವತ್ತೆಂಟನೆಯ: ಅಧ್ಯಾಯ.

೧. ವಜ್ರನು ಪ್ರಶ್ನೆ ಮಾಡುತ್ತಾನೆ:—ಪೂಜ್ಯರೇ, ಯಾವ ಯಾವ ಋತುವಿನಲ್ಲಿ ಯಾವ ಯಾವ ದೇವತೆಗಳು ಪ್ರಭುವಾದ ಸೂರ್ಯನನ್ನು ಹಿಂಬಾಲಿಸುತ್ತಾರೆ ಎಂಬುದನ್ನು ದಯವಿಟ್ಟು ಅಪ್ಪಣೆ ಕೊಡಿಸಬೇಕು. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ:—

೨-೫. ವಸಂತಋತುವಿನಲ್ಲಿ ಧಾತಾ, ಅರ್ಯಮಾ ಎಂಬ ದೇವತಾದ್ವಯವೂ, ತುಂಬುರು ನಾರದರೆಂಬ ಗಂಧರ್ವಗಾಯಕೋತ್ತಮರೂ. ಕೃತಸ್ಥಲಾ, ಪುಂಜಿಕಸ್ಥಲಾ ಎಂಬ ಅಪ್ಸರೋಯುಗ್ಮವೂ, ಹೋತಾ, ಪ್ರಹೋತಾ ಎಂಬ ರಕ್ಷೋ

ಉರಗೋ ವಾಸುಕಿಶ್ಚೈವ ವಾಷ್ಟಕರ್ಣೀ ಚ ತಾವುಭೌ ।
ರಥಕೃತ್ಸ್ನಾ ರಥೌಜಾಶ್ಚ ಯಾತುಧಾನವರೌ ತಥಾ ॥ ೪ ॥

ಮಿತ್ರಶ್ಚ ಪುಲಹಶ್ಚೈವ ತಥೈವಮೃಷಿಸತ್ತಮೌ ।
ಅನುಯಾತಿ ಸಿತಶ್ಚೈವ ವಸಂತೇ ಚ ಯಥಾಗ್ರಹಃ ॥ ೫ ॥

ಯೇಽನುಯಾಂತಿ ರವಿಂ ದೇವಂ ನಿದಾಘೇ ತಾನ್ನಿಬೋಧ ಮೇ ।
ಮಿತ್ರಶ್ಚ ವರುಣಶ್ಚೈವ ಗ್ರೀಷ್ಮೇ ದೇವೌ ವಸಂತಿ ಚ ॥ ೬ ॥

ಋಷಿರತ್ರಿರ್ವಸಿಷ್ಠಶ್ಚ ನಾಗೌ ರಂಭಕತಕ್ಷಕೌ ।
ಮೇನಕಾ ಸಹಜನ್ಯಾ ಚ ಗಂಧರ್ವೌ ಚ ಹಹಾಹುಹೂ ॥ ೭ ॥

ರಥಸ್ವನಪ್ರಮಾಣಶ್ಚ ರಥಕೃತ್ಸ್ನಶ್ಚ ತಾವುಭೌ ।
ಪೌರುಷಾದೋ ವಧಶ್ಚೈವ ಯಾತುಧಾನೌ ತು ತೌ ಸ್ಮೃತೌ ॥ ೮ ॥

ಅನುಯಾತಿ ಕುಜಶ್ಚೈವ ನಿದಾಘೇ ಚ ತಥಾ ಗ್ರಹಃ ।
ಯೋಽನುಯಾಂತಿ ರವಿಂ ದೇವಂ ಪ್ರಾವೃಟ್ಕಾಲೇ ನಿಬೋಧ ಮೇ ॥ ೯ ॥

---

ಷ್ಠರಾದ ಮುನಿಪುಂಗವರೂ, ವಾಸುಕಿ, ವಾಷ್ಟಕರ್ಣೀ ಎಂಬ ಸರ್ಪಯುಗ್ಮವೂ, ರಥಕೃತ್ಸ್ನಾ, ರಥೌಜಾ ಎಂಬ ರಾಕ್ಷಸ ಶ್ರೇಷ್ಠರೂ, ಮಿತ್ರ ಪುಲಹರೆಂಬ ಋಷಿ ಶ್ರೇಷ್ಠರೂ, ಶುಕ್ರಗ್ರಹವೂ ಸಹ ಸೂರ್ಯನನ್ನು ಅನುಸರಿಸುತ್ತಾರೆ.

೬-೧೦. ಬೇಸಿಗೆಯಲ್ಲಿ ಯಾರುಯಾರು ಸೂರ್ಯನನ್ನು ಅನುಸರಿಸುತ್ತಾರೆಯೋ ಅವರನ್ನೂ ಹೇಳುತ್ತೇನೆ ಕೇಳು. ಗ್ರೀಷ್ಮ ಋತುವಿನಲ್ಲಿ ಮಿತ್ರ ವರುಣರೆಂಬ ದೇವತೆಗಳೂ, ಅತ್ರಿ, ವಸಿಷ್ಠರೆಂಬ ಋಷಿಗಳೂ, ರಂಭಕ, ತಕ್ಷಕರೆಂಬ ಸರ್ಪಗಳೂ, ಮೇನಕಾ, ಸಹಜನ್ಯಾ ಎಂಬ ಅಪ್ಸರೆಯರು, ಹಾಹಾ, ಹೂಹೂ ಎಂಬ ಗಂಧರ್ವರೂ, ರಥಸ್ವನಪ್ರಮಾಣ, ರಥಕೃತ್ಸ್ನರೂ, ಪೌರುಷಾದ, ವಧ ಎಂಬ ರಾಕ್ಷಸ ಯುಗ್ಮವೂ, ಕುಜಗ್ರಹವೂ ಸಹ ಬೇಸಿಗೆಯಲ್ಲಿ ಸೂರ್ಯನನ್ನು ಅನುವರ್ತಿಸುತ್ತಾರೆ

ಇಂದ್ರಶ್ಚೈವ ವಿವಿಸ್ವಾಂಶ್ಚ ಅಙ್ಗಿರಾ ಭೃಗುರೇವ ಚ ।
ಏಲಪತ್ರಸ್ತಥಾ ಸರ್ಪಃ ಶಂಖಪಾಲಶ್ಚ ಪನ್ನಗಃ ॥ ೧೦ ॥

ಶುಚಿಸೇನೋಗ್ರಸೇನೌ ಚ ವ್ರಾತಶ್ಚೈವಾರುಣಶ್ಚ ವೈ ।
ಪ್ರಮ್ಲೋಚೇತ್ಯಪ್ಸರಾಶ್ಚೈವ ನಿಮ್ಲೋಚಂತೀ ಚ ತೇ ಉಭೇ ॥ ೧೧ ॥

ಯಾತುಧಾನಸ್ತಥಾ ಸರ್ಪೋ ವ್ಯಾಘ್ರಶ್ಚ ಮನುಜೇಶ್ವರ ।
ಪ್ರಾವೃಟ್ಕಾಲೇ ತು ಯಾತ್ಯೇನಂ ಗ್ರಹೋ ದೇವಪುರೋಹಿತಃ ॥ ೧೨ ॥

ಅತಃ ಪರಂ ನಿಬೋಧಸ್ವ ಶರತ್ಕಾಲೇ ನರಾಧಿಪ ।
ಪರ್ಜನ್ಯಶ್ಚೈವ ಪೂಷಾ ಚ ಭರದ್ವಾಜಶ್ಚ ಗೌತಮಃ ॥ ೧೩ ॥

ಚಿತ್ರಸೇನಶ್ಚ ಗಂಧರ್ವಸ್ತಥಾ ವಸುರುಚಿಶ್ಚ ವೈ ।
ವಿಶ್ವಾಚೀ ಚ ಘೃತಾಚೀ ಚ ತಥಾ ಚೈವಾಪ್ಸರೋದ್ವಯಂ ॥ ೧೪ ॥

ನಾಗಶ್ಚೈರಾವತಶ್ಚೈವ ವಿಶ್ರುತಶ್ಚ ಧನಂಜಯಃ ।
ಸೇನಜಿಚ್ಚ ಸುಷೇಣಶ್ಚ ರಾಕ್ಷಸೌ ಭೀಮವಿಕ್ರಮೌ ॥ ೧೫ ॥

ವಾತೋದ್ವಾತಾವಪಿ ತಥಾ ಯಾತುಧಾನೌ ಮಹಾಬಲೌ ।
ಗ್ರಹಃ ಶನೈಶ್ಚರಶ್ಚೈವಮನುಯಾಂತಿ ದಿವಾಕರಂ ॥ ೧೬ ॥

---

ವರ್ಷಾಕಾಲದಲ್ಲಿ ಯಾರು ಅನುಸರಿಸುತ್ತಾರೆಯೋ ಅವರನ್ನೂ ಹೇಳುತ್ತೇನೆ ಕೇಳು. ಇಂದ್ರ, ವಿವಸ್ವಾನ್, ಅಂಗಿರಾ, ಭೃಗು, ಏಲಪತ್ರ, ಶಂಖಪಾಲ ಎಂಬ ಸರ್ಪಗಳು.

೧೧-೧೬. ಶುಚಿಸೇನ, ಉಗ್ರಸೇನ, ವಾತ, ಅರುಣ ಮತ್ತು ಪ್ರಮ್ಲೋಚ, ನಿಮ್ಲೋಚನ್ತೀ ಎಂಬ ಅಪ್ಸರೆಯರು, ಯಾತುಧಾನನೆಂಬ ಸರ್ಪ, ವ್ಯಾಘ್ರ, ಗುರು ಗ್ರಹ ಇವರು ವರ್ಷಾ ಕಾಲದಲ್ಲಿ ಸೂರ್ಯನನ್ನು ಹಿಂಬಾಲಿಸುತ್ತಾರೆ ಇನ್ನು ಶರತ್ಕಾಲದಲ್ಲಿ ಹೇಳುತ್ತೇನೆ ಕೇಳು. ಪರ್ಜನ್ಯ, ಪೂಷಾ, ಭರದ್ವಾಜ, ಗೌತಮರು. ಚಿತ್ರಸೇನ, ವಸುರುಚಿ ಎಂಬ ಗಂಧರ್ವರು, ವಿಶ್ವಾಚೀ, ಘೃತಾಚೀ ಎಂಬ ಅಪ್ಸರೆಯರು. ಐರಾವತ, ಧನಂಜಯ ಎಂಬ ಪ್ರಸಿದ್ಧವಾದ ಗಜದ್ವಯ, ಸೇನಚಿತ್, ಸುಷೇಣ ಎಂಬ ಪರಾಕ್ರಮಿಗಳಾದ ರಾಕ್ಷಸರು, ವಾತ, ಉದ್ವಾತ ಎಂಬ ಬಲಶಾಲಿಗಳಾದ ರಾಕ್ಷಸರು, ಶನಿಗ್ರಹ ಇವರು ಶರತ್ಕಾಲದಲ್ಲಿ ಅನುಸರಿಸುತ್ತಾರೆ.

ಅತಃ ಪರಂ ಪ್ರವಕ್ಷ್ಯಾಮಿ ಹೇಮಂತೇ ತವ ಪಾರ್ಥಿವ ।
ಅಂಶೋ ಭಗಶ್ಚ ದ್ವಾವೇತೌ ಕಾಶ್ಯಪಶ್ಚ ಕ್ರತುಶ್ಚ ವೈ ॥ ೧೭ ॥

ಭುಜಗಶ್ಚ ಮಹಾಪದ್ಮಃ ಸರ್ಪಃ ಕರ್ಕೋಟಕಸ್ತಥಾ ।
ಚಿತ್ರಸೇನಶ್ಚ ಗಂಧರ್ವಃ ಊರ್ಣಾಯುಶ್ಚ ಮಹಾಬಲಃ ॥ ೧೮ ॥

ಅಪ್ಸರಾಃ ಪೂರ್ವಚಿತ್ತಿಶ್ಚ ಗನ್ಧರ್ವೀ ಊರ್ವಶೀ ತಥಾ ।
ತಾರ್ಕ್ಷ್ಯಶ್ಚಾರಿಷ್ಟನೇಮಿಶ್ಚ ರಾಕ್ಷಸೌ ಭೀಮವಿಕ್ರಮೌ ॥ ೧೯ ॥

ವಿದ್ಯುತ್ಸ್ಫೂರ್ಜಸ್ತಥೈವೋಗ್ರೌ ಯಾತುಧಾನೌ ಮಹಾಬಲೌ ।
ಅನುಯಾತಿ ಗ್ರಹಶ್ಚೈವ ಬುಧೋ ರಾಜನ್ ದಿವಾಕರಂ ॥ ೨೦ ॥

ತತಃ ಪರಂ ಚ ಧರ್ಮಜ್ಞ ಶಿಶಿರೇ ಗದತಃ ಶೃಣು ।
ತ್ವಷ್ಟಾ ವಿಷ್ಣುರ್ಜಮದಗ್ನಿರ್ವಿಶ್ವಾಮಿತ್ರಸ್ತಥೈವ ಚ ॥ ೨೧ ॥

ಕಾದ್ರವೇಯೌ ತಥಾ ನಾಗೌ ಕಂಬಲಾಶ್ವತರಾವುಭೌ ।
ತಿಲೋತ್ತಮಾಪ್ಸರಾಶ್ಚೈವ ದೇವೀ ರಂಭಾ ಮನೋರಮಾ ॥ ೨೨ ॥

---

೧೭-೨೦. ಅದಕ್ಕೂ ಮುಂದೆ ಹೇಮಂತಋತುವಿನಲ್ಲಿ ಹೇಳುತ್ತೇನೆ. ಅಂಶ, ಭಗ, ಈ ಇಬ್ಬರು, ದೇವತೆಗಳು. ಕಶ್ಯಪ, ಕ್ರತು, ಎಂಬ ಋಷಿಗಳು. ಮಹಾಪದ್ಮನೆಂಬ ಸರ್ಪವಿಶೇಷ, ಕಾರ್ಕೋಟಕನೆಂಬ ಸರ್ಪ. ಚಿತ್ರಸೇನನೆಂಬ ಗಂಧರ್ವ ಮತ್ತ ಊರ್ಣಾಯು, ಪೂರ್ವಚಿತ್ತಿ ಎಂಬ ಅಪ್ಸರೆ, ಊರ್ವಶೀ ಎಂಬ ಗಂಧರ್ವೀ, ತಾರ್ಕ್ಷ್ಯ, ಅರಿಷ್ಟನೇಮಿ ಎಂಬ ಪರಾಕ್ರಮಿಗಳಾದ ರಾಕ್ಷಸರು; ವಿದ್ಯುತ್ಸ್ಫೂರ್ಜ, ಉಗ್ರ ಎಂಬ ರಾಕ್ಷಸವಿಶೇಷಗಳು, ಬುಧಗ್ರಹ ಇವರು ಸೂರ್ಯನನ್ನು ಅನುವರ್ತಿಸುತ್ತಾರೆ.

೨೧-೨೨. ಇನ್ನು ಮುಂದೆ ಶಿಶಿರಋತುವಿನಲ್ಲಿ ಹೇಳುತ್ತೇನೆ ತ್ವಷ್ಟಾ. ವಿಷ್ಣು ಎಂಬ ದೇವತೆಗಳು ಜಮದಗ್ನಿ ವಿಶ್ವಾಮಿತ್ರರೆಂಬ ಋಷಿಗಳು, ಕಂಬಲ, ಅಶ್ವತರ ಎಂಬ ಸರ್ಪಾಧಿಪತಿಗಳು, ತಿಲೋತ್ತಮಾ, ರಂಭಾ ಎಂಬ ಅಪ್ಸರೆಯರು.

ಕಾರಿಣೇ ಶಿತಿಶಶ್ಚೈವ ಸತ್ಯಜಿಚ್ಚ ಮಹಾಯಶಾಃ ।
ಬ್ರಹ್ಮೋಪೇತಶ್ಚ ರಕ್ಷೋ ವೈ ಯಜ್ಞೋಪೇತಸ್ತಥೈವ ಚ ॥ ೨೩ ॥

ಗಂಧರ್ವೋ ಧೃತರಾಷ್ಟ್ರಶ್ಚ ಸೂರ್ಯವರ್ಚಾಸ್ತಥಾಪರಃ ।
ಚಂದ್ರಮಾ ಗ್ರಹರಾಜಶ್ಚ ಅನುಯಾತಿ ದಿವಾಕರಂ ॥ ೨೪ ॥

ಏವಂ ಹಿ ಶಿಶಿರೇ ರಾಜನ್ ಅನುಯಾನಂ ಪ್ರಕುರ್ವತೇ ।
ಸ್ಥಾನಾಭಿಮಾನಿನೋ ಹ್ಯೇತೇ ಸಪ್ತದ್ವಾದಶಕಾ ಗಣಾಃ ॥ ೨೫ ॥

ಗಣಷಟ್ಕಸ್ತಥೈವೈಕಮನುಯಾತಿ ದಿವಾಕರಂ ।
ಸೂರ್ಯಮಾಪ್ಯಾಯಯನ್ತ್ಯೇತೇ ತೇಜಸಾ ತೇಜ ಉತ್ತಮಂ ॥ ೨೬ ॥

ಗ್ರಥಿತೈಸ್ತೈರ್ವಚೋಭಿಶ್ಚ ಕುರ್ವಂತಿ ಋಷಯಸ್ತವಂ ।
ಗಂಧರ್ವಾಪ್ಸರಸಶ್ಚೈವ ಗೀತೈಃ ನೃತ್ತೈರುಪಾಸತೇ ॥ ೨೭ ॥

ವಿದ್ಯಾಗ್ರಾಮಣಿನಶ್ಚೈವ ಕುರ್ವಂತ್ಯತ್ರಾಭಿಷುಗ್ರಹಂ ।
ಸರ್ಪಾ ವಹಂತಿ ವೈ ಸೂರ್ಯಂ ಯಾತುಧಾನೋಽನುಯಾತಿ ಚ ॥ ೨೮ ॥

---

ಕಾರಿಣೇ, ಶಿತಿಶ, ಸತ್ಯಜಿತ್, ಮಹಾಯಶಾ, ಬ್ರಹ್ಮೋಪೇತ ಯಜ್ಞೋಪೇತರೆಂಬ ರಕ್ಷಸ್ಸುಗಳು, ಧೃತರಾಷ್ಟ್ರ, ಸೂರ್ಯವರ್ಚಾ ಎಂಬ ಗಂಧರ್ವರು ಗ್ರಹಾಧಿಪನಾದ ಚಂದ್ರ ಇವರು ಸೂರ್ಯನನ್ನು ಅನುವರ್ತಿಸುತ್ತಾರೆ. ಹೀಗೆ ಅನುಗಮನಮಾಡುವ ಹನ್ನೆರಡು ಮಾಸಗಳಿಗೂ ಸೇರಿರುವ ದೇವ, ಋಷಿ, ನಾಗ ಮೊದಲಾದ ಏಳು ಗಣಗಳೂ ಸ್ಥಾನಾಭಿಮಾನಿಗಳು. ಆರು ಋತುಗಳಲ್ಲಿಯೂ ಆರು ಗಣಗಳಾಗಿ ಸೂರ್ಯನನ್ನು ಹಿಂಬಾಲಿಸುತ್ತಾ ತಮ್ಮ ತೇಜಸ್ಸಿನಿಂದ ಉತ್ತಮವಾದ ತೇಜಸ್ಸನ್ನು ಸೂರ್ಯನಿಗೆ ಉಂಟುಮಾಡಿ ಅವನನ್ನು ತೃಪ್ತಿಪಡಿಸುತ್ತಾರೆ.

೨೭–೩೧. ಋಷಿಗಳು ಗದ್ಯಪದ್ಯರೂಪದಿಂದ ರಚನೆಮಾಡಿದ ಸ್ತೋತ್ರಗಳಿಂದ ಸ್ತುತಿಸುತ್ತಾರೆ. ಗಂಧರ್ವರೂ, ಅಪ್ಸರೆಯರೂ ಗೀತನೃತ್ಯಗಳಿಂದ ಸೇವಿಸುತ್ತಾರೆ. ವಿದ್ಯಾನಿಪುಣರಾದವರು ರಶ್ಮಿಗ್ರಹಣವನ್ನು ಮಾಡುತ್ತಾರೆ ಸರ್ಪಗಳು ವಾಹನಗಳಾಗಿ ಸೂರ್ಯನನ್ನು ವಹಿಸುತ್ತವೆ. ರಾಕ್ಷಸರು ರಕ್ಷಣೆಗಾಗಿ ಹಿಂಬಾಲಿಸಿ ಬರುತ್ತಾರೆ. ಗ್ರಹವು ಸುತ್ತುವರಿದು ಯಥಾವಿಧಿಯಾದ ಅಸ್ತವನ್ನುಂಟುಮಾಡುತ್ತದೆ.

ಪರಿವಾರ್ಯೋ ಗ್ರಹಶ್ಚೈವ ನಯೆತ್ಯಸ್ತಂ ಯಥಾವಿಧಿ ।
ಏತೇಷಾಮೇವ ದೇವಾನಾಂ ಯಥಾವೀರ್ಯಂ ಯಥಾತಪಃ　　|| ೨೯ ||

ಯಥಾಸತ್ವಮಸೌ ಸೂರ್ಯಸ್ತೇಷಾಂ ಸಿದ್ಧಸ್ತು ತೇಜಸಾ ।
ಭೂತಾನಾಮಶುಭಂ ಕರ್ಮ ವಿನಾಶಯತಿ ತೇಜಸಾ　　|| ೩೦ ||

ಗ್ರೀಷ್ಮೇ ಹಿಮೇ ಚ ವರ್ಷಾಸು ಜನಯನ್ ಸ ದಿವಾಕರಃ ।
ಘರ್ಮಂ ಹಿಮಂ ಚ ವರ್ಷಂ ಚ ದಿನಂ ಚ ನಿಶಯಾ ಸಹ　　|| ೩೧ ||

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಆದಿತ್ಯಾನುಚರವರ್ಣನೋ ನಾಮ
ಅಷ್ಟಷಷ್ಟ್ಯಧಿಕಶತತಮೋಽಧ್ಯಾಯಃ

---

ಈ ದೇವತೆಗಳ ವೀರ್ಯ, ತಪಸ್ಸು, ಸತ್ವ ಇವುಗಳಿಗೆ ತಕ್ಕಂತೆ ಸೂರ್ಯನೂ ತೇಜಸ್ಸಿನಿಂದ ಸಿದ್ಧನಾಗುತ್ತಾನೆ ಹೀಗೆ ತೇಜಸ್ವಿಯಾದ ಸೂರ್ಯನು ಪ್ರಾಣಿಗಳ ಅಶುಭಕರ್ಮವನ್ನು ತನ್ನ ತೇಜಸ್ಸಿನಿಂದ ನಾಶಮಾಡುತ್ತಾನೆ. ಇಂತಹ ತೇಜಸ್ಸಿನಿಂದ ಕೂಡಿದ ಸೂರ್ಯನು ಗ್ರೀಷ್ಮಕಾಲದಲ್ಲಿಯೂ ಹಿಮಕಾಲದಲ್ಲಿಯೂ, ವರ್ಷಾಕಾಲದಲ್ಲಿಯೂ, ಕ್ರಮವಾಗಿ ಹಬೆಯನ್ನೂ ಹಿಮವನ್ನೂ, ವೃಷ್ಟಿಯನ್ನೂ ಅಹೋರಾತ್ರಗಳನ್ನೂ ಉಂಟುಮಾಡುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಆದಿತ್ಯಾನುಚರವರ್ಣನವೆಂಬ
ನೂರ ಅರವತ್ತೆಂಟನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

### || ಏಕೋನಸಪ್ತತ್ಯುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

ಚೈತ್ರಮಾಸಸ್ಯ ಸಪ್ತಮ್ಯಾಂ ಶುಕ್ಲಪಕ್ಷೇ ನರಾಧಿಪ ।
ಗೋಮಯೇನೋಪಲಿಪ್ತೇ ತು ಮೃದಾ ಕುರ್ಯಾತ್ತು ಮಂಡಲಂ || ೧ ||

ತತ್ರಾಷ್ಟಪತ್ರಂ ಕಮಲಂ ಕರ್ತವ್ಯಂ ವರ್ಣಕೈಃ ಶುಭೈಃ ।
ಕೃತೋಪವಾಸಸ್ತನ್ಮಧ್ಯೇ ಭಾಸ್ಕರಂ ಪೂಜಯೇನ್ನರಃ || ೨ ||

ಅರುಣಂ ಚೈವ ದಂತಾಕಂ ಮಾಠರಂ ಚ ತಥಾ ದಮಂ ।
ಯಮುನಾಂ ಚ ಯಮಂ ಕಾಲಂ ದ್ವಿತೀಯಂ ಮನುಮೇವ ಚ || ೩ ||

---

### ನೂರ ಅರವತ್ತೊಂಭತ್ತನೆಯ ಅಧ್ಯಾಯ.

೧-೭. ಮಾರ್ಕಂಡೇಯರು ಹೇಳುತ್ತಾರೆ :— ಚೈತ್ರಮಾಸದ ಶುಕ್ಲಪಕ್ಷದ ಸಪ್ತಮಿಯಲ್ಲಿ ಗೋಮಯದಿಂದ ಸಾರಿಸಿ ಶುದ್ಧಿಗೊಳಿಸಿದ ಸ್ಥಳದಲ್ಲಿ ಮಣ್ಣಿನಿಂದ ಮಂಡಲವನ್ನು ಮಾಡಬೇಕು. ಅದರಲ್ಲಿ ಎಂಟು ದಳಗಳುಳ್ಳ ಕಮಲವನ್ನು ಒಳ್ಳೆಯ ಬಣ್ಣಗಳಿಂದ ರಚಿಸಬೇಕು. ಉಪವಾಸದಿಂದಿದ್ದು ಆ ಕಮಲದ ಮಧ್ಯದಲ್ಲಿ ಸೂರ್ಯನನ್ನು ಪೂಜಿಸಬೇಕು. ಮತ್ತು ಅರುಣ, ದಂತಾಕ, ಮಾಠರ, ದಮ, ಯಮುನಾ, ಯಮ, ಕಾಲ, ಎರಡನೆಯ ಮನು, ಶನಿ, ರಾಣಿಯಾದ ಛಾಯಾದೇವಿ, ರೇವನ್ತ, ಏಳು ಛಂದಸ್ಸುಗಳು, ವರ್ಷ, ಆಕಾಶ ಲೋಕ, ಪಿಂಗಲ ಈ ದೇವತೆಗಳನ್ನು ಕಮಲದ ಕೇಸರಗಳಲ್ಲಿಯಾಗಲಿ, ದಳಗಳಲ್ಲಿಯಾಗಲಿ ಪೂಜಿಸ

ಶನೈಶ್ಚರಂ ತಥಾ ರಾಜ್ಞೀಂ ಛಾಯಾಂ ರೇವಂತಮೇವ ಚ ।
ಸಪ್ತಚ್ಛಂದಾಂಸಿ ವರ್ಷಂ ಚ ದ್ಯಾಂ ಚ ಪಿಂಗಲಮೇವ ಚ ॥ ೪ ॥

ಕೇಸರೇಷು ಯಜೇದ್ವಾಥ ಪತ್ರೇಷೂಕ್ತಾಶ್ಚ ದೇವತಾಃ ।
ದಿಕ್ಕಾಲಪೂಜನಂ ಕಾರ್ಯಂ ಬಹಿಃ ಪದ್ಮಸ್ಯ ಪಾರ್ಥಿವ ॥ ೫ ॥

ಗಂಧಮಾಲ್ಯನಮಸ್ಕಾರ ಧೂಪದೀಪಾನ್ನಸಂಪದಾ ।
ವ್ರತೇ ಸಮಾಪ್ತೇ ದಾತವ್ಯಸ್ತುರಗೋ ಬ್ರಾಹ್ಮಣಾಯ ಚ ॥ ೬ ॥

ಪ್ರಾಪ್ಯಾಶ್ವಮೇಧಸ್ಯ ಫಲಂ ಯಥಾವ-
ಲ್ಲೋಕಾನವಾಪ್ಯಾಥ ಪುರಂದರಸ್ಯ ।
ತತ್ರೋಷ್ಯ ರಾಜನ್ ಸುಚಿರಂ ಚ ಕಾಲಂ
ಸಾಯುಜ್ಯಮಾಯಾತಿ ದಿವಾಕರಸ್ಯ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಸಪ್ತವ್ರತಕಲ್ಪೇ ಸಪ್ತಮೀಪೂಜಾಪ್ರಶಂಸಾ
ನಾಮೈಕೋನಸಪ್ತತ್ಯುತ್ತರಶತತಮೋಽಧ್ಯಾಯಃ

---

ಬೇಕು. ಪದ್ಮದ ಹೊರ ಭಾಗದಲ್ಲಿ ದಿಕ್ಕು ಮತ್ತು ಕಾಲಗಳ ಪೂಜೆಯನ್ನು ಮಾಡ ಬೇಕು. ಈ ಪೂಜೆಗಳೆಲ್ಲವನ್ನೂ ಗಂಧಪುಷ್ಪ ನಮಸ್ಕಾರ ಧೂಪದೀಪ ನೈವೇದ್ಯಾದಿ ಗಳಿಂದ ಯಥಾವಿಧಿಯಾಗಿ ಮಾಡಿ, ವ್ರತವು ಮುಗಿದ ಮೇಲೆ ಬ್ರಾಹ್ಮಣರಿಗೆ ಕುದುರೆ ಯನ್ನು ದಾನಮಾಡಬೇಕು ಈ ವ್ರತವನ್ನು ಮಾಡಿದವನು ಅಶ್ವಮೇಧದ ಫಲ ವನ್ನು ಹೊಂದಿ, ಇಂದ್ರಲೋಕದಲ್ಲಿಯೂ, ಬಹುಕಾಲ ಇದ್ದು ಸಫಲಮನೋರಥನಾಗಿ ಸೂರ್ಯ ಸಾಯುಜ್ಯವನ್ನೂ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದದಲ್ಲಿ ಸಪ್ತವ್ರತಕಲ್ಪದ ಸಪ್ತಮೀ ಪೂಜಾಪ್ರಶಂಸೆ ಎಂಬ
ನೂರ ಅರವತ್ತೊಂಭತ್ತನೆಯ ಅಧ್ಯಾಯ ಮುಗಿದಿದೆ.

॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಸಪ್ತಸಪ್ತತ್ಯುತ್ತರಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

**ಮಾರ್ಗಶೀರ್ಷಸ್ಯ ಮಾಸಸ್ಯ ಕೃಷ್ಣಪಕ್ಷೇ ನರಾಧಿಪ ।**
**ಸೋಪವಾಸಸ್ತು ಸಪ್ತಮ್ಯಾಂ ಕಮಲೇ ಪೂಜಯೇದ್ರವಿಂ ॥ ೧ ॥**

**ಅರ್ಚಾಯಾಂ ವಾ ಸ್ಥಲೇ ವಾಪಿ ಶುಕ್ಲೈಃ ಪುಷ್ಪೈರ್ಯಥಾ ವಿಧಿ ।**
**ಚಂದನೇನ ತು ರಕ್ತೇನ ವಟಕೈಃ ಕೃಸರೇಣ ಚ ॥ ೨ ॥**

**ದದ್ಯಾದ್ವ್ರತಾಂತೇ ದ್ವಿಜಪುಂಗವಾಯ**
**ವಸ್ತ್ರೇ ತು ರಕ್ತೇ ರಿಪುನಾಶನೇಪ್ಸುಃ ।**

---

### ನೂರ ಎಪ್ಪತ್ತೇಳನೆಯ ಅಧ್ಯಾಯ.

ಮಾರ್ಕಂಡೇಯರು ಹೇಳುತ್ತಾರೆ :—ಮಾರ್ಗಶಿರಮಾಸದ ಕೃಷ್ಣಪಕ್ಷದಲ್ಲಿ ಉಪವಾಸವಿದ್ದು, ಸಪ್ತಮಿಯ ದಿನ ಕಮಲದಲ್ಲಿ ಸೂರ್ಯನನ್ನು ಪೂಜಿಸಬೇಕು. ವಿಗ್ರಹದಲ್ಲಿಯಾಗಲಿ, ಸ್ಥಳದಲ್ಲಿ ಮಂಡಲಮಾಡಿಯಾಗಲಿ, ಬಿಳುಪಾದ ಪುಷ್ಪಗಳಿಂದಲೂ, ಕೆಂಪಾದ ಚಂದನ ವಟಕವೆಂಬ (ಒಬ್ಬಟ್ಟು) ಭಕ್ಷ್ಯ ಮತ್ತು ಚಿಗಳಿ ಇವುಗಳಿಂದ ಯಥಾವಿಧಿಯಾಗಿ ಪೂಜಿಸಿ ವ್ರತನ ಕೊನೆಯಲ್ಲಿ ಬ್ರಾಹ್ಮಣನಿಗೆ ಶತ್ರುನಾಶ ಹೊಂದುವ ಅಪೇಕ್ಷೆಯುಳ್ಳವನು, ಕೆಂಪಾದ ವಸ್ತ್ರಯುಗ್ಮವನ್ನು ದಾನಮಾಡ

ಸೌಭಾಗ್ಯಕಾಮಶ್ಚ ತಥೈವ ರಾಜ್ಯಂ
ಪ್ರಾಪ್ನೋತಿ ಲೋಕಾನ್ಸವಿತುಸ್ತಥಾಂತೇ　　|| ೩ ||

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಕ್ತಸಪ್ತಮೀವ್ರತವರ್ಣನೋ ನಾಮ
ಸಪ್ತತ್ಯುತ್ತರಶತತಮೋಽಧ್ಯಾಯಃ

---

ಬೇಕು. ಸೌಭಾಗ್ಯ ಕಾಮನಾದವನು ರಾಜ್ಯವನ್ನು ಹೊಂದುತ್ತಾನೆ. ಕೊನೆಯಲ್ಲಿ ಸೂರ್ಯಲೋಕವನ್ನೂ ಹೊಂದುತ್ತಾನೆ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ರಕ್ತಸಪ್ತಮೀ ವ್ರತವರ್ಣನವೆಂಬ
ನೂರ ಎಪ್ಪತ್ತನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕಸಪ್ತತ್ಯುತ್ತರಶತತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಅನೇನ ಚ ವಿಧಾನೇನ ಪ್ರತಿಮಾಸಂ ತು ಯೋ ನರಃ ।**
**ಸಪ್ತಮೀ ದ್ವಿತಯಂ ಕುರ್ಯಾದ್ಯಾವತ್ಸಂವತ್ಸರೋ ಭವೇತ್ || ೧ ||**

**ಸೋಽಶ್ವಮೇಧಮವಾಪ್ನೋತಿ ಸೂರ್ಯಲೋಕಂ ಚ ಗಚ್ಛತಿ ।**
**ಕುಲಮುದ್ಧರತೇ ರಾಜನ್ ಸರ್ವಾನ್ ಕಾಮಾನುಪಾಶ್ನುತೇ || ೨ ||**

**ಶಿರಸೋ ವಸನಂ ಕೃತ್ವಾ ಯೋಽರ್ಚಯೇತ್ತು ದಿವಾಕರಂ ।**
**ತಸ್ಯಾರ್ಕಸ್ತೋಷಮಾಯಾತಿ ವಹ್ನಿಷ್ಟೋಮಂ ಚ ವಿಂದತಿ || ೩ ||**

**ಅಪೂಪೈಃ ಸಗುಡೈರ್ಭಕ್ತ್ಯಾ ತಥಾ ಚ ಲವಣಾನ್ವಿತೈಃ ।**
**ಸಹಿರಣ್ಯೈಃ ಸಮಭ್ಯರ್ಚ್ಯ ವಹ್ನಿಷ್ಟೋಮಫಲಂ ಲಭೇತ್ || ೪ ||**

---

### ನೂರ ಎಪ್ಪತ್ತೊಂದನೆಯ ಅಧ್ಯಾಯ.

೧–೭. ಮಾರ್ಕಂಡೇಯರು ಹೇಳುತ್ತಾರೆ:— ಈ ವಿಧಾನದಂತೆ ಪ್ರತಿ ಮಾಸದಲ್ಲಿಯೂ ಯಾವನು ಎರಡು ಸಪ್ತಮಿಗಳಲ್ಲೂ ವ್ರತವನ್ನಾಚರಿಸುತ್ತಾ ವರ್ಷ ಪೂರ್ತಿ ನೆರವೇರಿಸುತ್ತಾನೆಯೋ ಅವನು ಅಶ್ವಮೇಧದ ಫಲವನ್ನು ಹೊಂದುತ್ತಾನೆ ಸೂರ್ಯಲೋಕವನ್ನೂ ಸೇರುತ್ತಾನೆ. ತನ್ನ ಕುಲವನ್ನೂ ಪಾಪದಿಂದ ಉದ್ಧರಿಸಿ ತಾನೂ ಎಲ್ಲಾ ಪುರುಷಾರ್ಥಗಳನ್ನೂ ಹೊಂದುತ್ತಾನೆ. ಯಾವನು ಶಿರೋವಸನ ಮಾಡಿಸಿಕೊಂಡು ಸೂರ್ಯನನ್ನು ಆರಾಧಿಸುತ್ತಾನೆಯೋ ಅವನಿಗೆ ಸೂರ್ಯನ ಸಂತೋಷವೂ ಲಭಿಸುತ್ತದೆ. ಅಗ್ನಿಷ್ಟೋಮದ ಫಲವನ್ನೂ ಹೊಂದುತ್ತಾನೆ.

**ಸೂರ್ಯಾಹ್ನೇ ಯಸ್ತು ನಕ್ತಾಶೀ ಸಂಪೂಜಯತಿ ಭಾಸ್ಕರಂ ।**
**ಇಷ್ಟಾನ್ಕಾಮಾನವಾಪ್ನೋತಿ ಸೂರ್ಯಲೋಕಂ ಚ ಗಚ್ಛತಿ ॥ ೫ ॥**

**ಅರ್ಕೋದಯೇ ಸದಾ ಯಸ್ತು ಪೂಜಯೇಚ್ಚ ದಿವಾಕರಂ ।**
**ಇಷ್ಟಾನ್ಕಾಮಾನವಾಪ್ನೋತಿ ಸೂರ್ಯಲೋಕಂ ಚ ಗಚ್ಛತಿ ॥ ೬ ॥**

**ಯಥಾ ಯಥಾ ಪೂಜಯತೇ ತು ಸೂರ್ಯಂ**
**ಕಾಮಾಃ ಸಮಗ್ರಾಃ ಸಫಲಾ ಭವಂತಿ ।**
**ಆರೋಗ್ಯಮಗ್ರ್ಯಂ ಚ ತಥಾ ನೃವೀರ**
**ಭೂತಸ್ಯ ಲೋಕಃ ಸವಿತುಸ್ತಥೈವ ॥ ೭ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಸೂರ್ಯಪೂಜಾಪ್ರಶಂಸಾವರ್ಣನೋ ನಾಮ ಏಕಸಪ್ತತ್ಯುತ್ತರಶತತಮೋಽಧ್ಯಾಯಃ**

---

ಬೆಲ್ಲ ಮತ್ತು ಲವಣ ಇವುಗಳಿಂದ ಮಾಡಿದ ಭಕ್ಷ್ಯಗಳನ್ನು ನಿವೇದಿಸಿ ಹಿರಣ್ಯವನ್ನೂ ಅರ್ಪಿಸಿ ಯಾವನು ಪೂಜಿಸುತ್ತಾನೆಯೋ ಅವನೂ ಅಗ್ನಿಷ್ಟೋಮ ಫಲಕ್ಕೆ ಭಾಗಿಯಾಗುತ್ತಾನೆ. ಸೂರ್ಯನಿರುವ ಹಗಲಿನಲ್ಲಿ ಉಪವಾಸವಿದ್ದು ಪೂಜಿಸಿ ರಾತ್ರಿಯಲ್ಲಿಯೇ ಭೋಜನಮಾಡುವವನೂ ಎಲ್ಲಾ ಮನೋರಥಗಳನ್ನೂ ಹೊಂದಿ ಸೂರ್ಯ ಲೋಕವನ್ನೂ ಹೊಂದುತ್ತಾನೆ ಹೀಗೆಯೇ ಉದಯಕಾಲದಲ್ಲಿ ಸೂರ್ಯನನ್ನು ಪೂಜಿಸುವವನೂ ಎಲ್ಲಾ ಮನೋರಥಗಳನ್ನೂ ಹೊಂದಿ ಸೂರ್ಯಲೋಕವನ್ನೂ ಮನುಷ್ಯನು ಹೇಗೆ ಹೇಗೆ ಸೂರ್ಯನನ್ನು ಹೆಚ್ಚಾಗಿ ಪೂಜಿಸುತ್ತಾನೆಯೋ ಹಾಗೆಯೇ ಅವನ ಎಲ್ಲಾ ಮನೋರಥಗಳೂ ಸಫಲವಾಗುತ್ತಿರುತ್ತವೆ. ಅವನು ಉತ್ತಮವಾದ ಆರೋಗ್ಯವನ್ನೂ, ಸೂರ್ಯಲೋಕವನ್ನೂ, ಸತ್ಯಲೋಕವನ್ನೂ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಸೂರ್ಯಪೂಜಾ ಪ್ರಶಂಸನಾವರ್ಣನವೆಂಬ ನೂರ ಎಪ್ಪತ್ತೊಂದನೆಯ ಅಧ್ಯಾಯ ಮುಗಿದಿದೆ.

॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ದ್ವಿಸಪ್ತತ್ಯುತ್ತರಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಧರೋ ಧ್ರುವಶ್ಚ ಸೋಮಶ್ಚ ಆಪಶ್ಚೈವಾನಿಲೋಽನಲಃ ।
ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋಽಷ್ಟೌ ಪ್ರಕೀರ್ತಿತಾಃ ॥ ೧ ॥

ಅಷ್ಟಾತ್ಮಾ ವಾಸುದೇವೋಽಯಂ ಪ್ರಭವೇನಾಪ್ಯಯೇನ ಚ ।
ಅಷ್ಟಮ್ಯಾಂ ಪೂಜಯೇದ್ಯಸ್ತು ಸೋಪವಾಸೋ ನರಾಧಿಪ ॥ ೨ ॥

ಚೈತ್ರಮಾಸಾದಥಾರಭ್ಯ ಶುಕ್ಲಪಕ್ಷೇ ಚ ಯಾದವ ।
ಮಂಡಲೇಷ್ವಥವಾರ್ಚಾಸು ಯಥಾವನ್ಮನುಜಾಧಿಪ ॥ ೩ ॥

---

### ನೂರ ಎಪ್ಪತ್ತೆರಡನೆಯ ಅಧ್ಯಾಯ.

೧-೭. ಮಾರ್ಕಂಡೇಯರು ಹೇಳುತ್ತಾರೆ :—ಧರ, ಧ್ರುವ, ಸೋಮ, ಜಲ, ವಾಯು, ಅಗ್ನಿ, ಪ್ರತ್ಯೂಷ, ಪ್ರಭಾಸ ಈ ಎಂಟು ದೇವತೆಗಳಿಗೆ ವಸುಗಳೆಂದು ಪ್ರಸಿದ್ಧಿ ಇದೆ. ವಾಸುದೇವನು ಸೃಷ್ಟಿಕಾಲದಲ್ಲಿಯೂ, ಪ್ರಳಯಕಾಲದಲ್ಲಿಯೂ, ಇವುಗಳನ್ನು ಶರೀರವನ್ನಾಗಿ ಹೊಂದಿ ಅಷ್ಟಮೂರ್ತಿಯಾಗಿರುವನು. ಚೈತ್ರಮಾಸದ ಶುಕ್ಲಪಕ್ಷದ ಅಷ್ಟಮಿಯಲ್ಲಿ ಉಪವಾಸ ನಿಯಮದಿಂದ ಕೂಡಿ ಮಂಡಲಗಳಲ್ಲಾಗಲಿ, ವಿಗ್ರಹಗಳಲ್ಲಾಗಲಿ ಯಥಾವಿಧಿಯಾಗಿ ಗಂಧಪುಷ್ಪ, ಧೂಪದೀಪ ನಮಸ್ಕಾರ ನೈವೇದ್ಯಾದಿಗಳಿಂದ ಈ ವಸುಗಳನ್ನು ಪೂಜಿಸಬೇಕು. ಹೊರಗೆ ಸ್ನಾನಮಾಡುತ್ತಾ ಭೂಮಿಯ ಮೇಲೆ ಶಯನಹೊಂದುತ್ತಾ ವ್ರತವನ್ನಾಚರಿಸಬೇಕು. ವ್ರತದ

ಗಂಧಮಾಲ್ಯನಮಸ್ಕಾರ ಧೂಪದೀಪಾನ್ನಸಂಪದಾ ।
ಬಹಿಃ ಸ್ನಾನೇನ ರಾಜೇಂದ್ರ ತಥಾಧಃಶಯನೇನ ಚ ॥ ೪ ॥

ವ್ರತಾಂತೇ ಚ ತಥಾ ದದ್ಯಾದ್ಧೇನುಂ ವಿಪ್ರಾಯ ಭಕ್ತಿತಃ ।
ವ್ರತಮೇತನ್ನರಃ ಕೃತ್ವಾ ಸರ್ವಾನ್ಕಾಮಾನುಪಾಶ್ನುತೇ ॥ ೫ ॥

ಪುಂಡರೀಕಮವಾಪ್ನೋತಿ ಕುಲಮುದ್ಧರತಿ ಸ್ವಕಂ ।
ವಸೂನಾಂ ಲೋಕಮಾಸಾದ್ಯ ಮೋದತೇಽಮರಸನ್ನಿಭಃ ॥ ೬ ॥

ಮಾನುಷ್ಯಮಾಸಾದ್ಯ ಭವತ್ಯರೋಗೋ
ಜಿತೇಂದ್ರಿಯಃ ಸತ್ಯಪರೋ ವಿನೀತಃ ।
ಧನೇನ ಧಾನ್ಯೇನ ತಥಾನ್ವಿತಃ ಸ್ಯಾತ್
ಸ್ತ್ರೀಣಾಮಭೀಷ್ಟಶ್ಚ ತಥಾ ಸುರೇಶಃ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ವಸುವ್ರತವರ್ಣನೋ ನಾಮ
ದ್ವಿಸಪ್ತತ್ಯುತ್ತರಶತತಮೋಽಧ್ಯಾಯಃ

---

ಕೊನೆಯಲ್ಲಿ ಬ್ರಾಹ್ಮಣರಿಗೆ ಭಕ್ತಿಯಿಂದ ಗೋದಾನ ಮಾಡಬೇಕು. ಈ ವ್ರತವನ್ನು ಸಾಂಗವಾಗಿ ಆಚರಿಸಿದವನು ಎಲ್ಲಾ ಇಷ್ಟಾರ್ಥಗಳನ್ನೂ ಹೊಂದುತ್ತಾನೆ. ಪುಂಡರೀಕ ಯಾಗದ ಫಲವನ್ನೂ ಹೊಂದುತ್ತಾನೆ. ಕುಲವನ್ನೂ ಪಾಪದಿಂದ ಉದ್ಧರಿಸುತ್ತಾನೆ. ವಸುಗಳ ಲೋಕವನ್ನೂ ಹೊಂದಿ ಅಮರನಂತೆ ಸುಖಿಸುತ್ತಾನೆ. ಮನುಷ್ಯನಾಗಿ ಹುಟ್ಟಿದರೂ ಅರೋಗನಾಗಿಯೂ, ಜಿತೇಂದ್ರಿಯನಾಗಿಯೂ, ಧಾರ್ಮಿಕನಾಗಿಯೂ, ದೈವಭಕ್ತಿಯಿಂದ ವಿನೀತನಾಗಿಯೂ, ಧನಧಾನ್ಯಸಮೃದ್ಧಿಯಿಂದ ಕೂಡಿ ಪ್ರೇಯಸೀಪ್ರಿಯನೂ ಆಗಿ ಅಮರನಂತೆ ಸುಖಿಯಾಗಿರುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ವಸುವ್ರತವರ್ಣನವೆಂಬ ನೂರ ಎಪ್ಪತ್ತೆರಡನೆಯ
ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ತ್ರಿಸಪ್ತತ್ಯುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಶುಕ್ಲಪಕ್ಷಾದಥಾರಭ್ಯ ಸೋಮಾಷ್ಟಮ್ಯಾಂ ನರಾಧಿಪ ।**
**ಪೂಜಯೇತ್ಸೋಪವಾಸಸ್ತು ದೇವದೇವಂ ತ್ರಿಲೋಚನಂ ॥ ೧ ॥**

**ಲಿಂಗೇವಾಪ್ಯಥವಾರ್ಚಾಯಾಂ ಕಮಲೇ ಯದಿವಾ ಸ್ಥಲೇ ।**
**ಘೃತಕ್ಷೀರಾಭಿಷೇಕೇಣ ಸ್ನಾನೇನ ವಿವಿಧೇನ ಚ ॥ ೨ ॥**

**ಗಂಧಮಾಲ್ಯನಮಸ್ಕಾರ ಧೂಪದೀಪಾನ್ನಸಂಪದಾ ।**
**ಗೀತೇನ ನೃತ್ತವಾದ್ಯೇನ ವಹ್ನಿಸಂತರ್ಪಣೇನ ಚ ॥ ೩ ॥**

---

### ನೂರ ಎಪ್ಪತ್ತಮೂರನೆಯ ಅಧ್ಯಾಯ.

೧-೩. ಮಾರ್ಕಂಡೇಯರು ಹೇಳುತ್ತಾರೆ. ಶುಕ್ಲಪಕ್ಷದ ಸೋಮಾಷ್ಟಮಿಯಲ್ಲಿ ಪ್ರಾರಂಭಿಸಿ ಉಪವಾಸದಿಂದಿದ್ದು ದೇವಾಧಿಪನಾದ ತ್ರಿಲೋಚನನನ್ನು ಪೂಜಿಸಬೇಕು. ಲಿಂಗದಲ್ಲಿಯಾಗಲೀ, ವಿಗ್ರಹದಲ್ಲಿಯಾಗಲಿ, ಕಮಲದಲ್ಲಿಯಾಗಲಿ, ಸ್ಥಲದಲ್ಲಿಯಾಗಲಿ ಸೌಕರ್ಯವಿದ್ದಂತೆ ಪೂಜಿಸಬಹುದು. ತುಪ್ಪ, ಹಾಲು ಇವುಗಳ ಅಭಿಷೇಕದಿಂದಲೂ ನಾನಾವಿಧವಾದ ಸ್ನಾನಗಳಿಂದಲೂ, ಗಂಧಪುಷ್ಪ ಧೂಪ ನಮಸ್ಕಾರದಿಂದ ನೈವೇದ್ಯಾದಿಗಳಿಂದಲೂ ನೃತ್ಯಗೀತಾದಿಗಳಿಂದಲೂ, ಅಗ್ನಿಯ ತೃಪ್ತಿಯಿಂದಲೂ, ಬ್ರಾಹ್ಮಣರಿಗೆ ಯಥಾವಿಧಿಯಾದ ಪೂಜಾದಿಗಳಿಂದಲೂ ಪೂಜೆ

ಬ್ರಾಹ್ಮಣಾನಾಂ ಚ ಪೂಜಾಭಿರ್ಯಥಾವನ್ಮನುಜೋತ್ತಮ ।
ವ್ರತಾವಸಾನೆ ದದ್ಯಾಚ್ಚ ತಥಾ ಧೇನುಂ ಪಯಸ್ವಿನೀಂ ॥ ೪ ॥

ಪುಂಡರೀಕಫಲಾವಾಪ್ತಿಃ ಸ್ವರ್ಗಲೋಕಂ ಚ ಗಚ್ಛತಿ ।
ಕೃಷ್ಣಾಷ್ಟಮೀಷು ಚಾಪ್ಯೇವಂ ಪೂಜಯಿತ್ವಾ ಮಹೇಶ್ವರಂ ॥ ೫ ॥

ವಹ್ನಿಷ್ಟೋಮಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ।
ಅಷ್ಟಮೀದ್ವಿತಯಂ ಕೃತ್ವಾ ತಥಾ ಸಂವತ್ಸರಂ ನರಃ ॥ ೬ ॥

ಪ್ರಾಪ್ಯಾಶ್ವಮೇಧಸ್ಯ ಫಲಂ ಯಥಾ-
ವದ್ಭುಕ್ತ್ವಾ ಭೋಗಾನ್ಸುರನಾಥಸ್ಯ ಲೋಕೇ ।
ಲೋಕಾನವಾಪ್ಯಾಥ ಮಹೇಶ್ವರಸ್ಯ
ಸಾಯುಜ್ಯ ಮಾಯಾತ್ಯಚಿರೇಣ ತಸ್ಯ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಮಹೇಶ್ವರಾಷ್ಟಮೀವ್ರತವರ್ಣನೋ ನಾಮ
ತ್ರಿಸಪ್ತತ್ಯುತ್ತರಶತತಮೋಽಧ್ಯಾಯಃ

---

ಯನ್ನು ನೆರವೇರಿಸಬೇಕು. ವ್ರತದ ಕೊನೆಯಲ್ಲಿ ಕರೆಯುವ ಹಸುವನ್ನು ದಾನ ಮಾಡಬೇಕು. ಈ ವ್ರತದಿಂದ ಪುಂಡರೀಕ ಯಜ್ಞದ ಫಲವನ್ನು ಹೊಂದುತ್ತಾನೆ. ಸ್ವರ್ಗವನ್ನೂ ಹೊಂದುತ್ತಾನೆ. ಕೃಷ್ಣಪಕ್ಷದ ಅಷ್ಟಮಿಗಳಲ್ಲಿಯೂ ಸಹ ಹೀಗೆಯೇ ಪೂಜಿಸಿದಲ್ಲಿ ಅಗ್ನಿಷ್ಟೋಮದ ಫಲವನ್ನು ಹೊಂದಿ ಸ್ವರ್ಗಗಾಮಿಯೂ ಆಗುತ್ತಾನೆ. ಶುಕ್ಲಕೃಷ್ಣಾಷ್ಟಮಿಗಳೆರಡನ್ನೂ ಒಂದು ವರ್ಷಪರ್ಯಂತ ನಡೆಸಿದವನು ಅಶ್ವಮೇಧದ ಫಲವನ್ನು ಹೊಂಡಿ ಸ್ವರ್ಗದಲ್ಲಿ ವಿಹಿತವಾದ ಎಲ್ಲಾ ಭೋಗವನ್ನೂ ಅನುಭವಿಸಿ ಮಹೇಶ್ವರಲೋಕವನ್ನೂ ಹೊಂದಿ ಅಲ್ಲಿ ಮಹೇಶ್ವರನ ಸಾಯುಜ್ಯ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಮಹೇಶ್ವರಾಷ್ಟಮೀವ್ರತವರ್ಣನವೆಂಬ
ನೂರ ಎಪ್ಪತ್ತಮೂರನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

### || ಚತುಃಸಪ್ತತ್ಯುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಹಿಮವಾನ್ ಹೇಮಕೂಟಶ್ಚ ನಿಷಧೋ ನೀಲ ಏವ ಚ ।**
**ಶ್ವೇತಶ್ಚ ಶೃಂಗವಾನ್ಮೇರುರ್ಮಾಲ್ಯವಾನ್ಗಂಧಮಾದನಃ ॥ ೧ ॥**

**ನವೈತಾನ್ ಶೈಲನೃಪತೀನ್ನವಮ್ಯಾಂ ಪೂಜಯೇನ್ನರಃ ।**
**ಉತ್ತರಾಃ ಕುರವಃ ಪುಣ್ಯಾಃ ರಮ್ಯೋ ಹೈರಣ್ವತಸ್ತಥಾ ॥ ೨ ॥**

**ಭದ್ರಾಶ್ವಃ ಕೇತುಮಾಲಶ್ಚ ತಥೈವ ಚ ಇಲಾವೃತಃ ।**
**ಹರಿವರ್ಷಃ ಕಿಂಪುರುಷೋ ವರ್ಷೋ ಭಾರತ ಏವ ಚ ॥ ೩ ॥**

**ಪೂಜನೀಯಾಸ್ತಥೈವೈತೆ ಯಥಾ ಸಂಖ್ಯಾನತೋ ನೃಪ ।**
**ಶುಕ್ಲಪಕ್ಷನವಮ್ಯಾಂ ತು ಚೈತ್ರಾದಾರಭ್ಯ ಪಾರ್ಥಿವ ॥ ೪ ॥**

---

### ನೂರ ಎಪ್ಪತ್ತನಾಲ್ಕನೆಯ ಅಧ್ಯಾಯ.

೧-೭. ಮಾರ್ಕಂಡೆಯರು ಹೇಳುತ್ತಾರೆ. ಹಿಮವಾನ್, ಹೇಮಕೂಟ, ನಿಷಧ, ನೀಲ, ಶ್ವೇತ, ಶೃಂಗವಾನ್, ಮೇರು, ಮಾಲ್ಯವಾನ್, ಗಂಧಮಾದನ, ಈ ಒಂಭತ್ತು ಪರ್ವತರಾಜರನ್ನು ನವಮಿಯಲ್ಲಿ ಪೂಜಿಸಬೇಕು. ಉತ್ತರಕುರುವರ್ಷ ಪುಣ್ಯವರ್ಷ, ಹೈರಣ್ವತ, ಭದ್ರಾಶ್ವ, ಕೇತುಮಾಲ, ಇಲಾವೃತ ಹರಿವರ್ಷ, ಕಿಂಪುರುಷವರ್ಷ, ಭಾರತವರ್ಷ, ಈ ವರ್ಷಗಳನ್ನೂ ಸಂಖ್ಯಾಕ್ರಮದಿಂದ ಪೂಜಿಸಬೇಕು. ಶುಕ್ಲಪಕ್ಷದ ನವಮಿಯಲ್ಲಿ ಚೈತ್ರಮಾಸದಿಂದ ಪ್ರಾರಂಭಿಸಿ ಉಪವಾಸ ಗಂಧಪುಷ್ಪ ನೈವೇದ್ಯಾದಿಗಳಿಂದ ಪೂಜಿಸಬೇಕು. ಜಂಬೂದ್ವೀಪದಂತಹ ಸಂಸ್ಥಾನ

ಸೋಽಪಿ ವಾಸೇನ ಧರ್ಮಜ್ಞ ಗಂಧಮಾಲ್ಯಾನ್ನ ಸಂಪದಾ ।
ಜಂಬೂದ್ವೀಪಸ್ಯ ಸಂಸ್ಥಾನಂ ವ್ರತಾಂತೇ ರಜತಂ ನರಃ　　|| ೫ ||

ತುಲಾಪ್ರಮಾಣಂ ದದ್ಯಾತ್ತು ಸರ್ವಾನ್ಕಾಮಾನುಪಾಶ್ನುತೇ ।
ಅಶ್ವಮೇಧಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ　　|| ೬ ||

ಮಾನುಷ್ಯಮಾಸಾದ್ಯ ತು ಚಕ್ರವರ್ತೀ
ನೃಪೋ ಭವೇದ್ದೇವಗಣಾಭಿರಾಮಃ ।
ಚಿರಂ ಚ ಕಾಲಂ ವಸುಧಾಂ ಪ್ರಶಾಸ್ಯ
ಲೋಕಾನವಾಪ್ನೋತಿ ತತೋಽಪಿ ಕಾಮಾನ್　　|| ೭

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪರ್ವತನವಮೀವ್ರತವರ್ಣನೋ ನಾಮ
ಚತುಃಸಪ್ತತ್ಯುತ್ತರಶತತಮೋಽಧ್ಯಾಯಃ

ವುಳ್ಳ ರಜತವನ್ನು ಒಂದು ತುಲಾಪ್ರಮಾಣದಲ್ಲಿ ರಚಿಸಿ ಅದನ್ನು ದಾನಮಾಡಬೇಕು. ಈ ವ್ರತವು ಎಲ್ಲಾ ಮನೋರಥಸಿದ್ಧಿಗೂ, ಅಶ್ವಮೇಧ ಯಾಗದಫಲಕ್ಕೂ ಸ್ವರ್ಗ ಪ್ರಾಪ್ತಿಗೂ ಕಾರಣವಾಗುತ್ತದೆ. ಮನುಷ್ಯನಾಗಿ ಜನಿಸಿದರೂ, ಚಕ್ರವತಿಯಾಗಿ ದೇವತೆಯಂತೆ ಸುಭಗನಾಗಿ ಬಹುಕಾಲ ಭೂಮಿಯನ್ನು ಆಳಿ ಅಭಿಮತವಾದ ದಿವ್ಯ ಲೋಕವನ್ನೂ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಪರ್ವತನವಮೀ ವ್ರತವರ್ಣನವೆಂಬ
ನೂರ ಎಪ್ಪತ್ತನಾಲ್ಕನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಪಂಚಸಪ್ತತ್ಯುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ನವಮ್ಯಾಂಸೋಪವಾಸಸ್ತು ಭದ್ರಕಾಲೀಂ ತು ಪೂಜಯೇತ್ ।**
**ಶುಕ್ಲಪಕ್ಷೇ ಮಹಾರಾಜ ಕಾರ್ತಿಕಪ್ರಭೃತಿಕ್ರಮಾತ್ ॥ ೧ ॥**

**ಗಂಧಮಾಲ್ಯನಮಸ್ಕಾರಧೂಪ ದೀಪಾನ್ನಸಂಪದಾ ।**
**ಸಂವತ್ಸರಾಂತೇ ಸಂಪೂಜ್ಯ ವ್ರತಾಂತೇ ಬ್ರಾಹ್ಮಣಾಯ ಚ ॥ ೨ ॥**

**ವಸ್ತ್ರಯುಗ್ಮಂ ನರೋದತ್ವಾ ಯಥೇಷ್ಟಂ ಕಾಮಮಾಪ್ನುಯಾತ್ ।**
**ರೋಗಾತೋ ಮುಚ್ಯತೇ ರೋಗಾದ್ಬದ್ಧೋ ಮುಚ್ಯೇತ ಬಂಧನಾತ್ ॥ ೩ ॥**

### ನೂರ ಎಪ್ಪತ್ತೈದನೆಯ ಅಧ್ಯಾಯ.

೧-೫ ಮಾರ್ಕಂಡೇಯರು ಹೇಳುತ್ತಾರೆ :— ಕಾರ್ತಿಕಮಾಸದ ಶುಕ್ಲಪಕ್ಷದ ನವಮಿಯಿಂದ ಪ್ರಾರಂಭಿಸಿ ಉಪವಾಸನಿಯಮದಿಂದಿದ್ದು ಭದ್ರಕಾಲಿಯನ್ನು ಗಂಧಪುಷ್ಪನಮಸ್ಕಾರಧೂಪದೀಪನೈವೇದ್ಯಾದಿಗಳಿಂದ ಯಥಾವಿಧಿಯಾಗಿ ಪೂಜಿಸಬೇಕು. ವರ್ಷದ ಕೊನೆಯಲ್ಲಿ ವ್ರತವನ್ನು ಮುಗಿಸಿ ಬ್ರಾಹ್ಮಣನಿಗೆ ವಸ್ತ್ರಯುಗ್ಮವನ್ನು ದಾನಮಾಡಿದಲ್ಲಿ ಎಲ್ಲಾ ಮನೋರಥಗಳೂ ಸಿದ್ಧಿಸುತ್ತವೆ. ರೋಗದಿಂದ ಪೀಡಿತನಾದವನು ರೋಗದಿಂದ ಬಿಡುಗಡೆಹೊಂದುತ್ತಾನೆ. ಬಂಧನದಲ್ಲಿರುವವನೂ ಬಿಡುಗಡೆಹೊಂದುತ್ತಾನೆ. ರಾಜಕಾರ್ಯದಲ್ಲಿ ನಿರತನಾದವನೂ ಆಕಸ್ಮಿಕವಾದ

ರಾಜಕಾರ್ಯೋಭಿಯುಕ್ತಶ್ಚ ಮುಚ್ಯತೇ ಮಹತೋ ಭಯಾತ್ ।
ನ ಚೌರೇಭ್ಯೋ ಭಯಂ ತಸ್ಯ ನಾರಣ್ಯೇಭ್ಯಃ ಕದಾಚನ ॥ ೪ ॥

ಪುತ್ರಾನವಾಪ್ನೋತಿ ಧನಂ ಯಥೇಷ್ಟಂ
ಸ್ತ್ರೀಯಶ್ಚ ಮುಖ್ಯಾಃ ವಿವಿಧಂ ಚ ಕುಪ್ಯಂ ।
ಪೂಜಾಂ ತು ಕೃತ್ವಾ ವಿಧಿವದ್ಭವಾನ್ಯಾ
ಕಾಮಾನವಾಪ್ನೋತಿ ತಥಾ ಯಥೇಷ್ಟಾನ್ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಭದ್ರಕಾಲೀ ಪೂಜಾವರ್ಣನೋ ನಾಮ
ಪಂಚಸಪ್ತತ್ಯುತ್ತರಶತತಮೋಽಧ್ಯಾಯಃ

---

ಮಹಾಭಯದಿಂದ ಮುಕ್ತನಾಗುತ್ತಾನೆ. ಚೋರಭಯದಿಂದಲೂ, ಅರಣ್ಯಭಯದಿಂದಲೂ ಮುಕ್ತನಾಗುತ್ತಾನೆ. ಪುತ್ರರನ್ನೂ, ಯಥೇಷ್ಟ ಧನವನ್ನೂ, ಅಭಿಮತರಾದ ಸ್ತ್ರೀಯರನ್ನೂ ಹೊಂದುತ್ತಾನೆ. ಯಥಾವಿಧಿಯಾಗಿ ನಡೆಸಿದ ಈ ಭವಾನೀ ಪೂಜೆಯು ಅಭಿಮತವಾದ ಎಲ್ಲಾ ಮನೋರಥಗಳಿಗೂ ಸಾಧಕವಾಗುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಭದ್ರಕಾಲೀಪೂಜಾವರ್ಣನವೆಂಬ
ನೂರ ಎಪ್ಪತ್ತೈದನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಷಟ್ಸಪ್ತತ್ಯುತ್ತರಶತತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಕ್ರತುರ್ದಕ್ಷೋ ರಿಪುಃ ಸತ್ಯಃ ಕಾಲಕಾಮೌ ಧ್ವನಿಸ್ತಥಾ ।**
**ಕುಲವಾನ್ಮನುಜೋ ವಿಶ್ವೋ ರೋಚಮಾನಶ್ಚ ತೇ ದಶ ॥ ೧ ॥**

**ವಿಶ್ವೇದೇವಾಃ ಸಮಾಖ್ಯಾತಾ ದಶಾತ್ಮಾ ಕೇಶವೋ ವಿಭುಃ ।**
**ತಸ್ಯ ಸಂಪೂಜನಂ ಕಾರ್ಯಂ ಸಿತಪಕ್ಷೇ ನರಾಧಿಪ ॥ ೨ ॥**

**ಆರಭ್ಯ ಕಾರ್ತಿಕಾನ್ಮಾಸಾದ್ದಶಮ್ಯಾಂ ನೃಪಪುಂಗವ ।**
**ಮಂಡಲೇಷು ಚ ಮುಖ್ಯೇಷು ಯದಿ ವಾರ್ಚಾಸು ಯಾದವ ॥ ೩ ॥**

---

**ನೂರ ಎಪ್ಪತ್ತಾರನೆಯ ಅಧ್ಯಾಯ.**

೧-೫. ಮಾರ್ಕಂಡೇಯರು ಹೇಳುತ್ತಾರೆ:—ಕ್ರತುದಕ್ಷ, ರಿಪು, ಸತ್ಯ, ಕಾಲ, ಕಾಮ, ಧ್ವನಿ, ಕುಲವಾನ್, ಮನುಜ, ವಿಶ್ವ, ರೋಚಮಾನ ಈ ಹತ್ತು ದೇವತೆಗಳಿಗೆ ವಿಶ್ವೇದೇವರೆಂದು ಹೆಸರು. ಈ ದೇವತೆಗಳನ್ನು ಶರೀರವನ್ನಾಗಿ ಹೊಂದಿ ಪ್ರಭುವಾದ ಕೇಶವನು ದಶಾತ್ಮಾ ಎನಿಸುತ್ತಾನೆ. ಇಂತಹ ಕೇಶವನ ಪೂಜೆಯನ್ನು ಕಾರ್ತಿಕಮಾಸದ ಶುಕ್ಲಪಕ್ಷದ ದಶಮಿಯಲ್ಲಿ ಪ್ರಾರಂಭಿಸಿ ಮಾಡಬೇಕು. ಮಂಡಲಗಳಲ್ಲಾಗಲಿ, ವಿಗ್ರಹಗಳಲ್ಲಾಗಲಿ ಈ ದೇವತೆಗಳನ್ನು ಗಂಧಪುಷ್ಪ

ಗಂಧಮಾಲ್ಯನಮಸ್ಕಾರ ಧೂಪದೀಪಾನ್ನಸಂಪದಾ ।
ವ್ರತಾಂತೇ ಕನಕಂ ದದ್ಯಾದ್ಯಥಾಶಕ್ತಿ ದ್ವಿಜಾತಯೇ ॥ ೪ ॥

ಕೃತ್ವಾ ವ್ರತಂ ವತ್ಸ ರಮೇತದಿಷ್ಟಂ
ಪ್ರಾಪ್ನೋತಿ ತೇಷಾಂ ಸುಚಿರಂ ಚ ಲೋಕಾನ್ ।
ತತ್ರೋಷ್ಯ ಲೋಕೇ ಪುರುಷತ್ವಮೇತ್ಯ
ರಾಜಾಭವೇದ್ಬ್ರಾಹ್ಮಣಪುಂಗವೋ ವಾ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ವಿಶ್ವೇದೇವದಶಮೀಪೂಜಾವರ್ಣನೋ ನಾಮ
ಷಟ್ಸಪ್ತತ್ಯುತ್ತರಶತತಮೋಽಧ್ಯಾಯಃ

---

ನಮಸ್ಕಾರ ಧೂಪದೀಪ ನೈವೇದ್ಯಾದಿಗಳಿಂದ ಯಥಾವಿಧಿಯಾಗಿ ಪೂಜಿಸಬೇಕು. ವ್ರತದ ಕೊನೆಯಲ್ಲಿ ಯಥಾಶಕ್ತಿ ಸುವರ್ಣವನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ಈ ವ್ರತವನ್ನು ಒಂದುವರ್ಷ ಪರ್ಯಂತ ಆಚರಿಸಿದವನಿಗೆ ಬಹುಕಾಲ ಪರ್ಯಂತವೂ ಈ ದೇವತೆಗಳ ಲೋಕಗಳುಂಟಾಗುತ್ತವೆ. ಅನಂತರ ಮನುಷ್ಯನಾಗಿ ಜನಿಸಿದರೂ ರಾಜನಾಗಿಯೋ ಬ್ರಾಹ್ಮಣಶ್ರೇಷ್ಠನಾಗಿಯೋ ಆಗುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ವಿಶ್ವೇದೇವದಶಮೀ ಪೂಜಾವರ್ಣನವೆಂಬ
ನೂರ ಎಪ್ಪತ್ತಾರನೆಯ ಅಧ್ಯಾಯ ಮುಗಿದಿದೆ.



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಸಪ್ತಸಪ್ತತ್ಯುತ್ತರಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

**ಆತ್ಮಾಹ್ಯಾಯುರ್ಮನೋ ದಕ್ಷೋ ಮದಃ ಪ್ರಾಣಸ್ತಥೈವ ಚ ।**
**ಹವಿಷ್ಮಾಂಶ್ಚ ಗತಿಷ್ಟಶ್ಚ ಋತಃ ಸತ್ಯಶ್ಚ ತೇ ದಶ ॥ ೧ ॥**

**ದೇವಸ್ತ್ವಂಗಿರಸೋನಾಮ ದಶಮ್ಯಾಂ ಪೂಜಯೇನ್ನರಃ ।**
**ಸೋಪವಾಸಃ ಕೃಷ್ಣಪಕ್ಷೇ ಪೂರ್ವೋಕ್ತವಿಧಿನಾ ನರಃ ॥ ೨ ॥**

**ಕೃತ್ವಾವ್ರತಂ ವತ್ಸರಮೇಕಮಿಷ್ಟಾನ್**
**ಪ್ರಾಪ್ನೋತಿ ತೇಷಾಂ ಸುಚಿರಂ ಚ ಲೋಕಾನ್ ।**

---

### ನೂರ ಎಪ್ಪತ್ತೇಳನೆಯ ಅಧ್ಯಾಯ.

೧–೩. ಮಾರ್ಕಂಡೇಯರು ಹೇಳುತ್ತಾರೆ :— ಆತ್ಮಾ, ಆಯುಃ, ಮನಃ, ದಕ್ಷಃ, ಮದಃ, ಪ್ರಾಣಃ, ಹವಿಷ್ಮಾನ್, ಗತೀಷ್ಟ, ಋತ, ಸತ್ಯ ಈ ಹತ್ತು ದೇವತೆಗಳೂ ಅಂಗಿರಸರೆಂದು ಹೇಳಲ್ಪಡುತ್ತಾರೆ. ಇವರನ್ನು ಕೃಷ್ಣಪಕ್ಷದ ದಶಮಿಯಲ್ಲಿ ಉಪವಾಸನಿಯಮದಿಂದಿದ್ದು ಹಿಂದೆ ಹೇಳಿರುವ ವಿಧಾನದಂತೆ ಪೂಜಿಸಬೇಕು. ಒಂದು ವರ್ಷಪರ್ಯಂತ ಈ ವ್ರತವನ್ನಾಚರಿಸಿದವನು ಇಷ್ಟವಾದ ಮನೋರಥ

ತತಶ್ಚ್ಯುತಸ್ಯ ಲೋಕೇ ಪುರುಷತ್ವಮೇತ್ಯ
ರಾಜಾ ಭವೇದ್ಬ್ರಾಹ್ಮಣಪುಂಗವೋ ವಾ          ॥ ೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಅಂಗಿರೋವ್ರತವರ್ಣನೋ ನಾಮ
ಸಪ್ತಸಪ್ತತ್ಯುತ್ತರಶತತಮೋಽಧ್ಯಾಯಃ

---

ಗಳನ್ನೂ ಹೊಂದಿ ಆ ದೇವತೆಗಳ ಲೋಕವನ್ನೂ ಹೊಂದುತ್ತಾನೆ. ಅಲ್ಲಿ ಸುಖಿಯಾಗಿದ್ದು ಮನುಷ್ಯನಾಗಿ ಹುಟ್ಟುವಾಗ ರಾಜನಾಗಿಯೋ ಬ್ರಾಹ್ಮಣಶ್ರೇಷ್ಠನಾಗಿಯೋ ಹುಟ್ಟುತ್ತಾನೆ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಅಂಗಿರೋವ್ರತವರ್ಣನವೆಂಬ
ನೂರ ಎಪ್ಪತ್ತೇಳನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಅಷ್ಟಸಪ್ತತ್ಯುತ್ತರಶತತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಶುಕ್ಲಪಕ್ಷೇ ದಶಮ್ಯಾಂ ತು ಸೋಪವಾಸಸ್ತಥಾ ನರಃ ।**
**ಮಾರ್ಗಶೀರ್ಷಾರಥಾರಭ್ಯ ನಿತ್ಯಮೇತದರಿಂದಮ ॥ ೧ ॥**

**ಗಂಧಮಾಲ್ಯನಮಸ್ಕಾರ ಧೂಪದೀಪಾನ್ನಸಂಪದಾ ।**
**ಘೃತೇನ ಜುಹುಯಾದ್ವಹ್ನಿಂ ಬ್ರಾಹ್ಮಣಾಂಶ್ಚಾತ್ರ ಪೂಜಯೇತ್ ॥ ೨ ॥**

**ವ್ರತಾವಸಾನೇ ದದಾಚ್ಚ ತಥಾ ಧೇನುಂ ಪಯಸ್ವಿನೀಂ ।**
**ವ್ರತಮೇತದ್ವಿನಿರ್ದಿಷ್ಟಮಶ್ವಮೇಧಫಲಪ್ರದಂ ॥ ೩ ॥**

---

### ನೂರ ಎಪ್ಪತ್ತೆಂಟನೆಯ ಅಧ್ಯಾಯ

೧-೫. ಮಾರ್ಕಂಡೇಯರು ಹೇಳುತ್ತಾರೆ:—ಮಾರ್ಗಶಿರಮಾಸದ ಶುಕ್ಲ ಪಕ್ಷದ ದಶಮಿಯಿಂದ ಪ್ರಾರಂಭಿಸಿ, ಉಪವಾಸ ನಿಯಮದಿಂದಿದ್ದು ಗಂಧಪುಷ್ಪ ನಮಸ್ಕಾರ ಧೂಪದೀಪ ನೈವೇದ್ಯಾದಿಗಳಿಂದ, ಭಗವಂತನನ್ನು ಪೂಜಿಸಿ ಆಜ್ಯದಿಂದ ಅಗ್ನಿಯಲ್ಲಿ ಹೋಮಮಾಡಬೇಕು. ಬ್ರಾಹ್ಮಣರನ್ನೂ ತೃಪ್ತಿಪಡಿಸಬೇಕು. ವ್ರತದ ಕೊನೆಯಲ್ಲಿ ಕರೆಯುವ ಹಸುವನ್ನೂ ದಾನಮಾಡಬೇಕು. ಈ ವ್ರತವು ಅಶ್ವಮೇಧಕ್ಕೆ ಸಮಾನವಾದ ಫಲಪ್ರದವೆಂದು ಹೇಳಲ್ಪಟ್ಟಿದೆ. ಕೃಷ್ಣಪಕ್ಷದಲ್ಲಿ

ಕೃಷ್ಣಪಕ್ಷೇ ತಥಾಪ್ಯೇತತ್ಕೃತ್ವಾ ಸಂವತ್ಸರಂ ವ್ರತಂ ।
ರಾಜಸೂಯಮವಾಪ್ನೋತಿ ಕುಲಮುದ್ಧರತಿ ಸ್ವಕಂ ॥ ೪ ॥

ಕೃತ್ವಾ ಪಕ್ಷದ್ವಯೇಪ್ಯೇತದ್ವ್ರತಂ ಮನುಜಸತ್ತಮ ।
ರಾಜಸೂಯಾಶ್ವಮೇಧಾನಾಂ ಫಲಂ ಪ್ರಾಪ್ನೋತ್ಯಸಂಶಯಂ ॥ ೫ ॥

ಸ್ವರ್ಗಲೋಕಮವಾಪ್ನೋತಿ ಕುಲಮುದ್ಧರತಿ ಸ್ವಕಂ ।
ಧರ್ಮೇ ಮತಿರ್ಭವೇತ್ತಸ್ಯ ಧರ್ಮಮಾಪ್ನೋತ್ಯಸಂಶಯಂ ॥ ೬ ॥

ಯತ್ರ ಯತ್ರಾಭಿಜಾಯೇತ ತತ್ರ ಧರ್ಮಪರೋ ಭವೇತ್ ।
ಪ್ರಧಾನಂ ತಂ ತಯಾ ರಾಜನ್ ಯತ್ರ ಧರ್ಮಪರೋ ಭವೇತ್ ॥ ೭ ॥

ಆರೋಗ್ಯಮಾಯುಷ್ಯಕರಂ ಯಶಸ್ಯಂ
ಸ್ಥಾನಪ್ರದಂ ಪಾಪವಿನಾಶಕಾರಿ ।

---

ಆಚರಿಸಿ ವರ್ಷಪರ್ಯಂತವೂ ನಡೆಸಿದ್ದೇ ಆದರೆ, ರಾಜಸೂಯದ ಫಲವನ್ನು ಹೊಂದುತ್ತಾನೆ. ತನ್ನ ಕುಲಕ್ಕೂ ಉತ್ತಾರಕನಾಗುತ್ತಾನೆ. ಎರಡು ಪಕ್ಷದಲ್ಲಿಯೂ ಈ ವ್ರತವನ್ನು ಆಚರಿಸಿದಲ್ಲಿ ರಾಜಸೂಯ, ಅಶ್ವಮೇಧ ಇವುಗಳ ಫಲವನ್ನು ನಿಸ್ಸಂಶಯವಾಗಿಯೂ ಹೊಂದುತ್ತಾನೆ.

೬-೮. ಸರ್ವಲೋಕವನ್ನೂ ಹೊಂದುತ್ತಾನೆ. ತನ್ನ ಕುಲವನ್ನೂ ಉದ್ಧರಿಸುತ್ತಾನೆ. ಧರ್ಮದಲ್ಲಿಯೇ ಅವನಿಗೆ ಬುದ್ಧಿಯುಂಟಾಗುತ್ತದೆ ಧರ್ಮವನ್ನೂ ಹೊಂದುತ್ತಾನೆ. ಎಲ್ಲಿ ಹುಟ್ಟಿದರೂ ಧರ್ಮಪರನಾಗಿಯೇ ಆಗುತ್ತಾನೆ. ಎಲ್ಲಿ ಎಲ್ಲಿ ಇವನು ಧರ್ಮಪರನಾಗಿರುತ್ತಾನೆಯೋ ಅಲ್ಲಿ ಆ ಧರ್ಮಬುದ್ಧಿಯಿಂದ ಇವನೇ ಪ್ರಧಾನಪುರುಷನೂ ಆಗುತ್ತಾನೆ. ಈ ವ್ರತವು ಆರೋಗ್ಯಪ್ರದ ಮತ್ತು ಆಯುಃ

ಕರ್ತವ್ಯಮೇತತ್ಪುರುಷೈರ್ಯಥಾವ
ತ್ಪೂಜ್ಯೋಹಿ ವಿಷ್ಣುರ್ಭಗವಾನ್ ಸ ಧರ್ಮಃ ॥ ೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಧರ್ಮವ್ರತವರ್ಣನೋನಾಮ ಅಷ್ಟಸಪ್ತತ್ಯುತ್ತರ
ಶತತಮೋಽಧ್ಯಾಯಃ

---

ಪ್ರದ, ಯಶಸ್ಕರ ಪ್ರತಿಷ್ಠಾಸಾಧನ ಮತ್ತು ಪಾಪನಾಶಕವೂ ಆಗುತ್ತದೆ. ಆದುದರಿಂದ ವಿವೇಕಿಯಾದ ಪುರುಷನು ಈ ವ್ರತವನ್ನು ಆಚರಿಸಬೇಕು. ವಿಷ್ಣುವೇ ಸಾಕ್ಷಾದ್ಧರ್ಮಸ್ವರೂಪನೇ ಆದುದರಿಂದ ಎಲ್ಲರಿಗೂ ಅವನು ಪೂಜ್ಯನೇ ಆಗಿರುವನಲ್ಲವೇ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಧರ್ಮವ್ರತವರ್ಣನವೆಂಬ
ನೂರ ಎಪ್ಪತ್ತೆಂಟನೆಯ ಅಧ್ಯಾಯ
ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕೋನಾಶೀತ್ಯುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

ಅಂಗಾರಕಂ ತಥಾ ಸೂರ್ಯಂ ನಿರ್ಋತಿಂ ವಾದ್ಯಕಸ್ತಥಾ ।
ಹವನಂ ಚೇಶ್ವರಂ ಮೃತ್ಯುಂ ಕಪಾಲಮಥ ಕಿಂಕಿಣಂ || ೧ ||

ತತ್ರ ಚೈಕಾದಶಾಂಶೈಸ್ತು ದೇವಾಂಸ್ತ್ರಿಭುವನೇಶ್ವರಾನ್ ।
ಏಕಾದಶ್ಯಾಂ ಸೋಪವಾಸಃ ಸೋಮಂ ಸಂಪೂಜಯೇತ್ತಥಾ || ೨ ||

ಗಂಧಮಾಲ್ಯನಮಸ್ಕಾರಧೂಪದೀಪಾನ್ನಸಂಪದಾ ।
ಮಾರ್ಗಶೀರ್ಷಾದಥಾರಭ್ಯ ಯಾವತ್ಸಂವತ್ಸರಂ ಭವೇತ್ ।
ಸಂವತ್ಸರಾಂತೇ ದದ್ಯಾಚ್ಚ ತಥಾ ಧೇನುಂ ಪಯಸ್ವಿನೀಂ || ೩ ||

---

### ನೂರ ಎಪ್ಪತ್ತೊಂಭತ್ತನೆಯ ಅಧ್ಯಾಯ.

೧-೪. ಮಾರ್ಕಂಡೇಯರು ಹೇಳುತ್ತಾರೆ:—ಅಂಗಾರಕ, ಸೂರ್ಯ, ನಿರ್ಋತಿ ಇವರನ್ನು ಮೊದಲು ಮಾಡಿಕೊಂಡು ಹವನ, ಈಶ್ವರ, ಮೃತ್ಯು, ಕಪಾಲಿ ಕಿಂಕಣ ಇವರೇ ಮೊದಲಾದ ಏಕಾದಶಾಂಶದಿಂದ ಕೂಡಿದ ಲೋಕಾಧಿಪತಿಗಳಾದ ದೇವತೆಗಳನ್ನೂ ಏಕಾದಶಿಯಲ್ಲಿ ಉಪವಾಸದಿಂದಿದ್ದು ಸೋಮನನ್ನೂ ಸಹ ಪೂಜಿಸಬೇಕು. ಮಾರ್ಗಶಿರಮಾಸದಿಂದ ಪ್ರಾರಂಭಿಸಿ ಸಂವತ್ಸರ ಪರ್ಯಂತರವೂ,

ಕೃತ್ವಾ ವ್ರತಂ ವತ್ಸರಮೇತದಿಷ್ಟಂ
ಭದ್ರತ್ವಮಾಪ್ನೋತಿ ನರಸ್ತು ರಾಜನ್ ।
ರುದ್ರೇಣ ಸಾರ್ಧಂ ಸುಚಿರಂ ರಮಿತ್ವಾ
ಕಾಮಾನವಾಪ್ಯಾಥ ಮನೋಭಿರಾಮಾನ್ ॥ ೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ರುದ್ರವ್ರತವರ್ಣನೋನಾಮೈಕೋನಾಶೀತ್ಯುತ್ತರ ಶತತಮೋಽಧ್ಯಾಯಃ

---

ಗಂಧಪುಷ್ಪ ಧೂಪದೀಪ ನಮಸ್ಕಾರ ನೈವೇದ್ಯಾದಿಗಳಿಂದ ಪೂಜಿಸಬೇಕು. ಸಂವತ್ಸರದ ಕೊನೆಯಲ್ಲಿ ಕರೆಯುವ ಹಸುವನ್ನು ದಾನಮಾಡಬೇಕು. ಈ ವ್ರತವನ್ನು ಸಂವತ್ಸರ ಪೂರ್ತಿಯಾಗಿ ಮಾಡಿದವನು ಮನುಷ್ಯನಾಗಿರುವಾಗ ಬಹಳ ಮಂಗಲಕರನಾಗಿರುತ್ತಾನೆ. ಲೋಕಾಂತರದಲ್ಲಿ ರುದ್ರನೊಡನೆ ವಿಹರಿಸುತ್ತಾ ಸರ್ವಮನೋರಥಗಳನ್ನೂ ಹೊಂದಿ ಸುಖಿಸುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ರುದ್ರವ್ರತವರ್ಣನವೆಂಬ
ನೂರ ಎಪ್ಪತ್ತೊಂಭತ್ತನೆಯ ಅಧ್ಯಾಯ
ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಅಶೀತ್ಯುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

ಭುವನೋ ಭಾವನಶ್ಚೈವ ಸುಜನ್ಯಃ ಸುಜನಸ್ತಥಾ ।
ಕ್ರತುಃ ಸರ್ವಶ್ಚ ಮೂರ್ಧಾ ಚ ತ್ಯಾಜಶ್ಚ ವ್ಯಮ್ನಕಸ್ತಥಾ || ೧ ||

ಪ್ರಸವಶ್ಚಾವ್ಯಯಶ್ಚೈವ ದಕ್ಷೋ ದ್ವಾದಶಕಸ್ತಥಾ ।
ಭೃಗವೋ ನಾಮ ನಿರ್ದಿಷ್ಟಾ ದೇವಾ ದ್ವಾದಶ ಯಾಜ್ಞಿಯಾಃ || ೨ ||

ತೇಷಾಂ ಸಂಪೂಜನಂ ಕುರ್ಯಾದ್ದ್ವಾದಶ್ಯಾಂ ನಿತ್ಯಮೇವ ತು ।
ಮಾರ್ಗಶೀರ್ಷಾದಥಾರಭ್ಯ ಕೃಷ್ಣಪಕ್ಷೇ ಸದೈವ ತು || ೩ ||

---

### ನೂರ ಎಂಭತ್ತನೆಯ ಅಧ್ಯಾಯ.

೧-೫. ಮಾರ್ಕಂಡೇಯರು ಹೇಳುತ್ತಾರೆ:—ಭುವನ, ಭಾವನ, ಸುಜನ್ಯ, ಸುಜನ, ಕ್ರತು, ಸರ್ವ, ಮೂರ್ಧಾ, ತ್ಯಾಜ, ವ್ಯಮ್ನಕ, ಪ್ರಸವ, ಅವ್ಯಯ, ದಕ್ಷ ಎಂಬ ಹನ್ನೆರಡು ದೇವತೆಗಳಿಗೆ ಭೃಗುಗಳೆಂದು ಹೆಸರು. ಈ ಹನ್ನೆರಡು ದೇವತೆಗಳೂ ಯಾಜ್ಞಿಯರು, ಮಾರ್ಗಶಿರಕೃಷ್ಣಪಕ್ಷದ ದ್ವಾದಶಿಯಲ್ಲಿ ಪ್ರಾರಂಭಿಸಿ ನಿತ್ಯವೂ, ಇವರ ಪೂಜೆಯನ್ನು ಗಂಧಪುಷ್ಪನಮಸ್ಕಾರ ಧೂಪದೀಪ ನೈವೇದ್ಯಾದಿಗಳಿಂದ ಮಾಡಬೇಕು. ಸಂವತ್ಸರದ ಕೊನೆಯಲ್ಲಿ ಕರೆಯುವ ಹಸುವನ್ನು ಬ್ರಾಹ್ಮಣನಿಗೆ

ಗಂಧಮಾಲ್ಯನಮಸ್ಕಾರ ಧೂಪದೀಪಾನ್ನಸಂಪದಾ ।
ಸಂವತ್ಸರಾಂತೇ ದದ್ಯಾಚ್ಚ ಬ್ರಾಹ್ಮಣಾಯ ಪಯಸ್ವಿನೀಂ ॥ ೪ ॥

ಕೃತ್ವಾ ವ್ರತಂ ವತ್ಸರಮೇತದಿಷ್ಟಂ
ಪ್ರಾಪ್ನೋತಿ ತೇಷಾಂ ಚ ಸಲೋಕಮೇವ ।
ತತ್ರೋಷ್ಯಕಾಲಂ ಸುಚಿರಂ ಮನುಷ್ಯೋ
ರಾಜಾ ಭವೇದ್ವಾ ದ್ವಿಜಪುಂಗವೋ ವಾ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಭೃಗುವ್ರತವರ್ಣನೋ
ನಾಮಾಶೀತ್ಯುತ್ತರಶತತಮೋಽಧ್ಯಾಯಃ

---

ದಾನಮಾಡಬೇಕು. ಒಂದು ವರ್ಷ ಪೂರ್ತಿಯಾಗಿ ಈ ವ್ರತವಮಾಡಿದವನು ಈ ದೇವತೆಗಳ ಲೋಕವನ್ನು ಹೊಂದುತ್ತಾನೆ. ಅಲ್ಲಿ ಬಹುಕಾಲ ಸುಖವಾಗಿದ್ದು ಮನುಷ್ಯನಾಗಿ ಹುಟ್ಟುವಾಗ ರಾಜನಾಗಿಯೋ, ಬ್ರಾಹ್ಮಣೋತ್ತಮನಾಗಿಯೋ ಹುಟ್ಟುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಭೃಗುವ್ರತವರ್ಣನವೆಂಬ
ನೂರ ಎಂಭತ್ತನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕಾಶೀತ್ಯುತ್ತರಶತತಮೋऽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

ಮನೋ ಮಂತಸ್ತಥಾ ಪ್ರಾಣೋ ನರೋ ಯಾನಶ್ಚ ವೀರ್ಯವಾನ್ ।
ಚಿತಿರ್ಹಯೋ ನಯಶ್ಚೈವ ಹಂಸೋ ನಾರಾಯಣಸ್ತಥಾ || ೧ ||

ವಿಭುಶ್ಚಾಪಿ ಪ್ರಭುಶ್ಚೈವ ಸಾಧ್ಯಾ ದ್ವಾದಶ ಕೀರ್ತಿತಾಃ ।
ಪೂಜಯೇಚ್ಛುಕ್ಲಪಕ್ಷೇತಾನ್ ದ್ವಾದಶ್ಯಾಂ ಮಾರ್ಗಶೀರ್ಷಕೆ || ೨ ||

ಕೃತ್ವಾ ವ್ರತಂ ವತ್ಸರಮೇತದಿಷ್ಟಂ
ಪ್ರಾಪ್ನೋತಿ ತೇಷಾಂ ತು ಸಲೋಕಮೇವ ।

---

### ನೂರ ಎಂಭತ್ತೊಂದನೆಯ ಅಧ್ಯಾಯ.

೧-೩. ಮಾರ್ಕಂಡೇಯರು ಹೇಳುತ್ತಾರೆ. ಮನಃ, ಮಂತಃ, ಪ್ರಾಣಃ. ನರಃ, ಯಾನಃ, ಚಿತಿಃ, ಹಯಃ, ನಯಃ, ಹಂಸಃ, ನಾರಾಯಣಃ, ವಿಭುಃ, ಪ್ರಭುಃ, ಈ ಹನ್ನೆರಡು ದೇವತೆಗಳು ಸಾಧ್ಯರೆಂದು ಹೇಳಲ್ಪಡುತ್ತಾರೆ. ಇವರನ್ನು ಮಾರ್ಗಶಿರಮಾಸದ ಶುಕ್ಲಪಕ್ಷದ ದ್ವಾದಶಿಯಲ್ಲಿ ಯಥಾವಿಧಿಯಾಗಿ ಪೂಜಿಸಬೇಕು.

ತತ್ರೋಷ್ಯ ಕಾಲಂ ಸುಚಿರಂ ನರೇಂದ್ರ
ರಾಜಾ ಭವೇದ್ಬ್ರಾಹ್ಮಣಪುಂಗವೋ ವಾ ॥ ೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಸಾಧ್ಯವ್ರತವರ್ಣನೋ
ನಾಮೈಕಾಶೀತ್ಯುತ್ತರಶತತಮೋಽಧ್ಯಾಯಃ

---

ಒಂದು ವರ್ಷ ಈ ವ್ರತವನ್ನು ಆಚರಿಸಿದವನು ಈ ದೇವತೆಗಳ ಲೋಕವನ್ನು ಹೊಂದುತ್ತಾನೆ. ಅಲ್ಲಿ ಬಹುಕಾಲ ಸುಖದಿಂದಿದ್ದು ರಾಜನಾಗಿಯೋ ಬ್ರಾಹ್ಮಣೋತ್ತಮನಾಗಿಯೋ ಹುಟ್ಟುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಸಾಧ್ಯವ್ರತವರ್ಣನವೆಂಬ
ನೂರ ಎಂಭತ್ತೊಂದನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ದ್ವ್ಯಶೀತ್ಯುತ್ತರಶತತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಧಾತಾ ಮಿತ್ರೋಽರ್ಯಮಾ ಪೂಷಾ ಶಕ್ರೋಶೋ ವರುಣೋ ಭಗಃ |**
**ತ್ವಷ್ಟಾ ವಿವಸ್ವಾನ್ ಸವಿತಾ ವಿಷ್ಣುರ್ದ್ವಾದಶಕಸ್ತಥಾ || ೧ ||**

**ಪೂಜಯೇದ್ದ್ವಾದಶಾದಿತ್ಯಾನ್ ಶುಕ್ಲಪಕ್ಷೇ ಹ್ಯುಪೋಷಿತಃ |**
**ಮಾರ್ಗಶೀರ್ಷಾದಥಾರಭ್ಯ ಗಂಧಮಾಲ್ಯಾನ್ನಸಂಪದಾ || ೨ ||**

**ದತ್ವಾ ವ್ರತಾಂತೇ ಪುರುಷಃ ಸುವರ್ಣ-**
**ಮಾಪ್ನೋತಿ ಲೋಕಾನ್ ಸವಿತುರ್ನವೀರ |**

---

**ನೂರ ಎಂಭತ್ತೆರಡನೆಯ ಅಧ್ಯಾಯ.**

೧-೩. ಮಾರ್ಕಂಡೇಯರು ಹೇಳುತ್ತಾರೆ: —ಧಾತಾ, ಮಿತ್ರ, ಅರ್ಯಮಾ, ಪೂಷಾ, ಶಕ್ರ, ಈಶ, ವರುಣ, ಭಗ ತ್ವಷ್ಟಾ, ವಿವಸ್ವಾನ್, ಸವಿತಾ, ವಿಷ್ಣು, ಇವರು ದ್ವಾದಶಾದಿತ್ಯರು, ಮಾರ್ಗಶಿರ ಶುಕ್ಲಪಕ್ಷದಲ್ಲಿ ಉಪವಾಸದಿಂದಿದ್ದು ಗಂಧ ಪುಷ್ಪ ನೈವೇದ್ಯಾದಿಗಳಿಂದ ಇವರನ್ನು ಪೂಜಿಸಬೇಕು. ಕೊನೆಯಲ್ಲಿ ಸುವರ್ಣವನ್ನು

**ಮಾನುಷ್ಯಮಾಸಾದ್ಯ ಭವತ್ಯರೋಗೋ**
**ಜಿತೇಂದ್ರಿಯಶ್ಚೈವ ಧನಾನ್ವಿತಶ್ಚ ॥ ೩ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ದ್ವಾದಶಾದಿತ್ಯವ್ರತವರ್ಣನೋ ನಾಮ ದ್ವ್ಯಶೀತ್ಯುತ್ತರಶತತಮೋಽಧ್ಯಾಯಃ**

---

ದಾನಮಾಡಿದಲ್ಲಿ ಸಾಂಗವಾದ ಈ ವ್ರತದಿಂದ ಸೂರ್ಯಲೋಕವನ್ನು ಹೊಂದುತ್ತಾನೆ. ಮನುಷ್ಯನಾಗಿ ಜನಿಸಿದರೂ ಅರೋಗನಾಗಿಯೂ, ಜಿತೇಂದ್ರಿಯನಾಗಿಯೂ ಧನಿಕನಾಗಿಯೂ ಆಗುತ್ತಾನೆ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ದ್ವಾದಶಾದಿತ್ಯವ್ರತವರ್ಣನವೆಂಬ ನೂರ ಎಂಭತ್ತೆರಡನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ತ್ರ್ಯಶೀತ್ಯುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

ಶುಕ್ಲಪಕ್ಷೇ ಮಹಾರಾಜ ತ್ರಯೋದಶ್ಯಾಮುಪೋಷಿತಃ ।
ಪೂಜಯೇತ್ಕಾಮದೇವಂ ತು ವೈಶಾಖಾತ್ಪ್ರಭೃತಿ ಪ್ರಭೋ ॥ ೧ ॥

ಗಂಧಮಾಲ್ಯನಮಸ್ಕಾರ ಧೂಪದೀಪಾನ್ನಸಂಪದಾ ।
ದದ್ಯಾದ್ವ್ರತಾಂತೇ ವಿಪ್ರಾಯ ಗಂಧವಸ್ತ್ರಯುಗಂ ತಥಾ ॥ ೨ ॥

ಕೃತ್ವಾ ವ್ರತಂ ವತ್ಸರಮೇತದಿಷ್ಟ
ಮಾಸಾದ್ಯ ಲೋಕಂ ಸುಚಿರಂ ಮನುಷ್ಯಃ ।

---

### ನೂರ ಎಂಭತ್ತಮೂರನೆಯ ಅಧ್ಯಾಯ.

೧-೩. ಮಾರ್ಕಂಡೇಯರು ಹೇಳುತ್ತಾರೆ:—ವೈಶಾಖಮಾಸದ ಶುಕ್ಲಪಕ್ಷದ ತ್ರಯೋದಶಿ ತಿಥಿಯಲ್ಲಿ ಉಪವಾಸವಿದ್ದು ಪ್ರಾರಂಭಿಸಿ ಕಾಮದೇವನನ್ನು ಪೂಜಿಸಬೇಕು. ಗಂಧಪುಷ್ಪನಮಸ್ಕಾರಧೂಪದೀಪನೈವೇದ್ಯಾದಿಗಳಿಂದ ಯಥಾವಿಧಿಯಾಗಿ ಪೂಜಿಸಿ ವ್ರತದ ಕೊನೆಯಲ್ಲಿ ಸುಗಂಧಿಯಾದ ವಸ್ತ್ರಯುಗ್ಮವನ್ನು ಬ್ರಾಹ್ಮಣನಿಗೆ

ಮಾನುಷ್ಯಮಾಸಾದ್ಯ ಭವತ್ಯರೋಗೋ
ಸುಖಾನ್ವಿತೋ ರೂಪಸರೂಪವಾಂಶ್ಚ ॥ ೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಕಾಮದೇವವ್ರತವರ್ಣನೋ ನಾಮ
ತ್ರ್ಯಶೀತ್ಯುತ್ತರಶತತಮೋಽಧ್ಯಾಯಃ

---

ದಾನಮಾಡಬೇಕು. ಒಂದುವರ್ಷಕಾಲ ಈ ವ್ರತವನ್ನಾಚರಿಸಿದವನು ಇಷ್ಟವಾದ ಲೋಕವನ್ನು ಹೊಂದಿಸುಖಿಸುತ್ತಾನೆ. ಮನುಷ್ಯನಾಗಿ ಹುಟ್ಟಿದಾಗ ಅರೋಗನಾಗಿಯೂ, ಸುಖಿಯಾಗಿಯೂ ಸುರೂಪಿಯಾಗಿಯೂ ಆಗುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಕಾಮದೇವವ್ರತವರ್ಣನವೆಂಬ
ನೂರ ಎಂಭತ್ತಮೂರನೆಯ ಅಧ್ಯಾಯ
ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಚತುರಶೀತ್ಯುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

ಶುಕ್ಲಪಕ್ಷೇ ಮಹಾರಾಜ ತ್ರಯೋದಶ್ಯಾಮುಪೋಷಿತಃ ।
ಫಾಲ್ಗುನಾತ್ತು ಸಮಾರಭ್ಯ ನಿತ್ಯಂ ಸಂಪೂಜಯೇನ್ನರಃ || ೧ ||

ಗಂಧಮಾಲ್ಯನಮಸ್ಕಾರ ಧೂಪದೀಪಾನ್ನಸಂಪದಾ ।
ಸುವರ್ಣಂ ಬ್ರಾಹ್ಮಣೇಂದ್ರಾಯ ವ್ರತಾಂತೇ ಪ್ರತಿಪಾದಯೇತ್ || ೨ ||

ಕೃತ್ವಾ ವ್ರತಂ ವತ್ಸರಮೇತದಿಷ್ಟಂ
ಯಕ್ಷೇಷು ರಾಜನ್ ಸುಚಿರಂ ತಥೋಷ್ಯ ।

---

### ನೂರ ಎಂಭತ್ತನಾಲ್ಕನೆಯ ಅಧ್ಯಾಯ

೧-೩. ಮಾರ್ಕಂಡೇಯರು ಹೇಳುತ್ತಾರೆ :—ಫಾಲ್ಗುನಮಾಸದ ಶುಕ್ಲ ಪಕ್ಷದಲ್ಲಿ ಪ್ರಾರಂಭಿಸಿ ತ್ರಯೋದಶಿಯಲ್ಲಿ ಉಪವಾಸದಿಂದಿದ್ದು ಗಂಧಪುಷ್ಪನಮ ಸ್ಕಾರಧೂಪದೀಪ ನೈವೇದ್ಯಾದಿಗಳಿಂದ ಯಕ್ಷರನ್ನು ಪೂಜಿಸಬೇಕು. ವ್ರತದ ಕೊನೆ ಯಲ್ಲಿ ಬ್ರಾಹ್ಮಣೋತ್ತಮನಿಗೆ ಸುವರ್ಣವನ್ನು ದಾನಮಾಡಬೇಕು. ವರ್ಷಪೂರ್ತಿ ಯಾಗಿ ಈ ವ್ರತವನ್ನಾಚರಿಸಿದವನು ಯಕ್ಷಲೋಕವನ್ನು ಹೊಂದುತ್ತಾನೆ. ಅಲ್ಲಿ

ಮಾನುಷ್ಯಮಾಸಾದ್ಯ ಧನಾನ್ವಿತಃ ಸ್ಯಾತ್ಸ್ವಾ
ಭಾಗ್ಯಯುಕ್ತಶ್ಚ ತಥಾ ವಿರೋಗಃ ॥ ೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಧನವ್ರತವರ್ಣನೋ ನಾಮ
ಚತುರಶೀತ್ಯುತ್ತರಶತತಮೋಽಧ್ಯಾಯಃ

---

ಬಹುಕಾಲ ವಿಹರಿಸಿ ಪುನಃ ಮನುಷ್ಯನಾಗಿ ಜನಿಸುವಾಗ ಧನಿಕನಾಗಿಯೂ, ಸೌಭಾಗ್ಯಶಾಲಿಯಾಗಿಯೂ ಅರೋಗನಾಗಿಯೂ ಹುಟ್ಟಿ ಸುಖಿಸುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಧನವ್ರತವರ್ಣನವೆಂಬ ನೂರ
ಎಂಭತ್ತನಾಲ್ಕನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಪಂಚಾಶೀತ್ಯುತ್ತರಶತತಮೋಽಧ್ಯಾಯಃ ||

**ಶುಕ್ಲಪಕ್ಷಚತುರ್ದಶ್ಯಾಂ ಜ್ಯೇಷ್ಠಾದಾರಭ್ಯ ಯಾದವ ।**
**ವಾಯುಂ ಸಂಪೂಜಯೇದ್ದೇವಂ ಸೋಪವಾಸೋ ಜಿತೇಂದ್ರಿಯಃ || ೧ ||**

**ಗಂಧಮಾಲ್ಯನಮಸ್ಕಾರ ಧೂಪದೀಪಾನ್ನಸಂಪದಾ ।**
**ಸಂವತ್ಸರಾಂತೇ ದಾತವ್ಯಂ ವಸ್ತ್ರಯುಗ್ಮಂ ದ್ವಿಜಾತಯೇ || ೨ ||**

**ಕೃತ್ವಾ ವ್ರತಂ ವತ್ಸರಮೇತದಿಷ್ಟಂ**
**ಚಾಸಾದ್ಯ ಲೋಕಂ ಮರುತಾಂ ಮನುಷ್ಯಃ ।**

---

### ನೂರ ಎಂಭತ್ತೈದನೆಯ ಅಧ್ಯಾಯ.

೧-೨. ಜ್ಯೇಷ್ಠಮಾಸದ ಶುಕ್ಲಪಕ್ಷಚತುರ್ದಶಿಯಲ್ಲಿ ಪ್ರಾರಂಭಿಸಿ ಉಪವಾಸಿಯಾಗಿಯೂ ಜಿತೇಂದ್ರಿಯನಾಗಿಯೂ ಇದ್ದು ವಾಯುದೇವನನ್ನು ಪೂಜಿಸಬೇಕು. ಗಂಧಪುಷ್ಪನಮಸ್ಕಾರಧೂಪದೀಪನೈವೇದ್ಯಾದಿಗಳಿಂದ ಪೂಜಿಸಿ ವರ್ಷದ ಕೊನೆಯಲ್ಲಿ ವಸ್ತ್ರಯುಗ್ಮವನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ವರ್ಷಪೂರ್ತಿಯಾಗಿ

**ಸುಖಾನಿ ಭುಕ್ತ್ವಾ ಸುಚಿರಂ ಮಹೀಪ**
**ಮಾನುಷ್ಯಮಾಸಾದ್ಯ ಭವತ್ಯರೋಗಃ ॥ ೩ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ವಾಯುವ್ರತವರ್ಣನೋ ನಾಮ**
**ಪಂಚಾಶೀತ್ಯುತ್ತರಶತತಮೋಽಧ್ಯಾಯಃ**

---

ಈ ವ್ರತವನ್ನಾಚರಿಸಿದವನು ವಾಯುಲೋಕವನ್ನು ಹೊಂದಿ ಸುಖಿಸುತ್ತಾನೆ. ಅನಂತರ ಮನುಷ್ಯನಾಗಿ ಜನಿಸಿದಲ್ಲಿ ಅರೋಗನಾಗಿ ಸುಖದಿಂದಿರುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದದಲ್ಲಿ ವಾಯುವ್ರತವರ್ಣನವೆಂಬ ನೂರ ಎಂಭತ್ತೈದನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಷಡಶೀತ್ಯುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

ಕೃಷ್ಣಪಕ್ಷ ಚತುರ್ದಶ್ಯಾಂ ವಿರೂಪಾಕ್ಷಂ ತು ಪೂಜಯೇತ್ ।
ಪೌಷಮಾಸಾದಥಾರಭ್ಯ ಯಾವತ್ಸಂವತ್ಸರಂ ವ್ರತಂ || ೧ ||

ಗಂಧಮಾಲ್ಯನಮಸ್ಕಾರಧೂಪದೀಪಾನ್ನಸಂಪದಾ ।
ಉಷ್ಟ್ರಂ ದ್ವಿಜಾತಯೇ ದದ್ಯಾದ್ವ್ರತಾಂತೇ ಚ ಪರಂತಪ || ೨ ||

ಕೃತ್ವಾ ವ್ರತಂ ವತ್ಸರಮೇತದಿಷ್ಟಂ
ಭಯಂ ನ ಚಾಪ್ನೋತಿ ಸ ರಾಕ್ಷಸೇಭ್ಯಃ ।

---

### ನೂರ ಎಂಭತ್ತಾರನೆಯ ಅಧ್ಯಾಯ.

೧-೩. ಮಾರ್ಕಂಡೇಯರು ಹೇಳುತ್ತಾರೆ. ಪುಷ್ಯಮಾಸದ ಕೃಷ್ಣಪಕ್ಷ ಚತುರ್ದಶಿಯಲ್ಲಿ ಪ್ರಾರಂಭಿಸಿ ಸಂವತ್ಸರಪರ್ಯಂತ ವಿರೂಪಾಕ್ಷನನ್ನು ಪೂಜಿಸಬೇಕು. ಗಂಧಪುಷ್ಪನಮಸ್ಕಾರ ಧೂಪದೀಪನೈವೇದ್ಯಾಗಳಿಂದ ಪೂಜಿಸಿ ವ್ರತದಕೊನೆಯಲ್ಲಿ ಒಂಟೆಯನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ಸಂತ್ಸರಪೂರ್ತಿ ಈ ವ್ರತ

ಕಾಮಾನವಾಪ್ನೋತಿ ಭವತ್ಯರೋಗೋ
ಭಯಂ ಚ ರಾಜನ್ನ ಚ ವೇತ್ತಿ ಕಿಂಚಿತ್ ॥ ೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ವಿರೂಪಾಕ್ಷವ್ರತವರ್ಣನೋ ನಾಮ
ಷಡಶೀತ್ಯುತ್ತರಶತತಮೋಽಧ್ಯಾಯಃ

---

ವನ್ನಾಚರಿಸಿದವನು ರಾಕ್ಷಸರಿಂದ ಯಾವಾಗಲೂ ಭಯಹೊಂದುವುದೇ ಇಲ್ಲ. ಎಲ್ಲಾ ಇಷ್ಟಗಳನ್ನೂ ಹೊಂದಿ ಅರೋಗನಾಗಿಯೂ ಬದುಕುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ವಿರೂಪಾಕ್ಷ ವ್ರತವರ್ಣನವೆಂಬ
ನೂರ ಎಂಭತ್ತಾರನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಸಪ್ತಾಶೀತ್ಯುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಯತ್ರ ಕ್ವಚನ ನದ್ಯಾಂ ಚ ಯತ್ರ ಕೃಷ್ಣ ಚತುರ್ದಶೀ ।**
**ಅನರ್ಕಾಭ್ಯುದಿತೇ ಕಾಲೇ ದೇವಂ ಸಂಪೂಜಯೇದ್ಯಮಂ || ೧ ||**

**ಧೂಮ್ರೋರ್ಣಂ ಚಿತ್ರಗುಪ್ತಂ ಚ ಕಾಲಪಾಶೌ ಚ ಯಾದವ ।**
**ಮೃತ್ಯುಂ ಸ್ವರ್ಗಂ ಚ ಧರ್ಮಜ್ಞಂ ಗಂಧಮಾಲ್ಯಾನ್ನಸಂಪದಾ || ೨ ||**

**ಯಮೋ ದಧಾರ ಇತ್ಯೃಚಾ ತಿಲಾಂಶ್ಚ ಜುಹುಯಾತ್ತತಃ ।**
**ನಮೋ ಯಮಾಯೇತಿ ತಥಾ ಸ್ತ್ರೀಶೂದ್ರಸ್ಯ ವಿಧೀಯತೇ || ೩ ||**

---

### ನೂರ ಎಂಭತ್ತೇಳನೆಯ ಅಧ್ಯಾಯ

೧-೫. ಮಾರ್ಕಂಡೇಯರು ಹೇಳುತ್ತಾರೆ. ಯಾವುದಾದರೊಂದು ನದಿಯಲ್ಲಿ ಯಾವುದಾದರೊಂದು ಕೃಷ್ಣಚತುರ್ದಶಿಯಲ್ಲಿ ಸೂರ್ಯೋದಯಕ್ಕೆ ಮುಂಚಿತವಾದ ಕಾಲದಲ್ಲಿ ಯಮದೇವನನ್ನು ಪೂಜಿಸಬೇಕು ಧೂಮ್ರೋರ್ಣ, ಚಿತ್ರಗುಪ್ತ, ಕಾಲಪಾಶರು, ಮೃತ್ಯು, ಸ್ವರ್ಗ, ಧರ್ಮಜ್ಞನಾದ ಯಮ ಇವರನ್ನು ಗಂಧಪುಷ್ಪಾದಿಗಳಿಂದ ಪೂಜಿಸಿ ಯಮೋದಧಾರ ಎಂಬ ಋಕ್ಕಿನಿಂದ ತಿಲಹೋಮ ಮಾಡಬೇಕು. ಸ್ತ್ರೀಶೂದ್ರಾದಿಗಳು ನಮೋ ಯಮಾಯ ಎಂಬ ನಾಮಮಂತ್ರದಿಂದ ಹೋಮ

ಕೃಸರಂ ಭೋಜನಂ ವಿಪ್ರಾನ್ಯಥಾಶಕ್ತಿ ನರೋತ್ತಮ ।
ದದ್ಯಾದ್ವ್ರತಾಂತೇ ವಿಪ್ರಾಯ ತಥೈವ ಚ ಪಯಸ್ವಿನೀಂ ॥ ೪ ॥

ಕೃತ್ವಾ ವ್ರತಂ ವತ್ಸರಮೇತದಿಷ್ಟಂ
ನ ಯಾತಿ ರಾಜನ್ನರಕಂ ಮನುಷ್ಯಃ ।
ಪ್ರಾಣಕ್ಷಯಂ ಪ್ರಾಪ್ಯ ಸ ಯಾತಿ ನಾಕಂ
ಮಾನುಷ್ಯಮಾಸಾದ್ಯ ಚ ಧರ್ಮವಾನ್ಸ್ಯಾತ್ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಯಮವ್ರತವರ್ಣನೋ ನಾಮ ಸಪ್ತಾಶೀತ್ಯುತ್ತರಶತತಮೋಽಧ್ಯಾಯಃ

---

ಮಾಡಬೇಕು. ಬ್ರಾಹ್ಮಣರಿಗೆ ಚಿಗಳಿಯಿಂದ ಕೂಡಿದ ಭೋಜನವನ್ನು ಯಥಾಶಕ್ತಿ ಮಾಡಿಸಬೇಕು. ವ್ರತದ ಕೊನೆಯಲ್ಲಿ ಬ್ರಾಹ್ಮಣನಿಗೆ ಕರೆಯುವ ಹಸುವನ್ನು ದಾನಮಾಡಬೇಕು. ಈ ವ್ರತವನ್ನು ವರ್ಷ ಪೂರ್ತಿ ಆಚರಿಸಿದವನು ನರಕಕ್ಕೆ ಹೋಗುವುದೇ ಇಲ್ಲ. ದೇಹತ್ಯಾಗವಾದೊಡನೆಯೇ ಸ್ವರ್ಗವನ್ನು ಸೇರುತ್ತಾನೆ. ಮನುಷ್ಯನಾಗಿ ಹುಟ್ಟಿದಾಗಲೂ ಧಾರ್ಮಿಕನಾಗಿಯೇ ಆಗುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಯಮವ್ರತವರ್ಣನವೆಂಬ ನೂರ ಎಂಭತ್ತೇಳನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಅಷ್ಟಾಶೀತ್ಯುತ್ತರ ಶತತಮೋಽಧ್ಯಾಯಃ ||

[1]ಶುಕ್ಲಪಕ್ಷಾದಥಾರಭ್ಯ ಫಾಲ್ಗುನಸ್ಯ ನರಾಧಿಪ ।
ಪೂಜಯೇತ್ತು ಚತುರ್ದಶ್ಯಾಂ ಸೋಪವಾಸೋಮಹೇಶ್ವರಂ || ೧ ||

ಗಂಧಮಾಲ್ಯನಮಸ್ಕಾರಧೂಪದೀಪಾನ್ನಸಂಪದಾ ।
ವ್ರತಾನ್ತೇ ಗಾಂ ತಥಾ ದದ್ಯಾದಗ್ನಿಷ್ಟೋಮಫಲಂ ಲಭೇತ್ || ೨ ||

ಏತದ್ರೇವವ್ರತಂ ಕೃತ್ವಾ ಶುಕ್ಲಪಕ್ಷೇತುವತ್ಸರಂ ।
ಪುಂಡರೀಕಮವಾಪ್ನೋತಿ ಕುಲಮುದ್ಧರತಿ ಸತ್ವಂ || ೩ ||

---

### ನೂರ ಎಂಭತ್ತೆಂಟನೆಯ ಅಧ್ಯಾಯ.

೧-೫. ಫಾಲ್ಗುಣ ಮಾಸದ ಕೃಷ್ಣಪಕ್ಷದಲ್ಲಿ ಪ್ರಾರಂಭಿಸಿ ಉಪವಾಸದಿಂದಿದ್ದು ಚತುರ್ದಶಿತಿಥಿಯಲ್ಲಿ ಮಹೇಶ್ವರನನ್ನು ಗಂಧಪುಷ್ಪನಮಸ್ಕಾರ ಧೂಪದೀಪಾದಿಗಳಿಂದ ಪೂಜಿಸಬೇಕು. ವ್ರತದ ಕೊನೆಯಲ್ಲಿ ಗೋದಾನವನ್ನು ಮಾಡಿದಲ್ಲಿ ಅಗ್ನಿಷ್ಟೋಮದ ಫಲವನ್ನು ಹೊಂದುತ್ತಾನೆ. ಇದೇ ವ್ರತವನ್ನೇ ಶುಕ್ಲಪಕ್ಷದಲ್ಲಿ ಪ್ರಾರಂಭಿಸಿ ವರ್ಷ ಪರ್ಯಂತ ಆಚರಿಸಿದಲ್ಲಿ ಪುಂಡರೀಕ ಯಜ್ಞದ ಫಲವನ್ನು ಹೊಂದುತ್ತಾನೆ. ತನ್ನ ಕುಲವನ್ನೂ ಉದ್ಧರಿಸುತ್ತಾನೆ. ಎರಡು ಚತುರ್ದಶಿಗಳಲ್ಲಿಯೂ ಮಾಡುತ್ತಾ

---

1 ಇಲ್ಲಿ ಕೃಷ್ಣಪಕ್ಷಾದಥಾರಭ್ಯ ಎಂದಿರಬೇಕೆಂದು ತೋರುತ್ತದೆ.

ಚತುರ್ದಶೀದ್ವಯಂಚೈತತ್ಕೃತ್ವಾ ಸಂವತ್ಸರಂ ನರಃ ।
ಮಾಸಿ ಮಾಸಿ ತಥಾ ಭಕ್ತ್ಯಾ ಸರ್ವಾನ್ಕಾಮಾನವಾಪ್ನುಯಾತ್ ॥ ೪ ॥

ಆಸಾದ್ಯ ಕಾಮಾಂಶ್ಚ ಮಹೇಶ್ವರಸ್ಯ
ತತ್ರೋಷ್ಯ ಕಾಲಂ ಸುಚಿರಂ ಚ ರಾಜನ್ ।
ಸಾಯುಜ್ಯಮಾಯಾತಿ ಮಹೇಶ್ವರಸ್ಯ
ಸರ್ವೇಶ್ವರಸ್ಯಾಪ್ರತಿಮಸ್ಯ ತಸ್ಯ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಮಹೇಶ್ವರವ್ರತವರ್ಣನೋನಾಮ
ಅಷ್ಟಾಶೀತ್ಯುತ್ತರ ಶತತಮೋಽಧ್ಯಾಯಃ

---

ಸಂವತ್ಸರ ಪರ್ಯಂತರ ನಡೆಸಿದಲ್ಲಿ ಪ್ರತಿಮಾಸದಲ್ಲಿಯೂ ಭಕ್ತಿಯಿಂದ ನಡೆಸಿದಲ್ಲಿಯೂ ಎಲ್ಲಾ ಮನೋರಥಗಳನ್ನೂ ಹೊಂದುತ್ತಾನೆ. ಮಹೇಶ್ವರನ ಲೋಕವನ್ನೂ ಹೊಂದಿ ಅಲ್ಲಿ ಬಹುಕಾಲ ಸುಖದಿಂದಿದ್ದು ಪೂಜ್ಯನಾದ ಆ ಮಹೇಶ್ವರನ ಸಾಯುಜ್ಯವನ್ನೇ ಹೊಂದುತ್ತಾರೆ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದದಲ್ಲಿ ಮಹೇಶ್ವರ ವ್ರತವರ್ಣನವೆಂಬ
ನೂರ ಎಂಭತ್ತೆಂಟನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕೋನನವತ್ಯುತ್ತರ ಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಪ್ರಭಾಸ್ವರಾ ಬರ್ಹಿಷದ ಅಗ್ನಿಷ್ವಾತ್ತಾಸ್ತಥೈವ ಚ |**
**ಕ್ರವ್ಯಾದಶ್ಚೋಪಹೂತಾಶ್ಚ ಆಜ್ಯಪಾಶ್ಚ ಸುಕಾಲಿನಃ || ೧ ||**

**ಪೂಜ್ಯಾಃ ಪಿತೃಗಣಾ ರಾಜನ್ನುಪವಾಸೇನ ನಿತ್ಯಶಃ |**
**ಚೈತ್ರಶುಕ್ಲಾದಥಾರಭ್ಯ ಪಂಚದಶ್ಯಾಂ ನರಾಧಿಪ || ೨ ||**

**ಶ್ರಾದ್ಧಂ ತದಹ್ನಿ ಕುರ್ವೀತ ಯಾವತ್ಸಂವತ್ಸರಂ ಭವೇತ್ |**
**ಗಂಧಮಾಲ್ಯನಮಸ್ಕಾರಧೂಪದೀಪಾನ್ನಸಂಪದಾ || ೩ ||**

**ಸಂವತ್ಸರಾಂತೇ ದದ್ಯಾಚ್ಚ ತಥಾ ಧೇನುಂ ಪಯಸ್ವಿನೀಂ |**
**ಬ್ರಾಹ್ಮಣಾಯ ಮಹಾಭಾಗ ಪಿತೃಭಕ್ತಾಯ ಭಕ್ತಿತಃ || ೪ ||**

---

### ನೂರ ಎಂಭತ್ತೊಂಭತ್ತನೆಯ ಅಧ್ಯಾಯ.

೧-೪ ಮಾರ್ಕಂಡೇಯರು ಹೇಳುತ್ತಾರೆ:—ಪ್ರಭಾಸ್ವರಾ, ಬರ್ಹಿಷದಃ, ಅಗ್ನಿಷ್ವಾತ್ತಾ, ಕ್ರವ್ಯಾದಃ, ಉಪಹೂತ, ಆಜ್ಯಪಾ, ಸುಕಾಲಿನಃ ಇವರು ಪೂಜ್ಯರಾದ ಪಿತೃಗಣಕ್ಕೆ ಸೇರಿದವರು. ಇವರನ್ನು ಚೈತ್ರ ಶುಕ್ಲಪಕ್ಷದಲ್ಲಿ ಪ್ರಾರಂಭಿಸಿ ಪೌರ್ಣಮಿಯಲ್ಲಿ ಉಪವಾಸದಿಂದಿದ್ದು ಸಂವತ್ಸರಂಪರ್ಯಂತ ನಿತ್ಯವೂ ಆ ದಿನದಲ್ಲಿ ಶ್ರಾದ್ಧ ತರ್ಪಣವನ್ನು ಮಾಡಬೇಕು. ಗಂಧಪುಷ್ಪನಮಸ್ಕಾರ ಧೂಪದೀಪ ನೈವೇದ್ಯಾದಿ

ಕೃತ್ವಾ ವ್ರತಂ ವತ್ಸರಮೇತದಿಷ್ಟಂ
ಸ್ಸಾಪ್ನೋತಿ ಲೋಕಂ ಚ ತಥಾ ಸ ತೇಷಾಂ ।
ತತಶ್ಚ್ಯುತಃ ರಾಜನ್ಸುಚಿರಂ ಸುಕಾಲಂ
ಸ್ಸಾಪ್ನೋತಿ ಮೋಕ್ಷಂ ಪುರುಷಪ್ರಧಾನ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪಿತೃವ್ರತವರ್ಣನೋ ನಾಮ
ಏಕೋನನವತ್ಯುತ್ತರಶತತಮೋಽಧ್ಯಾಯಃ

---

ಗಳಿಂದ ಪೂಜಿಸಿ ಸಂವತ್ಸರದ ಕೊನೆಯಲ್ಲಿ ಕರೆಯುವ ಹಸುವನ್ನು ಪಿತೃಭಕ್ತನಾದ ಬ್ರಾಹ್ಮಣೋತ್ತಮನಿಗೆ ಭಕ್ತಿಯಿಂದ ದಾನಮಾಡಬೇಕು. ಈ ರೀತಿ ಈ ವ್ರತವನ್ನು ವರ್ಷಪರ್ಯಂತವಾಗಿ ಆಚರಿಸಿದವನು ಪಿತೃಲೋಕವನ್ನು ಹೊಂದುತ್ತಾನೆ. ಅಲ್ಲಿ ಬಹುದಿನ ಸುಖದಿಂದಿದ್ದು ಮೋಕ್ಷವನ್ನೂ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದದಲ್ಲಿ ಪಿತೃವ್ರತವರ್ಣನವೆಂಬ ನೂರ ಎಂಭತ್ತೊಂಭತ್ತನೆಯ
ಅಧ್ಯಾಯವು ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ನವತ್ಯುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

ಕೃಷ್ಣಪಕ್ಷೇ ಪಂಚದಶ್ಯಾಂ ಚೈತ್ರಾದಾರಭ್ಯ ಯಾದವ ।
ವಹ್ನಿಸಂಪೂಜನಂ ಕೃತ್ವಾ ಗಂಧಮಾಲ್ಯಾನ್ನಸಪದಾಂ || ೧ ||

ತಿಲೈರ್ಹೋಮಂ ತತಃಕುರ್ಯಾನ್ನಾಮ್ನಾ ವಹ್ನೇರ್ನರಾಧಿಪ ।
ಸಂವತ್ಸರಾಂತೇ ದದ್ಯಾಚ್ಚ ಸುವರ್ಣಂ ಬ್ರಾಹ್ಮಣಾಯ ಚ || ೨ ||

ಕೃತ್ವಾ ವ್ರತಂ ವತ್ಸರಮೇತದಿಷ್ಟಂ
ಪ್ರಾಪ್ನೋತಿ ವಿತ್ತಂ ಸತತಂ ಯಶಶ್ಚ ।

---

### ನೂರ ತೊಂಭತ್ತನೆಯ ಅಧ್ಯಾಯ

೧-೩. ಮಾರ್ಕಂಡೇಯರು ಹೇಳುತ್ತಾರೆ :—ಚೈತ್ರಮಾಸದಲ್ಲಿ ಪ್ರಾರಂಭಿಸಿ ಕೃಷ್ಣಪಕ್ಷದ ಅಮಾವಾಸ್ಯಾ ದಿನದಲ್ಲಿ ಗಂಧಪುಷ್ಪ ಧೂಪದೀಪಾದಿಗಳಿಂದ ಅಗ್ನಿಯನ್ನು ಪೂಜಿಸಬೇಕು. ತಿಲಹೋಮಮಾಡಬೇಕು. ಸಂವತ್ಸರದ ಕೊನೆಯಲ್ಲಿ ಬ್ರಾಹ್ಮಣನಿಗೆ ಸುವರ್ಣವನ್ನು ದಾನಮಾಡಬೇಕು. ಈ ರೀತಿ ವರ್ಷಪೂರ್ತಿಯಾಗಿ

ಧರ್ಮೇ ಮತಿಂ ರೂಪಮನುತ್ತಮಂ ಚ
ಕಾಮಾನ್ಯಥೇಷ್ಟಾನ್ ಪುರುಷಪ್ರಧಾನ ॥ ೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ವಹ್ನಿವ್ರತವರ್ಣನೋ ನಾಮ
ನವತ್ಯುತ್ತರಶತತಮೋಽಧ್ಯಾಯಃ

---

ಈ ವ್ರತವನ್ನಾಚರಿಸಿದವನು ದ್ರವ್ಯವನ್ನೂ ಹೆಚ್ಚಾದ ಯಶಸ್ಸನ್ನೂ ಹೊಂದುತ್ತಾನೆ. ಧಾರ್ಮಿಕಬುದ್ಧಿಯೂ, ಉತ್ತಮವಾದ ರೂಪವೂ ಮನೋರಥಸಿದ್ಧಿಗಳೂ ಸಹ ಉಂಟಾಗುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ವಹ್ನಿವ್ರತವರ್ಣನವೆಂಬ ನೂರ
ತೊಂಭತ್ತನೆಯ ಅಧ್ಯಾಯ ಮುಗಿದುದು.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕನವತ್ಯುತ್ತರಶತತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಅಮಾವಾಸ್ಯಾಂ ತು ವೇಲಾಯಾಂ ಸೋಪವಾಸೋ ನರೋತ್ತಮ ।**
**ಪದ್ಮದ್ವಯಂ ಪೂಜಯೇತ ಚಂದ್ರಾರ್ಕಾವೇಕರಾಶಿಗೌ ॥ ೧ ॥**

**ಆದಿತ್ಯಮಷ್ಟಕಮಲೇ ಚಂದ್ರಂ ಷೋಡಶಕೇ ತಥಾ ।**
**ಆದಿತ್ಯಂ ಸರ್ವರಕ್ತೇನ ಚಂದ್ರಂ ಶುಕ್ಲೇನ ಯಾದವ ॥ ೨ ॥**

**ಮಾಲ್ಯಾದಿನಾ ಮಹಾಭಾಗ ಹೋಮಯೇತ್ತಿಲತಂಡುಲೈಃ ।**
**ಘೃತಕ್ಷೀರಯುತೈ ರಾಜನ್ ತಯೋರ್ನಾಮ್ನಾ ಯಥಾವಿಧಿ ॥ ೩ ॥**

---

### ನೂರ ತೊಂಭತ್ತೊಂದನೆಯ ಅಧ್ಯಾಯ.

೧–೫. ಮಾರ್ಕಂಡೇಯರು ಹೇಳುತ್ತಾರೆ:—ಅಮಾವಾಸ್ಯಾ ದಿನದಲ್ಲಿ ಸೂರ್ಯಚಂದ್ರರು ಏಕರಾಶಿಯಲ್ಲಿರುವಾಗ ಉಪವಾಸ ನಿಯಮದಿಂದಿದ್ದು ಎರಡು ಪದ್ಮಗಳನ್ನು ಪೂಜಿಸಬೇಕು. ಎಂಟು ದಳಗಳುಳ್ಳ ಕಮಲದಲ್ಲಿ ಸೂರ್ಯನನ್ನೂ, ಹದಿನಾರು ದಳಗಳುಳ್ಳ ಕಮಲದಲ್ಲಿ ಚಂದ್ರನನ್ನೂ ಪೂಜಿಸಬೇಕು. ಸೂರ್ಯನ ಕಮಲವು ಸರ್ವತಃ ಕೆಂಪಾಗಿಯೂ ಚಂದ್ರನ ಕಮಲವು ಬಿಳುಪಾಗಿಯೂ ಇರಬೇಕು. ಗಂಧಪುಷ್ಪಾದಿಗಳಿಂದ ಪೂಜಿಸಿ ಆಜ್ಯ ಮತ್ತು ಕ್ಷೀರಗಳಿಂದ ಕೂಡಿದ ಎಳ್ಳು ಅಕ್ಕಿ

ವ್ರತಾಂತೇ ಬ್ರಾಹ್ಮಣೇಂದ್ರಾಯ ಕನಕಂ ಪ್ರತಿಪಾದಯೇತ್ ।
ರಜತಂ ಚ ಮಹಾಭಾಗ ಯ ಇಚ್ಛೇದ್ಭೂತಿಮಾತ್ಮನಃ ॥ ೪ ॥

ಕೃತ್ವಾ ವ್ರತಂ ವತ್ಸರಮೇಕಮಿಷ್ಟಂ
ದತ್ವಾ ಚ ದೀಪಾನ್ವಿಧಿವತ್ಪ್ರಭೂತಾನ್ ।
ಚಕ್ಷುಃ ಪರಂ ಪ್ರಾಪ್ಯ ವಿನಷ್ಟಶತ್ರುಃ
ಧನಾನ್ವಿತಃ ಸ್ಯಾತ್ತ್ರಿದಿವಾದಿಹಸ್ಥಃ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಚಂದ್ರವ್ರತವರ್ಣನೋ ನಾಮೈಕನವತ್ಯುತ್ತರ
ಶತತಮೋಽಧ್ಯಾಯಃ

---

ಇವನ್ನು ಹೋಮಮಾಡಬೇಕು ಯಥಾವಿಧಿಯಾಗಿ ವ್ರತವನ್ನಾಚರಿಸಿದ ಮೇಲೆ ಬ್ರಾಹ್ಮಣನಿಗೆ ಸುವರ್ಣವನ್ನೂ, ಬೆಳ್ಳಿಯನ್ನೂ ಸಹ ದಾನಮಾಡಬೇಕು. ಈ ವ್ರತವನ್ನು ವರ್ಷಪರ್ಯಂತ ಯಥಾವಿಧಿಯಾಗಿ ನೆರವೇರಿಸಿ ಹೆಚ್ಚಾದ ದೀಪಗಳನ್ನೂ ದಾನಮಾಡಿದವನು ಹೆಚ್ಚಾದ ದೃಷ್ಟಿಶಕ್ತಿಯನ್ನು ಹೊಂದಿ ಧನಾನ್ವಿತನಾಗಿ ಭೂಮಿಯಲ್ಲಿದ್ದರೂ ಸ್ವರ್ಗಿಗಳಂತೆ ತೇಜಸ್ವಿಯಾಗುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಚಂದ್ರವ್ರತವರ್ಣನವೆಂಬ
ನೂರ ತೊಂಭತ್ತೊಂದನೆಯ ಅಧ್ಯಾಯ
ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ದ್ವಿನವತ್ಯುತ್ತರಶತತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಕಾರ್ತಿಕಾತ್ತು ಸಮಾರಭ್ಯ ಸಂಪೂರ್ಣಶಶಲಕ್ಷಣಂ ।**
**ಪೂಜಯೇದುದರೇ ರಾಜನ್ ಸದಾ ನಕ್ತಾಶನೋ ಭವೇತ್ || ೧ ||**

**ಲಾವಣಂ ಮಂಡಲಂ ಕೃತ್ವಾ ಚಂದನೇನಾನುಲೇಪಿತೇ ।**
**ದಶನಕ್ಷತ್ರಸಹಿತಂ ತತ್ರ ಸೋಮಂ ತು ಪೂಜಯೇತ್ || ೨ ||**

**ಕೃತ್ತಿಕಾರೋಹಿಣೀಯುಕ್ತಂ ಕಾರ್ತಿಕೇ ಮಾಸಿ ಪೂಜಯೇತ್ ।**
**ಸೌಮ್ಯಾದ್ರಾಸಹಿತಂ ರಾಜನ್ಮಾಸಿ ಸೌಮ್ಯೇ ತಥೈವ ಚ || ೩ ||**

---

### ನೂರ ತೊಂಭತ್ತೆರಡನೆಯ ಅಧ್ಯಾಯ.

೧-೪. ಮಾರ್ಕಂಡೇಯರು ಹೇಳುತ್ತಾರೆ:— ಕಾರ್ತೀಕಮಾಸದ ಪೂರ್ಣಿಮೆಯಲ್ಲಿ ಯಾವಾಗಲೂ ರಾತ್ರಿಭೋಜಿಯಾಗಿದ್ದು ಮಧ್ಯದಲ್ಲಿ ಮೊಲದ ಚಿಹ್ನೆಯಿಂದ ಕೂಡಿರುವ ಪೂರ್ಣಚಂದ್ರನನ್ನು ಪೂಜಿಸಬೇಕು. ಉಪ್ಪಿನಿಂದ ಮಂಡಲವನ್ನು ರಚಿಸಿ ಚಂದನದಿಂದ ಲೇಪಿಸಿ ಅದರಲ್ಲಿ ಹತ್ತು ನಕ್ಷತ್ರದಿಂದ ಕೂಡಿದ ಚಂದ್ರನನ್ನು ಪೂಜಿಸಬೇಕು. ಕಾರ್ತೀಕಮಾಸದಲ್ಲಿ ಕೃತ್ತಿಕಾರೋಹಿಣೀಸಹಿತನಾದ ಚಂದ್ರನನ್ನೂ ಮಾರ್ಗಶಿರ ಮಾಸದಲ್ಲಿ ಮೃಗಶಿರ ಆರ್ದ್ರಾ ಸಹಿತನಾದ ಚಂದ್ರನನ್ನೂ ಪುಷ್ಯ

ಆದಿತ್ಯೈಪುಷ್ಯಸಹಿತಂ ಮಾಸಿ ಷೌಷೇ ಚ ಯಾದವ ।
ಮಘಾಸರ್ಪಯುತಂ ಮಾಘೇ ಫಾಲ್ಗುನೇ ಶೃಣು ಪಾರ್ಥಿವ ॥ ೪ ॥

ಅರ್ಯಮ್ನಭಾಗ್ಯಸಾವಿತ್ರ್ಯೈಃ ಸಹಿತಂ ಪೂಜಯೇದ್ವಿಭುಂ ।
ಚಿತ್ರಾ ಸ್ವಾತೀಯುತಂ ಚೈತ್ರೇ ವೈಶಾಖೇ ಶೃಣು ಪಾರ್ಥಿವ ॥ ೫ ॥

ವಿಶಾಖಯಾ ಚ ಮೈತ್ರೇಣ ಯುತಂ ಸಂಪೂಜಯೇತ್ತಥಾ ।
ಜ್ಯೇಷ್ಠಾ ಮೂಲಯುತಂ ಜ್ಯೇಷ್ಠೇ ಆಷಾಢಾಢ್ಯಮನಂತರಂ ॥ ೬ ॥

ಶ್ರಾವಣೇ ಶ್ರವಣೋಪೇತಂ ಸಹಿತಂ ಚ ಶ್ರವಿಷ್ಠಯಾ ।
ತಥಾ ಭಾದ್ರಪದೇ ಪೌಷ್ಣಾಮಾಜಾಹಿರ್ಬುಧ್ನ್ಯಸಂಯುತಂ ॥ ೭ ॥

ಆಶ್ವಿನೀಭರಣೀಯುಕ್ತಂ ತಥಾಚಾಶ್ವಯುಜೇ ವಿಭುಂ ।
ಗಂಧಮಾಲ್ಯನಮಸ್ಕಾರಧೂಪದೀಪಾನ್ನಸಂಪದಾ ॥ ೮ ॥

ಗುಡೇನ ಪರಮಾನ್ನೇನ ಲವಣೇನ ಘೃತೇನ ಚ ।
ಇಕ್ಷುಣೇಕ್ಷುವಿಕಾರೈಶ್ಚ ಪಯಸಾ ಪಾಯಸೇನ ಚ ॥ ೯ ॥

---

ಮಾಸದಲ್ಲಿ ಪುನರ್ವಸು ಪುಷ್ಯಗಳಿಂದ ಕೂಡಿದ ಚಂದ್ರನನ್ನೂ ಮಾಘಮಾಸದಲ್ಲಿ ಮಖಾ ಆಶ್ಲೇಷಗಳಿಂದ ಕೂಡಿದ ಚಂದ್ರನನ್ನೂ ಪೂಜಿಸಬೇಕು. ಫಾಲ್ಗುನಮಾಸದಲ್ಲಿ ಉತ್ತರಾ, ಪೂರ್ವಫಲ್ಗುನೀ ಹಸ್ತ ಈ ನಕ್ಷತ್ರಗಳೊಡನೇ ಪೂಜಿಸಬೇಕು

೫-೮. ಚೈತ್ರಮಾಸದಲ್ಲಿ ಚಿತ್ರಾಸ್ವಾತಿಗಳಿಂದಲೂ, ವೈಶಾಖಮಾಸದಲ್ಲಿ ವಿಶಾಖಾ ಅನೂರಾಧೆಗಳಿಂದಲೂ, ಜ್ಯೇಷ್ಠಮಾಸದಲ್ಲಿ ಜ್ಯೇಷ್ಠಮೂಲಗಳಿಂದಲೂ, ಆಷಾಢದಲ್ಲಿ ಆಷಾಢದ್ವಯದಿಂದಲೂ, ಶ್ರಾವಣಮಾಸದಲ್ಲಿ ಶ್ರವಣಧನಿಷ್ಠೆಗಳಿಂದಲೂ, ಭಾದ್ರಪದಮಾಸದಲ್ಲಿ ರೇವತಿ, ಪೂ-ಭಾದ್ರಾ, ಉ-ಭಾದ್ರೆಗಳಿಂದಲೂ, ಆಶ್ವಯುಜ ಮಾಸದಲ್ಲಿ ಆಶ್ವಿನೀ ಭರಣಿಗಳಿಂದಲೂ ಕೂಡಿದ ಚಂದ್ರನನ್ನು ಗಂಧಪುಷ್ಪಧೂಪದೀಪ ನಮಸ್ಕಾರ ನೈವೇದ್ಯಾದಿಗಳಿಂದ ಯಥಾವಿಧಿಯಾಗಿ ಪೂಜಿಸಬೇಕು.

೯-೧೨. ಬೆಲ್ಲ, ಪರಮಾನ್ನ, ಲವಣ, ಘೃತ, ಕಬ್ಬು, ಕಬ್ಬಿನ ರಸದಿಂದ ಆದ ಸಿಹಿವಸ್ತುಗಳು, ಹಾಲು, ಹಾಲಿನ ಪಾಯಸ ಇತ್ಯಾದಿ ನೈವೇದ್ಯಗಳಿಂದ ಪೂಜಿಸ

ಪೂಜ್ಯಾಶ್ಚಾವಿಧವಾ ನಾರ್ಯಸ್ತಥಾ ತಲ್ಲಕ್ಷಣೈಃ ಶುಭೈಃ ।
ತತೋಽನನ್ತರಮಶ್ನೀಯಾದ್ಧವಿಷ್ಯಂ ಪ್ರಯತೋ ನರಃ ॥ ೧೦ ॥

ಬ್ರಾಹ್ಮಣಾನಾಂ ವ್ರತಾಂತೇ ತು ಮಹಾರಜತರಂಜಿತಂ ।
ಶಕ್ತ್ಯಾ ಚ ವಸನಂ ದದ್ಯಾನ್ನಾರೀ ವಾ ಯದಿ ವಾ ನರಃ ॥ ೧೧ ॥

ರೂಪಸೌಭಾಗ್ಯಲಾವಣ್ಯ ಧನಯುಕ್ತೋ ಭವೇನ್ನರಃ ।
ವ್ರತೇನಾನೇನ ಚೀರ್ಣೇನ ಸ್ವರ್ಗಲೋಕಂ ಚ ಗಚ್ಛತಿ ॥ ೧೨ ॥

ಸೋಪವಾಸಸ್ತು ಯಃ ಕುರ್ಯಾದ್ವ್ರತಮೇತದನುತ್ತಮಂ ।
ಅಶ್ವಮೇಧ ಸಹಸ್ರಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೧೩ ॥

ಸೌಭಾಗ್ಯಾದಿ ಚ ಯತ್ಪ್ರೋಕ್ತಂ ತದಾಪ್ನೋತಿ ವಿಶೇಷವತ್ ।
ಮನಸಾಕಾಂಕ್ಷಿತಾನ್ಕಾಮಾನ್ಸರ್ವಾನಾಪ್ನೋತ್ಯ ಸಂಶಯಂ ॥ ೧೪ ॥

---

ಬೇಕು. ಸುಮಂಗಲಿಯರನ್ನೂ, ಸುಮಂಗಲಿಯರಾದ ಸ್ತ್ರೀಯರು ಪೂಜಿಸಬೇಕು. ಅನಂತರ ಶುಚಿಯಾಗಿದ್ದು ಹವಿಷ್ಯವನ್ನು ಭುಂಜಿಸಬೇಕು. ವ್ರತದ ಕೊನೆಯಲ್ಲಿ ಬ್ರಾಹ್ಮಣರಿಗೆ ಚಿನ್ನದ ಸರಿಗೆಯಿಂದ ಕೂಡಿದ ವಸ್ತ್ರಗಳನ್ನು ಯಥಾಶಕ್ತಿ ದಾನ ಮಾಡಬೇಕು. ಸ್ತ್ರೀಯಾಗಲೀ ಪುರುಷನಾಗಲಿ ಈ ವ್ರತವನ್ನು ಮಾಡಬಹುದು. ಇದನ್ನು ಮಾಡಿದವನು, ರೂಪ, ಸೌಭಾಗ್ಯ, ಸೌಂದರ್ಯ, ಧನಾದಿಗಳಿಂದ ಅಭ್ಯುದಯ ಹೊಂದುತ್ತಾನೆ.

೧೩–೧೪. ಉತ್ತಮೋತ್ತಮವಾದ ಈ ವ್ರತವನ್ನು ಉಪವಾಸದಿಂದಿದ್ದು ಆಚರಿಸಿದವನು ಅಶ್ವಮೇಧ ಸಹಸ್ರದ ಫಲವನ್ನು ಹೊಂದುತ್ತಾನೆ ಹಿಂದೆ ಹೇಳಿದ ಸೌಭಾಗ್ಯಾದಿ ಫಲಗಳೂ ವಿಶೇಷರೂಪದಲ್ಲಿ ಉಂಟಾಗುತ್ತವೆ. ಚಂದ್ರನಂತೆ ಜನಾನು

ಜನಾಭಿರಾಮಶ್ಚ ಶಶಾಂಕವತ್ಸ್ಯಾದ್ಧನಾದಿ
ಲಾಭಶ್ಚ ತಥೈವ ಲಕ್ಷ್ಮ್ಯಾ ।
ಶಕ್ರೇಣ ತುಲ್ಯಶ್ಚ ತಥೈವ ಶಕ್ತ್ಯಾ
ಮಾನುಷ್ಯಮಾಸಾದ್ಯ ಭವೇಚ್ಚ ರಾಜನ್ ॥ ೧೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಮಾಸರ್ಕ್ಷಪೌರ್ಣಮಾಸಿವ್ರತವರ್ಣನೋ ನಾಮ
ದ್ವಿನವತ್ಯುತ್ತರಶತತಮೋಽಧ್ಯಾಯಃ

---

ರಾಗವಿಷಯನೂ, ಲಕ್ಷ್ಮೀ ಪ್ರಾಪ್ತಿಯಿಂದ ಧನಿಕನೂ, ಇಂದ್ರನಂತೆ ಶಕ್ತನೂ ಮನುಷ್ಯ ಜನ್ಮಪ್ರಾಪ್ತಿಯಿಂದ ಆಗುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಮಾಸನಕ್ಷತ್ರ ಪೌರ್ಣಮಾಸೀ ವ್ರತವರ್ಣನವೆಂಬ
ನೂರ ತೊಂಭತ್ತೆರಡನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ತ್ರಿನವತ್ಯುತ್ತರಶತತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಕಾರ್ತಿಕೇ ಪೌರ್ಣಮಾಸ್ಯಾಂ ತು ಪೂರ್ಣಂ ಶಿಶಿರದೀಧಿತಿಂ |**
**ಪದ್ಮೇ ಷೋಡಶಪತ್ರೇ ತು ಕರ್ಣಿಕಾಯಾಂ ತು ಪೂಜಯೇತ್ || ೧ ||**

**ಕೇಸರೇ ಪೂಜಯೇತ್ತತ್ರ ನಕ್ಷತ್ರಾಣ್ಯಷ್ಟವಿಂಶತಿಃ |**
**ಪತ್ರೇಷು ತಿಥಿದೇವಾಂಶ್ಚ ತಥಾ ಜ್ಯೋತ್ಸ್ನಾಂ ಚ ಪೂಜಯೇತ್ || ೨ ||**

**ಗಂಧಮಾಲ್ಯನಮಸ್ಕಾರ ಧೂಪದೀಪಾನ್ನಸಂಪದಾ |**
**ಗುಡೇನ ಪರಮಾನ್ನೇನ ದಧ್ನಾ ಚ ಲವಣೇನ ಚ || ೩ ||**

---

### ನೂರ ತೊಂಭತ್ತಮೂರನೆಯ ಅಧ್ಯಾಯ.

ಮಾರ್ಕಂಡೇಯರು ಹೇಳುತ್ತಾರೆ:—ಕಾರ್ತಿಕಮಾಸದ ಪೌರ್ಣಮಿಯಲ್ಲಿ ಹದಿನಾರು ದಳಗಳುಳ್ಳ ಪದ್ಮವನ್ನಿಟ್ಟು ಅದರ ಕರ್ಣಿಕೆ (ಮಧ್ಯ)ಯಲ್ಲಿ ಪೂರ್ಣ ಚಂದ್ರನನ್ನು ಪೂಜಿಸಬೇಕು. ಅದರ ಕೇಸರಗಳಲ್ಲಿ ಇಪ್ಪತ್ತೇಳು ನಕ್ಷತ್ರಗಳನ್ನೂ ಸೇರಿಸಿ ಒಟ್ಟು ಇಪ್ಪತ್ತೆಂಟು ದೇವತೆಗಳನ್ನೂ ಪೂಜಿಸಬೇಕು ಹದಿನಾರು ದಳಗಳಲ್ಲಿಯೂ ಹದಿನೈದುತಿಥಿ ದೇವತೆಗಳನ್ನೂ ಜ್ಯೋತ್ಸ್ನಾದೇವಿಯನ್ನು ಪೂಜಿಸಬೇಕು. ಗಂಧಪುಷ್ಪ ಧೂಪದೀಪಗಳಿಂದ ಪೂಜಿಸಿ ಬೆಲ್ಲ, ಪರಮಾನ್ನ, ಮೊಸರು,

ಅಪೂಪೈಶ್ಚ ಮಹಾಭಾಗ ಫಲೈಃ ಕಾಲೋದ್ಭವೈಸ್ತಥಾ ।
ವ್ರತಾವಸಾನೇ ದದ್ಯಾಚ್ಚ ವಾಸೋಯುಗ್ಮಂ ದ್ವಿಜಾತಯೇ ॥ ೪ ॥

ಬ್ರಾಹ್ಮಣ್ಯೈ ಚ ಮಹಾಭಾಗ ಮಹಾರಜತರಂಜಿತಂ ।
ಪೂಜ್ಯೌ ಚ ವಿಧಿನಾ ಶಕ್ತ್ಯಾ ಕಾಲವಿದ್ವಾಚಕಾವುಭೌ ॥ ೫ ॥

ಸೋಪವಾಸೋಽಥ ನಕ್ತಾಶೀ ವ್ರತಮೇತತ್ಸಮಾಚರೇತ್ ।
ನಕ್ತಾಶನೋ ವಾ ಧರ್ಮಜ್ಞ ತಥೈವ ಚ ಹವಿಷ್ಯಭುಕ್ ॥ ೬ ॥

ಸೌಭಾಗ್ಯದಂ ರೂಪವಿವರ್ಧನಂ ಚ
ಲಾವಣ್ಯದಂ ಸ್ತ್ರೀರತಿಭೋಗದಂ ಚ ।
ಕಾರ್ಯಂ ಪ್ರಯತ್ನೇನ ನರೇಂದ್ರ ಪುಂಸಾ
ಕಾರ್ಯಂ ತಥಾ ಸ್ತ್ರೀಭಿರದೀನಸತ್ತ್ವ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪೌರ್ಣಮಾಸೀವ್ರತವರ್ಣನೋ ನಾಮ
ತ್ರಿನವತ್ಯುತ್ತರಶತತಮೋಽಧ್ಯಾಯಃ

---

ಲವಣ, ಭಕ್ಷ್ಯಗಳು, ಕಾಲದಲ್ಲುಂಟಾದ ಫಲಗಳು ಇದನ್ನು ನೈವೇದ್ಯಕ್ಕೆ ಅರ್ಪಿಸ ಬೇಕು. ವ್ರತವು ಮುಗಿದ ಮೇಲೆ ಬ್ರಾಹ್ಮಣನಿಗೆ ವಸ್ತ್ರಯುಗ್ಮವನ್ನು ದಾನ ಮಾಡಬೇಕು. ಚಿನ್ನದ ಸರಿಗೆಯಿಂದ ಕೂಡಿದ ವಸ್ತ್ರವನ್ನು ಬ್ರಾಹ್ಮಣಸ್ತ್ರೀಗೆ ದಾನ ಮಾಡಬೇಕು.

೫-೭. ಕಾಲಜ್ಞನಾದ ಜ್ಯೋತಿಷಿಕನನ್ನೂ ಪೌರಾಣಿಕನನ್ನೂ ಯಥಾಶಕ್ತಿ ವಿಧ್ಯುಕ್ತಕ್ರಮದಿಂದ ಪೂಜಿಸಬೇಕು. ಉಪವಾಸಿಯಾಗಿದ್ದು ರಾತ್ರಿಯಲ್ಲಿ ಮಾತ್ರ ಭೋಜನಮಾಡುತ್ತಾ ಈ ವ್ರತವನ್ನಾಚರಿಸಬೇಕು. ರಾತ್ರಿಯಲ್ಲಿಯೂ, ಹವಿಸ್ಸ (ಕ್ಷಾರಲವಣವರ್ಜ)ವಾದ ಭೋಜನವನ್ನೇ ಮಾಡಬೇಕು. ಸೌಭಾಗ್ಯಪ್ರದವಾಗಿಯೂ ರೂಪಪ್ರದವಾಗಿಯೂ, ಭೋಗಪ್ರದವಾಗಿಯೂ ಇರುವ ಈ ವ್ರತವನ್ನು ಪುರುಷ ರಾಗಲಿ ಸ್ತ್ರೀಯರಾಗಲಿ ಅವಶ್ಯವಾಗಿ ಮಾಡಲೇಬೇಕು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಪೌರ್ಣಮಾಸೀವ್ರತವರ್ಣನವೆಂಬ
ನೂರ ತೊಂಭತ್ತಮೂರನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಚತುರ್ನವತ್ಯುತ್ತರಶತತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಮಾರ್ಗಶೀರ್ಷಾದಥಾರಭ್ಯ ಚಂದ್ರಮಂಡಲಕೇ ನರಃ |**
**ಸೋಪವಾಸಸ್ತು ಸಂಪೂಜ್ಯ ಪೌಂಡರೀಕಫಲಂ ಲಭೇತ್ || ೧ ||**

**ಕೃತ್ವಾ ವ್ರತಂ ವತ್ಸರಮೇತದಿಷ್ಟಂ**
**ಪ್ರಾಪ್ನೋತಿ ಲೋಕಂ ಸ ನಿಶಾಕರಸ್ಯ |**
**ತತ್ರೋಷ್ಯ ರಾಜನ್ಸುಚಿರಂ ಚ ಕಾಲಂ**
**ಸಾಯುಜ್ಯಮಾಪ್ನೋತಿ ತತಶ್ಚ ತಸ್ಯ || ೨ ||**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಚಂದ್ರವ್ರತವರ್ಣನೋ ನಾಮ ಚತುರ್ನವತ್ಯುತ್ತರಶತತಮೋಽಧ್ಯಾಯಃ**

---

### ನೂರ ತೊಂಭತ್ತನಾಲ್ಕನೆಯ ಅಧ್ಯಾಯ.

೧-೨. ಮಾರ್ಕಂಡೇಯರು ಹೇಳುತ್ತಾರೆ :— ಮಾರ್ಗಶಿರಮಾಸದಲ್ಲಿ ಮೊದಲು ಮಾಡಿ ಚಂದ್ರಮಂಡಲವನ್ನು ಉಪವಾಸಿಯಾಗಿದ್ದು ಯಥಾವಿಧಿಯಾಗಿ ಪೂಜಿಸಿದಲ್ಲಿ ಪೌಂಡರೀಕಯಾಗದ ಫಲವನ್ನು ಹೊಂದುತ್ತಾನೆ. ಒಂದು ವರ್ಷಪರ್ಯಂತ ಈ ವ್ರತವನ್ನಾಚರಿಸಿದವನು ಚಂದ್ರನ ಲೋಕವನ್ನು ಹೊಂದುತ್ತಾನೆ. ಅಲ್ಲಿಯೂ ಬಹುಕಾಲ ಸುಖದಿಂದಿದ್ದು ಚಂದ್ರನ ಸಾಯುಜ್ಯವನ್ನೇ ಹೊಂದುತ್ತಾನೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಪಂಚನವತ್ಯುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಪ್ರೋಷ್ಠಪಾದಾದಥಾರಭ್ಯ ಸಂಪೂರ್ಣೇ ಶಶಲಾಂಛನೇ ।**
**ಸಂಪೂಜ್ಯ ವರುಣಂ ದೇವಂ ಗಂಧಮಾಲ್ಯಾನ್ನಸಂಪದಾ || ೧ ||**

**ದತ್ವಾ ವ್ರತಾವಸಾನೇ ತು ಜಲಧೇನುಂ ದ್ವಿಜಾತಯೇ ।**
**ಛತ್ರೋಪಾನಹಸಂಯುಕ್ತಾಂ ವಾಸೋಯುಗ್ಮವಿಭೂಷಿತಾಂ || ೨ ||**

**ಪ್ರಾಪ್ನೋತಿ ಲೋಕಂ ವರುಣಸ್ಯ ರಾಜಂ**
**ಸ್ತತ್ರೋಷ್ಯ ಕಾಲಂ ಸುಚಿರಂ ಮನುಷ್ಯಃ ।**

---

### ನೂರ ತೊಂಭತ್ತೈದನೆಯ ಅಧ್ಯಾಯ.

೧-೩. ಮಾರ್ಕಂಡೇಯರು ಹೇಳುತ್ತಾರೆ :-ಭಾದ್ರಪದಮಾಸದಲ್ಲಿ ಪ್ರಾರಂಭಿಸಿ ಪೂರ್ಣಚಂದ್ರನನ್ನು ಹೊಂದಿರುವ ಪೂರ್ಣಿಮಾದಿನದಲ್ಲಿ ವರುಣದೇವನನ್ನು ಗಂಧ ಪುಷ್ಪಾದಿಗಳಿಂದ ಪೂಜಿಸಬೇಕು. ವ್ರತದ ಕೊನೆಯಲ್ಲಿ ಬ್ರಾಹ್ಮಣನಿಗೆ ಛತ್ರಿ, ಪಾದುಕೆ, ವಸ್ತ್ರಯುಗ್ಮಗಳಿಂದ ಕೂಡಿದ ಜಲಧೇನುವನ್ನು ದಾನಮಾಡಬೇಕು. ಈ ವ್ರತವನ್ನು ಆಚರಿಸಿದವನು ವರುಣಲೋಕವನ್ನು ಹೊಂದಿ ಸುಖಿಸುತ್ತಾನೆ.

ಮಾನುಷ್ಯಮಾಸಾದ್ಯ ಭವತ್ಯರೋಗೀ
ರೂಪಾನ್ವಿತೋ ವಿತ್ತಯುತಸ್ತಥೈವ ॥ ೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ವರುಣವ್ರತವರ್ಣನೋ ನಾಮ
ಪಂಚನವತ್ಯುತ್ತರಶತತಮೋಽಧ್ಯಾಯಃ

---

ಪುನಃ ಮನುಷ್ಯನಾಗಿ ಜನಿಸುವಾಗ ಅರೋಗನಾಗಿಯೂ, ಸುರೂಪಿಯಾಗಿಯೂ, ಧನಿಕನಾಗಿಯೂ ಆಗಿ ಬದುಕುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದದಲ್ಲಿ ವರುಣವ್ರತವರ್ಣನವೆಂಬ ನೂರ ತೊಂಭತ್ತೈದನೆಯ ಅಧ್ಯಾಯವು ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

### || ಷಣ್ಣವತ್ಯುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

ಆಶ್ವಯುಜ್ಮಾಸಿ ಶುಕ್ಲೇ ತು ಪೌರ್ಣಮಾಸ್ಯಾಂ ನರಃ ಶುಚಿಃ |
ಸೋಪವಾಸೋ ನರೇಂದ್ರಸ್ತು ದೇವಂ ಸಂಪೂಜಯೇತ್ತಥಾ || ೧ ||

ಶಚೀಮೈರಾವತಂ ವಜ್ರಂ ಮಾತಲಿಂ ಚ ನರಾಧಿಪ |
ಗಂಧಮಾಲ್ಯನಮಸ್ಕಾರ ಧೂಪದೀಪಾನ್ನಸಂಪದಾ || ೨ ||

ಸಂವತ್ಸರಾನ್ತೇ ಕನಕಂ ತು ದತ್ವಾ
ಪ್ರಾಪ್ನೋತಿ ಲೋಕಂ ಸ ಪುರಂದರಸ್ಯ |

---

### ನೂರ ತೊಂಭತ್ತಾರನೆಯ ಅಧ್ಯಾಯ.

೧-೩. ಮಾರ್ಕಂಡೇಯರು ಹೇಳುತ್ತಾರೆ. ಆಶ್ವಯುಜಮಾಸದ ಶುಕ್ಲ ಪೌರ್ಣಮಿಯಲ್ಲಿ ಉಪವಾಸದಿಂದಿದ್ದು ರಾಜನು ಇಂದ್ರನನ್ನು ಪೂಜಿಸಬೇಕು. ಶಚೀದೇವಿಯನ್ನೂ, ಐರಾವತವನ್ನೂ, ವಜ್ರಾಯುಧವನ್ನೂ ಮಾತಲಿಯನ್ನೂ ಸಹ ಅವನೊಡನೆ ಗಂಧಪುಷ್ಪಧೂಪದೀಪನಮಸ್ಕಾರನೈವೇದ್ಯಾದಿಗಳಿಂದ ಪೂಜಿಸ

ಮಾನುಷ್ಯಮಾಸಾದ್ಯ ನರೇಂದ್ರ ಪೂಜ್ಯೋ
ರಾಜಾ ಭವೇದ್ವಾ ದ್ವಿಜಪುಂಗವೋ ವಾ || ೩ ||

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶಕ್ರವ್ರತವರ್ಣನೋ ನಾಮ
ಷಣ್ಣವತ್ಯುತ್ತರಶತತಮೋಽಧ್ಯಾಯಃ

---

ಬೇಕು. ವರ್ಷದ ಕೊನೆಯಲ್ಲಿ ಸುವರ್ಣವನ್ನು ದಾನಮಾಡಿದಲ್ಲಿ ಅವನು ಇಂದ್ರನ ಲೋಕವನ್ನು ಹೊಂದುತ್ತಾನೆ. ಮನುಷ್ಯನಾಗಿ ಜನಿಸುವಾಗಲೂ ರಾಜಪೂಜ್ಯನಾದ ಚಕ್ರವರ್ತಿಯಾಗಿಯೋ ಅಥವಾ ಬ್ರಾಹ್ಮಣಶ್ರೇಷ್ಠನಾಗಿಯೋ ಹುಟ್ಟುತ್ತಾನೆ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಶಕ್ರವ್ರತವರ್ಣನವೆಂಬ ನೂರ
ತೊಂಭತ್ತಾರನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಸಪ್ತನವತ್ಯುತ್ತರಶತತಮೋಽಧ್ಯಾಯಃ ||

**|| ಮಾರ್ಕಂಡೇಯ ಉವಾಚ ||**

**ಉಪೋಷಿತಃ ಚತುರ್ದಶ್ಯಾಂ ಪೌರ್ಣಮಾಸ್ಯಾಂ ನರೋತ್ತಮಃ ।**
**ಪಂಚಗವ್ಯಂ ಪಿಬೇತ್ಪಶ್ಚಾದ್ಧವಿಷ್ಯಾಶೀ ತಥಾ ಭವೇತ್ || ೧ ||**

**ಸಂವತ್ಸರಂ ತಥಾ ಕೃತ್ವಾ ಮಾಸಪಾಪಾತ್ಪ್ರಮುಚ್ಯತೇ ।**
**ತಸ್ಮಾತ್ಸರ್ವಪ್ರಯತ್ನೇನ ಮಾಸಿ ಮಾಸಿ ಸಮಾಚರೇತ್ || ೨ ||**

**ಸಂವತ್ಸರಂ ಪ್ರಾಪ್ಯ ನರೇಂದ್ರಲೋಕಂ**
**ತತ್ರೋಷ್ಯ ರಾಜನ್ಸುಚಿರಂ ದ್ವಿಜೇಂದ್ರಃ ।**

---

### ನೂರ ತೊಂಭತ್ತೇಳನೆಯ ಅಧ್ಯಾಯ

೧-೩ ಮಾರ್ಕಂಡೇಯರು ಹೇಳುತ್ತಾರೆ :—ಚತುರ್ದಶಿಯಲ್ಲಿ ಉಪವಾಸ ಮಾಡಿ ಪೂರ್ಣಿಮೆಯ ದಿನ ಪಂಚಗವ್ಯವನ್ನು ಸೇವಿಸಬೇಕು. ಅನಂತರ ಹವಿಷ್ಯವನ್ನೇ ಭುಂಜಿಸಬೇಕು. ಒಂದು ವರ್ಷಕಾಲ ಹೀಗೆ ಮಾಡಿದ್ದೇ ಆದರೆ ಅವನು ಮಾಡಿದ ಒಂದು ಮಾಸದ ಪಾಪವು ನಾಶಹೊಂದುತ್ತದೆ. ಆದುದರಿಂದ ಪ್ರತಿ

ಮಾನುಷ್ಯಮಾಸಾದ್ಯ ನರೇಂದ್ರಪೂಜ್ಯೋ
ರಾಜಾ ಭವೇದ್ವಾ ದ್ವಿಜಪುಂಗವೋ ವಾ ॥ ೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಬ್ರಹ್ಮಕೂರ್ಚವರ್ಣನೋ ನಾಮ
ಸಪ್ತನವತ್ಯುತ್ತರಶತತಮೋಽಧ್ಯಾಯಃ

---

ಮಾಸದಲ್ಲಿಯೂ ಪಂಚಗವ್ಯವನ್ನು ಪ್ರಯತ್ನಪೂರ್ವಕವಾಗಿ ಸೇವಿಸಬೇಕು. ಹೀಗೆ ಒಂದು ವರ್ಷ ವ್ರತವನ್ನಾಚರಿಸಿದ ಬ್ರಾಹ್ಮಣನು ರಾಜರ ಲೋಕವನ್ನು ಹೊಂದಿ ಅಲ್ಲಿ ಬಹುಕಾಲ ಸುಖದಿಂದಿದ್ದು ಪುನಃ ಮನುಷ್ಯಜನ್ಮದಲ್ಲಿ ಜನಿಸುವಾಗ ರಾಜ ಪೂಜ್ಯನಾಗಿಯೋ ಬ್ರಾಹ್ಮಣೋತ್ತಮನಾಗಿಯೋ ಜನಿಸುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಬ್ರಹ್ಮಕೂರ್ಚವರ್ಣನವೆಂಬ ನೂರ ತೊಂಭತ್ತೇಳನೆಯ
ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಅಷ್ಟನವತ್ಯುತ್ತರಶತತಮೋಽಧ್ಯಾಯಃ ||

|| ಮಾರ್ಕಂಡೇಯ ಉವಾಚ ||

**ಯೋಗಭೂತಂ ಹರಿಂ ದೇವಂ ಚತುರ್ದಶ್ಯಾಮುಪೋಷಿತಃ |**
**ಅರ್ಚಯೇತ್ಪೌರ್ಣಮಾಸ್ಯಾಂ ತು ಸೋಽಶ್ವಮೇಧಫಲಂ ಲಭೇತ್ || ೧ ||**

**ಬ್ರಹ್ಮಭೂತಮಮಾವಾಸ್ಯಾಂ ಪೌರ್ಣಮಾಸ್ಯಾಂ ತಥೈವ ಚ |**
**ರಾಜಸೂಯಮವಾಪ್ನೋತಿ ಕುಲಮುದ್ಧರತಿ ಸ್ವಕಂ || ೨ ||**

**ಬ್ರಹ್ಮಭೂತಮಮಾವಸ್ಯಾಂ ಪೌರ್ಣಮಾಸ್ಯಾಂ ಚ ಪೂಜಯೇತ್ |**
**ಯೋಗಭೂತಂ ಪರಿಚರನ್ ಕೇಶವಂ ಮಹದಾಪ್ನುಯಾತ್ || ೩ ||**

---

### ನೂರ ತೊಂಭತ್ತೆಂಟನೆಯ ಅಧ್ಯಾಯ

೧-೪. ಮಾರ್ಕಂಡೇಯರು ಹೇಳುತ್ತಾರೆ :—ಶುಕ್ಲಚತುರ್ದಶಿಯಲ್ಲಿ ಉಪವಾಸವಿದ್ದು ಪೌರ್ಣಿಮಾದಿನ ಯೋಗಹರಿಯನ್ನು ಪೂಜಿಸಬೇಕು. ಇದರಿಂದ ಅಶ್ವಮೇಧದ ಫಲವೇ ಉಂಟಾಗುತ್ತದೆ ಅಮಾವಾಸ್ಯೆಯಲ್ಲಿಯೂ ಬ್ರಹ್ಮಸ್ವರೂಪದಿಂದ ಪೂಜಿಸಿದಲ್ಲಿ ರಾಜಸೂಯಯಾಗದ ಫಲವನ್ನು ಹೊಂದುತ್ತಾನೆ ವಂಶವನ್ನೂ ಉದ್ಧರಿಸುತ್ತಾನೆ. ಯೋಗಸ್ವರೂಪನಾದ ಕೇಶವನನ್ನು ಪೂಜಿಸುವುದರಿಂದ

**ಅತ್ಯರ್ಥಂ ಪ್ರೀತಿಮಾಯಾತಿ ಮಾಸಪಕ್ಷಾಂತಯೋಃ ಸದಾ |**
**ಪೂಜಿತಃ ಸೋಪವಾಸೇನ ಭಕ್ತ್ಯಾ ದೇವವರೋ ಹರಿಃ || ೪ ||**

**ಮಹಾವ್ರತಮಿದಂ ಖ್ಯಾತಂ ಸರ್ವಕಲ್ಮಷನಾಶನಂ |**
**ಸಂವತ್ಸರಮಿದಂ ಕೃತ್ವಾ ನಾಕಪೃಷ್ಠೇ ಮಹೀಯತೇ || ೫ ||**

**ಸರ್ವಪಾಪಪ್ರಶಮನಂ ವ್ರತಮೇತತ್ಪ್ರಕೀರ್ತಿತಂ |**
**ಸ್ವವಿತ್ತಶಕ್ತಿರೇವಾತ್ರ ಸರ್ವಕರ್ಮಸು ಕಾರಣಂ || ೬ ||**

**ಕೃತ್ವಾ ವ್ರತಂ ದ್ವಾದಶವತ್ಸರಾಣಿ**
**ಪ್ರಾಪ್ನೋತಿ ಲೋಕಂ ಪುರುಷೋತ್ತಮಸ್ಯ |**
**ತತ್ರೋಷ್ಯ ರಾಜನ್ ಸುಚಿರಂ ಸುಕಾಲಂ**
**ಪ್ರಾಪ್ನೋತಿ ಮೋಕ್ಷಂ ಪುರುಷಸ್ತತೋಂತೇ || ೭ ||**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಮಹಾವ್ರತಂ ನಾಮಾಷ್ಟನವತ್ಯುತ್ತರ ಶತತಮೋಽಧ್ಯಾಯಃ**

---

ಮಹಾಫಲವನ್ನೇ ಹೊಂದುತ್ತಾನೆ. ಮಾಸ ಮತ್ತು ಪಕ್ಷಗಳ ಸಮಯದಲ್ಲಿ ಬಹುಮಟ್ಟಿಗೂ ಮನಸ್ಸಂತೋಷವನ್ನು ಹೊಂದಿರುತ್ತಾನೆ. ಇದೂ ಸಹ ಉಪವಾಸದಿಂದಿದ್ದು ಭಕ್ತಿಯಿಂದ ಮಾಡಿದ ಹರಿಪೂಜೆಯ ಫಲ.

೫-೭. ಸರ್ವಪಾಪನಾಶಕವಾದ ಈ ವ್ರತವು ಮಹಾವ್ರತವೆಂದು ಪ್ರಸಿದ್ಧಿ ಹೊಂದಿದೆ. ಒಂದು ವರ್ಷಕಾಲ ಈ ವ್ರತವನ್ನು ಆಚರಿಸಿದವನು ಸ್ವರ್ಗಸುಖಕ್ಕೆ ಭಾಗಿಯಾಗುತ್ತಾನೆ. ಸರ್ವಪಾಪನಾಶಕಗಳಾದ ಇಂತಹ ವ್ರತಗಳನ್ನು ಆಚರಿಸುವ ವಿಷಯದಲ್ಲಿ ತನ್ನ ದ್ರವ್ಯಶಕ್ತಿಯೇ ಮುಖ್ಯವಾದ ಕಾರಣ. ಈ ವ್ರತವನ್ನು ಹನ್ನೆರಡು ವರ್ಷಕಾಲ ನಿಷ್ಠೆಯಿಂದ ಆಚರಿಸಿದಲ್ಲಿ ಪುರುಷೋತ್ತಮನ ಲೋಕವನ್ನೇ ಹೊಂದುತ್ತಾನೆ. ಅಲ್ಲಿ ಬಹುಕಾಲ ಸುಖದಿಂದಿದ್ದು ಕೊನೆಯಲ್ಲಿ ಮೋಕ್ಷವನ್ನೂ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಮಹ್ರಾವ್ರತವೆಂಬ ನೂರ ತೊಂಭತ್ತೆಂಟನೆಯ ಅಧ್ಯಾಯ ಮುಗಿದಿದೆ.

॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ನವನವತ್ಯುತ್ತರಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಭಗವನ್ ಕರ್ಮಣಾ ಕೇನ ತಿರ್ಯಗ್ಯೋನೌ ನ ಜಾಯತೇ ।
ಮ್ಲೇಚ್ಛದೇಶೇ ಚ ಪುರುಷಸ್ತನ್ಮಮಾಚಕ್ಷ್ವ ಪೃಚ್ಛತಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ಮೇಷಸಂಕ್ರಮಣೇ ಭಾನೋಃ ಸೋಪವಾಸೋ ನರೋತ್ತಮಃ ।
ಪೂಜಯೇದ್ಭಾರ್ಗವಂ ರಾಮಂ ದೇವಂ ಶಕ್ತ್ಯಾ ಯಥಾವಿಧಿ ॥ ೨ ॥

ಕನ್ಯಾಸಂಕ್ರಮಣೇ ಪ್ರಾಪ್ತೇ ತಥಾ ಕೃಷ್ಣಂ ಚ ಪೂಜಯೇತ್ ।
ತಥಾ ಮಿಥುನಸಂಕ್ರಾಂತೌ ಪೂಜಯೇದ್ಭೋಗಶಾಯಿನಂ ॥ ೩ ॥

---

### ನೂರ ತೊಂಭತ್ತೊಂಭತ್ತನೆಯ ಅಧ್ಯಾಯ

೧-೩. ವಜ್ರನು ಪ್ರಶ್ನಿಸುತ್ತಾನೆ :—ಪೂಜ್ಯರೇ, ಮನುಷ್ಯನು ಯಾವ ಕರ್ಮವನ್ನು ಆಚರಿಸಿದಲ್ಲಿ ಮ್ಲೇಚ್ಛದೇಶದಲ್ಲಿ ಜನಿಸದೆಯೂ, ತಿರ್ಯಗ್ಜನ್ಮವನ್ನು ಹೊಂದದೆಯೂ ಇರಬಹುದೋ ಅಂತಹ ಮುಖ್ಯಕರ್ಮವನ್ನು ಅಪ್ಪಣೆ ಕೊಡಿಸಬೇಕು. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ. ಕರ್ಮಶ್ರದ್ಧೆಯುಳ್ಳ ಪುರುಷನು ಸೂರ್ಯನು ಮೇಷಸಂಕ್ರಾಂತಿ ಹೊಂದಿದಾಗ ಭಾರ್ಗವರಾಮ

ತಥಾ ಕುಳೀರಸಂಕ್ರಾಂತೌ ವರಾಹಮಪರಾಜಿತಂ ।
ನರಸಿಂಹಂ ತಥಾದೇವಂ ಸಿಂಹಸಂಕ್ರಮಣೇ ವಿಭುಂ ।
ಕನ್ಯಾಸಂಕ್ರಮಣೇ ದೇವಂ ಸ್ತ್ರೀರೂಪಂ ಪೂಜಯೇನ್ನರಃ ॥ ೪ ॥

ತುಲಾಸಂಕ್ರಮಣೇ ಪ್ರಾಪ್ತೇ ವಾಮನಂ ನೃಪ ಪೂಜಯೇತ್ ।
ತಥಾ ವೃಶ್ಚಿಕಸಂಕ್ರಾಂತೌ ದೇವದೇವಂ ತ್ರಿವಿಕ್ರಮಂ ॥ ೫ ॥

ಧನುಃಸಂಕ್ರಮಣೇ ದೇವಂ ತಥಾಶ್ವಶಿರಸಂ ನೃಪ ।
ತಥಾ ಮಕರಸಂಕ್ರಾಂತೌ ರಾಮಂ ದಶರಥಾತ್ಮಜಂ ॥ ೬ ॥

ಕುಂಭಸಂಕ್ರಮಣೇ ರಾಜನ್ ರಾಮಂ ಯಾದವನಂದನಂ ।
ಮೀನಸಂಕ್ರಮಣೇ ಮತ್ಸ್ಯಂ ವಾಸುದೇವಂ ತು ಪೂಜಯೇತ್ ॥ ೭ ॥

ಪಟೇ ವಾ ಯದಿವಾರ್ಚಾಯಾಂ ಗಂಧಮಾಲ್ಯಾನ್ನಸಂಪದಾ ।
ಪ್ರಾದುರ್ಭಾವಸ್ಯ ನಾಮ್ನಾ ಚ ಹೋಮಂ ಕುರ್ವೀತ ಪಾರ್ಥಿವ ॥ ೮ ॥

---

ನನ್ನು ಯಥಾಶಕ್ತಿ ವಿಧಿವತ್ತಾಗಿ ಪೂಜಿಸಬೇಕು. ಹಾಗೆಯೇ ಕನ್ಯಾಸಂಕ್ರಮಣದಲ್ಲಿ ಕೃಷ್ಣನನ್ನೂ, ಮಿಥುನಸಂಕ್ರಮಣದಲ್ಲಿ ಭೋಗಶಾಯಿಯನ್ನೂ ಪೂಜಿಸಬೇಕು.

೪-೮. ಕರ್ಕಾಟಕಸಂಕ್ರಮಣದಲ್ಲಿ ಅಪರಾಜಿತನಾದ ವರಾಹಮೂರ್ತಿಯನ್ನೂ, ಸಿಂಹಸಂಕ್ರಮಣದಲ್ಲಿ ನರಸಿಂಹಮೂರ್ತಿಯನ್ನೂ, ಕನ್ಯಾಸಂಕ್ರಮಣದಲ್ಲಿ ಮೋಹಿನಿಯ ರೂಪಿಯನ್ನೂ, ತುಲಾಸಂಕ್ರಮಣದಲ್ಲಿ ವಾಮನನನ್ನೂ, ವೃಶ್ಚಿಕಸಂಕ್ರಮಣದಲ್ಲಿ ತ್ರಿವಿಕ್ರಮಮೂರ್ತಿಯನ್ನೂ, ಧನುಸ್ಸಂಕ್ರಮಣದಲ್ಲಿ ಹಯಗ್ರೀವನನ್ನೂ, ಮಕರಸಂಕ್ರಮಣದಲ್ಲಿ ದಾಶರಥಿರಾಮನನ್ನೂ, ಕುಂಭದಲ್ಲಿ ಬಲರಾಮನನ್ನೂ, ಮೀನದಲ್ಲಿ ವಾಸುದೇವನ ಮತ್ಸ್ಯಮೂರ್ತಿಯನ್ನೂ ಪೂಜಿಸಬೇಕು. ವಸ್ತ್ರದಲ್ಲಿ ಚಿತ್ರಿಸಿಯೇ ಆಗಲಿ, ವಿಗ್ರಹದಲ್ಲೇ ಆಗಲಿ, ಗಂಧಪುಷ್ಪನೈವೇದ್ಯಾದಿಗಳಿಂದ ಪೂಜಿಸಿ ಆಯಾಯ ಅವತಾರದ ನಾಮಮಂತ್ರಗಳಿಂದ ಹೋಮ ಮಾಡಬೇಕು.

ವ್ರತಾಂತೇ ಜಲಧೇನುಂ ಚ ಛತ್ರೋಪಾನತ್ಸಮನ್ವಿತಾಂ ।
ವಸ್ತ್ರಯುಗ್ಮಯುತಾಂ ದದ್ಯಾತ್ಪ್ರತಿಮಾಸಂ ಚ ಕಾಂಚನಂ ।
ರಾತ್ರೌ ಚ ದೀಪಮಾಲಾಭಿರ್ದೇವದೇವಂ ತು ಪೂಜಯೇತ್ ॥ ೯ ॥

ಕೃತ್ವಾ ವ್ರತಂ ವತ್ಸರಮೇತದಿಷ್ಟಂ
ಮ್ಲೇಚ್ಛೇಷು ತಿರ್ಯಕ್ಷು ನ ಚಾಪಿ ಜನ್ಮ ।
ಪ್ರಾಪ್ನೋತ್ಯವಾಪ್ನೋತಿ ಚಿರಂ ಚ ನಾಕಂ
ಕಾಮಂ ತಥಾಪ್ನೋತಿ ಮನೋಭಿರಾಮಂ ॥ ೧೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಸುದೇಶಜನ್ಮಾವಾಪ್ತಿವ್ರತವರ್ಣನೋ ನಾಮ
ನವನವತ್ಯುತ್ತರಶತತಮೋಽಧ್ಯಾಯಃ

---

೯–೧೦. ವ್ರತದ ಕೊನೆಯಲ್ಲಿ ಛತ್ರಿ ಮತ್ತು ಪಾದುಕೆ, ವಸ್ತ್ರಯುಗ್ಮ, ಇವುಗಳಿಂದ ಕೂಡಿದ ಜಲಧೇನುವನ್ನು ದಾನಮಾಡಬೇಕು. ಪ್ರತಿ ಮಾಸದಲ್ಲಿಯೂ ಈ ದಾನವನ್ನು ಸ್ವರ್ಣದೊಡನೆ ಮಾಡಬೇಕು. ರಾತ್ರಿಯಲ್ಲಿ ದೀಪೋತ್ಸವದಿಂದ ಪೂಜಿಸಬೇಕು. ಈ ವ್ರತವನ್ನು ವರ್ಷ ಪೂರ್ತಿ ಆಚರಿಸಿದವನು ಮ್ಲೇಚ್ಛ ದೇಶದಲ್ಲಿಯೂ, ತಿರ್ಯಗ್ಜನ್ಮದಲ್ಲಿಯೂ, ಹುಟ್ಟುವುದೇ ಇಲ್ಲ. ಎಲ್ಲಾ ಮನೋರಥಗಳನ್ನೂ ಹೊಂದಿ ಸುಖಿಯಾಗುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಸುದೇಶ ಜನ್ಮಾವಾಪ್ತಿ ವ್ರತವರ್ಣನವೆಂಬ
ನೂರ ತೊಂಭತ್ತೊಂಭತ್ತನೆಯ ಅಧ್ಯಾಯ
ಮುಗಿದಿದೆ.

॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ದ್ವಿಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

**ಇಷ್ಟಾಂ ಜಾತಿಮವಾಪ್ನೋತಿ ಕರ್ಮಣಾ ಯೇನ ಮಾನವಃ ।**
**ತನ್ಮಮಾಚಕ್ಷ್ವ ಧರ್ಮಜ್ಞ ತ್ವಂ ಹಿ ಸರ್ವವಿದುಚ್ಯಸೇ ॥ ೧ ॥**

॥ ಮಾರ್ಕಂಡೇಯ ಉವಾಚ ॥

**ಪೌರುಷೇಷು ಸದಾ ತೇ ವೈ ತ್ರಿರಾತ್ರೋಪೋಷಿತೋ ನರಃ ।**
**ಚೈತ್ರಮಾಸಾದಥಾರಭ್ಯ ಕಾರ್ತಿಕೇ ಪೂಜಯೇದ್ಧರಿಂ ॥ ೨ ॥**

**ಪೌರುಷೇಣ ಚ ಸೂಕ್ತೇನ ಋಗ್ಭಿಃ ಪುಷ್ಪೈಃ ಫಲೈಸ್ತಥಾ ।**
**ಧೂಪೈರ್ದೀಪೈಸ್ತಥಾನ್ನೇನ ಘೃತಾಹುತಿಭಿರೇವ ಚ ॥ ೩ ॥**

---

### ಇನ್ನೂರನೆಯ ಅಧ್ಯಾಯ

೧-೫. ವಜ್ರನು ಪ್ರಶ್ನೆಮಾಡುತ್ತಾನೆ:—ಪೂಜ್ಯರೇ ಮನುಷ್ಯನು ಯಾವ ಕರ್ಮವನ್ನು ಆಚರಿಸಿದಲ್ಲಿ ತನಗೆ ಇಷ್ಟವಾದ ಜಾತಿಯನ್ನು ಹೊಂದಬಹುದೋ ಅಂತಹ ಕರ್ಮವನ್ನು ಧರ್ಮಜ್ಞರಾಗಿಯೂ, ಸರ್ವಜ್ಞರಾಗಿಯೂ ಇರುವ ತಾವು ಅಪ್ಪಣೆ ಕೊಡಿಸಬೇಕು. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ:- ಧೊರೆಯೇ, ಪುರುಷ ಸಾಧ್ಯವಾದ ವ್ಯಾಪಾರಗಳಲ್ಲಿ ನಿನಗೆ ಬಹಳ ಉತ್ಸಾಹವಿರುವಂತಿದೆ. ಆದರೆ ಅದನ್ನೂ ಹೇಳುತ್ತೇನೆ. ಚೈತ್ರಮಾಸದಿಂದ ಪ್ರಾರಂಭಿಸಿ,

ಧೇನುರ್ವ್ರತಾಂತೇ ದಾತವ್ಯಾ ಕೃತ್ವಾ ಸಂವತ್ಸರಂ ವ್ರತಂ ।
ಯಥೇಷ್ಟಾಂ ಜಾತಿಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೪ ॥

ನ ಕೇವಲಂ ಜಾತಿಕರಂ ಪ್ರದಿಷ್ಟಂ
ವ್ರತೋತ್ತಮಂ ಯಾದವದೀನಸತ್ತ್ವ ।
ಕಾಮಾನಭೀಷ್ಟಾನ್ ಪುರುಷಸ್ಯ ದದ್ಯಾ-
ನ್ಮೋಕ್ಷಂ ಚ ದದ್ಯಾತ್ಪುರುಷಪ್ರಧಾನ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಇಷ್ಟಜಾತ್ಯವಾಪ್ತಿವ್ರತವರ್ಣನೋ ನಾಮ
ದ್ವಿಶತತಮೋಽಧ್ಯಾಯಃ

---

ಕಾರ್ತಿಕಮಾಸದ ವರೆಗೂ ಮೊದಲು ಮೂರು ರಾತ್ರಿ ಉಪವಾಸವಿದ್ದು ಹರಿಯನ್ನು ಪೂಜಿಸಬೇಕು. ಪುರುಷ ಸೂಕ್ತದಿಂದಲೂ, ವೈಷ್ಣವ ಋಕ್ಕುಗಳಿಂದಲೂ, ಪುಷ್ಪ ಫಲ ಧೂಪದೀಪ ನೈವೇದ್ಯಾದಿಗಳಿಂದಲೂ ಪೂಜಿಸಿ ಆಜ್ಯಾಹುತಿಗಳನ್ನೂ ಮಾಡಬೇಕು. ಸಂವತ್ಸರ ಪರ್ಯಂತ ವ್ರತವನ್ನಾಚರಿಸಿ ಕೊನೆಯಲ್ಲಿ ಗೋದಾನವನ್ನೂ ಮಾಡಬೇಕು. ಈ ವ್ರತವನ್ನು ಈ ರೀತಿ ಆಚರಿಸಿದವನು ತನಗೆ ಇಷ್ಟಬಂದ ಜಾತಿಯನ್ನು ಹೊಂದಬಹುದು, ಅತ್ಯುತ್ತಮವಾದ ಈ ವ್ರತವು ಕೇವಲ ಜಾತಿಪ್ರಾಪ್ತಿಗೆ ಮಾತ್ರವಲ್ಲ, ಸಕಲ ಇಷ್ಟಾರ್ಥಪ್ರದವೂ, ಮೋಕ್ಷಪ್ರದವೂ ಆಗುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಇಷ್ಟಜಾತಿ ಪ್ರಾಪ್ತಿವ್ರತವರ್ಣನವೆಂಬ
ಇನ್ನೂರನೆಯ ಅಧ್ಯಾಯ ಮುಗಿದಿದೆ.



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಏಕೋತ್ತರದ್ವಿಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಭಗವನ್ ಕರ್ಮಣಾ ಕೇನ ಕುಲೇ ಜನ್ಮ ಸಮುಚ್ಛ್ರಿತೇ ।
ಏತಂ ಮೇ ಸಂಶಯಂ ಛಿಂಧಿ ತ್ವಂ ಹಿ ಸರ್ವವಿದುಚ್ಯಸೇ ॥ ೧ ॥

॥ ಮಾರ್ಕಂಡೇಯ ಉವಾಚ ॥

ಬೃಹದ್ವಿಶಿಷ್ಟೇ ತು ಸಂಪ್ರಾಪ್ಯ ತ್ರಿರಾತ್ರೋಪೋಷಿತೋ ನರಃ ।
ಮಾರ್ಗಶೀರ್ಷಾದಥಾರಭ್ಯ ಪೂಜಯೇತ್ತು ತ್ರಿವಿಕ್ರಮಂ ॥ ೨ ॥

ತ್ರಿವರ್ಣೈಃ ಕುಸುಮೈರ್ದೇವಂ ತ್ರಿಭಿಃ ಪ್ರಯತಮಾನಸಃ ।
ತ್ರಯೋಽನುಲೇಪನಾ ದೇಯಾ ತ್ರಿಸಾರಂ ಧೂಪಮೇವ ತು ॥ ೩ ॥

---

### ಇನ್ನೂರ ಒಂದನೆಯ ಅಧ್ಯಾಯ.

೧-೫. ವಜ್ರನು ಪ್ರಶ್ನೆಮಾಡುತ್ತಾನೆ—ಪೂಜ್ಯರೇ. ಯಾವ ಕರ್ಮವನ್ನು ಆಚರಿಸಿದಲ್ಲಿ ಉತ್ತಮಕುಲದಲ್ಲಿ ಜನ್ಮಹೊಂದಬಹುದೋ ಅಂತಹ ಕರ್ಮವಿಷಯದಲ್ಲಿ ನನಗೆ ಉಂಟಾಗಿರುವ ಈ ಸಂಶಯವನ್ನು ಹೋಗಲಾಡಿಸಬೇಕು. ಈ ವಿಷಯದಲ್ಲಿಯೂ ತಾವು ಸರ್ವಜ್ಞರಾಗಿದ್ದೀರಿ ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ. ಉತ್ತರಾಯಣದಲ್ಲಿ ಮಾರ್ಗಶಿರಮಾಸ ಮೊದಲುಮಾಡಿ ಮೂರು

ಬಲಿಂ ತ್ರಿಮಧುರಂ ದದ್ಯಾತ್ತ್ರೀಂಶ್ಚ ದೀಪಾನ್ನೃಪೋತ್ತಮ ।
ಯವೈಸ್ತಿಲೈಸ್ತಥಾ ಹೋಮಃ ಕರ್ತವ್ಯಃ ಸರ್ಷಪೈರ್ಯುತಃ ॥ ೪ ॥

ದದ್ಯಾತ್ತ್ರಿಲೋಹಂ ಚ ತಥಾ ದ್ವಿಜೇಭ್ಯಃ
ತಾಮ್ರಂ ಸುವರ್ಣಂ ರಜತಂ ಚ ರಾಜನ್ ।
ನಕೇವಲಂ ಸತ್ಕುಲದಂ ವ್ರತಂ ತು
ಯಥೇಷ್ಟಕಾಮಾಪ್ತಿಕರಂ ಪ್ರದಿಷ್ಟಂ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಸತ್ಕುಲಾವಾಪ್ತಿವ್ರತವರ್ಣನೋ:
ನಾಮೈಕೋತ್ತರದ್ವಿಶತತಮೋಽಧ್ಯಾಯಃ

---

ರಾತ್ರಿ ಉಪವಾಸವಿದ್ದು ತ್ರಿವಿಕ್ರಮನನ್ನು ಪೂಜಿಸಬೇಕು. ಮನೋವಾಕ್ಕಾಯಗಳಿಂದ ತ್ರಿವಿಧಪರಿಶುದ್ಧಿ ಹೊಂದಿ ಮೂರು ಬಣ್ಣದ ಕುಸುಮಗಳಿಂದಲೂ ಮೂರು ವಿಧವಾದ ಗಂಧದಿಂದಲೂ ಮೂರು ಬಗೆಯ ಧೂಪದಿಂದಲೂ ಪೂಜಿಸಿ ಮೂರುವಿಧವಾದ ಮಧುರಭಕ್ಷ್ಯದ ಬಲಿಪ್ರದಾನದಿಂದಲೂ ಮೂರು ದೀಪಗಳಿಂದಲೂ ಪೂಜಿಸಬೇಕು. ಯವ, ತಿಲ, ಸಾಸವೆಗಳಿಂದ ಹೋಮಮಾಡಬೇಕು. ಬ್ರಾಹ್ಮಣರಿಗೆ ತಾಮ್ರ, ಸುವರ್ಣ, ರಜತಗಳೆಂಬ ಮೂರುವಿಧವಾದ ಲೋಹಗಳನ್ನು ದಾನಮಾಡಬೇಕು. ಈ ವ್ರತವು ಸತ್ಕುಲಪ್ರದಮಾತ್ರವೇ ಅಲ್ಲ. ಎಲ್ಲಾ ಮನೋರಥಗಳಿಗೆ ಸಾಫಲ್ಯಕಾರಕವೂ ಆಗಿದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಸತ್ಕುಲಾವಾಪ್ತಿವ್ರತವರ್ಣನವೆಂಬ
ಇನ್ನೂರ ಒಂದನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ದ್ವ್ಯುತ್ತರದ್ವಿಶತತಮೋಽಧ್ಯಾಯಃ ||

|| ವಜ್ರ ಉವಾಚ ||

ಭಗವನ್ ಕರ್ಮಣಾ ಕೇನ ರೂಪವಾನ್ ಜಾಯತೇ ನರಃ |
ಏತಂ ಮೇ ಸಂಶಯಂ ಛಿಂಧಿ ತ್ವಂ ಹಿ ಸರ್ವವಿದುಚ್ಯಸೇ || ೧ ||

|| ಮಾರ್ಕಂಡೇಯ ಉವಾಚ ||

ಫಾಲ್ಗುನ್ಯಾಂ ಸಮತೀತಾಯಾಂ ಪ್ರತಿಪತ್ಪ್ರಭೃತಿಕ್ರಮಾತ್ |
ಯಾವಚ್ಚೈತ್ರೀ ಮಹಾರಾಜ ತಾವತ್ ಸ್ನಾತೋ ದಿನೇ ದಿನೇ || ೨ ||

ಬಹಿಃ ಸಂಪೂಜಯೇದ್ದೇವಂ ಕೇಶವಂ ಭೋಗಶಾಯಿನಂ |
ಏಕಭಕ್ತಾಶನೋ ನಕ್ತಮಧಃಶಾಯೀ ತಥಾ ಭವೇತ್ |

---

### ಇನ್ನೂರ ಎರಡನೆಯ ಅಧ್ಯಾಯ.

೧-೫. ವಜ್ರನು ಪ್ರಶ್ನೆಮಾಡುತ್ತಾನೆ. ಪೂಜ್ಯರೇ ಸುರೂಪವನ್ನು ಅಪೇಕ್ಷಿಸುವವನು ಯಾವ ಕರ್ಮವನ್ನು ಮಾಡಬೇಕು. ಎಂಬುದನ್ನು ಹೇಳಿ ನನ್ನ ಸಂಶಯವನ್ನು ಹೋಗಲಾಡಿಸಬೇಕು. ತಾವು ಈ ವಿಷಯದಲ್ಲೂ ಸರ್ವಜ್ಞರಾಗಿರುವಿರಿ. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ. ಫಾಲ್ಗುನಮಾಸದ ಪೌರ್ಣಮಿಯು ಕಳೆದಮೇಲೆ ಬಹುಳ ಪ್ರಥಮೆಯಿಂದ ಪ್ರಾರಂಭಿಸಿ ಚೈತ್ರಶುದ್ಧ ಪೂರ್ಣಿಮಾವರೆಗೂ ಪ್ರತಿದಿನದಲ್ಲಿಯೂ ಹೊರಗೇ ಸ್ನಾನಮಾಡುತ್ತಾ ಭೋಗಶಾಯಿ

ತ್ರಿರಾತ್ರೋಪೋಷಿತಃ ಕುರ್ಯಾತ್ಪೂಜಾಂ ಚೈತ್ರ್ಯಾಂ ತಥೈವ ಚ ।
ಸ್ವಶಕ್ತ್ಯಾ ರಜತಂ ದದ್ಯಾದ್ವಸ್ತ್ರಯುಗ್ಮಂ ತಥೈವ ಚ ॥ ೪ ॥

ರೂಪಾರ್ಥಿನೋ ಮಾಸಮಿದಂ ಮಯೋಕ್ತಂ
ವ್ರತೋತ್ತಮಂ ನಿತ್ಯಮದೀನಸತ್ವ ।
ಕೃತ್ವಾ ಚ ನಾಕಂ ಮನುಜಸ್ತ್ವವಾಪ್ಯ
ಮಾನುಷ್ಯಮಾಸಾದ್ಯ ಚ ರೂಪವಾನ್ ಸ್ಯಾತ್ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ರೂಪಾವಾಪ್ತಿವ್ರತವರ್ಣನೋ ನಾಮ
ದ್ವ್ಯುತ್ತರಶತತಮೋಽಧ್ಯಾಯಃ

---

ಯಾದ ಕೇಶವನನ್ನು ಹೊರಗೇ ಪೂಜಿಸಬೇಕು. ಒಂದೇ ಹೊತ್ತು ಭುಂಜಿಸುತ್ತಾ ರಾತ್ರಿಯಲ್ಲಿ ಭೂಮಿಯ ಮೇಲೆಯೇ ಮಲಗುತ್ತಿರಬೇಕು. ಮೂರುದಿನಗಳು ಉಪವಾಸವಿದ್ದು ಚೈತ್ರ ಶುಕ್ಲ ಪೂರ್ಣಿಮೆಯಲ್ಲಿ ಪೂಜೆಮಾಡಿ ಮುಗಿಸಬೇಕು. ಬ್ರಾಹ್ಮಣನಿಗೆ ಯಥಾಶಕ್ತಿ ರಜತವನ್ನೂ ವಸ್ತ್ರಯುಗ್ಮವನ್ನೂ ದಾನಮಾಡಬೇಕು. ರೂಪಾರ್ಥಿಯಾದವನಿಗೆ ನಾನು ಹೇಳಿರುವ ಒಂದು ತಿಂಗಳು ನಡೆಸುವ ಈ ವ್ರತವು ಅತ್ಯುತ್ತಮವಾದದ್ದು. ಇದರಿಂದ ಸ್ವರ್ಗವನ್ನೂ ಹೊಂದಿ ಪುನಃ ರೂಪವಂತನಾದ ಮನುಷ್ಯನಾಗಿ ಜನಿಸುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ರೂಪಾವಾಪ್ತಿವ್ರತವರ್ಣನವೆಂಬ
ಇನ್ನೂರ ಎರಡನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ತ್ರ್ಯುತ್ತರದ್ವಿಶತತಮೋಽಧ್ಯಾಯಃ ||

**|| ವಜ್ರ ಉವಾಚ ||**

**ಭಗವನ್ ಕರ್ಮಣಾ ಕೇನ ನರೋ ಲಾವಣ್ಯಮಾಪ್ನುಯಾತ್ |**
**ಲಾವಣ್ಯರಹಿತಂ ರೂಪಂ ನಿಷ್ಫಲಂ ಪ್ರತಿಭಾತಿ ಮೇ || ೧ ||**

**|| ಮಾರ್ಕಂಡೇಯ ಉವಾಚ ||**

**ಕಾರ್ತಿಕ್ಯಾಂ ಸಮತೀತಾಯಾಂ ಪ್ರತಿಪತ್ಪ್ರಭೃತಿಕ್ರಮಾತ್ |**
**ಪಟೇ ವಾ ಯದಿವಾರ್ಚಾಯಾಂ ಪ್ರದ್ಯುಮ್ನಂ ಪೂಜಯೇತ್ಪ್ರಭುಂ || ೨ ||**

---

### ಇನ್ನೂರ ಮೂರನೆಯ ಅಧ್ಯಾಯ.

೧-೪. ವಜ್ರನು ಪ್ರಶ್ನೆಮಾಡುತ್ತಾನೆ ಪೂಜ್ಯರೇ, ಮನುಷ್ಯನು ಯಾವ ಕರ್ಮವನ್ನು ಆಚರಿಸಿದಲ್ಲಿ ಲಾವಣ್ಯಶಾಲಿಯಾಗುತ್ತಾನೆ. [1]ಲಾವಣ್ಯವಿಲ್ಲದ ರೂಪವು ನಿಷ್ಫಲವೆಂದು ನನಗೆ ತೋರುತ್ತದೆ. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು

---

1 ಲಾವಣ್ಯವೆಂಬುದು ಅವಯವಗಳ ಪ್ರತ್ಯೇಕ ಸನ್ನಿವೇಶಕ್ಕಿಂತಲೂ, ಪರಸ್ಪರ ಅನುಗುಣವಾದ ಸಮುದಾಯ ಸನ್ನಿವೇಶಕ್ಕಿಂತಲೂ ಬೇರೆಯಾದ ಪದಾರ್ಥ. ಅವಯವಗಳ ಉಜ್ಜ್ವಲತೆ ಅಥವಾ ಥಳಥಳ್ಯ. ಇದನ್ನು ಭರತಮುನಿಗಳು "ಮುಕ್ತಾಫಲೇಷು ಚ್ಛಾಯಾಯಾಃ ತರಳತ್ವಮಿವಾಂತರಾ | ಪ್ರತಿಭಾತಿ ಯದಂಗೇಷು ಲಾವಣ್ಯಂ ತದಿಹೋಚ್ಯತೇ" ಎಂದು ಮುತ್ತಿನ ಮಣಿಯಲ್ಲಿರುವ ಅಂತರವಾದ ನಿರೋಟಕ್ಕೆ ಸದೃಶವನ್ನಾಗಿ ಹೋಲಿಸಿದ್ದಾರೆ. ಇದು ಸುಂದರವಾದ ಅವಯವಗಳಿಗೆ ಅತ್ಯಂತಶೋಭಾಕಾರಿ ಎಂದು ತಾತ್ಪರ್ಯ.

ಬಹಿಃಸ್ನಾನಂ ಸದಾ ಕುರ್ಯಾನ್ನಕ್ತಮಶ್ನೀತ ವಾಗ್ಯತಃ ।
ಏಕಭುಕ್ತಂ ಮಹಾರಾಜ ಹವಿಷ್ಯಂ ಪ್ರಯತಃ ಸದಾ ॥ ೩ ॥

ಮಾರ್ಗಶೀರ್ಷಂ ತಥಾ ಪ್ರಾಪ್ಯ ತ್ರಿರಾತ್ರೋಪೋಷಿತಃ ಶುಚಿಃ ।
ಸಂಪೂಜ್ಯ ದೇವಂ ಪ್ರದ್ಯುಮ್ನಂ ಹುತ್ವಾಗ್ನೌ ಘೃತಮೇವ ಚ ॥ ೪ ॥

ಭೋಜಯೇದ್ಬ್ರಾಹ್ಮಣಾಂಶ್ಚಾತ್ರ ಭೋಜನಂ ಲವಣೋತ್ಕಟಂ ।
ಚೂರ್ಣಿತಸ್ಯ ತತಃ ಪ್ರಸ್ಥಂ ಲವಣಸ್ಯ ದ್ವಿಜಾತಯೇ ॥ ೫ ॥

ಮಹಾರಜತರಕ್ತಂ ಚ ವಸ್ತ್ರಯುಗ್ಮಂ ತಥಾ ಗುರೋಃ ।
ದದ್ಯಾಚ್ಚ ಕನಕಂ ರಾಜನ್ ಕಾಂಸ್ಯಪಾತ್ರಂ ರಸೈರ್ಯುತಂ ॥ ೬ ॥

ಏತದ್ಧಿ ಲಾವಣ್ಯಕರಂ ಪ್ರದಿಷ್ಟಂ
ವ್ರತೋತ್ತಮಂ ನಾಕಗತಿಪ್ರದಂ ಚ ।

---

ಹೇಳುತ್ತಾರೆ. ಕಾರ್ತಿಕಮಾಸದಲ್ಲಿ ಪೂರ್ಣಿಮೆಯ ಕಳೆದಮೇಲೆ ಪ್ರತಿಪತ್ತಿನಲ್ಲಿ ಮೊದಲುಮಾಡಿ ವಸ್ತ್ರದಲ್ಲಿಯಾಗಲಿ ವಿಗ್ರಹದಲ್ಲಿಯಾಗಲಿ ಪ್ರಭುವಾದ ಪ್ರದ್ಯುಮ್ನನನ್ನು ಪೂಜಿಸಬೇಕು. ಹೊರಗೇ ಸ್ನಾನಮಾಡುತ್ತಾ ರಾತ್ರಿಯಲ್ಲೇ ಮೌನದಿಂದಿದ್ದು ಭುಂಜಿಸಬೇಕು. ಒಂದೇ ಹೊತ್ತಿನ ಭೋಜನ ಅದರಲ್ಲೂ ಹವಿಷ್ಯಾಶಿಯಾಗಿಯೇ ಇರಬೇಕು. ಮಾರ್ಗಶಿರಮಾಸ ಬಂದಮೇಲೆ ಮೂರುರಾತ್ರಿ ಉಪವಾಸವಿದ್ದು ಪ್ರದ್ಯುಮ್ನದೇವನನ್ನು ಪೂಜಿಸಿ ಅಗ್ನಿಯಲ್ಲಿ ಆಜ್ಯವನ್ನೂ ಹೋಮಮಾಡಬೇಕು.

೫-೭. ಬ್ರಾಹ್ಮಣರ ಭೋಜನವನ್ನು ಮಾಡಿಸಬೇಕು. ಭೋಜನವೂ ಲವಣ ರಸಪ್ರಚುರವಾಗಿರಬೇಕು. ಪುಡಿಮಾಡಿದ ಒಂದು ಕೊಳಗ ಲವಣವನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ಚಿನ್ನದ ಸರಿಗೆಯಿಂದ ಕೂಡಿದ ವಸ್ತ್ರದ್ವಯವನ್ನು

ನ ಕೇವಲಂ ಯೋದವವೀರಕಾವಾ
ನ್ನರಾಯ ದದ್ಯಾತ್ಪುರುಷಪ್ರಧಾನ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಲಾವಣ್ಯವ್ರತವರ್ಣನೋ ನಾಮ
ತ್ರ್ಯುತ್ತರದ್ವಿಶತತಮೋಽಧ್ಯಾಯಃ

---

ಗುರುವಿಗೆ ದಾನಮಾಡಬೇಕು. ಯಥಾಶಕ್ತಿ ಸುವರ್ಣವನ್ನೂ ಕ್ಷೀರಾದಿ ರಸದಿಂದ ತುಂಬಿದ ಕಂಚಿನ ಪಾತ್ರೆಯನ್ನೂ ದಾನಮಾಡಬೇಕು. ಲಾವಣ್ಯಪ್ರದವಾದ ಈ ವ್ರತವು ಸ್ವರ್ಗಪ್ರದವಾಗಿಯೂ ಆಗಿರುತ್ತದೆ. ಇದು ಮಾತ್ರವೇ ಅಲ್ಲ. ಇದು ಸರ್ವ ವಿಧವಾದ ಇಷ್ಟಾರ್ಥಗಳಿಗೂ ಸಾಧಕವಾಗಿರುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಲಾವಣ್ಯವ್ರತವರ್ಣನವೆಂಬ
ಇನ್ನೂರ ಮೂರನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಚತುರುತ್ತರದ್ವಿಶತತಮೋಽಧ್ಯಾಯಃ ||

|| ವಜ್ರ ಉವಾಚ ||

ಭಗವನ್ ಕರ್ಮಣಾ ಕೇನ ಸೌಭಾಗ್ಯಂ ಮಹದಾಪ್ನುಯಾತ್ ।
ಲಾವಣ್ಯರೂಪೇ ಸೌಭಾಗ್ಯಂ ವಿನಾ ಜ್ಞೇಯೇ ನಿರರ್ಥಕೇ || ೧ ||

|| ಮಾರ್ಕಂಡೇಯ ಉವಾಚ ||

ಮಾಘ್ಯಾಂ ತು ಸಮತೀತಾಯಾಂ ಪ್ರತಿಪತ್ಪ್ರಭೃತಿಕ್ರಮಾತ್ ।
ಪಟೇ ವಾ ಯದಿ ವಾರ್ಚಾಯಾಂ ಕೃಷ್ಣಂ ಸಂಪೂಜಯೇತ್ಸದಾ || ೨ ||

ಪೂರ್ವೋಕ್ತಂ ಸಕಲಂ ಕುರ್ಯಾದ್ಧವಿಷ್ಯಂ ಚ ನರಾಧಿಪ ।
ನಿತ್ಯಂ ಸಮಾಚರೇತ್ಸ್ನಾನಂ ತಥಾ ಗಂಧಪ್ರಿಯಂಗುನಾ || ೩ ||

---

### ಇನ್ನೂರ ನಾಲ್ಕನೆಯ ಅಧ್ಯಾಯ.

೧–೫. ವಜ್ರನು ಪ್ರಶ್ನೆ ಮಾಡುತ್ತಾನೆ–ಪೂಜ್ಯರೇ ಸೌಭಾಗ್ಯವನ್ನು ಹೊಂದಲು ಯಾವ ಕರ್ಮವನ್ನು ಆಚರಿಸಬೇಕು. ಸೌಭಾಗ್ಯವಿಲ್ಲದಿದ್ದರೆ ರೂಪಲಾವಣ್ಯಗಳೂ ಸಹ ವ್ಯರ್ಥವಾಗುತ್ತವೆ. ಎಂದು ತಿಳಿದಿರುತ್ತವೆ. ಮಾರ್ಕಂಡೇಯರು ಹೇಳುತ್ತಾರೆ. ಮಾಘಪೂರ್ಣಿಮೆಯು ಕಳೆದನಂತರ ಬಹುಳ ಪ್ರತಿಪತ್ತನ್ನು ಮೊದಲುಮಾಡಿಕೊಂಡು ವಸ್ತ್ರದಲ್ಲಾಗಲಿ, ವಿಗ್ರಹದಲ್ಲಾಗಲಿ, ಕೃಷ್ಣನನ್ನು ನಿತ್ಯವೂ ಪೂಜಿಸಬೇಕು.

ಫಾಲ್ಗುನ್ಯಾಂ ತಾಂ ತತೋದದ್ಯಾತ್ತ್ರಿರಾತ್ರೋಪೋಷಿತಃ ಶುಚಿಃ ॥ ೪ ॥

ವಸ್ತ್ರೇ ಚ ದೇಯೇ ನೃಪಕುಂಕುಮಾಕ್ತೇ
　　ಕ್ಷೌದ್ರಸ್ಯ ಪಾತ್ರಂ ಚ ತಥೈವ ಕಾಂಸ್ಯಂ ।
ಸೌಭಾಗ್ಯದಂ ಚೈತದನುತ್ತಮಂ ತೇ
　　ವ್ರತಂ ಮಯೈತತ್ಕಥಿತಂ ನೃವೀರ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಸೌಭಾಗ್ಯಾವಾಪ್ತಿವ್ರತವರ್ಣನೋ ನಾಮ
ಚತುರುತ್ತರದ್ವಿಶತತಮೋಽಧ್ಯಾಯಃ

---

ಪೂಜಾದಿಗಳನ್ನೂ ಹವಿಷ್ಯಭೋಜನಾದಿಗಳನ್ನೂ ಸಹ ಹಿಂದೆ ಹೇಳಿದಂತಯೇ ನಡೆಸಬೇಕು. ನಿತ್ಯವೂ ಪ್ರಿಯಂಗುವೆಂಬ ಸುಗಂಧಮೂಲಿಕೆಯಿಂದ ಸ್ನಾನಮಾಡಬೇಕು ಮೊದಲು ಮೂರುರಾತ್ರಿ ಉಪವಾಸವಿದ್ದು ಫಾಲ್ಗುನ ಶುದ್ಧಪೂರ್ಣಿಮೆಯಲ್ಲಿ ಆ ಪ್ರಿಯಂಗುವನ್ನೇ ದಾನಮಾಡಬೇಕು. ಕುಂಕುಮಕೇಸರಿಯಲ್ಲಿ ರಂಜಿತವಾದ ವಸ್ತ್ರಯುಗ್ಮವನ್ನೂ ಜೇನಿನಿಂದ ಕೂಡಿದ ಕಂಚಿನ ಪಾತ್ರೆಯನ್ನೂ ದಾನಮಾಡಬೇಕು ಸೌಭಾಗ್ಯಪ್ರದವಾದ ಈ ಉತ್ತಮವ್ರತವನ್ನು ನಾನು ನಿನಗೆ ಈ ರೀತಿ ಹೇಳಿರುತ್ತೇನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಸೌಭಾಗ್ಯಪ್ರಾಪ್ತಿ ವ್ರತವರ್ಣನವೆಂಬ
ಇನ್ನೂರ ನಾಲ್ಕನೆಯ ಅಧ್ಯಾಯ ಮುಗಿದಿದೆ.

---

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಪಂಚೋತ್ತರ ದ್ವಿಶತತಮೋಽಧ್ಯಾಯಃ ||

**|| ವಜ್ರ ಉವಾಚ ||**

**ಭಗವನ್ ಕರ್ಮಣಾ ಕೇನ ನರಂಸ್ತ್ವಾರೋಗ್ಯಮಾಪ್ನುಯಾತ್ ।**
**ರೂಪಸೌಭಾಗ್ಯಲಾವಣ್ಯಾಃ ಸರೋಗಸ್ಯ ನಿರರ್ಥಕಾಃ || ೧ ||**

**|| ಮಾರ್ಕಂಡೇಯ ಉವಾಚ ||**

**ಪ್ರೋಷ್ಠಪದ್ಯಾಮತೀತಾಯಾಂ ಪ್ರತಿಪತ್ಪ್ರಭೃತಿಕ್ರಮಾತ್ ।**
**ಪಟೇ ವಾ ಯದಿವಾಚಾರ್ಯಾಮನಿರುದ್ಧಂ ತು ಪೂಜಯೇತ್ || ೨ ||**

**ಪೂರ್ವೋಕ್ತೇನ ವಿಧಾನೇನ ಯಾವದಾಶ್ವಯುಜೀ ಭವೇತ್ ।**
**ಸಾರಸ್ಥೈರರ್ಚಯೇದ್ದೇವಂ ಜಾತೀಪುಷ್ಪೈರ್ದಿನೇದಿನೇ || ೩ ||**

---

### ಇನ್ನೂರ ಐದನೆಯ ಅಧ್ಯಾಯ

೧-೪. ವಜ್ರನು ಪ್ರಶ್ನೆಮಾಡುತ್ತಾನೆ :—ಪೂಜ್ಯರೇ, ಮನುಷ್ಯನಾದವನು ಯಾವ ಕರ್ಮದಿಂದ ಆರೋಗ್ಯ ಹೊಂದುತ್ತಾನೆ? ರೋಗಿಯಾದವನಿಗೆ ರೂಪ, ಸೌಭಾಗ್ಯ, ಲಾವಣ್ಯಗಳೆಲ್ಲವೂ ವ್ಯರ್ಥವಷ್ಟೆ? ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ :—ಭಾದ್ರಪದಶುದ್ಧ ಪೂರ್ಣಿಮೆಯು ಕಳೆದ ಮೇಲೆ ಬಹುಳ ಪ್ರಥಮೆ ಮೊದಲುಮಾಡಿ ವಸ್ತ್ರದಲ್ಲಿಯಾಗಲಿ, ವಿಗ್ರಹದಲ್ಲಿಯಾಗಲಿ ಅನಿರುದ್ಧನನ್ನು ಪೂಜಿಸ

ಘೃತೇನ ಜುಹುಯಾದ್ವಹ್ನಿಂ ಘೃತಂ ದದ್ಯಾದ್ದ್ವಿಜಾತಯೇ ।
ಭೋಜನಂ ಗೋರಸಪ್ರಾಯಂ ತಥಾ ವಿಪ್ರಾಂಶ್ಚ ಭೋಜಯೇತ್ ॥ ೪ ॥

ತ್ರಿರಾತ್ರೋಪೋಷಿತಃ ಸಮ್ಯಗಾಶ್ವಯುಜ್ಯಾಂ ತತೋ ನರಃ ।
ಸಘೃತಂ ಸಸುವರ್ಣಂ ಚ ಕಾಂಸ್ಯ ಪಾತ್ರಂ ದ್ವಿಜಾತಯೇ ॥ ೫ ॥

ದದ್ಯಾನ್ನೃಪತಿಶಾರ್ದೂಲ ನರಸ್ತ್ವಾರೋಗ್ಯವೃದ್ಧಯೇ ।
ವ್ರತಮೇತದ್ವಿನಿರ್ದಿಷ್ಟಂ ಸ್ವರ್ಗಲೋಕಪ್ರದಂ ನೃಣಾಂ ॥ ೬ ॥

ನ ಕೇವಲಂ ರೋಗಹರಂ ಪ್ರದಿಷ್ಟ
ಮಾಜ್ಞಾಕರಂ ರೂಪವಿವೃದ್ಧಿದಂ ಚ ।
ವ್ರತೋತ್ತಮಂ ತೇ ಕಥಿತಂ ನೃವೀರ
ತಥೇಷ್ಟಕಾಮಾಪ್ತಿಕರಂ ನೃಲೋಕೇ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಆರೋಗ್ಯವ್ರತವರ್ಣನೋನಾಮ
ಪಂಚೋತ್ತರ ದ್ವಿಶತತಮೋಽಧ್ಯಾಯಃ

---

ಬೇಕು. ಆಶ್ವಯುಜ ಪೌರ್ಣಮಿಯ ವರೆಗೂ ಹಿಂದೆ ಹೇಳಿರುವ ವಿಧಾನದಿಂದ ಪೂಜಿಸಿ ಕಮಲಗಳಿಂದಲೂ, ಜಾಜೀ ಹೂವುಗಳಿಂದಲೂ, ನಿತ್ಯವೂ ಅರ್ಚನೆಮಾಡ ಬೇಕು. ಅಗ್ನಿಯಲ್ಲಿ ಆಜ್ಯದಿಂದ ಹೋಮಮಾಡಿ ಬ್ರಾಹ್ಮಣನಿಗೂ ಆಜ್ಯವನ್ನು ದಾನಮಾಡಬೇಕು. ಮತ್ತು ಹಾಲು, ಮೊಸರು ಮೊದಲಾದ ಗೋರಸ ಪ್ರಚುರ ವಾದ ಭೋಜನವನ್ನು ಬ್ರಾಹ್ಮಣನಿಗೆ ನೀಡಬೇಕು.

೫-೭. ಮೂರು ರಾತ್ರಿ ಉಪವಾಸಮಾಡಿ ಆಶ್ವಯುಜ ಪೂರ್ಣಿಮೆಯಲ್ಲಿ ಪೂಜೆಯನ್ನು ನಡೆಸಿ, ಆಜ್ಯ ಮತ್ತು ಸುವರ್ಣಗಳಿಂದ ಕಂಚಿನ ಪಾತ್ರೆಯನ್ನು ಬ್ರಾಹ್ಮಣರಿಗೆ ದಾನಮಾಡಬೇಕು. ಇದು ಆರೋಗ್ಯವೃದ್ಧಿಗೂ, ಸ್ವರ್ಗಲೋಕ ಪ್ರಾಪ್ತಿಗೂ ಕಾರಣವಾದ ವ್ರತವೆಂದು ಹೇಳಲ್ಪಟ್ಟಿದೆ. ಇದು ಆರೋಗ್ಯಪ್ರದ ಮಾತ್ರವೇ ಅಲ್ಲ, ಅಜ್ಞಾಶಕ್ತಿಯನ್ನೂ, ಸುರೂಪವನ್ನೂ ಸಹ ಉಂಟುಮಾಡುತ್ತದೆ. ಭೂಲೋಕದಲ್ಲಿರುವಾಗಲೂ ಈ ವ್ರತದಿಂದ ಎಲ್ಲಾ ವಿಧವಾದ ಇಷ್ಟಸಿದ್ಧಿಗಳೂ ಉಂಟಾಗುತ್ತದೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಆರೋಗ್ಯ ವ್ರತವರ್ಣನವೆಂಬ
ಇನ್ನೂರ ಐದನೆಯ ಅಧ್ಯಾಯ ಮುಗಿದುದು.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಷಡುತ್ತರದ್ವಿಶತತಮೋಽಧ್ಯಾಯಃ ||

|| ವಜ್ರ ಉವಾಚ ||

ಭಗವನ್ ಕರ್ಮಣಾ ಕೇನ ಪ್ರಜ್ಞಾಯುಕ್ತೋ ಭವೇನ್ನರಃ |
ಏತದೇವ ಮನುಷ್ಯಾಣಾಂ ಮನುಷ್ಯತ್ವಮುದಾಹೃತಂ || ೧ ||

|| ಮಾರ್ಕಂಡೇಯ ಉವಾಚ ||

ಚೈತ್ರ್ಯಾಂ ತು ಸಮತೀತಾಯಾಂ ಯಾವನ್ಮಾಸಂ ದಿನೇದಿನೇ |
ಪೂರ್ವವತ್ಪೂಜಯೇದ್ದೇವಂ ನೃಸಿಂಹಮಪರಾಜಿತಂ || ೨ ||

ಹೋಮಂ ಚ ಪ್ರತ್ಯಹಂ ಕುರ್ಯಾತ್ತಥಾ ಸಿದ್ಧಾರ್ಥಕೈರ್ನೃಪ |
ಬ್ರಾಹ್ಮಣಾನ್ ಭೋಜಯೇಚ್ಚಾತ್ರ ತಥಾ ತ್ರಿಮಧುರಂ ಸದಾ || ೩ ||

---

### ಇನ್ನೂರ ಆರನೆಯ ಅಧ್ಯಾಯ.

೧-೫. ವಜ್ರನು ಪ್ರಶ್ನೆಮಾಡುತ್ತಾನೆ:—ಪೂಜ್ಯರೇ ಯಾವ ಕರ್ಮದಿಂದ ಮನುಷ್ಯನು ಪ್ರಜ್ಞಾಶಾಲಿಯಾಗಬಹುದು. ಮನುಷ್ಯನ ಮನುಷ್ಯತ್ವವು ಪ್ರಜ್ಞಾ ಮೂಲಕವೇ ಆಗಿರುತ್ತದೆಯಷ್ಟೆ. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ—ಚೈತ್ರಶುಕ್ಲ ಪೂರ್ಣಿಮೆಯು ಕಳೆದ ಮೇಲೆ ಆ ಮಾಸ ಪೂರ್ತಿಯಾಗಿ ಪ್ರತಿದಿನವೂ ಹಿಂದೆ ಹೇಳಿರುವ ಅಪರಾಜಿತಮೂರ್ತಿಯಾದ ನೃಸಿಂಹನನ್ನು ಪೂಜಿಸ

ವೈಶಾಖ್ಯಾಂ ಕನಕಂ ದದ್ಯಾತ್ತ್ರಿರಾತ್ರೋಪೋಷಿತೋ ನರಃ ।
ಜ್ಞಾನಾವಾಪ್ತಿಪ್ರದಂ ಹ್ಯೇತದ್ವ್ರತಂ ಬುದ್ಧಿವಿವರ್ಧನಂ ॥ ೪ ॥

ಕೃತ್ವಾ ವ್ರತಂ ಮಾಸಮಿದಂ ಮಯೋಕ್ತ-
ಮಾಸಾದ್ಯ ನಾಕಂ ಸುಚಿರಂ ಮನುಷ್ಯಃ ।
ಮಾನುಷ್ಯಮಾಸಾದ್ಯ ಚ ಬುದ್ಧಿಯುಕ್ತೋ
ಜ್ಞಾನೇನ ಯುಕ್ತಶ್ಚ ತಥಾ ಭವೇತ್ತು ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಬುದ್ಧ್ಯವಾಪ್ತಿವ್ರತವರ್ಣನೋನಾಮ
ಷಡುತ್ತರದ್ವಿಶತತಮೋಽಧ್ಯಾಯಃ

---

ಬೇಕು. ಪ್ರತಿದಿನವೂ ಬಿಳಿಯ ಸಾಸವೆಯಿಂದ ಹೋಮಮಾಡುತ್ತಿರಬೇಕು. ಮೂರು ವಿಧವಾದ ಮಧುರಭಕ್ಷ್ಯದೊಡನೆ ಬ್ರಾಹ್ಮಣನನ್ನು ಭೋಜನಮಾಡಿಸಬೇಕು. ವೈಶಾಖ ಪೂರ್ಣಿಮೆಯಲ್ಲಿ ಮೂರುರಾತ್ರಿ ಮೊದಲು ಉಪವಾಸವಿದ್ದು ಸುವರ್ಣವನ್ನು ದಾನಮಾಡಬೇಕು. ಈ ವ್ರತವು ಜ್ಞಾನಪ್ರಾಪ್ತಿಗೂ, ಬುದ್ಧಿಯ ಅಭಿವೃದ್ಧಿಗೂ ಕಾರಣವಾಗುತ್ತದೆ. ಈ ವ್ರತವನ್ನು ಒಂದು ತಿಂಗಳು ಪೂರ್ತಿ ಯಥಾವಿಧಿಯಾಗಿ ಆಚರಿಸಿದವನು ಸ್ವರ್ಗವನ್ನು ಹೊಂದಿ ಸುಖಿಸುತ್ತಾನೆ. ಪುನಃ ಮನುಷ್ಯನಾಗಿ ಜನಿಸುವಾಗ ಜ್ಞಾನಿಯಾಗಿಯೂ, ಬುದ್ಧಿಶಾಲಿಯಾಗಿಯೂ ಆಗುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಬುದ್ಧ್ಯವಾಪ್ತಿವ್ರತವರ್ಣನವೆಂಬ
ಇನ್ನೂರ ಆರನೆಯ ಅಧ್ಯಾಯ ಮುಗಿದಿದೆ.



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಸಪ್ತೋತ್ತರ ದ್ವಿಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

**ಭಗವನ್ ಕರ್ಮಣಾ ಕೇನ ವಿದ್ಯಾವಾನ್ ಪುರುಷೋ ಭವೇತ್ ।**
**ಸುವಿದ್ಯ ಏವ ವಿಜ್ಞೇಯಃ ಪುರುಷಃ ಪಶುರನ್ಯಥಾ ॥ ೧ ॥**

॥ ಮಾರ್ಕಂಡೇಯ ಉವಾಚ ॥

**ಪೌಷ್ಯಾಂ ತು ಸಮತೀತಾಯಾಂ ಪ್ರತಿಪತ್ಪ್ರಭೃತಿಕ್ರಮಾತ್ ।**
**ಪ್ರಾಗ್ವತ್ಸಂಪೂಜಯೇದ್ದೇವಂ ತುರಂಗಶಿರಸಂ ಹರಿಂ ॥ ೨ ॥**

**ತಿಲಾಂಶ್ಚ ಜುಹುಯಾದ್ವಹ್ನೌ ತಿಲೈರ್ದೇವಂ ಸಮರ್ಚಯೇತ್ ।**
**ತ್ರಿರಾತ್ರೋಪೋಷಿತೋ ಮಾಘ್ಯಾಂ ತಿಲಾನ್ಕನಕಮೇವ ಚ ॥ ೩ ॥**

---

### ಇನ್ನೂರ ಏಳನೆಯ ಅಧ್ಯಾಯ.

೧-೫. ವಜ್ರನು ಪ್ರಶ್ನೆ ಮಾಡುತ್ತಾನೆ:—ಪೂಜ್ಯರೇ, ಮನುಷ್ಯನು ವಿದ್ಯಾವಂತನಾಗಲು ಯಾವ ಕರ್ಮವನ್ನು ಆಚರಿಸಬೇಕು. ವಿದ್ಯಾವಂತನೇ ಪುರುಷನೆಂದು ಹೇಳಬೇಕಾಗುತ್ತದೆ. ಇಲ್ಲದಿದ್ದಲ್ಲಿ ಅವನು ಪಶುವೇ ಅಲ್ಲವೇ? ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ:—ಪುಷ್ಯಶುದ್ಧ ಪೂರ್ಣಿಮೆಯು ಕಳೆದನಂತರ ಬಹುಳ ಪ್ರತಿಪತ್ತಿನಿಂದ ಪ್ರಾರಂಭಿಸಿ ಹಯಗ್ರೀವರೂಪಿಯಾದ ಹರಿಯನ್ನು ಹಿಂದೆ ಹೇಳಿದ ಕ್ರಮದಿಂದ ಪೂಜಿಸಬೇಕು. ಅಗ್ನಿಯಲ್ಲಿ ತಿಲಗಳಿಂದ ಹೋಮಮಾಡಿ

ದದ್ಯಾದ್ಬ್ರಾಹ್ಮಣಮುಖ್ಯಾಯ ಸಮ್ಯಕ್ಶ್ರಯತಮಾನಸಃ ।
ಮುಖ್ಯಂ ಯಜ್ಞೋಪವೀತಂ ಚ ಪ್ರಭೂತಮಪಿಚೇಂಧನಂ ॥ ೪ ॥

ಕೃತ್ವಾ ವ್ರತಂ ಮಾಸಮಿದಂ ಮಯೋಕ್ತಂ
ವಿದ್ಯಾನ್ವಿತಃ ಸ್ಯಾತ್ಪುರುಷಃ ಸದೈವ ।
ಸ್ವರ್ಲೋಕಮಾಸಾದ್ಯ ಸುಖಾನಿ ಭುಕ್ತ್ವಾ
ಕಾಮಾನಭೀಷ್ಟಾನ್ ಪುರುಷೋಽಶ್ನುತೇ ಚ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ವಿದ್ಯಾಪ್ರಾಪ್ತಿವ್ರತವರ್ಣನೋ ನಾಮ
ಸಪ್ತೋತ್ತರದ್ವಿಶತತಮೋಽಧ್ಯಾಯಃ

---

ತಿಲಗಳಿಂದಲೇ ಅರ್ಚಿಸಬೇಕು. ಮಾಘ ಪೂರ್ಣಿಮೆಯಲ್ಲಿ ಮೂರುರಾತ್ರಿ ಹಿಂದಿನಿಂದ ಉಪವಾಸವಿದ್ದು ತಿಲಮಿಶ್ರವಾದ ಸುವರ್ಣವನ್ನು ಬ್ರಾಹ್ಮಣನಿಗೆ ಕೊಡಬೇಕು. ಒಳ್ಳೆಯ ಯಜ್ಞೋಪವೀತವನ್ನೂ, ಹೆಚ್ಚಾದ ಸೌದೆಯನ್ನೂ ಸಹ ಕೊಡಬೇಕು. ಈ ವ್ರತವನ್ನು ಒಂದು ತಿಂಗಳು ಮಾಡಿದಲ್ಲಿ ಪುರುಷನು ವಿದ್ಯಾವಂತನಾಗುತ್ತಾನೆ. ಸ್ವರ್ಗಲೋಕವನ್ನು ಹೊಂದಿ ಸುಖಿಸುತ್ತಾನೆ. ಇಷ್ಟವಾದ ಮನೋರಥಗಳೂ ಫಲಿಸುತ್ತವೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ವಿದ್ಯಾವಾಪ್ತಿವ್ರತವರ್ಣನವೆಂಬ
ಇನ್ನೂರ ಏಳನೆಯ ಅಧ್ಯಾಯ ಮುಗಿದಿದೆ.



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಅಷ್ಟೋತ್ತರ ದ್ವಿಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

**ಭಗವನ್ ಕರ್ಮಣಾ ಕೇನ ಶೀಲವಾನ್ ಪುರುಷೋ ಭವೇತ್ ।**
**ಕುಲಜಾತಿಶ್ರುತಿಭ್ಯಶ್ಚ ಶೀಲಮೇವ ವಿಶಿಷ್ಯತೇ ॥ ೧ ॥**

॥ ಮಾರ್ಕಂಡೇಯ ಉವಾಚ ॥

**ಆಗ್ರಾಯಣ್ಯಾಮತೀತಾಯಾಂ ಮಾಸಮೇಕಂ ದಿನೇದಿನೇ ।**
**ಪೂರ್ವವತ್ಪೂಜಯೇದ್ದೇವಂ ವರಾಹಮಪರಾಜಿತಂ ॥ ೨ ॥**

**ಘೃತೇನ ಸ್ನಾಪಯೇದ್ದೇವಂ ಘೃತೇನ ಜುಹುಯಾದ್ಧವಿಃ ।**
**ಘೃತಂ ದ್ವಿಜೇಭ್ಯೋ ದದ್ಯಾಚ್ಚ ಘೃತಮೇವ ನಿವೇದಯೇತ್ ॥ ೩ ॥**

---

### ಇನ್ನೂರ ಎಂಟನೆಯ ಅಧ್ಯಾಯ.

೧–೫. ವಜ್ರನು ಪ್ರಶ್ನೆ ಮಾಡುತ್ತಾನೆ:—ಮನುಷ್ಯನು ಯಾವ ಕರ್ಮವನ್ನು ಆಚರಿಸಿದಲ್ಲಿ ಶೀಲವಂತನಾಗಿ ಬದುಕುತ್ತಾನೆ? ಕುಲ, ಜಾತಿ, ವಿದ್ಯೆ ಇವೆಲ್ಲಕ್ಕಿಂತಲೂ ಇವನ್ನೂ ಸಾರ್ಥಕಗೊಳಿಸುವ ಶೀಲವೇ ಉತ್ತಮವಾದದ್ದು. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ:—ಮಾರ್ಗಶಿರ ಶುಕ್ಲಪೂರ್ಣಿಮೆಯು ಕಳೆದ ನಂತರ ಒಂದು ತಿಂಗಳ ವರೆಗೆ ಪ್ರತಿದಿನದಲ್ಲಿಯೂ ಅಪರಾಜಿತನಾದ ವರಾಹಮೂರ್ತಿಯನ್ನು ಹಿಂದೆ ಹೇಳಿರುವ ಕ್ರಮದಂತೆ ಪೂಜಿಸಬೇಕು. ವರಾಹದೇವನನ್ನು ಆಜ್ಯದಿಂದಲೇ ಸ್ನಾನಮಾಡಿಸಬೇಕು. ಆಜ್ಯದಿಂದಲೇ ಹೋಮವನ್ನೂ ಮಾಡಬೇಕು. ನೈವೇದ್ಯಕ್ಕೂ ಘೃತವನ್ನೇ ಅರ್ಪಿಸಬೇಕು ಬ್ರಾಹ್ಮಣರಿಗೂ

ತ್ರಿರಾತ್ರೋಪೋಷಿತಃ ಪೌಷ್ಯಾಂ ಘೃತಪಾತ್ರೇಣ ಚ ದ್ವಿಜಾನ್ ।
ಪೂಜಯೇತ್ಸಸುವರ್ಣೇನ ಯಥಾಶಕ್ತಿ ನರಾಧಿಪ ॥ ೪ ॥

ಕೃತ್ವಾ ವ್ರತಂ ಮಾಸಮಿದಂ ಮಯೋಕ್ತಂ
ಚಾಸಾದ್ಯ ನಾಕಂ ಸುಚಿರಂ ಮನುಷ್ಯಃ ।
ಮಾನುಷ್ಯಮಾಸಾದ್ಯ ಚ ಶೀಲವಾನ್ ಸ್ಯಾ
ತ್ಪ್ರಾಪ್ನೋತಿಪುಷ್ಟಿಂ ಚಿರಜೀವಿತಂ ಚ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೀಲಪ್ರಾಪ್ತಿವ್ರತವರ್ಣನೋ ನಾಮ
ಅಷ್ಟೋತ್ತರಶತತಮೋಽಧ್ಯಾಯಃ

---

ಘೃತವನ್ನೇ ದಾನಮಾಡಬೇಕು. ಪುಷ್ಯ ಶುಕ್ಲಪೂರ್ಣಿಮೆಯಲ್ಲಿ ಹಿಂದೆ ಮೂರು ರಾತ್ರಿ ಉಪವಾಸವಿದ್ದು ಬ್ರಾಹ್ಮಣರಿಗೆ ಯಥಾಶಕ್ತಿ ಆಜ್ಯಪಾತ್ರೆಯಿಂದ ಕೂಡಿದ ಸುವರ್ಣವನ್ನು ದಾನಮಾಡಿ ಅವರನ್ನು ಸಂತೋಷಪಡಿಸಬೇಕು. ನಾನು ಹೇಳಿರುವ ಈ ವ್ರತವನ್ನು ಒಂದು ತಿಂಗಳು ಮಾಡಿದಲ್ಲಿ ಬಹುಕಾಲ ಸ್ವರ್ಗಸುಖವನ್ನು ಹೊಂದಿ ಪುನಃ ಮನುಷ್ಯನಾಗಿ ಜನಿಸುವಾಗ ಶೀಲವಂತನಾಗಿಯೂ, ಪುಷ್ಟಿಯುಳ್ಳವನಾಗಿಯೂ ಇದ್ದು, ಬಹುಕಾಲ ಬದುಕುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಶೀಲಾವಾಪ್ತಿ ವ್ರತವರ್ಣನವೆಂಬ
ಇನ್ನೂರ ಎಂಟನೆಯ ಅಧ್ಯಾಯ ಮುಗಿದಿದೆ.



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ನವೋತ್ತರದ್ವಿಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

**ಭಗವನ್ ಕರ್ಮಣಾ ಕೇನ ನಿತ್ಯಂ ಧರ್ಮಪರೋ ಭವೇತ್ ।**
**ಧರ್ಮವಿಚ್ಚ ಮಹಾರಾಜ ಧರ್ಮಸಾಫಲ್ಯಕಾರಣಾತ್ ॥ ೧ ॥**

॥ ಮಾರ್ಕಂಡೇಯ ಉವಾಚ ॥

**ಆಷಾಢ್ಯಾಂ ಸಮತೀತಾಯಾಂ ಪ್ರತಿಪತ್ಪ್ರಭೃತಿಕ್ರಮಾತ್ ।**
**ಪೂರ್ವವತ್ಪೂಜಯೇದ್ದೇವಂ ಧರ್ಮವಿಗ್ರಹಧಾರಿಣಂ ॥ ೨ ॥**

---

### ಇನ್ನೂರ ಒಂಭತ್ತನೆಯ ಅಧ್ಯಾಯ.

೧-೩. ವಜ್ರನು ಪ್ರಶ್ನೆಮಾಡುತ್ತಾನೆ :—ಪೂಜ್ಯರೇ ಯಾವ ಕರ್ಮವನ್ನು ಆಚರಿಸಿದಲ್ಲಿ ಮನುಷ್ಯನು ಧರ್ಮಪರನಾಗುವನು. ಧರ್ಮಜ್ಞನಾಗಿದ್ದಲ್ಲಿಯೇ ಯಜ್ಞಯಾಗಾದಿ ಧರ್ಮಗಳು ಅನುಷ್ಠಾನದಿಂದ ಸಫಲವಾಗುತ್ತವೆ. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ. ಆಷಾಢ ಶುಕ್ಲ ಪೂರ್ಣಿಮೆಯು ಕಳೆದ ಮೇಲೆ ಬಹುಳ ಪ್ರತಿಪತ್ತನ್ನು ಮೊದಲುಮಾಡಿಕೊಂಡು ಹಿಂದೆ ಹೇಳಿರುವಂತೆ ಧರ್ಮರೂಪಿಯಾದ ಹರಿಯನ್ನು ಪೂಜಿಸಬೇಕು ಮಾಸದ ಕೊನೆಯಲ್ಲಿ ಮೂರು ರಾತ್ರಿ

ಮಾಸಸ್ಯ ಚಾಂತೇ ನೃಪ ಪೌರ್ಣಮಾಸ್ಯಾಂ
ಕೃತ್ವಾ ತ್ರಿರಾತ್ರಂ ಕನಕಂ ಚ ದದ್ಯಾತ್ ।
ವ್ರತೋತ್ತಮಂ ಧರ್ಮಕರಂ ತವೋಕ್ತಂ
ಸರ್ವಾರ್ಥದಂ ನಾತ್ರ ವಿಚಾರಣಾಸ್ತಿ　　॥ ೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಧರ್ಮಪ್ರಾಪ್ತಿವ್ರತವರ್ಣನೋ ನಾಮ
ನವೋತ್ತರದ್ವಿಶತತಮೋಽಧ್ಯಾಯಃ

---

ಉಪವಾಸವಿದ್ದು ಪೂರ್ಣಿಮೆಯಲ್ಲಿ ಸುವರ್ಣವನ್ನು ದಾನಮಾಡಬೇಕು. ಧರ್ಮಪರನಾಗಲು ಉತ್ತಮವಾದ ಈ ವ್ರತವನ್ನು ನಿನಗೆ ಹೇಳಿರುತ್ತೇನೆ. ಇದು ಸರ್ವವಿಧವಾದ ಇಷ್ಟಪ್ರಾಪ್ತಿಗೂ ಸಾಧಕವಾಗುತ್ತದೆ. ಇದರಲ್ಲಿ ವಿಚಾರಮಾಡಬೇಕಾದ್ದಿಲ್ಲ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಧರ್ಮಪ್ರಾಪ್ತಿ ವ್ರತವರ್ಣನವೆಂಬ
ಇನ್ನೂರ ಒಂಭತ್ತನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ದಶೋತ್ತರದ್ವಿಶತತಮೋऽಧ್ಯಾಯಃ ||

|| ವಜ್ರ ಉವಾಚ ||

**ಭಗವನ್ ಕರ್ಮಣಾ ಕೇನ ಧನವಾನ್ ಪುರುಷೋ ಭವೇತ್ ।**
**ಧನವಾನೇವ ಲೋಕೇಷು ಪೂಜ್ಯೋ ಭವತಿ ಮಾನವಃ || ೧ ||**

|| ಮಾರ್ಕಂಡೇಯ ಉವಾಚ ||

**ಶ್ರಾವಣ್ಯಾಂ ಸಮತೀತಾಯಾಂ ಪ್ರತಿಪತ್ಪ್ರಭೃತಿಕ್ರಮಾತ್ ।**
**ಪೂರ್ವವತ್ಪೂಜಯೇದ್ವಿಷ್ಣುಂ ದೇವಂ ಸಂಕರ್ಷಣಂ ಪ್ರಭುಂ || ೨ ||**

**ನೀಲೋತ್ಪಲೈಸ್ತಥಾಪತ್ರೈರ್ನೃಪ ಭೃಂಗಿರಜಸ್ಯ ಚ ।**
**ಘೃತೇನ ಪರಮಾನ್ನೇನ ತಥಾ ಬಿಲ್ವೈಶ್ಚ ಶಕ್ತಿತಃ || ೩ ||**

---

### ಇನ್ನೂರ ಹತ್ತನೆಯ ಅಧ್ಯಾಯ

೧-೫. ವಜ್ರನು ಪ್ರಶ್ನೆ ಮಾಡುತ್ತಾನೆ :— ಪೂಜ್ಯರೇ ಯಾವ ಕರ್ಮಾಚರಣೆಯಿಂದ ಮನುಷ್ಯನು ಧನವಂತನಾಗುತ್ತಾನೆ. ಧನವಂತನೇ ಲೋಕದಲ್ಲಿ ಪೂಜ್ಯನಾಗುವನಷ್ಟೇ, ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ :— ಶ್ರಾವಣ ಪೌರ್ಣಿಮೆಯ ಕಳೆದ ಮೇಲೆ ಬಹುಳ ಪ್ರತಿಪತ್ತಿನಿಂದ ಪ್ರತಿದಿನದಲ್ಲಿಯೂ ಹಿಂದೆ ಹೇಳಿರುವ ವಿಧಿಯಿಂದ ಪ್ರಭುವಾದ ಸಂಕರ್ಷಣನನ್ನು ಪೂಜಿಸಬೇಕು. ಕಪ್ಪು ಕಮಲಗಳಿಂದಲೂ ಭೃಂಗಿರಜಪತ್ರದಿಂದಲೂ, ಘೃತ, ಪರಮಾನ್ನ ಇವುಗಳ ನೈವೇದ್ಯದಿಂದಲೂ, ಯಥಾಶಕ್ತಿ ಬಿಲ್ವಗಳಿಂದಲೂ ಪೂಜಿಸಬೇಕು. ಭಾದ್ರಪದ ಪೌರ್ಣಿಮೆ

ತ್ರಿರಾತ್ರೋಪೋಷಿತಃ ಸಮ್ಯಕ್ ಪ್ರೋಷ್ಠಪದ್ಯಾಂ ತಥಾ ನರಃ ।
ಗಾಂ ಚ ದದ್ಯಾದ್ದ್ವಿಜೇಂದ್ರಾಯ ವ್ರತಾಂತೇ ಮನುಜೋತ್ತಮ ॥ ೪ ॥

ಕೃತ್ವಾ ವ್ರತಂ ಮಾಸಮಿದಂ ಯಥೋಕ್ತಂ
ಚಾಸಾದ್ಯ ನಾಕಂ ಸುಚಿರಂ ಮನುಷ್ಯಃ ।
ಮಾನುಷ್ಯಮಾಸಾದ್ಯ ಧನಾನ್ವಿತಃಸ್ಯಾ
ದ್ವ್ರತೇನ ಚೀರ್ಣೇನ ನರೇಂದ್ರಸಿಂಹ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಧನಾವಾಪ್ತಿವ್ರತವರ್ಣನೋ ನಾಮ
ದಶೋತ್ತರದ್ವಿಶತತಮೋऽಧ್ಯಾಯಃ

---

ಯಲ್ಲಿ ಹಿಂದಿನಿಂದಲೂ ಮೂರು ರಾತ್ರಿ ಉಪವಾಸವಿದ್ದು ವ್ರತದ ಕೊನೆಯಲ್ಲಿ ಬ್ರಾಹ್ಮಣೋತ್ತಮನಿಗೆ ಗೋದಾನಮಾಡಬೇಕು. ಈ ವ್ರತವನ್ನು ಒಂದು ತಿಂಗಳು ಮಾಡಿದವನು, ಬಹುಕಾಲ ಸ್ವರ್ಗಸುಖವನ್ನು ಹೊಂದಿ ಪುನಃ ಮನುಷ್ಯನಾಗಿ ಜನಿಸುವಾಗ ಧನಿಕನಾಗಿಯೇ ಹುಟ್ಟುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದದಲ್ಲಿ ಧನಾವಾಪ್ತಿವ್ರತವರ್ಣನವೆಂಬ ಇನ್ನೂರ ಹತ್ತನೆಯ
ಅಧ್ಯಾಯ ಮುಗಿದಿದೆ.



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಏಕಾದಶೋತ್ತರದ್ವಿಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಶ್ರೀವಿಹೀನಸ್ಯ ಲೋಕೇಽಸ್ಮಿನ್ ಕಿಂ ಧನೇನ ಮಹಾದ್ಯುತೇ ।
ತಸ್ಮಾದ್ವ್ರತಂ ಸಮಾಚಕ್ಷ್ವ ಯೇನ ಸ್ಯಾಚ್ಛ್ರೀಯುತೋ ನರಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ವೈಶಾಖ್ಯಾಂ ಸಮತೀತಾಯಾಂ ಪ್ರತಿಪತ್ಪ್ರಭೃತಿಕ್ರಮಾತ್ ।
ಪೂರ್ವವತ್ಪೂಜಯೇದ್ದೇವಂ ಶ್ರೀಸಹಾಯಂ ದಿನೇ ದಿನೇ ॥ ೨ ॥

ಪುಷ್ಪೈರ್ಮಾಲ್ಯೈಃ ಫಲೈಶ್ಚೈವ ಜುಹುಯಾದಕ್ಷತಾಂಸ್ತಥಾ ।
ಬಿಲ್ವಾಂಶ್ಚ ವಹ್ನೌ ಸತತಂ ಗೋರಸೈರ್ಭೋಜಯೇದ್ವಿಜಾನ್ ॥ ೩ ॥

---

### ಇನ್ನೂರ ಹನ್ನೊಂದನೆಯ ಅಧ್ಯಾಯ.

೧-೫. ವಜ್ರನು ಪ್ರಶ್ನೆ ಮಾಡುತ್ತಾನೆ:-ಮಹಾತ್ಮರೇ, ಲೋಕದಲ್ಲಿ ಲಕ್ಷ್ಮಿಯ ಕಟಾಕ್ಷವಿಲ್ಲದವನಿಗೆ ಕೇವಲ ಧನ ಮಾತ್ರವಿದ್ದು ಏನು ಪ್ರಯೋಜನ? ಆದುದರಿಂದ ಯಾವ ವ್ರತವನ್ನು ಆಚರಿಸಿದಲ್ಲಿ ಮನುಷ್ಯನು ಲಕ್ಷ್ಮಿಯ ಅನುಗ್ರಹಕ್ಕೆ ಪಾತ್ರನಾಗುವನೊ. ಅಂತಹ ವ್ರತವನ್ನು ಅಪ್ಪಣೆ ಕೊಡಿಸಬೇಕು:—ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ:—ವೈಶಾಖಶುಕ್ಲ ಪೌರ್ಣಿಮೆಯು ಕಳೆದ ನಂತರ ಪ್ರತಿಪತ್ತನ್ನು ಮೊದಲು ಮಾಡಿಕೊಂಡು ಪೂರ್ವೋಕ್ತ ಕ್ರಮದಿಂದ ಪ್ರತಿದಿನವೂ ಲಕ್ಷ್ಮೀನಾರಾಯಣನನ್ನು ಪೂಜಿಸಬೇಕು. ಪುಷ್ಪಗಳಿಂದಲೂ, ಗೆಡ್ಡೆಗೆಣಸುಗಳಿಂದಲೂ, ಫಲಗಳಿಂದಲೂ ಪೂಜಿಸಿ, ಅಕ್ಷತೆಗಳಿಂದ ಹೋಮಮಾಡಬೇಕು. ಬಿಲ್ವ

ತ್ರಿರಾತ್ರೋಪೋಷಿತೋ ಜ್ಯೇಷ್ಠೇ ಕನಕಂ ಪ್ರತಿಪಾದಯೇತ್ ।
ವಸ್ತ್ರಯುಗ್ಮಂ ಚ ರಾಜೇಂದ್ರ ತೇನ ಸಾಫಲ್ಯಮಶ್ನುತೇ　　　　॥ ೪ ॥

ಕೃತ್ವಾ ವ್ರತಂ ಮಾಸಮಿದಂ ಯಥೋಕ್ತಂ
ಚಾಸಾದ್ಯ ನಾಕಂ ಸುಚಿರಂ ಮನುಷ್ಯಃ ।
ಮಾನುಷ್ಯಮಾಸಾದ್ಯ ವಿವೃದ್ಧತೇಜಾಃ
ಶ್ರಿಯಾ ಯುತಃ ಸ್ಯಾಜ್ಜಗತಿ ಪ್ರಧಾನಃ　　　　॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶ್ರೀಲಬ್ಧಿವ್ರತವರ್ಣನೋ
ನಾಮೈಕಾದಶೋತ್ತರದ್ವಿಶತತಮೋಽಧ್ಯಾಯಃ

---

ಗಳಿಂದಲೂ ಹೋಮಮಾಡಬೇಕು ಹಾಲು, ಮೊಸರು ಮೊದಲಾದ ಗೋರಸ ಪ್ರಚುರವಾದ ಭೋಜನವನ್ನು ಬ್ರಾಹ್ಮಣರಿಗೆ ನೀಡಬೇಕು. ಮೂರು ರಾತ್ರಿ ಉಪವಾಸವಿದ್ದು ಜ್ಯೇಷ್ಠ ಶುಕ್ಲ ಪೌರ್ಣಿಮೆಯಲ್ಲಿ ಸುವರ್ಣವನ್ನು ದಾನಮಾಡಬೇಕು. ವಸ್ತ್ರಯುಗ್ಮವನ್ನೂ ದಾನಮಾಡಿದಲ್ಲಿ ಈ ವ್ರತವು ಸಾಫಲ್ಯ ಹೊಂದುತ್ತದೆ. ಈ ವ್ರತವನ್ನು ಒಂದು ತಿಂಗಳ ವರೆಗೂ ಹೀಗೆ ನಡೆಸಿದಲ್ಲಿ, ಅವನು ಸ್ವರ್ಗವನ್ನು ಸೇರುತ್ತಾನೆ. ಅಲ್ಲಿ ಬಹುದಿನ ಸುಖದಿಂದಿದ್ದು ಮನುಷ್ಯನಾಗಿ ಹುಟ್ಟಿವಾಗ ತೇಜಸ್ವಿಯಾಗಿಯೂ, ಲಕ್ಷ್ಮಿಯ ಕಟಾಕ್ಷಕ್ಕೆ ಪಾತ್ರನಾಗಿಯೂ ಜಗತ್ತಿಗೇ ಪ್ರಧಾನ ನಾಗುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಶ್ರೀಲಬ್ಧಿವ್ರತವರ್ಣನವೆಂಬ
ಇನ್ನೂರ ಹನ್ನೊಂದನೆಯ ಅಧ್ಯಾಯ
ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ದ್ವಾದಶೋತ್ತರದ್ವಿಶತತಮೋಽಧ್ಯಾಯಃ ||

|| ವಜ್ರ ಉವಾಚ ||

ಭಗವನ್ ಕರ್ಮಣಾ ಕೇನ ಭೋಗಾನಾಪ್ನೋತಿ ಮಾನವಃ ।
ಕಿನ್ನು ಭೋಗವಿಹೀನಸ್ಯ ಕಾರ್ಯಮಸ್ತಿ ಧನೈರ್ದ್ವಿಜ || ೧ ||

|| ಮಾರ್ಕಂಡೇಯ ಉವಾಚ ||

ಜ್ಯೇಷ್ಠಾಯಾಂ ಸಮತೀತಾಯಾಂ ಪ್ರತಿಪತ್ಪ್ರಭೃತಿಕ್ರಮಾತ್ ।
ಪೂರ್ವವತ್ಪೂಜಯೇದ್ದೇವಂ ವಿಶ್ವರೂಪಧರಂ ಹರಿಂ || ೨ ||

ಕೃತ್ವಾ ವ್ರತಾಂತೇ ಚ ತಥಾ ತ್ರಿರಾತ್ರಂ
ದತ್ವಾ ಸುಯುಕ್ತಂ ಶಯನಂ ದ್ವಿಜಾಯ ।

---

### ಇನ್ನೂರ ಹನ್ನೆರಡನೆಯ ಅಧ್ಯಾಯ.

೧-೩. ವಜ್ರನು ಪ್ರಶ್ನೆ ಮಾಡುತ್ತಾನೆ:—ಪೂಜ್ಯರೇ, ಮನುಷ್ಯನು ಯಾವ ಕರ್ಮದಿಂದ ಭೋಗಿಯಾಗುತ್ತಾನೆ. ಭೋಗಹೊಂದುವ ಯೋಗ್ಯತೆ ಇಲ್ಲದವನಿಗೆ ಧನದಿಂದ ಪ್ರಯೋಜನವೇನು ? ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ. ಜ್ಯೇಷ್ಠಶುಕ್ಲ ಪೂರ್ಣಿಮೆಯು ಕಳೆದನಂತರ ಪ್ರತಿಪತ್ತನ್ನು ಮೊದಲು ಮಾಡಿಕೊಂಡು ಹಿಂದೆ ಹೇಳಿರುವ ಕ್ರಮದಿಂದ ವಿಶ್ವರೂಪಿಯಾದ ಹರಿಯನ್ನು ಪೂಜಿಸಬೇಕು. ಹೀಗೆ ಪೂಜಿಸಿ ವ್ರತದ ಕೊನೆಯಲ್ಲಿ ಮೂರು ರಾತ್ರಿ ಉಪವಾಸ ಮಾಡಿ ಬ್ರಾಹ್ಮಣನಿಗೆ ಸರಿಯಾದ ಉಪಕರಣಗಳಿಂದ ಕೂಡಿದ ಶಯನವನ್ನು

ಸ್ವರ್ಲೋಕಮಾಸಾದ್ಯ ಚಿರಂ ತಥೋಷ್ಯ
ಮಾನುಷ್ಯಮಾಸಾದ್ಯ ಚ ಭೋಗವಾನ್ ಸ್ಯಾತ್ ॥ ೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಭೋಗಪ್ರಾಪ್ತಿವ್ರತವರ್ಣನೋ ನಾಮ
ದ್ವಾದಶೋತ್ತರಶತತಮೋಽಧ್ಯಾಯಃ

---

ದಾನಮಾಡಬೇಕು. ಈ ವ್ರತವನ್ನು ಆಚರಿಸಿದವನು ಸ್ವರ್ಗವನ್ನು ಹೊಂದಿ ಬಹುಕಾಲ ಅಲ್ಲಿ ವಾಸವಾಗಿದ್ದು ಪುನಃ ಮನುಷ್ಯನಾಗಿ ಜನಿಸಿ ಭೋಗಿಯಾಗಿ ಬದುಕುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಭೋಗಪ್ರಾಪ್ತಿವ್ರತವರ್ಣನವೆಂಬ
ಇನ್ನೂರ ಹನ್ನೆರಡನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

### || ತ್ರಯೋದಶೋತ್ತರಶತತಮೋಽಧ್ಯಾಯಃ ||

|| ವಜ್ರ ಉವಾಚ ||

**ಭಗವನ್ ಕರ್ಮಣಾ ಕೇನ ಸರ್ವತ್ರ ಜಯಮಾಪ್ನುಯಾತ್ ।**
**ವ್ಯವಹಾರೇ ರಣೇ ದ್ಯೂತೇ ವಿವಾದೇ ಚ ದ್ವಿಜೋತ್ತಮ || ೧ ||**

**ಜಯಾವಾಪ್ತೇಃ ಪರಂ ನಾಸ್ತಿ ಸೌಖ್ಯಂ ಲೋಕೇಷು ಸತ್ತಮ ।**
**ಜಯಾವಾಪ್ತಿಃ ಪರಂ ಸೌಖ್ಯಂ ತದಾಪ್ತಿವ್ರತಮುಚ್ಯತಾಂ || ೨ ||**

|| ಮಾರ್ಕಂಡೇಯ ಉವಾಚ ||

**ಅಶ್ವಯುಜ್ಯಾಮತೀತಾಯಾಂ ಪ್ರತಿಪತ್ಪ್ರಭೃತಿಕ್ರಮಾತ್ ।**
**ಪೂರ್ವವತ್ಪೂಜಯೇದ್ವಿಷ್ಣುಂ ದೇವದೇವಂ ತ್ರಿವಿಕ್ರಮಂ || ೩ ||**

---

### ಇನ್ನೂರ ಹದಿಮೂರನೆಯ ಅಧ್ಯಾಯ.

೧-೫. ವಜ್ರನು ಪ್ರಶ್ನೆಮಾಡುತ್ತಾನೆ:—ಪೂಜ್ಯರೇ, ಮನುಷ್ಯನು ಯಾವ ಕರ್ಮವನ್ನು ಮಾಡಿದಲ್ಲಿ ವ್ಯವಹಾರ, ಯುದ್ಧ, ದ್ಯೂತ, ವಿವಾದ ಇತ್ಯಾದಿ ಎಲ್ಲಾ ವಿಷಯಗಳಲ್ಲಿಯೂ ಯಾವಾಗಲೂ ಜಯಶೀಲನಾಗುವನು. ವಿಜಯಕ್ಕಿಂತಲೂ ಮತ್ತೊಂದು ಸುಖಕರವಾದ ವಸ್ತುವಿಲ್ಲ. ಆದುದರಿಂದ ಎಲ್ಲಾ ಸೌಖ್ಯಕ್ಕೂ ಕಾರಣವಾದ ಜಯವನ್ನು ಹೊಂದಲು ತಕ್ಕ ವ್ರತವನ್ನು ಅಪ್ಪಣೆಕೊಡಿಸಬೇಕು. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ. ಆಶ್ವಯುಜ ಶುದ್ಧ ಪೂರ್ಣಿಮೆಯು ಕಳೆದನಂತರ ಪ್ರತಿಪತ್ತು ಮೊದಲುಗೊಂಡು ಹಿಂದೆ ಹೇಳಿರುವ ಕ್ರಮದಂತೆ ತ್ರಿವಿಕ್ರಮರೂಪಿಯಾದ ವಿಷ್ಣುವನ್ನು ಪೂಜಿಸಬೇಕು. ಕಾರ್ತಿಕ ಶುದ್ಧ ಪೂರ್ಣಿಮೆಯಲ್ಲಿ ಹಿಂದಿನಿಂದ ಮೂರು ರಾತ್ರಿ ಉಪವಾಸವಿದ್ದು ಎಲ್ಲಾ ವಿಧವಾದ ಸಸ್ಯಗಳನ್ನು ಧರಿಸಿ ಯಥಾಶಕ್ತಿ ರತ್ನಾದಿಗಳಿಂದ ಅಲಂಕರಿಸಲ್ಪಟ್ಟ ಒಳ್ಳೆಯ

ತ್ರಿರಾತ್ರಾಂತೇ ತು ಕಾರ್ತಿಕ್ಯಾಂ ದದ್ಯಾದುಕ್ಷಾಣಮುತ್ತಮಂ ।
ಸರ್ವಸಸ್ಯಧರಂ ಕೃತ್ವಾ ಶಕ್ತ್ಯಾ ರತ್ನೈರಲಂಕೃತಂ ॥ ೪ ॥

ಕೃತ್ವಾ ವ್ರತಂ ಮಾಸಮಿದಂ ಯಥೋಕ್ತಂ
ಪ್ರಾಪ್ನೋತಿ ನಾಕಂ ಸುಚಿರಂ ನೃವೀರಃ ।
ತತ್ರೋಷ್ಯ ಕಾಲಂ ಸುಚಿರಂ ಮನುಷ್ಯಃ
ಪ್ರಾಪ್ನೋತಿ ಸರ್ವತ್ರ ಜಯಂ ನೃಲೋಕೇ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಜಯಾವಾಪ್ತಿವ್ರತವರ್ಣನೋ ನಾಮ
ತ್ರಯೋದಶೋತ್ತರದ್ವಿಶತತಮೋಽಧ್ಯಾಯಃ

---

ಹೋರಿಯನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ಈ ವ್ರತವನ್ನು ಯಥೋಕ್ತ ಕ್ರಮದಿಂದ ಒಂದು ತಿಂಗಳುಕಾಲ ಮಾಡಿದಲ್ಲಿ ಅವನು ಸ್ವರ್ಗಸುಖಕ್ಕೆ ಭಾಗಿಯಾಗುತ್ತಾನೆ. ಅಲ್ಲಿ ಬಹುದಿವಸ ಸುಖದಿಂದಿದ್ದು ಪುನಃ ಮನುಷ್ಯನಾಗಿ ಜನಿಸಿ ಲೋಕದಲ್ಲಿ ವ್ಯವಹಾರವೇ ಮೊದಲಾದ ಎಲ್ಲಾ ವಿಷಯಗಳಲ್ಲೂ ಜಯಶಾಲಿಯಾಗಿಯೇ ಆಗುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಜಯಾವಾಪ್ತಿವ್ರತವರ್ಣನವೆಂಬ
ಇನ್ನೂರ ಹದಿಮೂರನೆಯ ಅಧ್ಯಾಯ ಮುಗಿದಿದೆ.



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಚತುರ್ದಶೋತ್ತರದ್ವಿಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

**ವ್ರತಾನ್ಯನ್ಯಾನಿ ಮೇ ಬ್ರೂಹಿ ಕಾಮ್ಯಾನಿ ದ್ವಿಜಪುಂಗವ ।**
**ನಾರೀಣಾಂ ಪುರುಷಾಣಾಂ ವಾ ಸರ್ವಜ್ಞಸ್ತ್ವಂ ಮತೋಮಮ । ೧ ॥**

॥ ಮಾರ್ಕಂಡೇಯ ಉವಾಚ ॥

**ಕೃತ್ತಿಕಾಸ್ವರ್ಚಯೇದ್ದೇವಂ ಕಾರ್ತಿಕೇಪ್ರಭೃತಿಕ್ರಮಾತ್ ।**
**ಯಾವತ್ಸ್ಯಾತ್ಕಾರ್ತಿಕಂ ಭೂಯೋ ನರಸಿಹ್ಮಮುಪೋಷಿತಃ ॥ ೨ ॥**

**ಅನುಲೇಪನಪುಷ್ಪಾದ್ಯೈಃ ಸರ್ವದೋಕ್ತೈಸ್ಸದೈವ ತು ।**
**ವ್ರತಾವಸಾನೇ ದತ್ವಾ ಚ ಚಂದನಂ ತಗರಂ ದ್ವಿಜೇ ॥ ೩ ॥**

---

### ಇನ್ನೂರ ಹದಿನಾಲ್ಕನೆಯ ಅಧ್ಯಾಯ

೧-೪. ವಜ್ರನು ಪ್ರಶ್ನೆ ಮಾಡುತ್ತಾನೆ:—ಬ್ರಾಹ್ಮಣೋತ್ತಮರೇ, ಸ್ತ್ರೀಯರಿಗಾಗಲಿ, ಪುರುಷರಿಗಾಗಲಿ, ಕಾಮ್ಯಫಲಗಳಿಗೆ ಸಾಧಕಗಳಾದ ಇತರ ವ್ರತಗಳನ್ನೂ ಹೇಳಬೇಕು. ಈ ವಿಷಯದಲ್ಲಿಯೂ ತಾವೇ ಸರ್ವಜ್ಞರಾಗಿರುತ್ತೀರಿ. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ. ಕಾರ್ತಿಕ ಶುಕ್ಲ ಪೂರ್ಣಿಮೆ ಮೊದಲು ಮಾಡಿಕೊಂಡು ಪ್ರತಿಯೊಂದು ಕೃತ್ತಿಕಾನಕ್ಷತ್ರದಲ್ಲಿಯೂ ಪುನಃ ಕಾರ್ತಿಕಮಾಸ ಬರುವವರಿಗೂ ನೃಸಿಂಹಮೂರ್ತಿಯನ್ನು ಉಪವಾಸನಿಯಮದಿಂದಿದ್ದು ಪೂಜಿಸಬೇಕು. ಹಿಂದೆ ಹೇಳಿರುವ ಪುಷ್ಪಗಂಧಗಳಿಂದಲೇ ಸರ್ವದಾ ಪೂಜಿಬೇಕು. ವ್ರತದ

ಚರ್ಮ ಚೈವಾಯುಧಂ ಮುಖ್ಯಂ ವಾಸಾಂಸಿ ವಿವಿಧಾನಿ ಚ ।
ಸರ್ವತ್ರ ಜಯಮಾಪ್ನೋತಿ ಯತ್ರ ಯತ್ರಾಭಿಜಾಯತೇ ॥ ೪ ॥

ಮಾರ್ಗಶೀರ್ಷಾದಥಾರಭ್ಯ ಮೃಗಶೀರ್ಷೇ ತಥಾರ್ಚಯೇತ್ ।
ಯಾವದಾಗ್ರಯಣೀ ಭೂಯೋ ರಾಮಂ ದಶರಥಾತ್ಮಜಂ ॥ ೫ ॥

ಅನುಲೇಪನಪುಷ್ಪಾದ್ಯೈಃ ಸರ್ವರತ್ನೈಃ ಸದೈವ ತು ।
ವ್ರತಾವಸಾನೇ ದದ್ಯಾದ್ಗಾಂ ತಥಾ ಶ್ವೇತಾಂ ದ್ವಿಜಾತಯೇ ॥ ೬ ॥

ಶ್ವೇತಂ ವಸ್ತ್ರಯುಗಂ ಚೈವ ರಜತಂ ಚ ತಥಾ ನೃಪ ।
ಉಪೋಷಿತಃ ಸದಾ ಕೃತ್ವಾ ವ್ರತಂ ಸ್ಯಾಚ್ಛತ್ರುವರ್ಜಿತಃ ॥ ೭ ॥

ಪೌಷಮಾಸಾದಥಾರಭ್ಯ ಪುಷ್ಯೈರ್ನಿತ್ಯಮುಪೋಷಿತಃ ।
ಯಾವತ್ಪೌಷೀ ಭವೇದ್ಭೂಯೋ ಬಲಭದ್ರಮಥಾರ್ಚಯೇತ್ ॥ ೮ ॥

ಅನುಲೇಪನಪುಷ್ಪಾನ್ನೈಃ ಸರ್ವರತ್ನೈಸ್ತಥೈವ ಚ ।
ವ್ರತಾವಸಾನೇ ಸಘೃತಂ ಕಾಂಸ್ಯಂ ಕನಕಮೇವ ಚ ॥ ೯ ॥

---

ಕೊನೆಯಲ್ಲಿ ಬ್ರಾಹ್ಮಣನಿಗೆ ಚಂದನವನ್ನೂ, ಗುರಾಣಿ ಮುಖ್ಯವಾದ ಆಯುಧ ನಾನಾ ವಿಧವಾದ ವಸ್ತುಗಳು ಇವನ್ನೆಲ್ಲಾ ದಾನಮಾಡಬೇಕು. ಇಂತಹ ವ್ರತವನ್ನಾಚರಿಸಿದವನು ಯಾವ ಯಾವ ಜನ್ಮದಲ್ಲಿ ಹುಟ್ಟಿದರೂ ಜಯಶಾಲಿಯೇ ಆಗುತ್ತಾನೆ.

೫-೯. ಮಾರ್ಗಶೀರ್ಷ ಮಾಸದಲ್ಲಿ ಪ್ರಾರಂಭಿಸಿ ಮೃಗಶಿರಾನಕ್ಷತ್ರದಲ್ಲಿ ಪುನಃ ಮಾರ್ಗಶೀರ್ಷಮಾಸ ಬರುವವರಿಗೂ ದಶರಥ ರಾಮನನ್ನು ಪೂಜಿಸಬೇಕು. ಪುಷ್ಪ, ಗಂಧ ಇತ್ಯಾದಿಗಳಿಂದಲೂ ಸರ್ವರತ್ನಗಳಿಂದಲೂ ಪೂಜಿಸಿ ವ್ರತದ ಕೊನೆಯಲ್ಲಿ ಬ್ರಾಹ್ಮಣನಿಗೆ ಬಿಳಿಯ ಹಸುವನ್ನೂ, ಬಿಳುಪಾದ ವಸ್ತ್ರಯುಗ್ಮವನ್ನೂ, ರಜತವನ್ನೂ ಸಹ ದಾನಮಾಡಬೇಕು. ಈ ವ್ರತವನ್ನು ಉಪವಾಸದಿಂದಿದ್ದು ಆಚರಿಸಿದಲ್ಲಿ ಅವನಿಗೆ ಶತ್ರುಬಾಧೆ ಇರುವುದಿಲ್ಲ. ಪುಷ್ಯಮಾಸದಲ್ಲಿ ಪ್ರಾರಂಭಿಸಿ ಪುನಃ ಪುಷ್ಯಮಾಸದವರಿಗೂ ವಿಹಿತವಾದ ಪುಷ್ಪಾದಿಗಳಿಂದ ಉಪವಾಸನಿಯಮದಲ್ಲಿದ್ದು ಬಲಭದ್ರನನ್ನು ಪೂಜಿಸಬೇಕು. ಗಂಧಪುಷ್ಪನೈವೇದ್ಯ ರತ್ನಾದಿಗಳಿಂದ ಪೂಜಿಸಿ ವ್ರತದ ಕೊನೆಯಲ್ಲಿ ಘೃತದೊಡನೆ ಕಂಚಿನ ಪಾತ್ರೆಯನ್ನೂ ಯಥಾಶಕ್ತಿ ಸುವರ್ಣವನ್ನೂ ದಾನಮಾಡಿದಲ್ಲಿ ಯಾವಾಗಲೂ ಪುಷ್ಟಿಹೊಂದಿಯೇ ಇರುತ್ತಾನೆ.

ದತ್ವಾ ವಿಪ್ರಾಯ ಭವತಿ ನಿತ್ಯಂ ಪುಷ್ಟಿಯುತೋ ನರಃ ।
ಮಾಘಮಾಸಾದಥಾರಭ್ಯ ಮಘಾಸು ಸತತಂ ನರಃ ॥ ೧೦ ॥

ವಾರಾಹಮರ್ಚಯೇದ್ದೇವಂ ತಥಾ ನಿತ್ಯಮುಪೋಷಿತಃ ।
ಘೃತಾಭ್ಯಂಗೇನ ವಿಧಿವಚ್ಚಂದನೇನ ಸುಗಂಧಿನಾ ॥ ೧೧ ॥

ತಥಾ ಚ ಪರಮಾನ್ನೇನ ಘೃತಹೋಮೇನ ಚಾಪ್ಯಥ ।
ದದ್ಯಾದ್ವ್ರತಾವಸಾನೇ ಚ ಕ್ಷಿತಿಂ ಗಾಂ ವಾ ನರಾಧಿಪ ॥ ೧೨ ॥

ಪಿತೃಪ್ರಸಾದಮಾಪ್ನೋತಿ ಕೃತ್ವೈತದ್ವ್ರತಮುತ್ತಮಂ ।
ಫಾಲ್ಗುನಾತ್ತು ತಥಾರಭ್ಯ ಫಾಲ್ಗುನೀಷು ಸಮರ್ಚಯೇತ್ ॥ ೧೩ ॥

ನರನಾರಾಯಣೌ ದೇವೌ ಯಾವತ್ಸ್ಯಾತ್ಫಾಲ್ಗುನೀ ಪುನಃ ।
ವ್ರತಾವಸಾನೇ ಶಯನಂ ಸ್ವಾಸ್ತೀರ್ಣಂ ಪ್ರತಿಪಾದಯೇತ್ ॥ ೧೪ ॥

ವ್ರತಾವಸಾನೇ ನಾರೀ ಸ್ಯಾತ್ಸುಭರ್ತ್ರಾ ಸಮಲಂಕೃತಾ ।
ಭಾರ್ಯಾಂ ನರಃ ತಥಾಪ್ನೋತಿ ರೂಪದ್ರವಿಣಸಂಯುತಾಂ ॥ ೧೫ ॥

---

೧೦-೧೫. ಮಾಘಮಾಸದ ಮುಖಾನಕ್ಷತ್ರ ಮೊದಲುಮಾಡಿ ಪ್ರತಿಯೊಂದು ಮಘಾನಕ್ಷತ್ರದಲ್ಲಿಯೂ ಪುನಃ ಮಾಘಮಾಸ ಬರುವವರಿಗೂ ಉಪವಾಸ ನಿಯಮ ದಿಂದಿದ್ದು ವರಾಹಮೂರ್ತಿಯನ್ನು ನಿತ್ಯವೂ ಪೂಜಿಸಬೇಕು. ಘೃತದಿಂದ ಅಭ್ಯಂಗ ಮಾಡಿಸಿಯೂ, ಸುಗಂಧಿಯಾದ ಚಂದನ ಮತ್ತು ಪರಮಾನ್ನ ಇವುಗಳಿಂದಲೂ ಪೂಜಿಸಿ ಘೃತದಿಂದಲೇ ಹೋಮವನ್ನೂ ಮಾಡಬೇಕು. ವ್ರತದ ಕೊನೆಯಲ್ಲಿ ಭೂಮಿಯನ್ನಾಗಲಿ, ಗೋವನ್ನಾಗಲಿ ಬ್ರಾಹ್ಮಣನಿಗೆ ದಾನಮಾಡಬೇಕು. ಈ ವ್ರತ ವನ್ನು ಆಚರಿಸಿದವನು ಪಿತೃಗಳ ಅನುಗ್ರಹಕ್ಕೆ ಪಾತ್ರನಾಗುತ್ತಾನೆ. ಹಾಗೆಯೇ ಫಾಲ್ಗುನಮಾಸದಲ್ಲಿ ಪ್ರಾರಂಭಿಸಿ, ಪ್ರತಿಯೊಂದು ಫಲ್ಗುನೀನಕ್ಷತ್ರದಲ್ಲಿಯೂ ಪುನಃ ಫಾಲ್ಗುನಮಾಸ ಬರುವವರಿಗೂ ನರನಾರಾಯಣರನ್ನು ನಿಯಮದಿಂದ ಪೂಜಿಸ ಬೇಕು. ವ್ರತದ ಕೊನೆಯಲ್ಲಿ ಚೆನ್ನಾಗಿರುವ ಶಯನವನ್ನು (ಹಾಸಿಗೆ) ದಾನ ಮಾಡಬೇಕು. ಸ್ತ್ರೀಯಾದವಳು ಈ ವ್ರತವನ್ನು ಮಾಡಿದಲ್ಲಿ ಒಳ್ಳೆಯ ಗಂಡನನ್ನು ಹೊಂದುತ್ತಾಳೆ. ಪುರುಷನು ಸುರೂಪದ್ರವ್ಯಗಳೊಡಗೂಡಿದ ಪತ್ನಿಯನ್ನು ಹೊಂದುತ್ತಾನೆ.

**ಅನುಕೂಲಾಂ ಶ್ರಿಯಂ ನಿತ್ಯಂ ತಥಾ ಪಕ್ಷವತೀಂ ನೃಪ ।**
**ಅವಿಯೋಗಮವೈಧವ್ಯಂ ಕರೋತ್ಯೇತನ್ಮಹಾವ್ರತಂ　　　॥ ೧೬ ॥**

**ಚೈತ್ರಮಾಸಾದಥಾರಭ್ಯ ನಿತ್ಯಂ ಚಿತ್ರಾಸ್ವಥಾರ್ಚಯೇತ್ ।**
**ವ್ರತಾವಸಾನೇ ದದ್ಯಾಚ್ಚ ಚಿತ್ರಂ ವಸ್ತ್ರಂ ದ್ವಿಜನ್ಮನೇ　　　॥ ೧೭ ॥**

**ವ್ರತೇನಾನೇನ ಪುರುಷಃ ಪುತ್ರಾನಾಪ್ನೋತ್ಯಭೀಪ್ಸಿತಾನ್ ।**
**ನಾರೀ ವಾ ಪುರುಷವ್ಯಾಘ್ರ ನಾತ್ರ ಕಾರ್ಯಾ ವಿಚಾರಣಾ　　　॥ ೧೮ ॥**

**ವೈಶಾಖೀತಸ್ತಥಾರಭ್ಯ ವಿಶಾಖಾಸು ತಥಾರ್ಚಯೇತ್ ।**
**ಯಾವದ್ ಭೂಯಸ್ತು ವೈಶಾಖೀ ಸೋಪವಾಸಃ ಪೃಥುಂ ವಿಭುಂ　॥ ೧೯ ॥**

**ದತ್ವಾ ವ್ರತಾಂತೇ ಕನಕಂ ಜ್ಞಾತಿಶ್ರೈಷ್ಠ್ಯಮವಾಪ್ನುಯಾತ್ ।**
**ಜ್ಯೇಷ್ಠಮಾಸಾದಥಾರಭ್ಯ ಜ್ಯೇಷ್ಠಾಸು ಸತತಂ ನರಃ　　　॥ ೨೦ ॥**

---

೧೬–೧೯. ಮತ್ತು ಸುಖಪ್ರದವಾದ ಹಾಗೂ ವೃದ್ಧ್ಯುನ್ಮುಖವಾದ ಸಂಪತ್ತನ್ನೂ ಹೊಂದುತ್ತಾನೆ. ಸ್ತ್ರೀಯರಿಗೆ ಪುರುಷರ ವಿಯೋಗವಿಲ್ಲದೆಯೂ, ವಿಧವೆಯರಾಗದಂತೆಯೂ ಈ ಮಹಾವ್ರತವೇ ಮಾಡುತ್ತದೆ. ಚೈತ್ರಮಾಸದಲ್ಲಿ ಪ್ರಾರಂಭಿಸಿ ಪ್ರತಿಯೊಂದು ಚಿತ್ರಾನಕ್ಷತ್ರದಲ್ಲಿಯೂ ಹೀಗೆಯೇ ಪೂಜಿಸಿ ವ್ರತದ ಕೊನೆಯಲ್ಲಿ ಚಿತ್ರವರ್ಣದ ವಸ್ತ್ರವನ್ನು ಬ್ರಾಹ್ಮಣನಿಗೆ ದಾನಮಾಡಬೇಕು ಈ ವ್ರತದಿಂದ ಪುರುಷನಾಗಲಿ, ಸ್ತ್ರೀಯಾಗಲಿ ತನಗೆ ಅಭಿಮತರಾದ ಪುತ್ರರನ್ನು ಹೊಂದುತ್ತಾರೆ. ಇದರಲ್ಲಿ ಸಂದೇಹವಿಲ್ಲ. ಹಾಗೆಯೇ ವೈಶಾಖಮಾಸದಲ್ಲಿ ಪ್ರಾರಂಭಿಸಿ ವಿಶಾಖಾ ನಕ್ಷತ್ರದಲ್ಲಿ ಪುನಃ ವೈಶಾಖಮಾಸ ಬರುವವರಿಗೂ ಪೃಥುವನ್ನು ಪೂಜಿಸಬೇಕು. ಪೃಥುವನ್ನು ಉಪವಾಸನಿಯಮದಿಂದಿದ್ದು ಪೂಜಿಸಿ ವ್ರತದ ಕೊನೆಯಲ್ಲಿ ಬ್ರಾಹ್ಮಣನಿಗೆ ಸುವರ್ಣವನ್ನು ದಾನಮಾಡಿದಲ್ಲಿ ಜ್ಞಾತಿವರ್ಗದಲ್ಲೆಲ್ಲಾ ತಾನೇ ಶ್ರೇಷ್ಠನಾಗಿ ಬದುಕುತ್ತಾನೆ.

೨೦–೨೩. ಜ್ಯೇಷ್ಠಮಾಸ ಮೊದಲುಮಾಡಿಕೊಂಡು ಜ್ಯೇಷ್ಠಾನಕ್ಷತ್ರದಲ್ಲಿ ಪುನಃ ಜ್ಯೇಷ್ಠಮಾಸ ಬರುವವರಿಗೂ ಭಾರ್ಗವರಾಮನನ್ನು ಪೂಜಿಸಬೇಕು. ವ್ರತದ

ಅರ್ಚಯೇದ್ಭಾರ್ಗವಂ ರಾಮಂ ಯಾವಜ್ಜ್ಯೇಷ್ಠಂ ಪುನರ್ಭವೇತ್ ।
ವ್ರತಾವಸಾನೇ ದದ್ಯಾಚ್ಚ ಛತ್ರೋಪಾನಹನೌ ತಥಾ ॥ ೨೦ ॥

ವ್ರತೇನಾನೇನ ಭವತಿ ಸರ್ವಶ್ರೇಷ್ಠೋ ನರೋತ್ತಮ ।
ಆಷಾಢೀತಸ್ತಥಾರಭ್ಯ ದಿನದ್ವಯಮುಪೋಷಿತಃ ॥ ೨೨ ॥

ಆಷಾಢ್ಯಾಂ ತ್ವರ್ಚಯೇದ್ದೇವಂ ಪ್ರದ್ಯುಮ್ನಮಪರಾಜಿತಂ ।
ಭೂಯಃ ಸ್ಯಾದ್ಯಾವದಾಷಾಢೀ ದದ್ಯಾಚ್ಚ ಶಯನಂ ತತಃ ॥ ೨೩ ॥

ಸ್ವಾಸ್ತೀರ್ಣಂ ತೇನ ಚಾಪ್ನೋತಿ ನಿತ್ಯಂ ರೂಪಯುತಾಃ ಸ್ತ್ರಿಯಃ ।
ಶ್ರಾವಣೀತಸ್ತಥಾರಭ್ಯ ಶ್ರವಣೇ ಸತತಂ ಹರಿಂ ॥ ೨೪ ॥

ಅರ್ಚಯೇತ್ಸೋಪವಾಸಸ್ತಂ ಯಾವತ್ಸ್ಯಾಚ್ಛ್ರಾವಣೀ ಪುನಃ ।
ವ್ರತಾವಸಾನೇ ದದ್ಯಾಚ್ಚ ಕಾಂಸ್ಯಂ ರೂಪ್ಯಂ ಘೃತಂ ತಥಾ ॥ ೨೫ ॥

---

ಕೊನೆಯಲ್ಲಿ ಛತ್ರಿ, ಪಾದುಕೆ ಇವುಗಳನ್ನು ದಾನಮಾಡಬೇಕು. ಈ ವ್ರತವನ್ನು ಈ ರೀತಿ ಆಚರಿಸಿದವನು ಸರ್ವಶ್ರೇಷ್ಠನಾಗುತ್ತಾನೆ. ಹಾಗೆಯೇ ಆಷಾಢಮಾಸದಲ್ಲಿ ಪ್ರಾರಂಭಿಸಿ ಎರಡು ದಿನಗಳು ಉಪವಾಸವಿದ್ದು ಆಷಾಢೀನಕ್ಷತ್ರದಲ್ಲಿ ಅಪರಾಜಿತ ಮೂರ್ತಿಯಾದ ಪ್ರದ್ಯುಮ್ನನನ್ನು ಪೂಜಿಸಬೇಕು. ಪುನಃ ಆಷಾಢಮಾಸ ಬರುವ ವರಿಗೂ ಹೀಗೆ ಪೂಜಿಸಿ ಅನಂತರ ಶಯ್ಯಾದಾನಮಾಡಬೇಕು.

೨೪–೨೬. ಸವಿಸ್ತಾರವಾದ ಇಂತಹ ಶಯ್ಯೆಯನ್ನು ದಾನಮಾಡುವುದರಿಂದ ರೂಪವತಿಯರಾದ ಸ್ತ್ರೀಯರನ್ನೂ ಹೊಂದುತ್ತಾನೆ. ಶ್ರಾವಣ ಶುಕ್ಲ ಪೂರ್ಣಿಮೆ ಯಲ್ಲಿ ಪ್ರಾರಂಭಿಸಿ ಪುನಃ ಶ್ರಾವಣಿಯು ಬರುವವರಿಗೂ ಪ್ರತಿಯೊಂದು ಶ್ರವಣ ನಕ್ಷತ್ರದಲ್ಲಿಯೂ ಉಪವಾಸದಿಂದಿದ್ದು ಹರಿಯನ್ನು ಪೂಜಿಸಬೇಕು. ವ್ರತದ ಕೊನೆಯಲ್ಲಿ ಘೃತಪೂರ್ಣವಾದ ಕಾಂಸ್ಯಪಾತ್ರೆಯನ್ನೂ, ರಜತವನ್ನೂ ದಾನ ಮಾಡಬೇಕು. ಇದುವರಿಗೂ ನಾನು ಹೇಳಿರುವ ಈ ವ್ರತಗಳೆಲ್ಲವೂ ಬಹುಮಟ್ಟಿಗೂ

ವ್ರತಾನ್ಯಥೈತಾನಿ ಮಯಾ ನರೇಂದ್ರ
ಪ್ರೋಕ್ತಾನಿ ತೇ ಪಾಪಹರಾಣಿ ನಿತ್ಯಂ ।
ನಾಕಪ್ರದಾನ್ಯುತ್ತಮಪೂರ್ಣಮಾಣಾ-
ನ್ಕಾಮಾನ್ ಪ್ರದಾತ್ಯಾಣಿ ಯಥೇಪ್ಸಿತಾನಿ ॥ ೨೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ದ್ವಾದಶಮಾಸರ್ಕ್ಷವ್ರತವರ್ಣನೋ ನಾಮ
ಚತುರ್ದಶೋತ್ತರದ್ವಿಶತತಮೋಽಧ್ಯಾಯಃ

---

ಪಾಪನಾಶಕಗಳು ಮತ್ತು ಸ್ವರ್ಗಸೌಖ್ಯಕ್ಕೂ ಕಾರಣಗಳಾಗುತ್ತವೆ ಅವರವರ ಇಷ್ಟಕ್ಕೆ ತಕ್ಕಂತೆ ಪರಿಪೂರ್ಣಗಳಾದ ಇಷ್ಟಾರ್ಥಗಳನ್ನೇ ಉಂಟುಮಾಡುತ್ತವೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ದ್ವಾದಶಮಾಸರ್ಕ್ಷವ್ರತವರ್ಣನವೆಂಬ
ಇನ್ನೂರ ಹದಿನಾಲ್ಕನೆಯ ಅಧ್ಯಾಯ ಮುಗಿದಿದೆ.

॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಪಂಚದಶೋತ್ತರದ್ವಿಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಆರಾಧನಾರ್ಥಂ ದೇವಸ್ಯ ವಿಷ್ಣೋರಮಿತತೇಜಸಃ ।
ವ್ರತಾನ್ಯನ್ಯಾನಿ ಮೇ ಬ್ರೂಹಿ ಭೃಗುವಂಶವಿವರ್ಧನ ॥ ೧ ॥

॥ ಮಾರ್ಕಂಡೇಯ ಉವಾಚ ॥

ಗಂಗಾದ್ವಾರೇ ಸುಖಾಸೀನಃ ಪುಲಸ್ತ್ಯ ಋಷಿಸತ್ತಮಃ ।
ವ್ರತಾನಿ ಯಾನಿ ದಾಲ್ಭ್ಯಾಯ ಜಗಾದ ಶೃಣು ತಾನಿ ಮೇ ॥ ೨ ॥

---

### ಇನ್ನೂರ ಹದಿನೈದನೆಯ ಅಧ್ಯಾಯ.

೧×೨. ವಜ್ರನು ಪ್ರಶ್ನೆಮಾಡುತ್ತಾನೆ :—ಎಲೈ ಭಾರ್ಗವೋತ್ತಮರೇ, ಅಪ್ರತಿಮ ತೇಜಶ್ಶಾಲಿಯಾದ ಮಹಾವಿಷ್ಣುವಿನ ಆರಾಧನೆಗೆ ಉಪಯುಕ್ತವಾದ ಇತರ ವ್ರತಗಳನ್ನೂ ದಯವಿಟ್ಟು ಹೇಳಬೇಕು. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ :—ದೊರೆಯೇ, ಪೂರ್ವದಲ್ಲಿ ಗಂಗಾದ್ವಾರವೆಂಬ ಕ್ಷೇತ್ರದಲ್ಲಿ ತಪಸ್ವಿಯಾಗಿ ಸುಖದಿಂದಿದ್ದ ಪುಲಸ್ತ್ಯನೆಂಬ ಋಷಿವರ್ಯನು ದಾಲ್ಭ್ಯನೆಂಬ ಶಿಷ್ಯನಿಗೆ ಇದೇ ವಿಷಯದಲ್ಲಿ ಯಾವ ಯಾವ ವ್ರತಗಳನ್ನು ಉಪದೇಶಿಸಿರುವನೋ ಆ ವ್ರತಗಳನ್ನೂ ಹೇಳುತ್ತೇನೆ ಕೇಳು :—ದಾಲ್ಭ್ಯನು ಪ್ರಶ್ನೆಮಾಡುತ್ತಾನೆ :—

|| ದಾಲ್ಭ್ಯ ಉವಾಚ ||

ಆರಾಧನಾರ್ಥಂ ದೇವಸ್ಯ ವಿಷ್ಣೋರಮಿತತೇಜಸಃ |
ವ್ರತಾನಿ ತ್ವಂ ಸಮಾಚಕ್ಷ್ವ ಸರ್ವಧರ್ಮಭೃತಾಂವರ || ೩ ||

|| ಪುಲಸ್ತ್ಯ ಉವಾಚ ||

ಏಕಾದಶ್ಯಾಂ ಶುಕ್ಲಪಕ್ಷೇ ಫಾಲ್ಗುನೇ ಮಾಸಿ ಯೋ ನರಃ |
ಜಪನ್ ಕೃಷ್ಣೇತಿ ದೇವಸ್ಯ ನಾಮ ಭಕ್ತ್ಯಾ ಪುನಃ ಪುನಃ || ೪ ||

ದೇವಾರ್ಚನೇ ಚಾಷ್ಟಶತಂ ಕೃತ್ವೈತತ್ತು ಜಪೇಚ್ಛುಚಿಃ |
ಸ್ನಾತಃ ಪ್ರಸ್ಥಾನಕಾಲೇ ಚ ಉತ್ಥಾನೇ ಸ್ಖಲಿತೇ ಕ್ಷುತೇ || ೫ ||

ಪಾಷಂಡಾನ್ಪತಿತಾಂಶ್ಚೈವ ತಥೈವಾಂತಾವಸಾಯಿನಃ |
ನಾಲಪೇತ ತಥಾ ಕೃಷ್ಣಮರ್ಚಯೇಚ್ಛ್ರದ್ಧಯಾನ್ವಿತಃ || ೬ ||

ಇದಂ ಚೋದಾಹರೇತ್ಕೃಷ್ಣೇ ಮನಃ ಸಂಧಾಯ ತತ್ಪರಃ |
ಕೃಷ್ಣ ಕೃಷ್ಣ ಕೃಪಾಲುಸ್ತ್ವಮಗತೀನಾಂ ಗತಿರ್ಭವ || ೭ ||

---

೩-೬. ಎಲೈ ಧರ್ಮಜ್ಞಾಗ್ರೇಸರನೇ, ಅಪರಿಮಿತಮಹಿಮನಾದ ಮಹಾವಿಷ್ಣುವಿನ ಆರಾಧನೆಗೆ ಉಪಕಾರಿಗಳಾದ ವ್ರತಗಳನ್ನು ದಯವಿಟ್ಟು ಹೇಳಬೇಕು. ಇದಕ್ಕೆ ಉತ್ತರವಾಗಿ ಪುಲಸ್ತ್ಯರು ಹೇಳುತ್ತಾರೆ :—ಫಾಲ್ಗುಣಮಾಸದಲ್ಲಿ ಶುಕ್ಲಪಕ್ಷದ ಏಕಾದಶಿಯಲ್ಲಿ ಕೃಷ್ಣ ಎಂಬ ವಿಷ್ಣುವಿನ ನಾಮವನ್ನು ಭಕ್ತಿಯಿಂದ ಪುನಃ ಪುನಃ ಪಠಿಸುತ್ತಾ ದೇವಾರ್ಚನ ಕಾಲದಲ್ಲಿ ಶುಚಿಯಾಗಿದ್ದು ಎಂಟನೂರುಬಾರಿ ಜಪಿಸಬೇಕು. ಸ್ನಾನಮಾಡಿ ಹೊರಡುವಾಗಲೂ, ಎಡವಿದಾಗಲೂ, ಶೀನು ಬಂದಾಗಲೂ ಸಹ ಈ ನಾಮವನ್ನುಚ್ಚರಿಸುತ್ತಾ ಭಕ್ತಿಯಿಂದ ಹರಿಯನ್ನು ಪೂಜಿಸಬೇಕು ಈ ಕಾಲದಲ್ಲಿ ಪಾಷಂಡಿಗಳನ್ನೂ, ಪತಿತರನ್ನೂ, ಚಂಡಾಲರನ್ನೂ ನೋಡಿ ಮಾತನಾಡಬಾರದು.

೭-೧೧. ಶ್ರೀ ಕೃಷ್ಣನಲ್ಲಿ ಮನಸ್ಸನ್ನು ಸ್ಥಿರಗೊಳಿಸಿ ತದ್ಧ್ಯಾನೋನ್ಮುಖನಾಗಿ ಈ ರೀತಿ ಉದ್ಘೋಷಿಸಬೇಕು. ಕೃಷ್ಣ, ಕೃಷ್ಣ ನೀನು ಬಹು ಕೃಪಾಶಾಲಿ. ಸಂಸಾರ

ಸಂಸಾರಾರ್ಣವಮಗ್ನಾನಾಂ ಪ್ರಸೀದ ಮಧುಸೂದನ ।
ಏವಂ ಪ್ರಸಾದ್ಯೋಪವಸೇತ್ಕೃತ್ವಾ ನಿಯತಮಾನಸಃ ॥ ೮ ॥

ಪೂರ್ವೇಽಹ್ನಿ ಚಾನ್ಯೇದ್ಯುಶ್ಚಾಪಿ ಗವ್ಯಂ ಸಂಪ್ರಾಶ್ಯ ವೈ ಸಕೃತ್ ।
ಸ್ನಾತೋಽರ್ಚಯಿತ್ವಾ ಕೃಷ್ಣೇತಿ ಪುನರ್ನಾಮ ಪ್ರಕೀರ್ತಯೇತ್ ॥ ೯ ॥

ವಾರಿಧಾರಾ ವ್ರತೇ ಚೈವ ವಿಕ್ಷಿಪೇದ್ದೇವಪಾದಯೋಃ ।
ಚೈತ್ರವೈಶಾಖಯೋಶ್ಚೈವ ತದ್ವಜ್ಜ್ಯೇಷ್ಠೇ ಚ ಪೂಜಯೇತ್ ॥ ೧೦ ॥

ಮರ್ತ್ಯಲೋಕೇ ಗಂತಿ ಶ್ರೇಷ್ಠಾಂ ದಾಲ್ಭ್ಯ ಪ್ರಾಪ್ನೋತಿ ವೈ ನರಃ ।
ಉತ್ಕ್ರಾನ್ತಿಕಾಲೇ ಕೃಷ್ಣಸ್ಯ ಸ್ಮರಣಂ ಚ ತಥಾ ಶ್ನುತೇ ॥ ೧೧ ॥

ಆಷಾಢೇ ಶ್ರಾವಣೇ ಚೈವ ಮಾಸಿ ಭಾದ್ರಪದೇ ತಥಾ ।
ತಥೈವಾಶ್ವಯುಜೇ ಮಾಸಿ ಅನೇನ ವಿಧಿನಾ ನರಃ ॥ ೧೨ ॥

---

ಸಮುದ್ರದಲ್ಲಿ ಮುಳುಗಿ ಉಪಾಯಾಂತರವಿಲ್ಲದಿರುವ ದೀನರಿಗೆ ನೀನೇ ಗತಿಯಾಗಿದ್ದೀಯೆ, ಎಲೈ ಮಧೂಸೂದನನೇ ಪ್ರಸನ್ನನಾಗು. ಈ ರೀತಿ ಅವನನ್ನು ಮನಸ್ಥೈರ್ಯದಿಂದ ಅನುಗ್ರಹಾಭಿಮುಖವನ್ನಾಗಿ ಮಾಡಿ ಉಪವಾಸವ್ರತದಿಂದ ಸೇವಿಸಬೇಕು. ಮೊದಲನೇ ದಿನವೂ ಮಾರನೆಯ ದಿನವೂ ಒಂದಾವರ್ತಿ ಹಾಲು ಅಥವಾ ಮೊಸರು ಇವನ್ನು ಸೇವಿಸಿ ಸ್ನಾನಾದಿಗಳನ್ನು ಮಾಡಿ ಪೂಜಿಸಿ ಕೃಷ್ಣಕೃಷ್ಣ ಎಂಬ ನಾಮಮಂತ್ರವನ್ನು ಪುನಃಪುನಃ ಜಪಿಸುತ್ತಿರಬೇಕು. ಚೈತ್ರ ವೈಶಾಖಗಳಂತೆ ಜ್ಯೇಷ್ಠಮಾಸದಲ್ಲಿಯೂ ಪೂಜಿಸಬೇಕು. ಈ ರೀತಿ ಆಚರಿಸಿದವನು ಭೂಲೋಕದಲ್ಲಿ ಉತ್ತಮವಾದ ಗತಿಯನ್ನೇ ಹೊಂದುತ್ತಾನೆ. ಉತ್ಕ್ರಾಂತಿಕಾಲದಲ್ಲಿಯೂ ಅನಾಯಾಸವಾಗಿ ಕೃಷ್ಣನ ಸ್ಮರಣೆಯನ್ನು ಹೊಂದುತ್ತಾನೆ.

೧೨-೧೪. ಆಷಾಢ, ಶ್ರಾವಣ ಮತ್ತು ಭಾದ್ರಪದಮಾಸಗಳಲ್ಲಿಯೂ, ಹಾಗೆಯೇ ಅಶ್ವಯುಜಮಾಸದಲ್ಲಿಯೂ ಇದೇ ವಿಧಿಯಂತೆ ಉಪವಾಸಮಾಡಿ ಪೂಜೆ

**ಉಪೋಷ್ಯ ಸಂಪೂಜ್ಯ ತಥಾ ಕೇಶವೇತಿ ಚ ಪೂಜಯೇತ್ ।**
**ಗೋಮೂತ್ರಪ್ರಾಶನಾತ್ಪೂತಃ ಸ್ವರ್ಗಲೋಕಗತಿಂ ವ್ರಜೇತ್ ॥ ೧೩ ॥**

**ಆರಾಧಿತಸ್ಯ ಜಗತಾಮೀಶ್ವರಸ್ಯಾವ್ಯಯಸ್ಯ ಚ ।**
**ಉತ್ಕ್ರಾಂತಿಕಾಲೇ ಸ್ಮರಣಂ ಕೇಶವಸ್ಯ ತಥಾಪ್ನುಯಾತ್ ॥ ೧೪ ॥**

**ಕ್ಷೀರಸ್ಯ ಪ್ರಾಶನಂ ಯಸ್ತು ವಿಧಿಂ ಚೇಮಂ ಯಥೋದಿತಂ ।**
**ಕಾರ್ತಿಕಾದಿಯಥಾನ್ಯಾಯಂ ಕುರ್ಯಾನ್ಮಾಸ ಚತುಷ್ಟಯಂ ॥ ೧೫ ॥**

**ತೇನೈವ ವಿಧಿನಾ ಬ್ರಹ್ಮನ್ ವಿಷ್ಣೋರ್ನಾಮ ಪ್ರಕೀರ್ತಯೇತ್ ।**
**ಸ ಯಾತಿ ವಿಷ್ಣುಸಾಲೋಕ್ಯಂ ವಿಷ್ಣುಂ ಸ್ಮರತಿ ಚಾಕ್ಷಯಂ ॥ ೧೬ ॥**

**ಪ್ರತಿಮಾಸಂ ದ್ವಿಜಾತಿಭ್ಯೋ ದದ್ಯಾದ್ದಾನಂ ಯಥಾವಿಧಿ ।**
**ಚಾತುರ್ಮಾಸ್ಯೇ ಚ ಸಂಪೂರ್ಣೇ ಪುಣ್ಯಶ್ರವಣಕೀರ್ತನಂ ॥ ೧೭ ॥**

---

ಯನ್ನೂ ಮಾಡಿ ಕೇಶವಶಬ್ದವನ್ನು ಜಪಿಸಬೇಕು. ಗೋಮೂತ್ರವನ್ನು ಸೇವಿಸಿದಲ್ಲಿ ಪರಿಶುದ್ಧನಾಗಿ ಸ್ವರ್ಗಸುಖಕ್ಕೆ ಭಾಗಿಯಾಗುತ್ತಾನೆ. ಈ ರೀತಿ ಪೂಜಿಸಲ್ಪಟ್ಟ ಅಚಿಂತ್ಯಮಹಿಮನಾದ ಜಗದೀಶ್ವರನ ಕೇಶವನಾಮವೂ ಇವನ ಉತ್ಕ್ರಾಂತಿ ಕಾಲದಲ್ಲಿ ಸ್ಮರಣೆಗೆ ಬರುತ್ತದೆ.

೧೫-೧೯. ಯಾವನು ಈ ವಿಧಿಯಂತೆ ಪೂಜಿಸುತ್ತಾ ಕಾರ್ತೀಕ ಮೊದಲು ನಾಲ್ಕು ತಿಂಗಳವರಿಗೂ ಕ್ಷೀರವನ್ನೇ ಆಹಾರವನ್ನಾಗಿ ಮಾಡಿಕೊಳ್ಳುತ್ತಾನೆಯೋ ಮತ್ತು ಇದೇ ವಿಧಿಯಿಂದ ವಿಷ್ಣುವಿನ ನಾಮಮಂತ್ರವನ್ನು ಜಪಿಸುತ್ತಿರುವನೋ ಅವನು ಸರ್ವದಾ ಶಾಶ್ವತನಾದ ವಿಷ್ಣುವನ್ನು ಸ್ಮರಿಸುತ್ತಾ ವಿಷ್ಣುವಿನ ಸಾಲೋಕ್ಯ ವನ್ನೇ ಹೊಂದುತ್ತಾನೆ. ಈ ನಾಲ್ಕು ತಿಂಗಳುಗಳಲ್ಲಿ ಬ್ರಾಹ್ಮಣರಿಗೆ ಪ್ರತಿಮಾಸ ದಲ್ಲಿಯೂ ಯಥಾವಿಧಿಯಾಗಿ ದಾನಗಳನ್ನೂ ಮಾಡುತ್ತಿರಬೇಕು. ಚಾತುರ್ಮಾಸ್ಯವು ಮುಗಿದನಂತರ ಪುರಾಣಾದಿಗಳಲ್ಲಿರುವ ವಾಸುದೇವನ ಪುಣ್ಯಕಥೆಗಳನ್ನು ಶ್ರವಣ ಮಾಡಬೇಕು. ಅಥವಾ ಪಠನಮಾಡಬೇಕು ಅಥವಾ ವಾಸುದೇವನ ಭಗವದ್ಗೀತೆ ಯೆಂಬ ಮಹಾಪ್ರಬಂಧವನ್ನೇ ಪಠಿಸಬೇಕು. ಹೀಗೆ ದೇವತೋತ್ತಮನಾಗಿದ್ದು ಭಕ್ತಸಂರಕ್ಷಣಕ್ಕಾಗಿ ನಿರ್ವ್ಯಾಜವಾದ ದಯೆಯಿಂದ ಮನುಷ್ಯನಾಗಿ ಅವತರಿಸಿದ

ಅಥವಾ ವಾಸುದೇವಸ್ಯ ತದ್ಗೀತಂ ಚಾಪಿ ಕಾರಯೇತ್ ।
ಏವಮೇತಿಗತಿಂ ಶ್ರೇಷ್ಠಾಂ ದೇವಮಾನುಷ್ಯಕೀರ್ತನಾತ್ ॥ ೧೮ ॥

ಕಥಿತಂ ಪಾರಣಂ ಯತ್ತೇ ಕಾರ್ಯಂ ಮಾಸಚತುಷ್ಟಯಂ ।
ಆಧಿಪತ್ಯಂ ತಥಾ ಭೋಗಾಂಸ್ತೇನ ಪ್ರಾಪ್ನೋತಿ ಚಾಕ್ಷಯಾನ್ ॥ ೧೯ ॥

ದ್ವಿತೀಯೇನ ತಥಾ ಭೋಗಾನೈಂದ್ರಾನಾಪ್ನೋತಿ ಮಾನವಃ ।
ವಿಷ್ಣುಲೋಕಂ ತೃತೀಯೇನ ಪಾರಣೇನ ತಥಾಪ್ನುಯಾತ್ ॥ ೨೦ ॥

ಏವಮೇತತ್ಸಮಾಖ್ಯಾತಂ ಗತಿಪ್ರಾಪಕಮುತ್ತಮಂ ।
ವಿಧಾನಂ ದ್ವಿಜಶಾರ್ದೂಲ ಕೃಷ್ಣತುಷ್ಟಿಪ್ರದಂ ನೃಣಾಂ ॥ ೨೧ ॥

ಸುಗತಿದ್ವಾದಶೀಮೇತಾಂ ಶ್ರದ್ಧಧಾನಸ್ತು ಯೋ ನರಃ ।
ಉಪೋಷ್ಯತಿ ತಥಾ ನಾರೀ ಪ್ರಾಪ್ನೋತಿ ವಿವಿಧಾಂ ಗತಿಂ ॥ ೨೨ ॥

---

ವಾಸುದೇವನ ಕೀರ್ತನೆಯಿಂದ ಶ್ರೇಷ್ಠವಾದ ಗತಿಯನ್ನೇ ಮನುಷ್ಯನು ಹೊಂದುತ್ತಾನೆ. ಈ ಚಾತುರ್ಮಾಸ್ಯದಲ್ಲಿ ನಾನು ಹೇಳಿರುವ ಪಾರಣೆಯನ್ನೂ ಮಾಡಬೇಕು. ಈ ವ್ರತದಿಂದ ಮನುಷ್ಯನು ಪ್ರಭುಶಕ್ತಿಯನ್ನೂ, ಅಕ್ಷಯವಾದ ಭೋಗವನ್ನೂ ಇಹಲೋಕದಲ್ಲಿಯೂ ಅನುಭವಿಸುತ್ತಾನೆ.

೨೦-೨೨. ಎರಡನೆಯ ಪಾರಣೆಯಿಂದ ಇಂದ್ರಲೋಕದ ಭೋಗಗಳನ್ನು ಅನುಭವಿಸುತ್ತಾನೆ. ಮೂರನೆಯ ಪಾರಣದಿಂದ ವಿಷ್ಣುಲೋಕವನ್ನು ಹೊಂದುತ್ತಾನೆ. ಈ ರೀತಿ ಉತ್ತಮಗತಿಪ್ರಾಪಕಗಳಾದ ವಿಧಾನಗಳನ್ನು ಹೇಳಿದ್ದೇವೆ. ಇದು ಬಹುಮಟ್ಟಿಗೂ ಕೃಷ್ಣನಿಗೆ ತೃಪ್ತಿಕರ. ಈ ಸುಗತಿದ್ವಾದಶಿಯನ್ನು ಉಪವಾಸಪೂರ್ವಕವಾಗಿ ಶ್ರದ್ಧೆಯಿಂದ ಮಾಡಿದಲ್ಲಿ ಪುರುಷನಾಗಲಿ, ಸ್ತ್ರೀಯಾಗಲಿ ವಿವಿಧವಾದ ಈ ಗತಿಗಳನ್ನು ಹೊಂದುತ್ತಾರೆ. ಈ ತಿಥಿಯು ಸರ್ವಪಾಪಹರ, ಹಾಗೂ ಸ್ವರ್ಗಪ್ರಾಪ್ತಿ

ಏಷಾ ತಿಥಿಃ ಪಾಪಹರಾತಿಧನ್ಯಾ
ನಾಕಪ್ರದಾ ನಾಕಕರೀ ತಥೋಕ್ತಾ ।
ಆರಾಧನಾರ್ಥಂ ತ್ರಿದಶೇಶ್ವರಸ್ಯ
ದೇವಸ್ಯ ವಿಷ್ಣೋರ್ದ್ವಿಜಸಂಘಪೂಜ್ಯ ॥ ೨೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಸುಗತಿದ್ವಾದಶೀವ್ರತವರ್ಣನೋ ನಾಮ
ಪಂಚದಶೋತ್ತರದ್ವಿಶತತಮೋಽಧ್ಯಾಯಃ

---

ಸಾಧನ, ದೇವತೋತ್ತಮನಾದ ಮಹಾವಿಷ್ಣುವಿನ ಆರಾಧನೆಗೆ ಅತ್ಯಂತೋಪಯುಕ್ತವಾದದ್ದು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಸುಗತಿದ್ವಾದಶೀವ್ರತವರ್ಣನವೆಂಬ
ಇನ್ನೂರ ಹದಿನೈದಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಷೋಡಶೋತ್ತರದ್ವಿಶತತಮೋಽಧ್ಯಾಯಃ ||

|| ಪುಲಸ್ತ್ಯ ಉವಾಚ ||

ಪಂಚದಶ್ಯಾಂ ತು ಶುಕ್ಲಸ್ಯ ಫಾಲ್ಗುನಸ್ಯೈವ ಸತ್ತಮ ।
ಪಾಷಂಡಾನ್ಪತಿತಾಂಶ್ಚೈವ ತಥೈವಾಂತ್ಯಾವಸಾಯಿನಃ || ೧ ||

ನಾಸ್ತಿಕಾನ್ ಚಿತ್ರವೃತ್ತೀಂಶ್ಚ ಪಾಪಾನನ್ಯಾಂಶ್ಚ ನಾಲಪೇತ್ ।
ನಾರಾಯಣಂ ತ್ವೇಕಮನಾಃ ಪುರುಷೋ ನಿಯತೇಂದ್ರಿಯಃ || ೨ ||

ತಿಷ್ಠನ್ ವ್ರಜನ್ಪ್ರಸ್ಖಲಿತೇ ಕ್ಷುತೇ ಚಾಪಿ ಜನಾರ್ದನಂ ।
ಕೀರ್ತನಂ ತತ್ಕ್ರಿಯಾಕಾಲೇ ಸಪ್ತಕೃತ್ವಃ ಪ್ರಕೀರ್ತಯೇತ್ || ೩ ||

---

### ಇನ್ನೂರ ಹದಿನಾರನೆಯ ಅಧ್ಯಾಯ.

೧-೪. ಪುಲಸ್ತ್ಯರು ಹೇಳುತ್ತಾರೆ :—ಫಾಲ್ಗುನಮಾಸದ ಶುಕ್ಲಪೂರ್ಣಿಮೆಯಲ್ಲಿ ಲಕ್ಷ್ಮೀಸಮೇತನಾದ ಜನಾರ್ಧನಮೂರ್ತಿಯನ್ನು ಪೂಜಿಸಬೇಕು. ಈ ಪೂಜಾಕಾಲದಲ್ಲಿ ಪಾಷಂಡ, ಪತಿತ. ಚಂಡಾಲ, ನಾಸ್ತಿಕ, ಚಿತ್ರಕಾರ ಇತರ ಮಹಾಪಾತಕಿಗಳು ಇವರೊಡನೆ ಮಾತನಾಡಕೂಡದು. ಜಿತೇಂದ್ರಿಯನಾಗಿಯೂ ನಾರಾಯಣನಲ್ಲಿ ಏಕಮನಸ್ಕನಾಗಿಯೂ ಇದ್ದು, ಕುಳಿತಾಗಲೂ, ಚಲಿಸುವಾಗಲೂ, ಎಡವಿದಾಗಲೂ, ಶೀನುವಾಗಲೂ ಸಹ ಸರ್ವಕಾಲದಲ್ಲಿಯೂ ಅವನನ್ನೇ ಕೀರ್ತನ ಮಾಡುತ್ತಾ ಪೂಜಾಕಾಲದಲ್ಲಿಯೂ ಏಳಾವರ್ತಿ ಪಠಿಸಬೇಕು. ಸಂಧ್ಯಾಕಾಲವು

**ಲಕ್ಷ್ಮ್ಯಾ ಸಮನ್ವಿತಂ ದೇವಂ ತ್ವರ್ಚಯೇಚ್ಚ ಜನಾರ್ದನಂ ।**
**ಸಂಧ್ಯಾದ್ಯುಪರಮೇ ಚೇಂದುಸ್ವರೂಪಂ ಹರಿಮೀಶ್ವರಂ ॥ ೪ ॥**

**ರಾತ್ರಿಂ ಲಕ್ಷ್ಮೀಂ ಚ ಸಂಚಿತ್ಯ ಸಮ್ಯಗರ್ಘ್ಯೇಣ ಪೂಜಯೇತ್ ।**
**ನಕ್ತಂ ಚ ಭುಂಜೀತ ನರಃ ತೈಲಕ್ಷಾರವಿವರ್ಜಿತಂ ॥ ೫ ॥**

**ತಥೈವ ಚೈತ್ರವೈಶಾಖಜ್ಯೇಷ್ಠೇಷು ಮುನಿಸತ್ತಮ ।**
**ಅರ್ಚಯೇತ್ತು ತಥಾ ಪ್ರೋಕ್ತಂ ಪ್ರಾಪ್ತೆ ಪ್ರಾಪ್ತೇ ತು ತದ್ದಿನೇ ॥ ೬ ॥**

**ನಿಷ್ಪಾದಿತಂ ಭವೇದೇಕಂ ಪಾರಣಂ ದಾಲ್ಭ್ಯ ಭಕ್ತಿತಃ ।**
**ದ್ವಿತೀಯಂ ಚಾಪಿ ವಕ್ಷ್ಯಾಮಿ ಪಾರಣಂ ದ್ವಿಜಸತ್ತಮ ॥ ೭ ॥**

**ಆಷಾಢೇ ಶ್ರಾವಣೇ ಚಾಪಿ ಪ್ರಾಪ್ತೇ ಭಾದ್ರಪದೇ ತಥಾ ।**
**ತಥೈವಾಶ್ವಯುಜೇಽಭ್ಯರ್ಚ್ಯ ಶ್ರೀಧರಂ ವೈ ಶ್ರಿಯಾ ಸಹ ।**
**ಸಮ್ಯಕ್ಚಂದ್ರಮಸೋ ದತ್ವಾ ಭುಂಜೀತಾರ್ಘ್ಯಂ ಯಥಾವಿಧಿ ॥ ೮ ॥**

---

ಕಳೆದನಂತರ ಪ್ರಭುವಾದ ಹರಿಯ ಸ್ವರೂಪವೆಂದು ಭಾವಿಸಿ ಚಂದ್ರನನ್ನು ಪೂಜಿಸಬೇಕು.

೫–೮. ರಾತ್ರಿಯನ್ನು ಲಕ್ಷ್ಮೀಸ್ವರೂಪವನ್ನಾಗಿ ತಿಳಿದು ಅರ್ಘ್ಯಾದಿಗಳಿಂದ ಚನ್ನಾಗಿ ಪೂಜಿಸಬೇಕು. ರಾತ್ರಿಯಲ್ಲಿ ತೈಲಲವಣವರ್ಜಿತವಾಗಿ ಭುಂಜಿಸಬೇಕು. ಹಾಗೆಯೇ ಚೈತ್ರ, ವೈಶಾಖ ಜ್ಯೇಷ್ಠ ಮಾಸಗಳಲ್ಲಿಯೂ ಆಯಾಯ ದಿನ ಪ್ರಾಪ್ತವಾದಾಗ ಪೂಜಿಸಬೇಕು. ಭಕ್ತಿಯಿಂದ ಈ ರೀತಿ ನಡೆಸಿದಲ್ಲಿ ಮೊದಲನೆಯ ಪಾರಣವು ಆಚರಿಸಿದಂತಾಗುತ್ತದೆ. ಎರಡನೆಯ ಪಾರಣೆಯನ್ನು ಹೇಳುತ್ತೇನೆ ಕೇಳು:—ಆಷಾಢ, ಶ್ರಾವಣ, ಭಾದ್ರಪದ ಮತ್ತು ಆಶ್ವಯುಜ ಮಾಸಗಳಲ್ಲಿ ಲಕ್ಷ್ಮಿಯೊಡನೆ ಲಕ್ಷ್ಮೀಪತಿಯನ್ನು ಪೂಜಿಸಿ ಚಂದ್ರನಿಗೆ ಯಥಾವಿಧಿಯಾಗಿ ಅರ್ಘ್ಯ ಪ್ರದಾನ ಮಾಡಿ ಭುಂಜಿಸಬೇಕು. ಇದು ಎರಡನೆಯ ಪಾರಣೆ ಮೂರನೆಯದನ್ನೂ ಹೇಳುತ್ತೇನೆ.

ದ್ವಿತೀಯಮೇತದಾಖ್ಯಾತಂ ತೃತೀಯಂ ಪಾರಣಂ ಶೃಣು ।
ಕಾರ್ತಿಕಾದಿಷು ಮಾಸೇಷು ತಥೈವಾಭ್ಯರ್ಚ್ಯ ಕೇಶವಂ ॥ ೯ ॥

ಭೂಮ್ಯಾ ಸಮನ್ವಿತಂ ದದ್ಯಾಚ್ಚಶಾಂಕಾಯಾರ್ಘಣಂ ನಿಶಿ ।
ಭುಂಜೀತ ಚ ಯಥಾಖ್ಯಾತಂ ತೃತೀಯಮಿತಿ ಪಾರಣಂ ॥ ೧೦ ॥

ಪ್ರತಿಪೂಜಾಸು ದದ್ಯಾಚ್ಚ ಬ್ರಾಹ್ಮಣೇಭ್ಯಶ್ಚ ದಕ್ಷಿಣಾಂ ।
ಪ್ರತಿಮಾಸಂ ಚ ವಕ್ಷ್ಯಾಮಿ ಪ್ರಾಶನಂ ಕಾಯಶುದ್ಧಯೇ ॥ ೧೧ ॥

ಪ್ರಥಮಾಂಶ್ಚತುರೋ ಮಾಸಾನ್ ಪಂಚಗವ್ಯಮುದಾಹೃತಂ ।
ಕುಶೋದಕಂ ತಥೈವಾನ್ಯದುಕ್ತಂ ಮಾಸಚತುಷ್ಟಯಂ ॥ ೧೨ ॥

ಸೂರ್ಯಾಂಶುತಪ್ತಂ ತದ್ವಚ್ಚ ಜಲಂ ಮಾಸಚತುಷ್ಟಯಂ ।
ಗೀತವಾದ್ಯಾದಿಕಂ ಪಾಠ್ಯಂ ತಥಾ ಕೃಷ್ಣಸ್ಯ ವಾ ಕಥಾಂ ॥ ೧೩ ॥

ಕಾರಯೇತ್ತು ಚ ದೇವಸ್ಯ ಪಾರಣಂ ಪಾರಣೇ ಗತೇ ।
ಏವಂ ಸಂಪೂಜ್ಯ ವಿಧಿವತ್ಸಪತ್ನೀಕಂ ಜನಾರ್ದನಂ ॥ ೧೪ ॥

---

೯-೧೩. ಕಾರ್ತಿಕಾದಿ ಮಾಸಗಳಲ್ಲಿಯೂ ಸಹ ಹಾಗೆಯೇ ಭೂಮಿ ಸಮೇತನಾದ ಕೇಶವನನ್ನು ಪೂಜಿಸಿ, ರಾತ್ರಿಯಲ್ಲಿ ಚಂದ್ರನಿಗೆ ಉಪಚಾರಸಮರ್ಪಣ ಪೂರ್ವಕವಾಗಿ ಪೂಜಿಸಬೇಕು. ಮೇಲೆ ಹೇಳಿರುವಂತೆ ಭುಂಜಿಸಬೇಕು. ಇದು ಮೂರನೆಯ ಪಾರಣೆ. ಪ್ರತಿಯೊಂದು ಪೂಜೆಯಲ್ಲಿಯೂ ಬ್ರಾಹ್ಮಣರಿಗೆ ದಕ್ಷಿಣಾದಿ ಗಳನ್ನು ಕೊಟ್ಟು ತೃಪ್ತಿಪಡಿಸಬೇಕು. ಪ್ರತಿಮಾಸದಲ್ಲಿಯೂ ಕಾಯಶುದ್ಧಿಗಾಗಿ ಮಾಡುವ ಪ್ರಾಶನವನ್ನೂ ಹೇಳುತ್ತೇನೆ. ಮೊದಲನೆಯ ನಾಲ್ಕು ತಿಂಗಳುಗಳಲ್ಲಿ ಪಂಚಗವ್ಯವನ್ನು ಸೇವಿಸಬೇಕು. ಅನಂತರ ಮುಂದಿನ ನಾಲ್ಕು ತಿಂಗಳುಗಳಲ್ಲಿ ಶುದ್ಧೋದಕವನ್ನೂ, ಅನಂತರ ನಾಲ್ಕು ತಿಂಗಳಲ್ಲಿ ಬಿಸಿಲಿನಿಂದ ಕಾದ ಜಲವನ್ನೂ ಸೇವಿಸಬೇಕು. ಈ ವ್ರತಕಾಲದಲ್ಲಿ ಗೀತವಾದ್ಯಾದಿಗಳನ್ನಾಗಲಿ ಅಥವಾ ಕೃಷ್ಣನ ಕಥೆಯನ್ನಾಗಲಿ ನಡೆಸಬೇಕು.

೧೪-೧೬. ಪಾರಣೆಯು ಮುಗಿದ ಮೇಲೆ ಈ ವಿಧವಾದ ಗೀತ ಕಥಾದಿ ಗಳಿಂದ ಹರಿಯ ಪಾರಣೆಯನ್ನೂ ನಡೆಸಬೇಕು. ಈ ರೀತಿ ಸಪತ್ನೀಕನಾದ

ನಾಪ್ನೋತೀಷ್ಟವಿಯೋಗಾರ್ತಿಂ ಪುಮಾನ್ ಯೋಷಿತ್ತಥಾಪಿ ವಾ ।
ಜನಾರ್ದನಂ ಸಲಕ್ಷ್ಮೀಕಮರ್ಚಯೇತ್ಪ್ರಥಮಂ ತತಃ ॥ ೧೫ ॥

ಸಶ್ರೀಕಂ ಶ್ರೀಧರಂ ಭಕ್ತ್ಯಾ ತೃತೀಯೇ ಭೂತಿಕೇಶವಾ ।
ಯಾವಂತ್ಯೇತದ್ವಿಧಾನೇನ ಪಾರಣಾನ್ಯರ್ಚಯೇತ್ಪ್ರಭುಂ ।
ತಾವಂತಿ ಜನ್ಮಾನಿ ಸುಖಂ ಪ್ರಾಪ್ನೋತೀಷ್ಟಾವಿಯೋಗಜಂ ॥ ೧೬ ॥

ಪ್ರಾಪ್ನೋತಿ ದೇವಸ್ಮರಣಂ ಚ ಮೃತ್ಯೌ
ತದಾಪಿ ಚಾಪ್ನೋತಿ ಮನೋನುಕೂಲಾಂ ।
ಗತಿಂ ದ್ವಿಜಶ್ರೇಷ್ಠ ತತೋಪಿ ಕಾಲೇ
ಸಾಯುಜ್ಯಮಾಯಾತಿ ಜನಾರ್ದನಸ್ಯ ॥ ೧೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಸುಗತಿಪೌಷಮಾಸೀಕಲ್ಪವರ್ಣನೋ ನಾಮ
ಷೋಡಶೋತ್ತರದ್ವಿಶತತಮೋಽಧ್ಯಾಯಃ

---

ಜನಾರ್ದನನನ್ನು ಪೂಜಿಸಿದವನು ಪುರುಷನಾಗಲಿ, ಸ್ತ್ರೀಯಾಗಲಿ ಇಷ್ಟವಿಯೋಗ ದುಃಖವನ್ನು ಹೊಂದುವುದಿಲ್ಲ. ಮೊದಲನೆಯ ಪಾರಣೆಯಲ್ಲಿ ಲಕ್ಷ್ಮೀಸಹಿತನಾದ ಜನಾರ್ದನನ್ನೂ, ಎರಡನೆಯ ಪಾರಣೆಯಲ್ಲಿ ಲಕ್ಷ್ಮಿಯೊಡಗೂಡಿದ ಶ್ರೀಧರಮೂರ್ತಿಯನ್ನೂ, ಮೂರನೆಯ ಪಾರಣೆಯಲ್ಲಿ ಲಕ್ಷ್ಮೀಸಹಿತನಾದ ಕೇಶವನನ್ನೂ ಪೂಜಿಸಬೇಕು. ಈ ವಿಧಾನದಿಂದ ಎಷ್ಟು ಪಾರಣೆಗಳನ್ನು ಮಾಡಿ ಪ್ರಭುವನ್ನು ಪೂಜಿಸುವನೋ ಅಷ್ಟು ಜನ್ಮಗಳಲ್ಲಿ ಇಷ್ಟವಿಯೋಗ ದುಃಖವಿಲ್ಲದೆ ಸುಖಿಯಾಗಿರುತ್ತಾನೆ. ಅಂತ್ಯಕಾಲದಲ್ಲಿ ಭಗವಂತನ ಸ್ಮರಣೆಯನ್ನೂ ಹೊಂದುತ್ತಾನೆ. ಆಗಲೂ ತನ್ನ ಮನಸ್ಸಿಗೆ ಹಿತಕರವಾದ ಆಮುಷ್ಮಿಕಗತಿಯನ್ನೂ ಹೊಂದುತ್ತಾನೆ. ಹಾಗೂ ಕೆಲವು ಕಾಲದನಂತರ ಜನಾರ್ದನನ ಸಾಯುಜ್ಯವನ್ನೇ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಸುಗತಿಪೌಷಮಾಸೀಕಲ್ಪವ್ರತವರ್ಣನವೆಂಬ
ಇನ್ನೂರ ಹದಿನಾರನೆಯ ಅಧ್ಯಾಯ ಮುಗಿದಿದೆ.



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಸಪ್ತದಶೋತ್ತರದ್ವಿಶತತಮೋಽಧ್ಯಾಯಃ ॥

॥ ಪುಲಸ್ತ್ಯ ಉವಾಚ ॥

ಶೃಣು ದಾಲ್ಭ್ಯ ಪರಂ ಕಾಮಂ ವ್ರತಂ ಸಂತತಿದಂ ನೃಣಾಂ ।
ಯದುಪೋಷ್ಯ ನ ವಿಚ್ಛೇದಃ ಪಿತೃಪಿಂಡಸ್ಯ ಜಾಯತೇ ॥ ೧ ॥

ಕೃಷ್ಣಾಷ್ಟಮ್ಯಾಂ ಚೈತ್ರಮಾಸೇ ಸ್ನಾತೋ ನಿಯತಮಾನಸಃ ।
ಕೃಷ್ಣಮಭ್ಯರ್ಚ್ಯ ಪೂಜಾಂ ಚ ದೇವಕ್ಯಾಃ ಕುರುತೇ ನರಃ ॥ ೨ ॥

ನಿರಾಹಾರೋ ಜಪನ್ನಾಮ ಕೃಷ್ಣಸ್ಯ ಜಗತಃ ಪತೇಃ ।
ಉಪವಿಷ್ಟೋ ವ್ರಜನ್ ಸ್ನಾತಃ ಕ್ಷುತಪ್ರಸ್ಖಲನಾದಿಷು ॥ ೩ ॥

---

### ಇನ್ನೂರ ಹದಿನೇಳನೆಯ ಅಧ್ಯಾಯ.

೧-೩. ಪುಲಸ್ತ್ಯರು ಹೇಳುತ್ತಾರೆ:— ಎಲೈ ದಾಲ್ಭ್ಯನೇ, ಮತ್ತೊಂದು ಉತ್ತಮವಾದ ವ್ರತವನ್ನು ಹೇಳುತ್ತೇನೆ ಕೇಳು. ಈ ವ್ರತವು ಬಹುಮಟ್ಟಿಗೂ ವಂಶಾಭಿವೃದ್ಧಿಗೆ ಕಾರಣವಾಗುತ್ತದೆ. ಉಪವಾಸದಿಂದಿದ್ದು ಈ ವ್ರತವನ್ನು ಮಾಡಿದಲ್ಲಿ ಪಿತೃಪಿಂಡಕ್ಕೆ ತಡೆಯಾಗುವುದಿಲ್ಲ. ಚೈತ್ರಮಾಸದ ಕೃಷ್ಣಪಕ್ಷದ ಅಷ್ಟಮಿಯ ದಿನ ಸ್ನಾನಮಾಡಿ ಶುದ್ಧವಾದ ಮನಸ್ಸಿನಿಂದಿದ್ದು ಕೃಷ್ಣನನ್ನೂ, ದೇವಕಿಯನ್ನೂ ಪೂಜಿಸಿ ಉಪವಾಸದಿಂದಿದ್ದು ಜಗತ್ಪತಿಯಾದ ಕೃಷ್ಣನ ನಾಮವನ್ನು ಜಪಿಸಬೇಕು. ಸ್ನಾನ ಮಾಡಿ ಕುಳಿತಿರುವಾಗಲೂ, ನಡೆಯುವಾಗಲೂ, ಎಡವಿದಾಗಲೂ, ಶೀನುಬಂದಾಗಲೂ ಆ ನಾಮವನ್ನೇ ಜಪಿಸುತ್ತಾ ಪೂಜೆಯ ಕಾಲದಲ್ಲಿಯೂ ಏಳುಬಾರಿ ಜಪಿಸಬೇಕು.

ಪೂಜಾಯಾಂ ಚಾಪಿ ಕೃಷ್ಣಸ್ಯ ಸಪ್ತವಾರಾನ್ಪ್ರಕೀರ್ತಯೇತ್ ।
ಪಾಷಂಡಿನೋ ವಿಕರ್ಮಸ್ಥಾನ್ ನಾಲಪೇಚ್ಚೈವ ನಾಸ್ತಿಕಾನ್ ॥ ೪ ॥

ಪ್ರಭಾತೇ ಚ ತತಃ ಸ್ನಾತೋ ದತ್ತ್ವಾ ವಿಪ್ರಾಯ ದಕ್ಷಿಣಾಂ ।
ಭುಂಜೀತ ಕೃತಪೂಜಸ್ತು ಕೃಷ್ಣಸ್ಯೈವ ಜಗತ್ಪತೇಃ ॥ ೫ ॥

ವೈಶಾಖ ಜ್ಯೇಷ್ಠಯೋಶ್ಚೈವಂ ಪಾರಣಂ ಹಿ ತ್ರಿಮಾಸಿಕಂ ।
ಉಪೋಷ್ಯ ದೇವದೇವೇಶಂ ಘೃತೇನ ಸ್ನಾಪಯೇದ್ಧರಿಂ ॥ ೬ ॥

ಆಷಾಢೇ ಶ್ರಾವಣೇ ಚೈವ ಮಾಸಿ ಭಾದ್ರಪದೇ ತಥಾ ।
ಉಪೋಷ್ಯತೇ ದ್ವಿತೀಯಂ ವೈ ಪಾರಣಂ ಪೂರ್ವವದ್ಭವೇತ್ ॥ ೮ ॥

ಆಶ್ವಿನೇ ಕಾರ್ತಿಕೇ ಸೌಮ್ಯೇ ತೃತೀಯಂ ಪಾರಣಂ ತಥಾ ।
ಪೌಷೇ ಮಾಘೇ ಫಾಲ್ಗುನೇ ಚ ಚತುರ್ಥಂ ದ್ವಿಜಸತ್ತಮ ॥ ೯ ॥

---

೪-೮. ಪಾಷಂಡಿಗಳು, ನಿಂದ್ಯಕರ್ಮಿಗಳು, ನಾಸ್ತಿಕರು ಇವರೊಡನೆ ಮಾತ್ತ ನಾಡಬಾರದು. ಬೆಳಿಗ್ಗೆ ಸ್ನಾನಮಾಡಿ ಬ್ರಾಹ್ಮಣರಿಗೆ ದಕ್ಷಿಣಾದಿಗಳನ್ನು ಕೊಟ್ಟು ಕೃಷ್ಣನ ಪೂಜೆಮಾಡಿದ ನಂತರ ಭುಂಜಿಸಬೇಕು. ವೈಶಾಖ ಮತ್ತು ಜ್ಯೇಷ್ಠಮಾಸ ದೊಡನೆ ಮೂರು ತಿಂಗಳೂ ಸೇರಿ ಮೊದಲನೆಯ ಪಾರಣೆ ನಡೆಸಬೇಕು. ಆಷಾಢ, ಶ್ರಾವಣ ಮತ್ತು ಭಾದ್ರಪದ ಮಾಸಗಳಲ್ಲಿ ಆಯಾಯ ದಿನ ಉಪವಾಸವಿದ್ದು ಹರಿ ಯನ್ನು ಘೃತದಿಂದ ಅಭಿಷೇಕಮಾಡಿ ಪಾರಣೆ ಮಾಡಬೇಕು. ಇದು ಎರಡನೆಯ ಪಾರಣೆ.

೯-೧೦. ಆಶ್ವಯುಜ, ಕಾರ್ತೀಕ, ಮಾರ್ಗಶಿರ ಮಾಸಗಳಲ್ಲಿ ಮೂರನೆಯ ಪಾರಣೆ. ಪುಷ್ಯ, ಮಾಘ, ಫಾಲ್ಗುನಗಳಲ್ಲಿ ನಾಲ್ಕನೆಯಪಾರಣೆ. ಪ್ರತಿಯೊಂದು ಪಾರಣೆಯಲ್ಲಿಯೂ ಹರಿಗೆ ಘೃತದಿಂದ ಅಭಿಷೇಕವನ್ನೂ, ಬ್ರಾಹ್ಮಣರಿಗೆ ಘೃತದಾನ

ಪಾರಣೇ ಪಾರಣೇ ಪೂರ್ಣೇ ಘೃತೇನ ಸ್ನಪಯೇದ್ಧರಿಂ ।
ಬ್ರಾಹ್ಮಣೇಭ್ಯೋ ಘೃತಂ ದದ್ಯಾತ್ತಥೈವ ಪ್ರತಿಪಾರಣಂ ॥ ೧೦ ॥

ಕೃತ್ವಾ ವ್ರತಂ ನಾಕಮನುಪ್ರಯಾತಿ
ಮಾನುಷ್ಯಮಾಸಾದ್ಯ ಚ ನಿರ್ವೃತಃ ಸ್ಯಾತ್ ।
ಸಂತಾನವೃದ್ಧಿಂ ಚ ತಥಾಪ್ನುತೇಽಸೌ
ಯಾವನ್ಮಹೀ ಸಾಗರಮೇಖಲಾಂತಾ ॥ ೧೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಸಂತಾನಾಷ್ಟಮೀವ್ರತವರ್ಣನೋ ನಾಮ
ಸಪ್ತದಶೋತ್ತರದ್ವಿಶತತಮೋಽಧ್ಯಾಯಃ

---

ವನ್ನೂ ಮಾಡಬೇಕು. ಈ ವ್ರತವನ್ನು ಈ ರೀತಿ ಮಾಡಿದವನು ಸ್ವರ್ಗಸುಖಕ್ಕೆ ಭಾಗಿಯಾಗುತ್ತಾನೆ. ಅನಂತರ ಮನುಷ್ಯತ್ವ ಹೊಂದಿ ಸುಖಿಯಾಗುತ್ತಾನೆ. ಭೂಮಿ ಇರುವ ಪರ್ಯಂತ ಸಂತಾನ ಸಮೃದ್ಧಿಯನ್ನೂ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಸಂತಾನಾಷ್ಟಮೀವ್ರತವರ್ಣನವೆಂಬ
ಇನ್ನೂರ ಹದಿನೇಳನೆಯ ಅಧ್ಯಾಯ ಮುಗಿದಿದೆ.



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಅಷ್ಟಾದಶೋತ್ತರದ್ವಿಶತತಮೋಽಧ್ಯಾಯಃ ॥

॥ ಪುಲಸ್ತ್ಯ ಉವಾಚ ॥

**ಅಷಾಢಶುಕ್ಲಪಕ್ಷೇ ತು ಭಗವಾನ್ ಮಧುಸೂದನಃ ।**
**ಭೋಗಿಭೋಗೇ ನಿಜಾಂ ಮಾಯಾಂ ಯೋಗನಿದ್ರಾಂ ಚ ಮಾನಯೇತ್ ॥**

**ಶೇತೇಽಸೌ ಚತುರೋ ಮಾಸಾನ್ಯಾವದ್ಭವತಿ ಕಾರ್ತಿಕಂ ।**
**ವಿಶಿಷ್ಟಾ ನ ಪ್ರವರ್ತಂತೇ ತದಾ ಯಜ್ಞಾದಿಕಾಃ ಕ್ರಿಯಾಃ ॥ ೨ ॥**

**ತತ್ರಾಷಾಢಸಿತಾಂತೇ ಚ ಯೋ ನರೋ ದಿನಪಂಚಕಂ ।**
**ಅಧಃಶಾಯೀ ಬಹಿಃಸ್ನಾಯೀ ಮಾಂಸಾಭ್ಯಂಗವಿವರ್ಜಿತಃ ॥ ೩ ॥**

---

### ಇನ್ನೂರ ಹದಿನೆಂಟನೆಯ ಅಧ್ಯಾಯ

೧-೫. ಪುಲಸ್ತ್ಯರು ಹೇಳುತ್ತಾರೆ :— ಅಷಾಢಶುಕ್ಲಪಕ್ಷದಲ್ಲಿ ಮಹಾಮಹಿಮನಾದ ಮದುಸೂಧನನು ಶೇಷಪರ್ಯಂಕದಲ್ಲಿ ತನ್ನ ಮಾಯಾರೂಪವಾದ ಯೋಗನಿದ್ರೆಯನ್ನು ಸೇವಿಸುತ್ತಾನೆ. ಕಾರ್ತೀಕ ಬರುವವರೆಗೂ ನಾಲ್ಕು ತಿಂಗಳು ಶಯನಹೊಂದಿರುತ್ತಾನೆ. ಆ ಕಾಲದಲ್ಲಿ ಉತ್ತಮವಾದ ಯಜ್ಞಯಾಗಾದಿ ಯಾವ ಕ್ರಿಯೆಗಳೂ ನಡೆಯುವುದಿಲ್ಲ ಆ ಆಷಾಢ ಶುಕ್ಲಪಕ್ಷದ ಕೊನೆಯಲ್ಲಿ ಐದು ದಿನಗಳವರಿಗೂ ಇಲ್ಲಿ ಹೇಳಿರುವ ನಿಯಮಗಳಿಂದ ಕೂಡಿ ಹರಿಯನ್ನು ಗಂಧಪುಷ್ಪ ನೈವೇದ್ಯಾದಿಗಳಿಂದ ನಿತ್ಯವೂ ಪೂಜಿಸಬೇಕು ಈ ಪೂಜಾದಿನಗಳಲ್ಲಿ ಹೊರಗೇ ಸ್ನಾನಮಾಡುತ್ತಾ ನೆಲದ ಮೇಲೆಯೇ ಮಲಗುತ್ತಾ ಮಾಂಸಾಭ್ಯಂಗಾದಿಗಳನ್ನು

ವೃಂತಾಕಾಲಾಬು ಕೂಶ್ಮಾಂಡಮಧುಕ್ಷಾರವಿವರ್ಜಿತಃ ।
ಸಮಸ್ತಮದಿರಾವರ್ಜೀ ಸಕೃನ್ನಕ್ತಾಶನೋ ಭವೇತ್ ॥ ೪ ॥

ಬ್ರಹ್ಮಚಾರೀ ಜಿತಕ್ರೋಧೋ ಜಪಹೋಮಪರಾಯಣಃ ।
ಹರಿಂ ಸಂಪೂಜಯೇನ್ನಿತ್ಯಂ ಗಂಧಮಾಲ್ಯಾನ್ನಸಂಪದಾ ॥ ೫ ॥

ಗೀತೈರ್ವಾದ್ಯೈಸ್ತಥಾ ನೃತ್ತೈರ್ದೀಪಮಾಲಾಭಿರೇವ ಚ ।
ಸಾನ್ನಾನಾಂ ಜಲಧೇನೂನಾಂ ಪ್ರದಾನೇನ ತಥೈವ ಚ ॥ ೬ ॥

ತಥಾ ಕಾರ್ತಿಕಶುಕ್ಲಾಂತೇ ತೃತೀಯಂ ಪಾರಣಂ ಭವೇತ್ ॥ ೭ ॥

ಹಿಂಸಾತ್ಮಕೈಸ್ತು ಕಿಂ ತಸ್ಯ ಯಜ್ಞೈಃ ಕಾರ್ಯಂ ಮಹಾತ್ಮನಃ ।
ಪ್ರಸ್ವಾಪೇ ಚ ಪ್ರಬೋಧೇ ಚ ಪೂಜಿತೋ ಯೇನ ಕೇಶವಃ ॥ ೮ ॥

ದಶಾಹಮೇತತ್ಕೃತ್ವಾ ತು ವ್ರತಂ ವಿಷ್ಣುಪರೋ ನರಃ ।
ಅಗ್ನಿಷ್ಟೋಮಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥ ೯ ॥

---

ಬಿಟ್ಟು ಬದನೆಕಾಯಿ, ಸೋರೇಕಾಯಿ, ಕೂಶ್ಮಾಂಡ, ಜೇನು, ಉಪ್ಪು, ಮದಕಾರಿಯಾದ ಪಾನೀಯಗಳು ಇವನ್ನೂ ಬಿಟ್ಟು ರಾತ್ರಿಯಲ್ಲಿ ಒಂದೇ ಸಲ ಭೋಜನ ಮಾಡುತ್ತಿರಬೇಕು. ಕ್ರೋಧಾದಿಗಳನ್ನು ತ್ಯಜಿಸಿ ಬ್ರಹ್ಮಚರ್ಯದಿಂದ ಕೂಡಿ ಜಪ ಹೋಮಾದಿಗಳಲ್ಲಿ ತತ್ಪರನಾಗಿರಬೇಕು.

೬–೧೧ ಗೀತವಾದ್ಯಾದಿಗಳಿಂದಲೂ, ನೃತ್ಯದಿಂದಲೂ, ದೀಪಮಾಲೆಗಳಿಂದಲೂ ಈ ರೀತಿ ಹರಿಯನ್ನು ಪೂಜಿಸಿ ನೈವೇದ್ಯಾನ್ನಗಳಿಂದ ಕೂಡಿದ ಜಲಧೇನುಗಳ ದಾನಗಳಿಂದಲೂ, ಕಾರ್ತೀಕ ಶುಕ್ಲಪಕ್ಷದ ಕೊನೆಯಲ್ಲಿ ಮೂರನೆಯ ಪಾರಣೆಯನ್ನು ಮಾಡಬೇಕು. ಪಶುಹಿಂಸಾದಿಗಳಿಂದ ಕೂಡಿದ ಯಜ್ಞಾದಿಗಳಿಂದ ಮಹಾತ್ಮನಾದ ವಿಷ್ಣುವಿಗೆ ಯಾವ ಪ್ರೀತಿಯುಂಟಾದೀತು. ಸ್ವಾಪಕಾಲದಲ್ಲಿಯೂ, ಬೋಧಕಾಲದಲ್ಲಿಯೂ, ಕೇಶವನನ್ನು ಈ ರೀತಿ ಪೂಜಿಸಿದಲ್ಲಿ ಈ ಹತ್ತು ದಿನಗಳಲ್ಲಿಯೂ ಕೇವಲ ವಿಷ್ಣುಪರನಾಗಿ ವ್ರತವನ್ನು ನಡೆಸಿದಲ್ಲಿ ಅವನಿಗೆ ಅಗ್ನಿಷ್ಟೋಮದ ಫಲವೇ ಉಂಟಾಗುತ್ತದೆ. ತನ್ನ ಕುಲವನ್ನೂ ಪಾಪಕೂಪದಿಂದ ಉದ್ಧರಿಸುತ್ತಾನೆ ಕಾರ್ತಿಕ

**ಕಾರ್ತಿಕಶ್ಚಾಗ್ನಿದೈವತ್ಯೋ ಮಾಸೋ ದೇವಮುಖಃ ಸ್ಮೃತಃ ।**
**ಅಶ್ವಯುಜ್ಯಾಮತೀತಾಯಾಂ ಯಾವತ್ಸ್ಯಾದ್ದ್ವಿಜ ಕಾರ್ತಿಕೀ ॥ ೧೦ ॥**

**ವ್ರತಂ ದಶಾಹಾಭಿಹಿತಂ ಕೃತ್ವಾ ಸ್ವರ್ಗೇ ಮಹೀಯತೇ ।**
**ಪೌಂಡರೀಕಮವಾಪ್ನೋತಿ ಕುಲಮುದ್ಧರತಿ ಸ್ವಕಂ ॥ ೧೧ ॥**

**ಪ್ರತ್ಯಹಂ ದೀಪದಾನೇನ ಕಾರ್ತಿಕಾಭಿಮುಖೋ ಭವೇತ್ ।**
**ಚಕ್ಷುಷ್ಮಾನ್ ಬ್ರಾಹ್ಮಣಶ್ರೇಷ್ಠ ತಥಾ ಸರ್ವತ್ರ ಪೂಜಿತಃ ॥ ೧೨ ॥**

**ವಿಶಾವಂಶಂ ತಥಾ ಕಾಲಂ ಸರ್ವಮಾಂಸವಿವರ್ಜಿತಃ ।**
**ಸ್ವರ್ಗಲೋಕಾತ್ಪರಿಭ್ರಷ್ಟೋ ಮಾನುಷ್ಯೇ ಸುಖಮಾಪ್ನುಯಾತ್ ॥ ೧೩ ॥**

**ಆರೋಗ್ಯಸುಖಸಂಪತ್ತ್ಯಾ ಯುಕ್ತಶ್ಚ ಸುಭಗೋ ಭವೇತ್ ।**
**ಪ್ರಸುಪ್ತೇ ದೇವದೇವೇಶೇ ಸರ್ವಾನ್ಕಾಮಾನವಾಪ್ನುಯಾತ್ ॥ ೧೪ ॥**

---

ಮಾಸವು ಅಗ್ನಿದೇವತಾಕವಾದುದರಿಂದ ಎಲ್ಲಾ ದೇವತೆಗಳಿಗೂ ಅದು ಮುಖದಂತೆ ಪ್ರಧಾನವಾಗಿರುತ್ತದೆ. ಆಶ್ವಯುಜಮಾಸವು ಕಳೆದಮೇಲೆ ಪುನಃ ಕಾರ್ತೀಕಮಾಸ ಬರುವವರಿಗೂ ಹತ್ತು ದಿವಸಕಾಲದ ಈ ವ್ರತವನ್ನು ಆಚರಿಸುವನು ಸ್ವರ್ಗವಾಸಿಯಾಗಿ ಪೂಜಿಸಲ್ಪಡುತ್ತಾನೆ. ಪೌಂಡರೀಕಯಾಗದ ಫಲವನ್ನೂ ಹೊಂದಿ ಕುಲವನ್ನೂ ಉದ್ಧರಿಸುತ್ತಾನೆ.

೧೨-೧೬. ಪ್ರತಿನಿತ್ಯವೂ ದೀಪಪ್ರದಾನಮಾಡುತ್ತಾ ಕಾರ್ತಿಕಮಾಸದವರೆಗೂ ನಡೆಸಿದಲ್ಲಿ ಅಂತಹವನು ಪ್ರಶಸ್ತವಾದ ನೇತ್ರಪಾಟವ ಉಳ್ಳವನಾಗಿಯೂ, ಜನಪ್ರಿಯನಾಗಿಯೂ ಆಗುತ್ತಾನೆ. ಕಾರ್ತಿಕಮಾಸ ಪೂರ್ತಿಯಾಗಿ ವ್ರತ ನಡೆಸುವವರೆಗೂ ಮಾಂಸಾದಿ ದುಷ್ಟಾಹಾರವನ್ನು ತ್ಯಜಿಸಿರಬೇಕು. ಈ ವ್ರತದಿಂದ ಸ್ವರ್ಗಸುಖವನ್ನು ಹೊಂದಿ, ಪುನಃ ಮನುಷ್ಯನಾಗಿ ಜನಿಸಿ, ಸುಖಿಯಾಗಿಯೂ, ಆರೋಗ್ಯಾದಿಗಳಿಂದ ಕೂಡಿ ಸೌಭಾಗ್ಯಶಾಲಿಯೂ ಆಗುತ್ತಾನೆ. ದೇವಾಧಿಪನಾದ ಹರಿಯು ಸುಪ್ತನಾಗಿರುವಾಗ, ಇವನೂ ಸಹ ಸಕಲ ಮನೋರಥಗಳನ್ನೂ ಸಫಲಗೊಳಿಸಿಕೊಂಡು ಸುಖಿಯಾಗಿರುತ್ತಾನೆ ಹತ್ತು ದಿನಗಳ ಈ ವ್ರತವನ್ನು ಬಹಳ ಕಟ್ಟುನಿಟ್ಟಾಗಿ, ಅಸಿಧಾರಾರೂಪದಿಂದ ಆಚರಿಸಿದಲ್ಲಿ, ಸರ್ವಸಮೃದ್ಧವಾದ ಯಜ್ಞದ

ದಶಾಹಮುದಿತಂ ಕೃತ್ವಾ ಖಡ್ಗಧಾರಾವ್ರತಂ ನರಃ ।
ಸರ್ವಕಾಮಸಮೃದ್ಧಸ್ಯ ಯಜ್ಞಸ್ಯ ಫಲಮಶ್ನುತೇ ॥ ೧೫ ॥

ಮಾಸಂ ಚ ಕಾರ್ತಿಕಂ ಕೃತ್ವಾ ಪೌಂಡರೀಕಮವಾಪ್ನುಯಾತ್ ।
ಕೃತ್ವಾ ಮಾಸಂ ಯಥೇಷ್ಟಂಚ ವಹ್ನಿಷ್ಟೋಮಮವಾಪ್ನುಯಾತ್ ॥ ೧೬ ॥

ಕೃತ್ವಾ ಚ ಚತುರೋ ಮಾಸಾನ್ ಸುಪ್ತೇ ಮಧುನಿಷೂದನೇ ।
ಅಶ್ವಮೇಧಫಲಂ ಪ್ರಾಪ್ಯ ನಾಕಪೃಷ್ಠೇ ಮಹೀಯತೇ ॥ ೧೭ ॥

ಅಸಿಧಾರಾವ್ರತಂ ಕೃತ್ವಾ ತಥಾ ಸಂವತ್ಸರಂ ನರಃ ।
ಸರ್ವಯಜ್ಞಫಲಂ ಪ್ರಾಪ್ಯ ವಿಷ್ಣುಲೋಕೇ ಚ ಗಚ್ಛತಿ ॥ ೧೮ ॥

ಯೇನ ಯೇನ ತು ಕಾಮೇನ ಖಡ್ಗಧಾರಾವ ತಂ ಚರೇತ್ ।
ತಂ ತಂ ಕಾಮಮವಾಪ್ನೋತಿ ವಿಷ್ಣುಲೋಕೇ ಮಹೀಯತೇ ॥ ೧೯ ॥

ತಥಾ ಸಮರ್ಥೋ ಭವತಿ ದಾನೇ ಚ ವರಶಾಪಯೋಃ ।
ಆದಿತ್ಯತೇಜಾ ಭವತಿ ನಾತ್ರ ಕಾರ್ಯಾ ವಿಚಾರಣಾ ॥ ೨೦ ॥

---

ಫಲವನ್ನೇ ಹೊಂದುತ್ತಾನೆ. ಕಾರ್ತಿಕಮಾಸ ಪೂರ್ತಿಯಾಗಿ ಆಚರಿಸಿದಲ್ಲಿ ಪೌಂಡರೀಕ ಯಾಗದ ಫಲವನ್ನು ಹೊಂದುತ್ತಾನೆ. ತನಗೆ ಇಷ್ಟವಾದ ಯಾವುದಾದರೊಂದು ಮಾಸ ಪೂರ್ತಿಯಾಗಿ ಆಚರಿಸಿದಲ್ಲಿ ಅಗ್ನಿಷ್ಟೋಮದ ಫಲವನ್ನು ಹೊಂದುತ್ತಾನೆ.

೧೭-೨೦. ಮಧುಸೂದನನು ಸುಪ್ತನಾಗಿರುವಾಗ ನಾಲ್ಕು ತಿಂಗಳ ಪೂರ್ತಿಯಾಗಿ ಈ ವ್ರತವನ್ನಾಚರಿಸಿದಲ್ಲಿ ಅಶ್ವಮೇಧದ ಫಲವನ್ನು ಹೊಂದಿ ಸ್ವರ್ಗದಲ್ಲಿ ಮಾನ್ಯನಾಗುತ್ತಾನೆ. ಅಸಿಧಾರೆಯ ವ್ರತವನ್ನು ಕಟ್ಟುನಿಟ್ಟಾಗಿ ಒಂದು ವರ್ಷ ಪೂರ್ತಿಯಾಗಿ ಆಚರಿಸಿದಲ್ಲಿ ಎಲ್ಲಾ ಯಜ್ಞಗಳ ಫಲವನ್ನೂ ಹೊಂದಿ ವಿಷ್ಣುಲೋಕದಲ್ಲಿ ಸುಖಿಯಾಗುತ್ತಾನೆ. ಈ ಖಡ್ಗಧಾರಾವ್ರತವನ್ನು ಯಾವ ಯಾವ ಇಷ್ಟಸಿದ್ಧಿಗಾಗಿ ಮಾಡುತ್ತಾನೆಯೋ, ಆಯಾಯ ಇಷ್ಟಗಳನ್ನೂ ಹೊಂದಿ ವಿಷ್ಣುಲೋಕವನ್ನೂ ಹೊಂದುತ್ತಾನೆ ವರಪ್ರದಾನದಲ್ಲಿಯೂ, ಶಾಪಪ್ರದಾನದಲ್ಲಿಯೂ ಸಮರ್ಥನಾಗಿ ಸೂರ್ಯನಂತೆ ತೇಜಸ್ವಿಯೂ ಆಗುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ

|| ದಾಲ್ಭ್ಯ ಉವಾಚ ||

ಅಸಿಧಾರಾವ್ರತವಿಧಿಂ ಸಮಾಚಕ್ಷ್ವ ಮಹಾದ್ಯುತೇ ।
ಏತಂ ಮೇ ಸಂಶಯಂ ಛಿಂಧಿ ತ್ವಂ ಹಿ ಸರ್ವವಿದುಚ್ಯಸೇ　　|| ೨೧ ||

|| ಪುಲಸ್ತ್ಯ ಉವಾಚ ||

ಸ್ನಾತಃ ಸ್ವಲಂಕೃತಃ ಸ್ರಗ್ವೀ ಭುಕ್ತ್ವಾನ್ಮಾಂಸವರ್ಜಿತಂ ।
ಕೃತದೈವತಪೂಜಸ್ತು ಸ್ತ್ರೀಸಹಾಯಃ ಸ್ವಪೇನ್ನಿಶಿ　　|| ೨೨ ||

ಬ್ರಹ್ಮಚಾರೀ ದ್ವಿಜಶ್ರೇಷ್ಠ ಖಡ್ಗಧಾರಾವ್ರತಂ ಚರನ್ ।
ಅಪೂರ್ವಾಂ ಚಾಪ್ಯಪೂರ್ವಾಂ ಚ ಸಮಾಲಿಂಗ್ಯ ಸ್ವಪೇನ್ನಿಶಿ　　|| ೨೩ ||

ಬ್ರಹ್ಮಚಾರೀ ಶತಗುಣಂ ಫಲಮಾಪ್ನೋತ್ಯಸಂಶಯಂ ।
ಅತೀವ ದುಷ್ಕರಮಿದಂ ಖಡ್ಗಧಾರಾವ್ರತಂ ಸ್ಮೃತಂ　　|| ೨೪ ||

---

೨೧-೨೫. ದಾಲ್ಭ್ಯನು ಪ್ರಶ್ನೆಮಾಡುತ್ತಾನೆ:—ಎಲೈ ಮಹಾತ್ಮರೇ, ಅಸಿಧಾರಾವ್ರತದ ವಿಧಿಯನ್ನು ದಯವಿಟ್ಟು ಹೇಳಬೇಕು. ಸರ್ವಜ್ಞರಾದ ತಾವು ಈ ಸಂಶಯವನ್ನೂ ಹೋಗಲಾಡಿಸಬೇಕು. ಇದಕ್ಕೆ ಉತ್ತರವಾಗಿ ಪುಲಸ್ತ್ಯರು ಹೇಳುತ್ತಾರೆ:—ಸ್ನಾನಮಾಡಿ ವಸ್ತ್ರಾದಿಗಳಿಂದಲೂ, ಪುಷ್ಪಮಾಲಾದಿಗಳಿಂದಲೂ ಅಲಂಕೃತನಾಗಿ ದೇವಪೂಜೆಯನ್ನು ಮಾಡಿ, ಮಾಂಸಾದಿನಿಷಿದ್ಧಾಹಾರವನ್ನು ಬಿಟ್ಟು ಊಟಮಾಡಿ, ಸ್ತ್ರೀಯೊಡನೆ ರಾತ್ರಿಯಲ್ಲಿ ಮಲಗಬೇಕು. ಬ್ರಹ್ಮಚರ್ಯದಿಂದಲೇ ಅಂತಹ ರಾತ್ರಿಯನ್ನು ಕಳೆದಲ್ಲಿ, ಅದು ಅಸಿಧಾರಾವ್ರತ, ಮತ್ತು ನೂತನಳಾದ ಯುವತಿಯನ್ನೂ, ಅನುಭೂತಳಾದ ಯುವತಿಯನ್ನೂ ಸಹ ಆಲಿಂಗಿಸಿ ರಾತ್ರಿಯಲ್ಲಿ ಮಲಗಿದವನು ಬ್ರಹ್ಮಚರ್ಯದಿಂದಲೇ ರಾತ್ರಿಯನ್ನು ಕಳೆದಲ್ಲಿ, ಈ ಅಸಿಧಾರಾವ್ರತವು ಮೊದಲಿನ ವ್ರತಕ್ಕಿಂತ ನೂರರಷ್ಟು ಹೆಚ್ಚಾದ ಫಲವನ್ನು ಕೊಡುತ್ತದೆ. ಈ ಖಡ್ಗಧಾರಾವ್ರತವು ಬಹುಮಟ್ಟಿಗೂ ದುಷ್ಕರ, ಇಂತಹ ವ್ರತವನ್ನು

ಕೃತ್ವಾ ವ್ರತಂ ದ್ವಾದಶವತ್ಸರಾಣಿ
ತ್ರೈಲೋಕ್ಯರಾಜ್ಯಂ ಧ್ರುವಮಾಪ್ನುಯಾಚ್ಚ ।
ಭುಕ್ತ್ವಾ ಚಿರಂ ತದ್ದ್ವಿಜಮುಖ್ಯ ಚಾಂತೇ
ಸಾಯುಜ್ಯಮಾಯಾತಿ ಜನಾರ್ದನಸ್ಯ ॥ ೨೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ದಾಲ್ಭ್ಯಂಪ್ರತಿ ಪುಲಸ್ತ್ಯ ಕಥಾಸ್ವಸಿಧಾರಾವರ್ಣನೋ ನಾಮಾಷ್ಟಾದಶೋತ್ತರದ್ವಿಶತತಮೋಽಧ್ಯಾಯಃ

---

ಹನ್ನೆರಡು ವರ್ಷಕಾಲ ಮಾಡಿದಲ್ಲಿ ಅವನು ತ್ರೈಲೋಕ್ಯರಾಜ್ಯವನ್ನೇ ಹೊಂದುತ್ತಾನೆ. ಆ ವಿಧವಾದ ರಾಜ್ಯಸುಖವನ್ನು ಅನುಭವಿಸಿ ಕೊನೆಗೆ ಜನಾರ್ಧನನ ಸಾಯುಜ್ಯವನ್ನೇ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ದಾಲ್ಭ್ಯನನ್ನು ಕುರಿತು ಪುಲಸ್ತ್ಯರು ಹೇಳಿದ ಕಥೆಯಲ್ಲಿ ಅಸಿಧಾರಾವ್ರತವರ್ಣನವೆಂಬ ಇನ್ನೂರ ಹದಿನೆಂಟನೆಯ ಅಧ್ಯಾಯ ಮುಗಿದಿದೆ.

॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಏಕೋನವಿಂಶತ್ಯುತ್ತರದ್ವಿಶತತಮೋಽಧ್ಯಾಯಃ ॥

**॥ ಪುಲಸ್ತ್ಯ ಉವಾಚ ॥**

**ಮಾಸಿ ಪ್ರೋಷ್ಠಪದೇ ಶುಕ್ಲೇ ದ್ವಾದಶ್ಯಾಂ ಜಲಶಾಯಿನಂ ।**
**ಪ್ರಣಮ್ಯಾನಂತಮಭ್ಯರ್ಚ್ಯ ಪುಷ್ಪಧೂಪಾದಿಭಿಃ ಶುಚಿಃ ॥ ೧ ॥**

**ಪಾಷಂಡಾದಿಭಿರಾಲಾಪಮಕುರ್ವನ್ನಿಯಮಾತ್ಮವಾನ್ ।**
**ಜಲಧೇನುಂ ದ್ವಿಜೇ ದತ್ವಾ ನಕ್ತಂ ಭುಂಜೀತ ವಾಗ್ಯತಃ ॥ ೨ ॥**

**ತಿಷ್ಠಂಸ್ಥಿತೋ ವ್ರಜಂಶ್ಚೈವ ಕ್ಷುತಪ್ರಸ್ಖಲನಾದಿಷು ।**
**ಅನಂತನಾಮಸ್ಮರಣಂ ಕುರ್ವನ್ನುಚ್ಚಾರಣಂ ನರಃ ॥ ೩ ॥**

---

### ಇನ್ನೂರ ಹತ್ತೊಂಭತ್ತನೆಯ ಅಧ್ಯಾಯ.

೧-೮, ಪುಲಸ್ತ್ಯರು ಹೇಳುತ್ತಾರೆ :—ಭಾದ್ರಪದ ಶುಕ್ಲ ದ್ವಾದಶಿಯಲ್ಲಿ ಜಲಶಾಯಿಯಾದ ಅನಂತನನ್ನು ಧೂಪದೀಪಾದಿಗಳಿಂದ ಪೂಜಿಸಿ ನಮಸ್ಕರಿಸಿ ಜಿತೇಂದ್ರಿಯನಾಗಿದ್ದು ಪಾಷಾಂಡಾದಿಗಳೊಡನೆ ಸಂಭಾಷಿಸದೆ ಜಲಧೇನುವನ್ನು ಬ್ರಾಹ್ಮಣನಿಗೆ ದಾನಮಾಡಿ, ಮೌನದಿಂದಿದ್ದು ರಾತ್ರಿಯಲ್ಲಿ ಭೋಜನಮಾಡಬೇಕು. ಸ್ಥಿತಿಗಮನಾದಿಗಳಲ್ಲಿಯೂ, ಎಡವಿದಾಗಲೂ, ಶೀನು ಬಂದಾಗಲೂ ಸಹ ಅನಂತನ ನಾಮವನ್ನು ಸ್ಮರಿಸುತ್ತಲೂ, ಉಚ್ಚರಿಸುತ್ತಲೂ ಇರಬೇಕು ಇದೇ ರೀತಿ ಹನ್ನೆರಡು ತಿಂಗಳಲ್ಲಿಯೂ ಮಾಡಿ ಉಪವಾಸವಿದ್ದು ಪಾರಣೆಯೂ ನಡೆದ ಮೇಲೆ ಬ್ರಾಹ್ಮಣರಿಗೆ

ಅನೇನೈವ ವಿಧಾನೇನ ಮಾಸದ್ವಾದಶ ವೈ ಕ್ರಮಾತ್ ।
ಉಪೋಷ್ಯ ಪಾರಣೇ ಪೂರ್ಣೇ ದದ್ಯಾದ್ವಿಪ್ರೇಷು ದಕ್ಷಿಣಾಂ ॥ ೪ ॥

ಕೃತ್ವಾ ವ್ರತಂ ದ್ವಾದಶಮೇತದಿಷ್ಟಂ
ಪ್ರಾಪ್ನೋತ್ಯನಂತಾನಿ ಫಲಾನಿ ವಿಪ್ರ ।
ಸಮ್ಯಕ್ಕೃತಾನಾಂ ನಿಯಮವ್ರತಾನಾಂ
ಚಾನಂತಮಾರಾಧ್ಯ ನ ಸಂಶಯೋಽತ್ರ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ದಾಲ್ಭ್ಯಂಪ್ರತಿ ಪುಲಸ್ತ್ಯವಾಕ್ಯೇಷು
ಅನಂತದ್ವಾದಶೀವ್ರತವರ್ಣನೋ
ನಾಮೈಕೋನವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

---

ದಕ್ಷಿಣೆಯನ್ನು ಕೊಡಬೇಕು. ಈ ರೀತಿ ಹನ್ನೆರಡು ತಿಂಗಳೂ ವ್ರತಮಾಡಿದವನು ತನಗೆ ಇಷ್ಟವಾದ ಅನಂತ ಫಲಗಳನ್ನೂ ಹೊಂದುತ್ತಾನೆ. ಚನ್ನಾಗಿ ಮಾಡಿದ ಈ ಅನಂತ ವ್ರತಗಳು ನಿಸ್ಸಂಶಯವಾಗಿಯೂ ಸಫಲಗಳೇ ಆಗುತ್ತವೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದದಲ್ಲಿ ದಾಲ್ಭ್ಯನನ್ನು ಕುರಿತು ಪುಲಸ್ತ್ಯರು ಹೇಳಿದ ವಾಕ್ಯಗಳಲ್ಲಿ
ಅನಂತದ್ವಾದಶೀವ್ರತವರ್ಣನವೆಂಬ ಇನ್ನೂರ ಹತ್ತೊಂಭತ್ತನೆಯ
ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ವಿಂಶತ್ಯುತ್ತರದ್ವಿಶತತಮೋಽಧ್ಯಾಯಃ ||

**|| ಪುಲಸ್ತ್ಯ ಉವಾಚ ||**

**ಪೌಷಮಾಸೇ ಸಿತೇ ಪಕ್ಷೇ ದ್ವಾದಶ್ಯಾಂ ಶಕ್ರದೈವತಂ ।**
**ನಕ್ಷತ್ರಯೋಗಂ ವಿಷ್ಣುಂ ಚ ಪ್ರಥಮಂ ತು ಸಮರ್ಚಯೇತ್ || ೧ ||**

**ತತಃ ಪ್ರಭೃತಿ ವಿಪ್ರೇಂದ್ರ ಮಾಸಿ ಮಾಸಿ ಜನಾರ್ದನಂ ।**
**ಉಪೋಷಿತಃ ಪೂಜಯತೇ ಯಾವತ್ಸಂವತ್ಸರಂ ಗತಂ || ೨ ||**

**ಮಾಸೇಥ ಮಾಸೇ ವಿಧಿನೋದಿತೇನ**
**ರಮ್ಯಂ ತಿಥೌ ದಾನಮಥ ಬ್ರವೀಮಿ ।**
**ಪ್ರಾಚ್ಯಂ ಯಥಾವದ್ವಿಧಿವತ್ಕ್ರಮೇಣ**
**ತದುಚ್ಯಮಾನಂ ನಿಖಿಲಂ ನಿಬೋಧ || ೩ ||**

---

### ಇನ್ನೂರ ಇಪ್ಪತ್ತನೆಯ ಅಧ್ಯಾಯ.

೧-೬. ಪುಲಸ್ತ್ಯರು ಹೇಳುತ್ತಾರೆ :—ಪುಷ್ಯಮಾಸದಲ್ಲಿ ಶುಕ್ಲಪಕ್ಷ ದ್ವಾದಶಿಯಲ್ಲಿ ಚಿತ್ರಾನಕ್ಷತ್ರವಿರುವ ಯೋಗದಿನದಲ್ಲಿ ಮೊದಲು ವಿಷ್ಣುವನ್ನು ಪೂಜಿಸಬೇಕು. ಅದು ಮೊದಲು ಆ ವರ್ಷ ಪೂರ್ತಿಯಾಗಿ ಪ್ರತಿಮಾಸದಲ್ಲಿಯೂ ಉಪವಾಸವಿದ್ದು ಜನಾರ್ದನನನ್ನು ಪೂಜಿಸಬೇಕು. ಅನಂತರ ಪ್ರತಿಮಾಸದಲ್ಲಿಯೂ ಆ ತಿಥಿಯಲ್ಲಿ ಯಥಾವಿಧಿಯಾದ ದಾನಗಳನ್ನೂ ಹೇಳುತ್ತೇನೆ ಕೇಳು. ಘೃತ, ಭತ್ತ, ಗೋಧಿ, ಹಿರಣ್ಯ, ಗೋಧಿಯ ಅನ್ನ, ಚಿನ್ನದ ಪಾತ್ರೆಯಲ್ಲಿ ತುಂಬಿದ ತೀರ್ಥ, ಛತ್ರ, ಹಾಲಿನಿಂದ ಕೂಡಿದ ಅನ್ನ (ಕ್ಷೀರಾನ್ನ) ಅದೂ ಬೆಲ್ಲದ ಶಾಕಂಬಿಯಿಂದ ಕೂಡಿರಬೇಕು.

ಘೃತಂ ಯಥಾವ್ರೀಹಿಯವಂ ಹಿರಣ್ಯಂ
ಯವಾನ್ನಮಂಭಃ ಕನಕಾನುಪಾನಂ ।
ಛತ್ರಂ ಪಯೋಽನ್ನಂ ಗುಡಫಾಣಿತಾಢ್ಯಂ
ಸ್ರಕ್ಚಂದನೇ ವಸ್ತ್ರಮನುಕ್ರಮೇಣ ॥ ೪ ॥

ಗೋಮೂತ್ರಮಂಭೋ ಘೃತಮಾಂಸಶಾಕಂ
ದೂರ್ವಾ ದಧಿವ್ರೀಹಿಯವಂ ತಿಲಾಂಶ್ಚ ।
ಸೂರ್ಯಾಂಶುತಪ್ತಂ ಜಲಮಂಶುಗರ್ಭಂ
ಕ್ಷೀರಂ ಚ ಮಾಂಸಂ ಕ್ರಮಶಃ ಪ್ರಯುಂಜ್ಯಾತ್ ॥ ೫ ॥

ಕುಲೇ ಪ್ರಧಾನೇ ಧನಧಾನ್ಯಪೂರ್ಣೇ
ವಿವೇಕವಾನ್ಯಸ್ತು ಸಮಸ್ತದುಃಖೇ ।
ಪ್ರಾಪ್ನೋತಿ ಜನ್ಮಾವಿಕಲೇಂದ್ರಿಯಶ್ಚ
ಭವತ್ಯರೋಗೋ ಮತಿಮಾನ್ ಸುಖೀ ಚ ॥ ೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ದಾಲ್ಭ್ಯಂ ಪ್ರತಿ ಪುಲಸ್ತ್ಯವಾಕ್ಯೇಷು
ಬ್ರಹ್ಮದ್ವಾದಶೀವ್ರತವರ್ಣನೋ ನಾಮ
ವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

---

ಪುಷ್ಪಮಾಲೆ, ಚಂದನ, ವಸ್ತ್ರ, ಗೋಮೂತ್ರ, ನೀರು, ಘೃತ, ಮಾಂಸ, ಶಾಕ, ಗರಿಕೆ, ಮೊಸರು, ಭತ್ತ, ಗೋಧಿ, ಎಳ್ಳು, ಬಿಸಿಲಿನಲ್ಲಿ ಕಾದ ನೀರು, ಕಾದ ಹಾಲು, ಮಾಂಸ ಇವುಗಳನ್ನು ಕ್ರಮವಾಗಿ ದಾನಮಾಡಬೇಕು ಈ ರೀತಿ ವ್ರತವನ್ನು ಆಚರಿಸಿದವನು ಧನಧಾನ್ಯ ಸಮೃದ್ಧವಾದ ದುಃಖಾತೀತವಾದ ಉತ್ತಮಕುಲದಲ್ಲಿ ವಿವೇಕಿಯಾಗಿಯೂ, ಇಂದ್ರಿಯ ಪಾಟವವುಳ್ಳವನಾಗಿಯೂ, ಅರೋಗನಾಗಿಯೂ, ಸುಖಿಯಾಗಿಯೂ ಬದುಕಲು ಅರ್ಹವಾದ ಜನ್ಮವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ದಾಲ್ಭ್ಯನನ್ನು ಕುರಿತು ಪುಲಸ್ತ್ಯವಾಕ್ಯದಲ್ಲಿ
ಬ್ರಹ್ಮದ್ವಾದಶೀವ್ರತವರ್ಣನವೆಂಬ ಇನ್ನೂರ ಇಪ್ಪತ್ತನೆಯ
ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕವಿಂಶತ್ಯುತ್ತರದ್ವಿಶತತಮೋಽಧ್ಯಾಯಃ ||

**|| ವಜ್ರ ಉವಾಚ ||**

**ಕಿಂನು ಕೃತ್ಯತಮಂ ಲೋಕೇ ಮನುಷ್ಯಾಣಾಂ ಪ್ರಕೀರ್ತಿತಂ |**
**ಏತತ್ಪೃಷ್ಟೋ ಮಮಾಚಕ್ಷ್ವ ಸರ್ವಧರ್ಮಭೃತಾಂ ವರ || ೧ ||**

**|| ಮಾರ್ಕಂಡೇಯ ಉವಾಚ ||**

**ಅಂತರ್ವೇದಿ ಬಹಿರ್ವೇದಿ ಪೂಜಾ ಕಾರ್ಯಾ ದಿವೌಕಸಾಂ |**
**ಏತತ್ಕೃತ್ಯತಮಂ ಲೋಕೇ ಪುರುಷಸ್ಯ ವಿಪಶ್ಚಿತಃ || ೨ ||**

**ಅಂತರ್ವೇದ್ಯಾಂ ಚ ಯಜನಂ ಬಹುವಿತ್ತಸ್ಯ ಕೀರ್ತಿತಂ |**
**ಸ್ವಲ್ಪವಿತ್ತಸ್ಯ ಧರ್ಮಜ್ಞ ಬಹಿರ್ವೇದಿ ಪ್ರಕೀರ್ತಿತಂ || ೩ ||**

---

### ಇನ್ನೂರ ಇಪ್ಪತ್ತೊಂದನೆಯ ಅಧ್ಯಾಯ.

೧. ವಜ್ರನು ಪ್ರಶ್ನೆಮಾಡುತ್ತಾನೆ :—ಧರ್ಮಜ್ಞನಾದ ಮಹಾತ್ಮನೇ, ಲೋಕದಲ್ಲಿ ಮನುಷ್ಯನಾಗಿ ಜನಿಸಿದವನು ಮಾಡಬೇಕಾದ ಮುಖ್ಯವಾದ ಕಾರ್ಯ ವೇನು? ಇದನ್ನು ದಯವಿಟ್ಟು ನನಗೆ ಹೇಳಬೇಕು. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ.

೨-೬. ಮನುಷ್ಯನಾಗಿ ಹುಟ್ಟಿದವನು ಅವನವನ ಅಧಿಕಾರಕ್ಕೆ ತಕ್ಕಂತೆ ಅಂತರ್ವೇದಿಯಾಗಿಯೂ ಅಂದರೆ ಯಜ್ಞದಲ್ಲಿ ವೇದಿಯಲ್ಲಿ ಸಾನ್ನಿಧ್ಯ ಹೊಂದಿದ ಮತ್ತು ಬಹಿರ್ವೇದಿಯಾಗಿಯೂ ಅಂದರೆ ಯಜ್ಞವನ್ನು ಬಿಟ್ಟು ಹೊರಗೂ ಇರುವ ದೇವತೆಗಳ ಪೂಜೆಯನ್ನು ಮಾಡಿಯೇ ಮಾಡಬೇಕು. ಬುದ್ಧಿವಂತನಾದ ಮನುಷ್ಯನಿಗೆ

ಪುಷ್ಪಾನ್ನಗಂಧನೈವೇದ್ಯ ಸ್ತೋತ್ರಾಧ್ಯಯನಕರ್ಮಣಾ ।
ಧೂಪದೀಪನಮಸ್ಕಾರೈರ್ನಿತ್ಯಂ ಪೂಜ್ಯಾ ದಿವೌಕಸಃ ॥ ೪ ॥

ತತೋಽಪಿ ನಿಯಮೈಶ್ಚೈವ ಬ್ರಾಹ್ಮಣಾನಾಂ ಚ ತರ್ಪಣೈಃ ।
ಬಹುಃಶುಶ್ರೂಷಯಾ ಚೈವ ದಾನೇನ ವಿವಿಧೇನ ಚ ॥ ೫ ॥

ಸದೈವ ಪೂಜಿತಾ ದೇವಾಸ್ತುಷ್ಟಿಮಾಯಾಂತಿ ಯಾದವ ।
ಸ್ವೇಸ್ವೇ ಕಾಲವಿಶೇಷೇಣ ಕಾಲಃ ಪೂರ್ವೋದಿತೋ ಮಯಾ ॥ ೬ ॥

॥ ವಜ್ರ ಉವಾಚ ॥

ದೇವತಾಃ ಕಾಶ್ಚ ಕಸ್ಮಿನ್ನು ಕಾಲೇ ಸಂಪೂಜಯೇತ್ಸದಾ ।
ದೇವತಾಪೂಜನೇ ಕಾರ್ಯಂ ವಿಶೇಷಾನ್ಮಮ ಕೀರ್ತಯ ॥ ೭ ॥

---

ಈ ವಿಧವಾದ ದೇವತಾ ಪೂಜೆಗಿಂತಲೂ ಕರ್ತವ್ಯವಾದ ಮತ್ತೊಂದು ಕರ್ಮವಿಲ್ಲ. ಅಂತರ್ವೇದಿಯಾದ ಯಜನವು (ಪೂಜೆಯು) ಪ್ರಾಯಶಃ ಧನಿಕರಿಗೆ ಸಾಧ್ಯವಾಗುತ್ತದೆ. ಅಲ್ಪಸ್ವಲ್ಪ ದ್ರವ್ಯವುಳ್ಳ ಸಾಮಾನ್ಯನಿಗೆ ವೇದಿಯ ಹೊರಗೆ ನಡೆಸಬಹುದಾದ ಯಜನವೇ ಮಾಡಲು ಸಾಧ್ಯವಾಗುತ್ತದೆ. ಇದೂ ಸಹ ಹೂವು, ಗಂಧ, ನೈವೇದ್ಯ, ಸ್ತೋತ್ರ, ಅಧ್ಯಯನ, ಧೂಪದೀಪನಮಸ್ಕಾರಾದಿಗಳಿಂದ ಸಾಧ್ಯವಾಗಿರುತ್ತಯಾಗಿ ಇವುಗಳಿಂದಲೇ ದೇವತೆಗಳನ್ನು ಪೂಜಿಸಬೇಕು. ಇದಕ್ಕಿಂತಲೂ ಉಪವಾಸ ನಿಯಮಗಳಿಂದಲೂ ಬ್ರಾಹ್ಮಣರಿಗೆ ಮಾಡುವ ಪೂಜಾ, ಶುಶ್ರೂಷಾ, ದಾನ ಇತ್ಯಾದಿ ಬಹುವಿಧ ಬಾಹ್ಯಸಾಧನಗಳಿಂದಲೂ ಮಾಡುವ ಪೂಜೆಯು ದೇವತೆಗಳಿಗೆ ತೃಪ್ತಿಕರವಾಗಿಯೇ ಆಗುತ್ತದೆ. ಇದನ್ನೂ ಅವರವರಿಗೆ ವಿಹಿತವಾದ ಕಾಲದಲ್ಲಿಯೇ ಮಾಡಬೇಕಾಗುತ್ತದೆ. ಆ ಕಾಲಗಳನ್ನೂ ಹಿಂದೆ ನಾನು ಹೇಳಿರುತ್ತೇನೆ. ಈ ವಿಷಯದಲ್ಲಿಯೂ ವಜ್ರನು ಪ್ರಶ್ನೆಮಾಡುತ್ತಾನೆ.

೭–೧೦. ಯಾವ ಯಾವ ದೇವತೆಗಳನ್ನು ಯಾವ ಯಾವ ಕಾಲದಲ್ಲಿ ಪೂಜಿಸಬೇಕು. ಆ ಪೂಜೆಯಲ್ಲಿಯೂ ಸಹ ವಿಶೇಷವಾಗಿ ಮಾಡಬೇಕಾದ ಕಾರ್ಯವೇನು? ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ—ದೇವತಾ ಪೂಜೆಗೆ ಅರ್ಹವಾದ ಕಾಲವನ್ನು ಬೇರೆ ಬೇರೆ ಹೇಳುತ್ತೇನೆ. ವರ್ಷಪರ್ಯಂತವೂ

|| ಮಾರ್ಕಂಡೇಯ ಉವಾಚ ||

ಕಾಲಂ ತಥಾಹಂ ವಕ್ಷ್ಯಾಮಿ ದೇವತಾಪೂಜನೇ ಪೃಥಕ್ ।
ಸಂವತ್ಸರೇಣ ಧರ್ಮಜ್ಞ ಸೋಪವಾಸಸ್ಯ ಸರ್ವದಾ || ೮ ||

ಬ್ರಹ್ಮಾಣಂ ಪೂಜಯೇದ್ದೇವಂ ಸತತಂ ಪ್ರಥಮೇಽಹನಿ।
ಪಕ್ಷದ್ವಯೇ ಮಹಾಭಾಗ ಪಂಚದಶ್ಯಾಮುಪೋಷಿತಃ || ೯ ||

ಸಂವತ್ಸರೇಣ ಧರ್ಮಜ್ಞ ವಿಂದ್ಯಾದ್ಬಹುಸುವರ್ಣಕಂ ।
ಹಂಸಯುಕ್ತೇನ ಯಾನೇನ ಬ್ರಹ್ಮಲೋಕೇ ಚ ಗಚ್ಛತಿ || ೧೦ ||

ಚೈತ್ರಮಾಸಸ್ಯ ಯಾ ಶುಕ್ಲೇ ಪ್ರಥಮಾ ಪ್ರತಿಪದ್ಭವೇತ್ ।
ತದಹ್ನಿ ಬ್ರಹ್ಮಣಃ ಕೃತ್ವಾ ಸೋಪವಾಸಸ್ತು ಪೂಜನಂ || ೧೧ ||

ಸಂವತ್ಸರಮವಾಪ್ನೋತಿ ಸೌಖ್ಯಾನಿ ಭೃಗುನಂದನ ।
ಕಾಲಸ್ಯಾವಯವಾಃ ಸರ್ವೇ ತಸ್ಮಿನ್ನಹನಿ ಪೂಜಿತಾಃ || ೧೨ ||

ಗ್ರಹರ್ಕ್ಷಾಣಿ ಚ ಧರ್ಮಜ್ಞ ಸೌಖ್ಯಂ ದದ್ಯಾದನುತ್ತಮಂ ।
ಸಂವತ್ಸರಾಧಿಪಂ ನಾಗಂ ತಸ್ಮಿನ್ನಹನಿ ಪೂಜಯೇತ್ || ೧೩ ||

---

ಆ ಪೂಜೆಯನ್ನು ಉಪವಾಸಪೂರ್ವಕವಾಗಿ ನಡೆಸಬೇಕು. ಚತುರ್ಮುಖನ ಪೂಜೆಯನ್ನು ಎರಡು ಪಕ್ಷಗಳಲ್ಲಿಯೂ ಪೂರ್ಣಿಮೆ ಮತ್ತು ಅಮಾವಾಸ್ಯಾ ದಿನಗಳಲ್ಲಿ ಉಪವಾಸವಿದ್ದು ಪ್ರಥಮೆಯಲ್ಲಿ ಮಾಡಬೇಕು. ಹೀಗೆ ವರ್ಷಪೂರ್ತಿ ಮಾಡಿದವನು ಹೆಚ್ಚಾಗಿ ಧನಕನಕಾದಿಗಳನ್ನು ಹೊಂದುತ್ತಾನೆ. ಹಂಸಗಳಿಂದ ಕೂಡಿದ ದಿವ್ಯ ಯಾನದಿಂದ ಬ್ರಹ್ಮಲೋಕವನ್ನು ಹೊಂದುತ್ತಾನೆ.

೧೧-೧೪. ಚೈತ್ರಮಾಸದ ಶುಕ್ಲಪಕ್ಷ ಪ್ರಥಮಾತಿಥಿಯಲ್ಲಿ ಉಪವಾಸವಿದ್ದು ಬ್ರಹ್ಮನನ್ನು ಪೂಜಿಸಬೇಕು. ಇದರಿಂದ ಆ ಸಂವತ್ಸರವೆಲ್ಲಾ ಸೌಖ್ಯದಿಂದಿರುತ್ತಾನೆ. ಆ ದಿನದಲ್ಲಿ ಕಾಲಾವಯವಗಳಾದ ದೇವತೆಗಳನ್ನೂ, ಗ್ರಹನಕ್ಷತ್ರಾದಿಗಳನ್ನೂ ಪೂಜಿಸಿದಲ್ಲಿ ಸೌಖ್ಯವುಂಟಾಗುತ್ತದೆ. ಸಂವತ್ಸರಾಧಿಪನಾದ ನಾಗರಾಜನನ್ನೂ ಆ ದಿನ ಪೂಜಿಸಬೇಕು. ಗ್ರಹಗಳ ಪೂಜೆಯಿಂದಲೂ ಸೌಖ್ಯ ಮತ್ತು ಉತ್ತಮವಾದ

ಗ್ರಹೇಭ್ಯಃ ಸೌಖ್ಯಮಾಪ್ನೋತಿ ಸ್ವಾಸ್ಥ್ಯಮಗ್ರ್ಯಂ ತಥೈವ ಚ ।
ತತ್ರಾಹ್ನಿ ಬ್ರಹ್ಮಣಾ ಸೃಷ್ಟಂ ತ್ರೈಲೋಕ್ಯಂ ಪ್ರಥಮಂ ದ್ವಿಜ ॥ ೧೪ ॥

ದಕ್ಷಂ ಪ್ರಜಾಪತಿಂ ನಿತ್ಯಂ ದ್ವಿತೀಯಾಯಾಮಥಾರ್ಚಯೇತ್ ।
ಫಲಮಾಪ್ನೋತಿ ಧರ್ಮಜ್ಞ ಗೋಸವಸ್ಯ ನ ಸಂಶಯಃ ॥ ೧೫ ॥

ತಥಾ ನಾಸತ್ಯಯೋಃ ಕೃತ್ವಾ ತಸ್ಮಿನ್ನಹನಿ ಪೂಜನಂ ।
ನಿತ್ಯಮಾರೋಗ್ಯಮಾಪ್ನೋತಿ ತಥಾ ರೂಪಂ ಚ ಭಾರ್ಗವ ॥ ೧೬ ॥

ಶುಕ್ಲಪಕ್ಷದ್ವಿತೀಯಾಯಾಂ ಬಾಲಚಂದ್ರಸ್ಯ ಪೂಜನಂ ।
ಕೃತ್ವಾ ದತ್ವಾ ಚ ಲವಣಂ ಪ್ರಾಗ್ರಾತ್ರೌ ಸುಭಗೋ ಭವೇತ್ ॥ ೧೭ ॥

ಸಾಧ್ಯಾ ದ್ವಾದಶ ಯೇ ಪ್ರೋಕ್ತಾಸ್ತೇಷಾಂ ಕೃತ್ವಾ ತು ಪೂಜನಂ ।
ತೃತೀಯಸ್ಯಾಂ ಮಹಾಭಾಗ ದ್ವಾದಶಾಹಫಲಂ ಲಭೇತ್ ॥ ೧೮ ॥

ತೃತೀಯಾಯಾಂ ತಥಾಭ್ಯರ್ಚ್ಯ ಬ್ರಹ್ಮವಿಷ್ಣುಮಹೇಶ್ವರಾನ್ ।
ಪೃಥಕ್ಪೃಥಕ್ ಮಹಾಭಾಗ ತ್ರಿವರ್ಗಫಲಭಾಗ್ಭವೇತ್ ॥ ೧೯ ॥

---

ಸ್ವಾಸ್ಥ್ಯಲಾಭವೂ ಉಂಟಾಗುತ್ತವೆ. ಆ ದಿನದಲ್ಲಿಯೇ ಬ್ರಹ್ಮನಿಂದ ಲೋಕ ತ್ರಯವೂ ಪ್ರಪ್ರಥಮವಾಗಿ ಸೃಷ್ಟಿಸಲ್ಪಟ್ಟಿತು.

೧೫–೧೯. ದಕ್ಷಪ್ರಜಾಪತಿಯನ್ನು ಯಾವಾಗಲೂ ದ್ವಿತಿಯಾ ತಿಥಿಯಲ್ಲಿಯೇ ಪೂಜಿಸಬೇಕು. ಇದನ್ನು ನಡೆಸಿದವನು ಗೋಯಜ್ಞಫಲವನ್ನೇ ಹೊಂದುತ್ತಾನೆ. ಹಾಗೆಯೇ ಅದೇ ದಿನದಲ್ಲಿ ಅಶ್ವಿನೀದೇವತೆಗಳ ಪೂಜೆಯನ್ನೂ ಮಾಡಿದಲ್ಲಿ ಆರೋಗ್ಯ ವನ್ನೂ ಸುರೂಪವನ್ನೂ ಹೊಂದಿಯೇ ಹೊಂದುತ್ತಾನೆ. ಶುಕ್ಲಪಕ್ಷದ್ವಿತೀಯೆಯಲ್ಲಿ ಬಾಲಚಂದ್ರನನ್ನು ಪೂಜಿಸಿ ರಾತ್ರಿಗೆ ಮೊದಲೇ ಲವಣವನ್ನು ದಾನಮಾಡಿದಲ್ಲಿ ಸೌಭಾಗ್ಯಶಾಲಿಯಾಗುತ್ತಾನೆ. ತೃತೀಯಾತಿಥಿಯಲ್ಲಿ ನಾನು ಹಿಂದೆ ಹೇಳಿರುವ ಹನ್ನೆರಡು ಸಾಧ್ಯರನ್ನೂ ಪೂಜಿಸಿದಲ್ಲಿ ದ್ವಾದಶಾಹವೆಂಬ ಯಜ್ಞದ ಫಲವನ್ನು ಹೊಂದುತ್ತಾನೆ. ಅಂತಹ ತೃತೀಯೆಯಲ್ಲಿಯೇ ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಬೇರೆ ಬೇರೆಯಾಗಿ ಪೂಜಿಸಿದಲ್ಲಿ ಧರ್ಮಾರ್ಥಕಾಮಗಳೆಂಬ ತ್ರಿವರ್ಗಫಲವನ್ನೂ ಹೊಂದುತ್ತಾನೆ.

ತ್ರೀಂಲ್ಲೋಕಾಂಶ್ಚ ತದಾ ರಾಮ ಸಮ್ಯಕ್ಸಂಪೂಜಯೇನ್ನರಃ ।
ಐಶ್ವರ್ಯಂ ಮಹದಾಪ್ನೋತಿ ಗತಿಮಗ್ರ್ಯಾಂ ಚ ವಿಂದತಿ ॥ ೨೦ ॥

ತೃತೀಯಾ ಶ್ರಾವಣೇ ಕೃಷ್ಣಾ ಯಾಸ್ಯಾಚ್ಛ್ರವಣಸಂಯುತಾ ।
ತಸ್ಯಾಂ ಸಂಪೂಜ್ಯ ಗೋವಿಂದಂ ಪುಷ್ಟಿಮಗ್ರ್ಯಮವಾಪ್ನುಯಾತ್[1] ॥ ೨೧ ॥

ವೈಶಾಖಶುಕ್ಲಪಕ್ಷೇತು ತೃತೀಯಾಯಾಮುಪೋಷಿತಃ ।
ಅಕ್ಷಯಂ ಫಲಮಾಪ್ನೋತಿ ಸರ್ವಸ್ಯ ಸುಕೃತಸ್ಯ ತು ॥ ೨೨ ॥

ಸಾ ತಥಾ ಕೃತ್ತಿಕೋಪೇತಾ ವಿಶೇಷೇಣ ಚ ಪೂಜಿತಾ ।
ತತ್ರ ದತ್ತಂ ಹುತಂ ತಪ್ತಂ ಸರ್ವಂ ಸಫಲಮುಚ್ಯತೇ ॥ ೨೩ ॥

ಅಕ್ಷಯಾ ಸಾ ತಿಥಿರ್ಯಸ್ಮಾತ್ತಸ್ಯಾತ್ಸುಕೃತಮಕ್ಷಯಂ ।
ಅಕ್ಷತೈಃ ಪೂಜ್ಯತೇ ವಿಷ್ಣುಸ್ತೇನ ಸಾಪ್ಯಕ್ಷತಾ ಸ್ಮೃತಾ ॥ ೨೪ ॥

---

೨೦–೨೪. ಅದೇ ದಿನದಲ್ಲಿಯೇ ಮೂರು ಲೋಕಗಳನ್ನೂ ಚೆನ್ನಾಗಿ ಪೂಜಿಸಿದ್ದೇ ಆದರೆ ಹೆಚ್ಚಾದ ಐಶ್ವರ್ಯವನ್ನೂ, ಉತ್ತಮವಾದ ಗತಿಯನ್ನೂ ಹೊಂದುತ್ತಾನೆ. ಶ್ರಾವಣಮಾಸದಲ್ಲಿ ಶ್ರವಣನಕ್ಷತ್ರದಿಂದ ಕೂಡಿದ ಬಹುಳ ತೃತೀಯೆಯಲ್ಲಿ ಗೋವಿಂದನನ್ನು ಪೂಜಿಸಿದ್ದೇ ಆದರೆ ಹೆಚ್ಚಾದ ಪುಷ್ಟಿಯನ್ನು ಹೊಂದುತ್ತಾನೆ. ವೈಶಾಖಶುಕ್ಲತೃತೀಯೆಯಲ್ಲಿ ಉಪವಾಸವಿದ್ದು ಗೋವಿಂದನನ್ನು ಪೂಜಿಸಿದಲ್ಲಿ ತನ್ನ ಪುಣ್ಯಗಳಿಗೆಲ್ಲ ಅಕ್ಷಯವಾದ ಫಲವನ್ನು ಹೊಂದುತ್ತಾನೆ. ಅದೇ ತಿಥಿಯು ಕೃತ್ತಿಕಾನಕ್ಷತ್ರದಿಂದ ಕೂಡಿದ್ದರೆ ಬಹಳ ವಿಶೇಷ. ಆ ದಿನ ಮಾಡಿನ ದಾನ ಹೋಮ ತಪಸ್ಸುಗಳೆಲ್ಲಾ ಸಫಲಗಳೇ ಆಗುತ್ತವೆ. ಆ ತಿಥಿಯು ಅಕ್ಷಯ. ಅಕ್ಷಯ ಸ್ವರೂಪವಾದುದರಿಂದ ಪುಣ್ಯದ ಫಲವೂ ಅಕ್ಷಯವೇ ಆಗುತ್ತದೆ. ಅಕ್ಷತೆಗಳಿಂದ ವಿಷ್ಣುವನ್ನು ಪೂಜಿಸಿದಲ್ಲಿಯೂ ಇದೇ ಫಲವುಂಟಾಗುತ್ತದೆ.

---

1 ಇದು ಕಾಮ್ಯಕರ್ಮರೂಪವಾದ ಪೂಜಾವಿಧಿ, ಆದುದರಿಂದಲೇ "ನಾಕ್ಷತೈರರ್ಚಯೇದ್ವಿಷ್ಣುಂ । ನಕೇತಕ್ಯಾ ಶಿವಂ ತಥಾ" ಎಂಬ ನಿಷ್ಕಾಮಕರ್ಮಪ್ರಕರಣದಲ್ಲಿ ಸೇರಿರುವ ನಿಷೇಧದಿಂದ ಇದಕ್ಕೆ ಬಾಧಕವಿಲ್ಲವೆಂದು ತಿಳಿಯಬೇಕು.

ಅಕ್ಷತೈಸ್ತು ನರಃ ಸ್ನಾತಃ ವಿಷ್ಣೋರ್ದತ್ವಾ ತಥಾಕ್ಷತಾನ್ ।
ಸಕ್ತೂನ್ ಸುಸಂಸ್ಕೃತಾಂಶ್ಚೈವ ಹುತ್ವಾ ಚೈವ ತಥಾಕ್ಷತಾನ್ ॥ ೨೫ ॥

ವಿಪ್ರೇಷು ದತ್ವಾ ತಾನೇವ ತಥಾ ಸಕ್ತುಂ ಸುಸಂಸ್ಕೃತಂ ।
ಯವಾನ್ನಭುಙ್ಮಹಾರಾಜ ಫಲಮಕ್ಷಯ್ಯಮಶ್ನುತೇ ॥ ೨೬ ॥

ಏತಾಮಪ್ಯೇಕತ್ರವತ್ಕೃತ್ವಾ ತೃತೀಯಾಂ ಭೃಗುನಂದನ ।
ಏಷಾಮಬ್ದತೃತೀಯಾನಾಂ ಸರ್ವಾಸಾಂ ತತ್ಫಲಂ ಭವೇತ್ ॥ ೨೭ ॥

ಪ್ರೋಕ್ತಾಸ್ತು ಭೃಗವೋ ನಾಮ ದೇವಾ ದ್ವಾದಶ ಯೇ ಪುರಾ ।
ಚತುರ್ಥ್ಯಾಂ ಪೂಜನಂ ತೇಷಾಂ ಕೃತ್ವಾ ದಿವಮವಾಪ್ನುಯಾತ್ ॥ ೨೮ ॥

ಯಮಸ್ಯ ಪೂಜನಂ ಕೃತ್ವಾ ಚತುರ್ಥ್ಯಾಮೇವ ಧಾರ್ಮಿಕಃ ।
ನಾಪ್ನೋತಿ ನಾರಕಂ ದುಃಖಂ ತುಷ್ಟೇ ರವಿಸುತೇ ನರಃ ॥ ೨೯ ॥

ವಿನಾಯಕಮಥಾಭ್ಯರ್ಚ್ಯ ಚತುರ್ಥ್ಯಾಂ ಯದುನಂದನ ।
ಸರ್ವವಿಘ್ನವಿನಿರ್ಮುಕ್ತಃ ಕಾರ್ಯಸಿದ್ಧಿಮವಾಪ್ನುಯಾತ್ ॥ ೩೦ ॥

---

೨೫-೩೦. ಅಕ್ಷತೆಗಳಿಂದಲೇ ಸ್ನಾನಮಾಡಿ, ವಿಷ್ಣುವನ್ನು ಅಕ್ಷತೆಗಳಿಂದ ಪೂಜಿಸಿ, ಸಂಸ್ಕೃತವಾದ ಹುರಿಟ್ಟು ಮತ್ತು ಅಕ್ಷತೆ ಇವನ್ನೂ ಹೋಮಮಾಡಿ ಬ್ರಾಹ್ಮಣರಿಗೂ ಅವನ್ನೇ ದಾನಮಾಡಿ, ಯವಾನ್ನಭೋಜಿಯಾಗಿದ್ದಲ್ಲಿ ಅಕ್ಷಯ್ಯವಾದ ಫಲವನ್ನು ಹೊಂದುತ್ತಾನೆ. ಈ ಮೂರರಲ್ಲಿ ಯಾವುದಾದರೂ ಒಂದನ್ನು ಮಾಡಿದಲ್ಲಿ ವರ್ಷದ ಮೂರನೆಯೊಂದು ಕಾಲದ ವ್ರತದಿಂದ ವರ್ಷಪೂರ್ತಿಯಾದ ಫಲವನ್ನು ಹೊಂದುತ್ತಾನೆ. ಭೃಗುಗಳೆಂಬ ಹನ್ನೆರಡು ದೇವತೆಗಳನ್ನು ನಾನು ಹಿಂದೆ ಹೇಳಿರುವೆನಷ್ಟೆ. ಈ ಚತುರ್ಥಿಯ ದಿನ ಅವರನ್ನು ಪೂಜಿಸಿದಲ್ಲಿ ಸ್ವರ್ಗ ಸುಖವೇ ಉಂಟಾಗುತ್ತದೆ. ಈ ಚತುರ್ಥಿಯಲ್ಲಿಯೇ ಧಾರ್ಮಿಕನಾಗಿದ್ದು ಯಮದೇವನನ್ನು ಪೂಜಿಸಿದಲ್ಲಿ ಸಂತುಷ್ಟನಾದ ರವಿಪುತ್ರನಿಂದ ಉಂಟಾಗಬಹುದಾದ ನರಕದುಃಖವೆಲ್ಲವೂ ನಾಶವಾಗುತ್ತದೆ. ಇದೇ ಚತುರ್ದಶಿಯಲ್ಲಿ ವಿನಾಯಕನನ್ನು ಪೂಜಿಸಿದಲ್ಲಿ ಎಲ್ಲಾ ವಿಘ್ನಗಳಿಂದಲೂ ಮುಕ್ತನಾಗಿ ಕಾರ್ಯಸಿದ್ಧಿ ಹೊಂದುತ್ತಾನೆ.

ನಿದ್ರಾಂ ರತಿಂ ತಥಾ ಶ್ರದ್ಧಾಂ ಕೀರ್ತಿಂ ಮೇಧಾಂ ಸರಸ್ವತೀಂ ।
ಪ್ರಜ್ಞಾಂ ತುಷ್ಟಿಂ ತಥಾ ಕಾಂತಿಂ ತಸ್ಮಿನ್ನಹನಿ ಪೂಜಯೇತ್ ॥ ೩೧ ॥

ತತ್ಪ್ರಸಾದಮವಾಪ್ನೋತಿ ಯಥೇಷ್ಟಂ ಮನುಜೋತ್ತಮ ।
ವಿದ್ಯಾಕಾಮೋ ವಿಶೇಷೇಣ ಪೂಜಯೇತ್ತು ಸರಸ್ವತೀಂ ॥ ೩೨ ॥

ದೇವಾನಾಂ ಮಾತರಃ ಸರ್ವಾಸ್ತಥಾ ತತ್ರಾಹ್ನಿ ಪೂಜಿತಾಃ ।
ಸರ್ವಕಾಮಪ್ರದಾ ಜ್ಞೇಯಾಃ ಪುರುಷಸ್ಯ ವಿಪಶ್ಚಿತಃ ॥ ೩೩ ॥

ಪಂಚಮ್ಯಾಂ ಪೂಜನಂ ಕೃತ್ವಾ ತಥಾ ಚಂದ್ರಮಸೋ ನರಃ ।
ಸೌಭಾಗ್ಯಂ ಮಹದಾಪ್ನೋತಿ ಯಶಶ್ಚಾಗ್ರ್ಯಂ ಚ ವಿಂದತಿ ॥ ೩೪ ॥

ಪಂಚಮ್ಯಾಂ ಪೃಥಿವೀಂ ದೇವೀಂ ತಥಾ ಸಂಪೂಜಯೇನ್ನರಃ ।
ಕಾಮೇವಾಪ್ನೋತ್ಯಯತ್ನೇನ ನಾತ್ರ ಕಾರ್ಯಾ ವಿಚಾರಣಾ ॥ ೩೫ ॥

ವಿಶ್ವೇದೇವಾಸ್ತು ಯೇ ಪ್ರೋಕ್ತಾಃ ಪೂರ್ವಮೇವ ಮಯಾ ದಶ ।
ತೇಷಾಂ ಸಂಪೂಜನಂ ಕೃತ್ವಾ ಪಂಚಮ್ಯಾಂ ದಿವಮಾಪ್ನುಯಾತ್ ॥ ೩೬ ॥

---

೩೧-೩೬. ನಿದ್ರಾ, ರತಿ, ಶ್ರದ್ಧಾ, ಕೀರ್ತಿ, ಮೇಧಾ, ಸರಸ್ವತೀ, ಪ್ರಜ್ಞಾ, ತುಷ್ಟಿ, ಕಾನ್ತಿ ಇವರನ್ನೂ ಆ ದಿನ ಪೂಜಿಸಬೇಕು. ಇವರ ಅನುಗ್ರಹದಿಂದಲೂ ಇಷ್ಟಸಿದ್ಧಿಯನ್ನು ಹೊಂದುತ್ತಾನೆ. ವಿದ್ಯಾಪೇಕ್ಷೆ ಇರುವವನು ಸರಸ್ವತಿಯನ್ನು ವಿಶೇಷರೀತಿಯಿಂದ ಪೂಜಿಸಬೇಕು. ದೇವತೆಗಳ ತಾಯಿಯರನ್ನೂ ಆ ದಿನ ಪೂಜಿಸಿದಲ್ಲಿ ವಿವೇಕಿಯಾದ ಪುರುಷನು ಎಲ್ಲಾ ಇಷ್ಟಸಿದ್ಧಿಗಳನ್ನೂ ಹೊಂದಬಹುದು. ಪಂಚಮಿಯಲ್ಲಿ ಚಂದ್ರನನ್ನು ಪೂಜಿಸಿದಲ್ಲಿ ಹೆಚ್ಚಾದ ಸೌಭಾಗ್ಯವನ್ನೂ, ಯಶಸ್ಸನ್ನೂ ಹೊಂದುತ್ತಾನೆ. ಅದೇ ಪಂಚಮಿಯಲ್ಲಿ ಭೂದೇವಿಯನ್ನು ಪೂಜಿಸಬೇಕು ಇದರಿಂದ ಇತರ ಪ್ರಯತ್ನವಿಲ್ಲದೆಯೇ ಭೂಲಾಭವಾಗುತ್ತದೆ. ಹಿಂದೆ ನಾನು ಹೇಳಿರುವ ಹತ್ತು ಜನ ವಿಶ್ವೇದೇವತೆಗಳನ್ನೂ ಪಂಚಮಿಯಲ್ಲಿ ಪೂಜಿಸಿದವನು ಸ್ವರ್ಗಕ್ಕೆ ಭಾಗಿಯಾಗುತ್ತಾನೆ.

ಇಷ್ಟ್ವಾಗಂಧರ್ವಮುಖ್ಯಾನ್ವೈ ಪಂಚಮ್ಯಾಂ ಸುಭಗೋ ಭವೇತ್ ।
ತಥಾ ಚಿತ್ರರಥಂ ತೇಷಾಂ ರಾಜಾನಂ ಚ ವಿಶೇಷತಃ ॥ ೩೭ ॥

ದೇವಭಾರ್ಯಾಂ ತಥಾ ಭಾರ್ಯಾಂ ಸಂಪೂಜ್ಯ ಸುಭಗೋ ಭವೇತ್ ।
ಇಷ್ಟ್ವಾಮಪ್ಸರಸಂ ಚೈವ ತಥಾ ರೂಪಮವಾಪ್ನುಯಾತ್ ॥ ೩೮ ॥

ಇಷ್ಟ್ವಾ ನಾಗಂ ತಥಾಭ್ಯರ್ಚ್ಯ ಶ್ರಿಯಮಾಪ್ನೋತ್ಯನುತ್ತಮಾಂ ।
ವಾರುಣೈಃ ಪುಷ್ಕರಸ್ಯಾರ್ಚಾಂ ಪಂಚಮ್ಯಾಂ ಯಃ ಸಮಾಚರೇತ್ ॥ ೩೯ ॥

ಸರ್ವಕಾಮಸಮೃದ್ಧಸ್ಯ ಸೋಮಯಜ್ಞಫಲಂ ಭವೇತ್ ।
ತಥಾ ಚ ಪೂಜಯೆನ್ರಾಜಂಸ್ತಥಾ ವೈ ನಲಕೂಬರಂ ॥ ೪೦ ॥

ಶ್ರಿಯಃ ಸಂಪೂಜನಂ ಕೃತ್ವಾ ಪಂಚಮ್ಯಾಂ ಪ್ರಯತಃ ಸದಾ ।
ಶ್ರಿಯಮಾಪ್ನೋತಿ ವಿಪುಲಾಂ ಮತಿಮಗ್ರ್ಯಾಂ ಚ ವಿಂದತಿ ॥ ೪೧ ॥

---

೩೭-೪೧. ಈ ಪಂಚಮಿಯಲ್ಲಿ ಅಭಿಮತರಾದ ಗಂಧರ್ವರನ್ನೂ ಪೂಜಿಸಿದಲ್ಲಿ ಸೌಭಾಗ್ಯವನ್ನೂ ಹೊಂದುತ್ತಾನೆ. ಅದರಲ್ಲಿಯೂ ಗಂಧರ್ವರಿಗೆ ರಾಜನಾದ ಚಿತ್ರರಥನ ಪೂಜೆಯು ವಿಶೇಷವಾದದ್ದು. ದೇವತೆಗಳ ಪತ್ನಿಯರನ್ನು ಪೂಜಿಸಿದಲ್ಲಿಯೂ ಸೌಭಾಗ್ಯಶಾಲಿಯಾಗುತ್ತಾನೆ. ಇಷ್ಟರಾದ ಅಪ್ಸರೆಯರನ್ನು ಪೂಜಿಸಿದಲ್ಲಿಯೂ ಒಳ್ಳೆಯ ರೂಪನ್ನು ಹೊಂದುತ್ತಾನೆ. ನಾಗರಾಜನನ್ನು ಪೂಜಿಸಿದಲ್ಲಿ ಒಳ್ಳೆಯ ಸಂಪತ್ತನ್ನು ಹೊಂದುತ್ತಾನೆ. ವರುಣಸೂಕ್ತದಿಂದ ಜಲವನ್ನು ಈ ಪಂಚಮಿಯಲ್ಲಿ ಪೂಜಿಸಿದಲ್ಲಿ ಸಕಲಸಾಮಗ್ರಿಗಳಿಂದಲೂ ಸಮೃದ್ಧವಾದ ಸೋಮಯಜ್ಞದ ಫಲವನ್ನು ಹೊಂದುತ್ತಾನೆ. ಹಾಗೆಯೇ ನಲಕೂಬರನನ್ನು ಪೂಜಿಸಿದಲ್ಲಿಯೂ ಹೆಚ್ಚಾದ ಐಶ್ವರ್ಯವನ್ನೂ ಒಳ್ಳೆಯ ಬುದ್ಧಿಯನ್ನೂ ಹೊಂದುತ್ತಾನೆ.

ಚೈತ್ರಶುಕ್ಲಸ್ಯ ಪಂಚಮ್ಯಾಂ ಪೂಜಯಿತ್ವಾ ತಥಾ ಶ್ರಿಯಂ　　|| ೪೨ ||

ಸಕೃದೇವಾಪ್ನುಯಾದ್ರಾಜನ್ ಫಲಂ ಸಂವತ್ಸರೋದಿತಂ |
ಸರ್ವಾಸ್ಯಾಂ ನೃಪ ಪಂಚಮ್ಯಾಂ ರತಿಂ ಪ್ರೀತಿಂ ಸರಸ್ವತೀಂ　　|| ೪೩ ||

ಉಮಾಂ ಮೇನಾಂ ಭದ್ರಕಾಲೀಂ ತಥಾ ಕಾತ್ಯಾಯನೀಮಪಿ |
ಧೃತಿಂ ಸ್ವಾಹಾಂ ಸುಧಾಮೃದ್ಧಿಮನುಸೂಯಾಂ ತಥಾ ಕ್ಷಮಾಂ　　|| ೪೪ ||

ಸುಭೀಮಾಂ ದೇವಸೇನಾಂ ಚ ವೇಲಾಂ ಜ್ಯೋತ್ಸ್ನಾಂ ತಥಾಂ ಶಚೀಂ |
ಗೌರೀಂ ವರುಣಪತ್ನೀಂ ಚ ಯಮಪತ್ನೀಂ ತಥೈವ ಚ　　|| ೪೫ ||

ಧೂಮೋರ್ಣಾಂ ಸುಮಹಾಭಾಗಾಂ ಮೃತ್ಯುಚ್ಛಾಯಾಂ ತಥೈವ ಚ |
ಅಭೀಷ್ಟಾಂ ದೇವಜನನೀಂ ದೇವಪತ್ನೀಂ ತಥೈವ ಚ　　|| ೪೬ ||

ಪೂಜಯನ್ ಕಾಮಮಾಪ್ನೋತಿ ತಸ್ಯಾಹ್ಯೇಕಾಮಸಂಶಯಂ |
ಐರಾವತಂ ವಾ ಗರುಡಮುಚ್ಚೈಃಶ್ರವಸಮೇವ ವಾ　　|| ೪೭ ||

---

೪೨-೪೬. ಚೈತ್ರಶುದ್ಧಪಂಚಮಿಯಲ್ಲಿ ಲಕ್ಷ್ಮಿಯನ್ನು ಪೂಜಿಸಿದಲ್ಲಿ ಒಂದು ವರ್ಷದಲ್ಲಿ ಉಂಟಾಗುವ ಫಲವನ್ನು ಒಂದೇ ಕಾಲದಲ್ಲಿ ಹೊಂದುತ್ತಾನೆ. ಎಲ್ಲಾ ಪಂಚಮಿಯಲ್ಲೂ ರತಿ, ಪ್ರೀತಿ, ಸರಸ್ವತೀ, ಉಮಾ, ಮೇನಾ, ಭದ್ರಕಾಲೀ, ಕಾತ್ಯಾಯನೀ, ಧೃತಿ, ಸ್ವಾಹಾ, ಸುಧಾ, ಋದ್ಧಿ, ಅನುಸೂಯಾ, ಕ್ಷಮಾ, ಸುಭೀಮ, ದೇವಸೇನಾ, ವೇಲಾ, ಜ್ಯೋತ್ಸ್ನ್ಯ, ಶಚೀ, ವರುಣಪತ್ನಿಯಾದ ಗೌರೀ, ಯಮ ಪತ್ನಿಯಾದ ಧೂಮ್ರೋರ್ಣಾ, ಮೃತ್ಯು, ಛಾಯಾ, ದೇವಜನನಿಯಾದ ಅಭೀಷ್ಟಾ, ದೇವಪತ್ನೀ ಇವರಲ್ಲಿ ಯಾರೊಬ್ಬರನ್ನು ಪೂಜಿಸಿದರೂ ಇಷ್ಟಫಲವನ್ನು ಹೊಂದಿಯೇ ಹೊಂದುತ್ತಾನೆ.

೪೭-೫೨. ಐರಾವತ, ಗರುಡ, ಉಚ್ಚೈಃಶ್ರವಸ್ಸು, ಹರನ ವಾಹನವಾದ ವೃಷಭ, ಅವನ ಶಸ್ತ್ರಾಸ್ತ್ರಗಳು ಇವನ್ನೂ ಸಹ ರಾಜನಾದವನು ಈ ದಿನದಲ್ಲಿ ಪೂಜೆ

ಹರಸ್ಯ ವೃಷಭಂ ಚೈವ ಶಸ್ತ್ರಾಣ್ಯಸ್ತ್ರಾಣಿ ಯಾನಿ ಚ ।
ತದಾ ಸಂಪೂಜಯೇನ್ ರಾಜಾ ವಿಜಯಂ ಸಮುಪಾಶ್ನುತೇ ॥ ೪೮ ॥

ತಥಾ ಭಾದ್ರಪದೇ ಮಾಸಿ ಶುಕ್ಲಪಕ್ಷಸ್ಯ ಪಂಚಮೀಂ ।
ನಾಗಸಂಪೂಜನಂ ಕೃತ್ವಾ ಧನಭಾಗೀ ಭವೇನ್ನರಃ ॥ ೪೯ ॥

ಕುಮಾರಶ್ಚ ತಥಾ ಸ್ಕಂದೋ ವಿಶಾಖಶ್ಚ ಗುಹಸ್ತಥಾ ।
ಚತುರಾತ್ಮಾ ವಿನಿರ್ದಿಷ್ಟೋ ಭಗವಾನ್ ಕ್ರೌಂಚದಾರಣಃ ॥ ೫೦ ॥

ಸಮಭ್ಯರ್ಚ್ಯ ನರಃ ಷಷ್ಠ್ಯಾಂ ಪುತ್ರಾನಾಪ್ನೋತ್ಯಭೀಪ್ಸಿತಾನ್ ।
ಬಾಲಕಾನಾಂ ಗೃಹೇ ಶ್ರೇಯೋ ನರಃ ಪ್ರಾಪ್ನೋತ್ಯಸಂಶಯಂ ॥ ೫೧ ॥

ಋತೂನಾಂ ಪೂಜನಂ ಕೃತ್ವಾ ತತ್ರ ಕ್ಷೇಮಮವಾಪ್ನುಯಾತ್ ।
ಸ್ಕಂದಪಾರ್ಶ್ವಚರಾನ್ ರಾಜನ್ ಭೀಮಪಾರ್ಶ್ವಚರಾಂಸ್ತಥಾ ॥ ೫೨ ॥

ಯಮಪಾರ್ಶ್ವಚರಾಂಶ್ಚೈವ ರೋಗಮುಕ್ತಿಮವಾಪ್ನುಯಾತ್ ।
ಕಾಲಪಾಶೌ ತಥಾಭ್ಯರ್ಚ್ಯ ಜ್ವರವ್ಯಾಧೀಶಮೇವ ಚ ॥ ೫೩ ॥

---

ಮಾಡಿದ್ದೇ ಆದರೆ ವಿಜಯಶಾಲಿಯಾಗುತ್ತಾನೆ. ಹಾಗೆಯೇ ಭಾದ್ರಪದ ಶುಕ್ಲ ಪಂಚಮಿಯಲ್ಲಿ ನಾಗರಾಜನನ್ನು ಪೂಜಿಸಿದಲ್ಲಿ ಧನಿಕನಾಗುತ್ತಾನೆ. ಕ್ರೌಂಚ ದಾರಣನಾದ ಷಣ್ಮುಖನು, ಕುಮಾರ, ಸ್ಕಂದ, ವಿಶಾಖ, ಗುಹ ಎಂಬ ನಾಲ್ಕು ನಾಮಗಳಿಂದ ಚತುರಾತ್ಮನಾಗಿರುವನು. ಇಂತಹ ಷಣ್ಮುಖನನ್ನು ಷಷ್ಠಿಯಲ್ಲಿ ಪೂಜಿಸಿದಲ್ಲಿ ಅಭಿಮತರಾದ ಪುತ್ರರನ್ನು ಹೊಂದುತ್ತಾನೆ. ಮನೆಯಲ್ಲಿರುವ ಬಾಲಕರಿಗೂ ಶ್ರೇಯಸ್ಸುಂಟಾಗುತ್ತದೆ. ಋತುಗಳನ್ನು ಪೂಜಿಸಿದ್ದೇ ಆದರೆ ಆಯಾಯ ಋತುಗಳಲ್ಲಿ ಕ್ಷೇಮಿಯಾಗಿರುತ್ತಾನೆ. ಸ್ಕಂದನ ಪಾರ್ಶ್ವವರ್ತಿಗಳಾದ ಭೃತ್ಯರನ್ನೂ, ಯಮನ ಭೃತ್ಯರನ್ನೂ ಪೂಜಿಸಿದಲ್ಲಿ ರೋಗಗಳಿಂದ ಮುಕ್ತನಾಗುತ್ತಾನೆ.

೫೩-೫೯. ಕಾಲಪಾಶನನ್ನೂ, ಜ್ವರವ್ಯಾಧೀಶನನ್ನೂ, ವಾಯು, ಅಗ್ನಿ, ಚಂದ್ರ ಇವರನ್ನೂ ಸಹ ಪೂಜಿಸಿದಲ್ಲಿ, ರೋಗದಿಂದ ಪಾರಾಗುತ್ತಾನೆ. ಚೈತ್ರ ಷಷ್ಠಿಯಲ್ಲಿ ಸ್ಕಂದನನ್ನು ವಿಶೇಷವಾಗಿ ಪೂಜಿಸಿದವನು ಹಿಂದೆ ಹೇಳಿರುವ ಫಲವನ್ನೂ

ರೋಗಮೋಕ್ಷಮವಾಪ್ನೋತಿ ವಾಯುವಹ್ನೀನ್ದವಸ್ತಥಾ ।
ಚೈತ್ರಷಷ್ಠ್ಯಾಂ ವಿಶೇಷೇಣ ಸ್ಕಂದಮಭ್ಯರ್ಚಯೇನ್ನರಃ ॥ ೫೪ ॥

ಪೂರ್ವೋಕ್ತಫಲಮಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ।
ಸಪ್ತಮ್ಯಾಂ ಚ ಸಮಭ್ಯರ್ಚ್ಯ ಸೂರ್ಯಪತ್ನೀಂ ಸುವರ್ಚಲಾಂ ॥ ೫೫ ॥

ಇಷ್ಟಾನ್ಕಾಮಾನವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ದೇವಾ ಏಕೋನಪಂಚಾಶನ್ಮರುತೋ ನಾಮ ಕೀರ್ತಿತಾಃ ॥ ೫೬ ॥

ತೇಷಾಂ ಸಂಪೂಜನಂ ಕೃತ್ವಾ ಸಪ್ತಮ್ಯಾಂ ದಿವಮಾಪ್ನುಯಾತ್ ।
ಇಷ್ಟಪೂಜಾಂ ಚ ಶೈಲಸ್ಯ ತದಾ ಕೃತ್ವಾ ಸುಖೀ ಭವೇತ್ ॥ ೫೭ ॥

ಪೂಜಯಿತ್ವಾ ತಥಾಭಿಷ್ಟಾಂ ಸರಿತಂ ಪುಣ್ಯಭಾಗ್ಭವೇತ್ ।
ವಹ್ನಿಸಂಪೂಜನಂ ಕೃತ್ವಾ ವಹ್ನಿಷ್ಟೋಮಫಲಂ ಲಭೇತ್ ॥ ೫೮ ॥

ವಾಯೋಃ ಸಂಪೂಜನಂ ಕೃತ್ವಾ ಪ್ರಾಪ್ನೋತಿ ಪರಮಾಂ ಗತಿಂ ।
ಸಂಪೂಜ್ಯ ಚ ಋಷೀನ್ಸಪ್ತ ಸೋಮಸಂಸ್ಥಾಸು ಯೇ ಸ್ಮೃತಾಃ ॥ ೫೯ ॥

---

ಹೊಂದಿ ಸ್ವರ್ಗಸುಖಕ್ಕೂ ಭಾಗಿಯಾಗುತ್ತಾನೆ. ಸಪ್ತಮಿಯಲ್ಲಿ ಸೂರ್ಯಪತ್ನಿಯಾದ ಸುವರ್ಚಲೆಯನ್ನು ಪೂಜಿಸಿದಲ್ಲಿ ಇಷ್ಟವಾದ ಫಲವನ್ನು ಹೊಂದುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ. ನಲವತ್ತೊಂಭತ್ತು:ಜನ ದೇವತೆಗಳು ಮರುತ್ತುಗಳೆಂದು ಹೇಳಲ್ಪಡುತ್ತಾರೆ. ಸಪ್ತಮಿಯಲ್ಲಿ ಇವರನ್ನು ಪೂಜಿಸಿದ್ದೇ ಆದರೆ, ಅವರು ಸ್ವರ್ಗಸುಖವನ್ನೂ ಹೊಂದುತ್ತಾನೆ. ಸಪ್ತಪರ್ವತಗಳಲ್ಲಿ ಇಷ್ಟವಾದ ಯಾವ ಪರ್ವತವನ್ನಾದರೂ ಪೂಜಿಸಿದಲ್ಲಿ ಸುಖಿಯಾಗುತ್ತಾರೆ. ಇಷ್ಟವಾದ ನದಿಯನ್ನು ಆ ದಿನ ಪೂಜಿಸಿದರೆ ಅವನು ಪುಣ್ಯಶಾಲಿಯಾಗುತ್ತಾನೆ. ಅಗ್ನಿಯನ್ನು ಪೂಜಿಸಿದಲ್ಲಿ ಅಗ್ನಿಷ್ಟೋಮದ ಫಲವನ್ನು ಹೊಂದುತ್ತಾನೆ. ವಾಯುವನ್ನು ಪೂಜಿಸಿದಲ್ಲಿ ಉತ್ತಮ ಗತಿಯನ್ನೇ ಹೊಂದುತ್ತಾನೆ. ಸೋಮಸಂಸ್ಥೆಗಳಲ್ಲಿ ಸಂಬಂಧ ಹೊಂದಿ ಪ್ರಸಿದ್ಧರಾಗಿರುವ ಸಪ್ತಋಷಿಗಣನ್ನು ಪೂಜಿಸಿದಲ್ಲಿ, ಸಪ್ತಲೋಕಗಳನ್ನೂ ಹೊಂದುತ್ತಾನೆ. ಉತ್ತಮ ಗತಿಯನ್ನೂ ಹೊಂದುತ್ತಾನೆ.

ಸಪ್ತ ಸ್ವಾಪ್ನೋತಿ ಲೋಕಾನ್ಸ್ವೈ ಗತಿಮುಗ್ರ್ಯಾಂ ಚ ವಿಂದತಿ ।
ಸಪ್ತಮ್ಯಾಂ ಯದುಶಾರ್ದೂಲ ಇಷ್ಟಮಭ್ಯರ್ಚಯನ್ಮುನಿಂ ॥ ೬೦ ॥

ಸ್ವಾಧ್ಯಾಯಫಲಮಾಪ್ನೋತಿ ತದ್ವತ್ಸಾಫಲ್ಯಮಶ್ನುತೇ ।
ಪೂಜಯಿತ್ವಾ ಸಮುದ್ರಾಂಶ್ಚ ದ್ವೀಪಾನಥ ತಥಾ ನರಃ ॥ ೬೧ ॥

ಪಾತಾಲಾನ್ವಾ ಮಹಾಭಾಗ ಭುವಮಾಪ್ನೋತ್ಯಭೀಪ್ಸಿತಾಂ ।
ಸಪ್ತಲೋಕಾಂಸ್ತಥಾ ತತ್ರ ಪೂಜಯಿತ್ವಾ ಸುಖೀ ಭಭೇತ್ ॥ ೬೨ ॥

ತೇಷ್ವೇವ ಚ ತಥೈವಾಗ್ರ್ಯಾಂ ಗತಿಮುಪ್ರತಿಮಾಂ ಲಭೇತ್ ।
ಗಂಗಾಂ ಸಪ್ತಪ್ರಕಾರಾಂ ಚ ತಥಾ ದೇವೀಂ ಸರಸ್ವತೀಂ ॥ ೬೩ ॥

ಸಪ್ತಯಜ್ಞಾನವಾಪ್ನೋತಿ ನರಃ ಸಂಪೂಜಯನ್ ಧ್ರುವಂ ।
ಆದಿತ್ಯಂ ಪೂಜಯೇದ್ದೇವಂ ಶೀಘ್ರಂ ರೋಗೈರ್ವಿಮುಚ್ಯತೇ ॥ ೬೪ ॥

ಸಪ್ತಮ್ಯಾಂ ಯಾದವಶ್ರೇಷ್ಠ ಗತಿಮುಗ್ರ್ಯಾಂ ಚ ವಿಂದತಿ ।
ಏವಂ ಸುಪೂಜನಂ ಕೃತ್ವಾ ಗತಿಮುಗ್ರ್ಯಾಂ ತಥಾ ಲಭೇತ್ ॥ ೬೫ ॥

---

೬೦-೬೫. ಈ ಸಪ್ತಮಿಯಲ್ಲಿ ತನಗೆ ಇಷ್ಟನಾದ ಮುನಿಯನ್ನು ಪೂಜಿಸಿದಲ್ಲಿ ವೇದಾಧ್ಯಯನದ ಫಲವನ್ನೇ ಹೊಂದುತ್ತಾನೆ. ಹಾಗೆಯೇ ಸಫಲ ಮನೋರಥನೂ ಆಗುತ್ತಾನೆ. ಸಪ್ತಸಮುದ್ರಗಳನ್ನೂ, ಹಾಗೆಯೇ ದ್ವೀಪಗಳನ್ನೂ, ಪಾತಾಲವನ್ನಾಗಲಿ ಪೂಜಿಸಿದಲ್ಲಿ, ಇಷ್ಟವಾದ ಭೂಮಿಯನ್ನು ಹೊಂದುತ್ತಾನೆ. ಸಪ್ತಲೋಕಗಳನ್ನು ಪೂಜಿಸಿದರೂ ಸುಖಿಯಾಗುತ್ತಾನೆ. ಅವುಗಳಲ್ಲಿ ಯಾವುದಾದರೊಂದನ್ನು ಪೂಜಿಸಿದರೂ ಅಸದೃಶವಾದ ಉತ್ತಮ ಗತಿಯನ್ನೇ ಹೊಂದುತ್ತಾನೆ. ಏಳು ವಿಧಗಳುಳ್ಳ ಗಂಗಾದೇವಿಯನ್ನೂ, ಸರಸ್ವತಿಯನ್ನೂ ಪೂಜಿಸಿದವನು ಸಪ್ತಯಜ್ಞಗಳ ಫಲವನ್ನು ಹೊಂದಿಯೇ ಹೊಂದುತ್ತಾನೆ. ಸೂರ್ಯನನ್ನು ಪೂಜಿಸಿದಲ್ಲಿ ರೋಗದಿಂದ ಮುಕ್ತನಾಗುತ್ತಾನೆ. ಸಪ್ತಮಿಯಲ್ಲಿ ಈ ವಿಧವಾದ ಪೂಜೆಯನ್ನು ಮಾಡಿದವನು ಉತ್ತಮವಾದ ಗತಿಯನ್ನೇ ಹೊಂದುತ್ತಾನೆ.

ಜಯಂತಂ ಶಕ್ರತನಯಂ ಪೂಜಯಿತ್ವಾ ಸುಖೀ ಭವೇತ್ ।
ಅಷ್ಟಮ್ಯಾಂ ಪೂಜನಂ ಕೃತ್ವಾ ವಸೂನಾಂ ಧರ್ಮಸತ್ತಮ ॥ ೬೬ ॥

ನಾಕಲೋಕಮವಾಪ್ನೋತಿ ಗತಿಮಗ್ರ್ಯಾಂ ಚ ವಿಂದತಿ ।
ಏಕಾನಂಶಾಂ ತಥಾ ದೇವೀಂ ತಥಾ ಸಂಪೂಜಯೇನ್ನರಃ ॥ ೬೭ ॥

ಸರ್ವಕಾಮಸಮೃದ್ಧಸ್ಯ ಯಜ್ಞಸ್ಯ ಫಲಮಶ್ನುತೇ ।
ಮಹಾದೇವಂ ಸಮಭ್ಯರ್ಚ್ಯ ಸರ್ವಾನ್ಕಾಮಾನವಾಪ್ನುಯಾತ್ ॥ ೬೮ ॥

ವೀರಭದ್ರಂ ಸನಂದೀಶಂ ಲಗುಡೇಶಂ ತಥೈವ ಚ ।
ಭದ್ರಕಾಲೀಂ ತಥಾಭ್ಯರ್ಚ್ಯ ನವಮ್ಯಾಂ ಯದುನಂದನ ॥ ೬೯ ॥

ಕಾಮಮೇಕಮವಾಪ್ನೋತಿ ಯಂ ಕಂಚಿನ್ಮನಸೇಪ್ಸಿತಂ ।
ಚತುಷ್ಪಥೇಷು ರಮ್ಯೇಷು ತಥೈವಾಟ್ಟಾಲಕೇಷು ಚ ॥ ೭೦ ॥

ಗಿರಿಶೃಂಗೇಷು ರಮ್ಯೇಷು ನದೀತೀರೇಷು ಚಾಪ್ಯಥ ।
ಗುಹಾಸು ಚೈವ ರಮ್ಯಾಸು ಪಿಶಾಚಾನಾಂ ಬಲಿಂ ಹರೇತ್ ॥ ೭೧ ॥

---

೬೬-೭೧. ಇಂದ್ರಪುತ್ರನಾದ ಜಯಂತನನ್ನು ಪೂಜಿಸಿದಲ್ಲಿ ಸುಖಹೊಂದುತ್ತಾನೆ. ಅಷ್ಟಮಿಯ ದಿನದಲ್ಲಿ ವಸುಗಳನ್ನು ಪೂಜಿಸಿದಲ್ಲಿ ಸ್ವರ್ಗಸುಖಕ್ಕೆ ಭಾಗಿಯಾಗುತ್ತಾನೆ. ಉತ್ತಮಗತಿಯನ್ನೂ ಹೊಂದುತ್ತಾನೆ. ಏಕಾನಂಶದೇವತೆಯನ್ನೂ ಪೂಜಿಸಬೇಕು. ಈ ಪೂಜಕನು ಸರ್ವಸಮೃದ್ಧವಾದ ಯಜ್ಞದ ಫಲವನ್ನೇ ಹೊಂದುತ್ತಾನೆ. ಮಹಾದೇವನನ್ನು ಪೂಜಿಸಿದರೂ ಸಕಲ ಮನೋರಥಗಳೂ ಫಲಿಸುತ್ತವೆ ನವಮಿಯ ದಿನದಲ್ಲಿ ವೀರಭದ್ರ, ನಂದೀಶ, ಲಗುಡೇಶ, ಭದ್ರಕಾಲೀ ಇವರನ್ನೂ ಪೂಜಿಸಿದಲ್ಲಿ ಮನಸ್ಸಿಗೆ ಇಷ್ಟವಾದ ಯಾವುದಾದರೊಂದು ಮನೋರಥವು ಫಲಿಸುತ್ತದೆ. ನಾಲ್ಕು ಬೀದಿಗಳು ಸೇರುವ ಸ್ಥಳಗಳಲ್ಲಿಯೂ, ರಮ್ಯವಾದ ಪರ್ವತ ಶಿಖರಗಳ ಮೇಲೆಯೂ, ನದೀತೀರಗಳಲ್ಲಿಯೂ, ರಮಣೀಯವಾದ ಗುಹಾಪ್ರದೇಶಗಳಲ್ಲಿಯೂ, ಪಿಶಾಚಿಗಳಿಗೆ ಬಲಿಹರಣಮಾಡಬೇಕು.

ಶಕ್ರಾದೀನಾಂ ಚ ದೇವಾನಾಂ ಯೇ ಚ ಪಾರ್ಶ್ವಚರಾಃ ಸುರಾಃ ।
ತೇಷಾಂ ಬಲಿಮುಪಾಕುರ್ವನ್ ಕ್ಷೇಮಮಾಪ್ನೋತಿ ಮಾನವಃ ॥ ೭೨ ॥

ಆಯುಧಂ ಪೂಜಯಿತ್ವಾ ಚ ತಥಾ ವಿಜಯಮಾಪ್ನುಯಾತ್ ।
ವಿದ್ಯಾಮಾಪ್ನೋತಿ ವಿಪುಲಾಂ ಪೂಜಯಿತ್ವಾ ಸರಸ್ವತೀಂ ॥ ೭೩ ॥

ವಿದ್ಯಾಕಾಮಸ್ತು ಕುರ್ವೀತ ತದಾ ಪುಸ್ತಕಪೂಜನಂ ।
ತಥೈವಾಶ್ವಯುಜೇ ಶುಕ್ಲೇ ಭದ್ರಕಾಲೀಂ ವಿಶೇಷತಃ ॥ ೭೪ ॥

ನವಮ್ಯಾಂ ಪೂಜಯಿತ್ವಾ ತು ಸರ್ವಾನ್ ಕಾಮಾನವಾಪ್ನುಯಾತ್ ।
ದಶಮ್ಯಾಂ ಪೂಜಯೇನ್ ರಾಜನ್ವಿಶ್ವೇದೇವಾಂಸ್ತಥಾದಶ ॥ ೭೫ ॥

ಸರ್ವಕಾಮಸಮೃದ್ಧಸ್ಯ ಯಜ್ಞಸ್ಯ ಫಲಮಶ್ನುತೇ ।
ತದಾ ಸಂಪೂಜಯನ್ರಾಜಂಸ್ತಥೈವ ಚ ದಿಶೋ ದಶ ॥ ೭೬ ॥

ಕ್ರಿಯಾಸಾಫಲ್ಯಮಾಪ್ನೋತಿ ಯತ್ರಯತ್ರಾಭಿಜಾಯತೇ ।
ಧರ್ಮಂ ಸಂಪೂಜ್ಯ ದೇವೇಶಂ ಸರ್ವಸತ್ತ್ವಸುಖಾವಹಂ ॥ ೭೭ ॥

---

೭೨-೭೬ ಇಂದ್ರಾದಿ ದೇವತೆಗಳನ್ನೂ ಪೂಜಿಸಿ ಬಲಿಹರಣಮಾಡಿದಲ್ಲಿ ಪೂಜಕನು ಕ್ಷೇಮಿಯಾಗುತ್ತಾನೆ. ಆಶ್ವಯುಜ ಶುಕ್ಲ ನವಮಿಯಲ್ಲಿ ಆಯುಧಗಳನ್ನು ಪೂಜಿಸಿದಲ್ಲಿ ವಿಜಯವನ್ನು ಹೊಂದುತ್ತಾನೆ. ಸರಸ್ವತಿಯನ್ನು ಪೂಜಿಸಿದಲ್ಲಿ ಹೆಚ್ಚಾದ ವಿದ್ಯೆಯನ್ನು ಹೊಂದುತ್ತಾನೆ. ವಿದ್ಯಾರ್ಥಿಯಾದವನು ಆ ದಿನ ಪುಸ್ತಕ ಪೂಜೆಯನ್ನು ಮಾಡಬೇಕು. ಭದ್ರಕಾಲಿಯನ್ನೂ ವಿಶೇಷವಾಗಿ ಪೂಜಿಸಿದಲ್ಲಿ ಎಲ್ಲಾ ಮನೋರಥಗಳನ್ನೂ ಹೊಂದುತ್ತಾನೆ. ದಶಮಿಯಲ್ಲಿ ಹತ್ತು ವಿಶ್ವೇದೇವತೆಗಳನ್ನು ಪೂಜಿಸಿದವನು ಪರಿಪೂರ್ಣವಾದ ಯಜ್ಞದ ಫಲವನ್ನೇ ಹೊಂದುತ್ತಾನೆ. ಅದೇ ದಿನದಲ್ಲಿ ಹತ್ತು ದಿಕ್ಕುಗಳನ್ನೂ ಪೂಜಿಸಿದಲ್ಲಿ, ಎಲ್ಲಾ ಜನ್ಮಗಳಲ್ಲಿಯೂ ಸಫಲ ಪ್ರಯತ್ನನಾಗುತ್ತಾನೆ.

೭೭-೮೧. ಸರ್ವಪ್ರಾಣಿಗಳಿಗೂ ಸುಖ ಹೇತುವಾದ ಧರ್ಮದೇವತೆಯನ್ನು ಪೂಜಿಸಿದಲ್ಲಿ ಧಾರ್ಮಿಕ ಬುದ್ಧಿಯನ್ನು ಹೊಂದುತ್ತಾನೆ. ತನ್ನ ಧರ್ಮಾನುಷ್ಠಾನದ ಸಾಫಲ್ಯವನ್ನೂ ಹೊಂದುತ್ತಾನೆ. ಏಕಾದಶಿಯಲ್ಲಿ, ಏಕಾದಶ ರುದ್ರರನ್ನು ಪೂಜಿಸಿ

ಧರ್ಮೇ ಮತಿಮವಾಪ್ನೋತಿ ಧರ್ಮಸಾಫಲ್ಯಮೇವ ಚ ।
ಏಕಾದಶ್ಯಾಂ ತು ಸಂಪೂಜ್ಯ ರುದ್ರಾನೇಕಾದಶೈವ ಚ		॥ ೭೮ ॥

ಸರ್ವಕಾಮಸಮೃದ್ಧಸ್ಯ ಯಜ್ಞಸ್ಯ ಫಲಮಶ್ನುತೇ ।
ತಥಾ ಸರ್ವಗತಾನ್ರುದ್ರಾಂಸ್ತದಾ ಸರ್ವತ್ರ ಪೂಜಯೇತ್		॥ ೭೯ ॥

ಸರ್ವಾನ್ಕಾಮಾನವಾಪ್ನೋತಿ ಸರ್ವಗಾನಪರಾಜಿತಾನ್ ।
ತಥಾ ಚ ದ್ವಾದಶಾದಿತ್ಯಾನ್ ದ್ವಾದಶ್ಯಾಂ ಪೂಜಯೇನ್ನರಃ		॥ ೮೦ ॥

ದ್ವಾದಶಾಹಮವಾಪ್ನೋತಿ ಗತಿಮಗ್ರ್ಯಾಂ ಚ ವಿಂದತಿ ।
ದ್ವಾದಶ್ಯಾಂ ದೇವದೇವೇಶಂ ಪೂಜಯಿತ್ವಾ ಜಲಾಧಿಪಂ		॥ ೮೧ ॥

ಪೌಂಡರೀಕಮವಾಪ್ನೋತಿ ವರುಣಂ ಯಾದಸಾಂ ಪತಿಂ ।
ಸರ್ವದೇವೇಶ್ವರಂ ಶಕ್ರಂ ಪೂಜಯಿತ್ವಾ ತಥಾ ನರಃ		॥ ೮೨ ॥

ಸರ್ವಾನ್ ಕಾಮಾನವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ।
ವಿಷ್ಣೋಃ ಸಂಪೂಜನಂ ಕೃತ್ವಾ ಕಾಮಾನಾಪ್ನೋತ್ಯಭೀಪ್ಸಿತಾನ್	॥ ೮೩ ॥

---

ದಲ್ಲಿ, ಸರ್ವಸಮೃದ್ಧವಾದ ಯಜ್ಞದ ಫಲವನ್ನೇ ಹೊಂದುತ್ತಾನೆ. ಸರ್ವಗತರಾದ ರುದ್ರರನ್ನೂ ಆ ದಿನ ಪೂಜಿಸಬೇಕು. ಇದರಿಂದ ಅಪ್ರತಿಹತವಾದ ಸರ್ವವಿಷಯ ಇಷ್ಟಗಳನ್ನೂ ಹೊಂದುತ್ತಾನೆ. ಹಾಗೆಯೇ ದ್ವಾದಶಿಯಲ್ಲಿ ದ್ವಾದಶಾದಿತ್ಯರನ್ನೂ ಪೂಜಿಸಿದಲ್ಲಿ ದ್ವಾದಶಾಹ ಯಜ್ಞದ ಫಲವನ್ನೂ ಉತ್ತಮ ಗತಿಯನ್ನೂ ಹೊಂದುತ್ತಾನೆ. ಅದೇ ದ್ವಾದಶಿಯಲ್ಲಿ ದೇವತೋತ್ತಮನೂ, ಜಲಜಂತುಗಳಿಗೆ ಪ್ರಭುವೂ ಆದ ವರುಣನನ್ನು ಪೂಜಿಸಿದಲ್ಲಿ ಪೌಂಡರೀಕ ಯಾಗದ ಫಲವನ್ನು ಹೊಂದುತ್ತಾನೆ.

೮೨-೮೪. ದೇವಾಧಿಪತಿಯಾದ ಇಂದ್ರನನ್ನು ಆ ದಿನ ಪೂಜಿಸಿದಲ್ಲಿ, ಎಲ್ಲಾ ಮನೋರಥಗಳನ್ನೂ ಹೊಂದಿ, ಸ್ವರ್ಗಲೋಕವನ್ನು ಸೇರುತ್ತಾನೆ ಆ ದಿನ ವಿಷ್ಣುವಿನ ಪೂಜೆಯನ್ನು ಮಾಡಿದವನು, ಇಷ್ಟವಾದ ಮನೋರಥವನ್ನು ಹೊಂದುತ್ತಾನೆ. ಇಷ್ಟವಾದ ಯಜ್ಞದ ಫಲವನ್ನೂ ಹೊಂದಿ, ಉತ್ತಮವಾದ ಗತಿಯನ್ನೂ ಹೊಂದು

ಇಷ್ಟಯಜ್ಞಫಲಂ ಪ್ರಾಪ್ಯ ಗತಿಮುಗ್ರ್ಯಾಂ ಚ ವಿಂದತಿ ।
ತ್ರಯೋದಶ್ಯಾಮಥಾಭ್ಯರ್ಚ್ಯ ಕಾಮದೇವಂ ಸಮರ್ಚಯೇತ್ ॥ ೮೪ ॥

ಅಯತ್ನಾತ್ಸರ್ವಮಾಪ್ನೋತಿ ಫಲಂ ಸಂವತ್ಸರೋದಿತಂ ।
ಯಕ್ಷಾಣಾಂ ರಾಕ್ಷಸಾನಾಂ ಚ ಚತುರ್ದಶ್ಯಾಂ ತು ಪೂಜನಂ ॥ ೮೫ ॥

ಕೃತ್ವಾ ಕ್ಷೇಮಮವಾಪ್ನೋತಿ ಕ್ರಿಯಾಸಾಫಲ್ಯಮೇವ ಚ ।
ಪೂಜಯಿತ್ವಾ ಧನಾಧ್ಯಕ್ಷಂ ತದಾ ವೈಶ್ರವಣಂ ಪ್ರಭುಂ ॥ ೮೬ ॥

ಬಹುವಿತ್ತಮವಾಪ್ನೋತಿ ಫಲಂ ಸಂವತ್ಸರೋದಿತಂ ।
ಶಂಖಪದ್ಮೌ ತಥಾಭ್ಯರ್ಚ್ಯ ನಿಧಾನೌ ಯಕ್ಷಪೂಜಿತೌ ॥ ೮೭ ॥

ಮಣಿಭದ್ರಂ ತಥಾಭ್ಯರ್ಚ್ಯ ಧನಮಾಪ್ನೋತ್ಯಸಂಶಯಂ ।
ಪೂಜಯಿತ್ವಾ ಮಹಾದೇವಂ ಸರ್ವಾನ್ಕಾಮಾನವಾಪ್ನುಯಾತ್ ॥ ೮೮ ॥

ಮಾಘಮಾಸಚತುರ್ದಶ್ಯಾಂ ಕೃಷ್ಣಪಕ್ಷೇ ವಿಶೇಷತಃ ।
ತಥಾಪಿತೃಗಣಾನ್ರಾಜನ್ ಕ್ಷೀಣೇ ಚಂದ್ರೇ ಚ ಪೂಜಯೇತ್ ॥ ೮೯ ॥

---

ತ್ತಾನೆ. ತ್ರಯೋದಶಿಯಲ್ಲಿ ಕಾಮದೇವನನ್ನು ಪೂಜಿಸಿದಲ್ಲಿ, ಸಂವತ್ಸರದ ಫಲವೆಲ್ಲ ವನ್ನೂ ಯಾವ ಪ್ರಯತ್ನವೂ ಇಲ್ಲದೆ ಹೊಂದುತ್ತಾನೆ.

೮೫–೯೦ ಯಕ್ಷರಾಕ್ಷಸರ ಪೂಜೆಯನ್ನು ಚತುರ್ದಶಿಯಲ್ಲಿ ಮಾಡಿದ್ದೇ ಆದರೆ ಕ್ಷೇಮಿಯಾಗಿಯೂ, ಸಫಲ ಪ್ರಯತ್ನನಾಗಿಯೂ ಆಗುತ್ತಾನೆ. ಆ ಕಾಲದಲ್ಲಿ ಧನಾಧಿಪತಿಯಾದ ಕುಬೇರನನ್ನು ಪೂಜಿಸಿದಲ್ಲಿ, ಹೆಚ್ಚಾದ ಧನವನ್ನೂ, ಸಂವತ್ಸರದ ಪೂರ್ಣ ಫಲವನ್ನೂ ಹೊಂದುತ್ತಾನೆ. ಯಕ್ಷರಿಂದ ಪೂಜಿಸಲ್ಪಟ್ಟ ಶಂಖ, ಪದ್ಮ ಗಳೆಂಬ ನಿಧಿಗಳನ್ನೂ ಮಣಿಭದ್ರನನ್ನೂ ಪೂಜಿಸಿದಲ್ಲಿ ಧನವನ್ನು ಹೊಂದಿಯೇ ಹೊಂದುತ್ತಾನೆ. ಮಾಘಮಾಸದ ಕೃಷ್ಣ ಚತುರ್ದಶಿಯಲ್ಲಿ ಮಹಾದೇವನನ್ನು ವಿಶೇಷ ರೀತಿಯಿಂದ ಪೂಜಿಸಿದಲ್ಲಿ ಎಲ್ಲಾ ವಿಧವಾದ ಇಷ್ಟಗಳನ್ನೂ ಹೊಂದುತ್ತಾನೆ. ಹಾಗೆಯೇ ಅಮಾವಾಸ್ಯಾ ದಿನದಲ್ಲಿ ಪಿತೃಗಣಗಳನ್ನು ಪೂಜಿಸಿದಲ್ಲಿ ಪೂರ್ಣವಾದ

ಸರ್ವಕಾಮಸಮೃದ್ಧಸ್ಯ ಯಜ್ಞಸ್ಯ ಫಲಮಶ್ನುತೇ ।
ಶ್ರದ್ಧಾಂ ಕೃತ್ವಾ ತಥಾ ರಾಜನ್ ಸರ್ವಾನ್ಕಾಮಾನವಾಪ್ನುಯಾತ್ ॥ ೯೦ ॥

ಪೂರ್ಣಮಿಂದುಂ ತಥಾಭ್ಯರ್ಚ್ಯ ಸೌಭಾಗ್ಯಂ ಮಹದಾಪ್ನುಯಾತ್ ।
ಇಷ್ಟಗ್ರಹಮಥಾಭ್ಯರ್ಚ್ಯ ನಕ್ಷತ್ರಮಥವಾರ್ಚಯೇತ್ ॥ ೯೧ ॥

ತಸ್ಮಾತ್ಕ್ಷೇಮಮವಾಪ್ನೋತಿ ಕಾಮಂ ಚ ಯದುನಂದನ ।
ಮಾಸನಾಮ ಸನಕ್ಷತ್ರ ಪೂರ್ಣಿಮಾಯೋಗಿ ಯತ್ನ ವಾ ॥ ೯೨ ॥

ಪೂಜಯಿತ್ವಾ ತಥಾ ರಾಜನ್ ಸೌಭಾಗ್ಯಂ ಮಹದಾಪ್ನುಯಾತ್ ।
ಸೋಪವಾಸಸ್ತು ನಕ್ಷತ್ರಂ ನಕ್ಷತ್ರೇಶಮಥಾರ್ಚಯೇತ್ ॥ ೯೩ ॥

ನಕ್ಷತ್ರಂ ವಾ ಮಹಾಭಾಗ ತಸ್ಮಾತ್ಕಾಮಮವಾಪ್ನುಯಾತ್ ।
ಕಾರ್ತಿಕೇಯಂ ಮಹಾಭಾಗ ಕೃತ್ತಿಕಾಸ್ವರ್ಚಯೇನ್ನರಃ ॥ ೯೪ ॥

ವಹ್ನಿಷ್ಟೋಮಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ।
ಕೃತ್ತಿಕಾಸು ತಥಾಭ್ಯರ್ಚ್ಯ ಖಡ್ಗಂ ವಿಜಯಮಾಪ್ನುಯಾತ್ ॥ ೯೫ ॥

---

ಯಜ್ಞದ ಫಲವನ್ನೇ ಹೊಂದುತ್ತಾನೆ. ಹಾಗೆಯೇ ಶ್ರಾದ್ಧವನ್ನು ಮಾಡಿದರೂ ಎಲ್ಲಾ ಮನೋರಥಗಳನ್ನೂ ಹೊಂದುತ್ತಾನೆ.

೯೧-೯೫. ಪೂರ್ಣಚಂದ್ರನನ್ನು ಪೂಜಿಸಿದಲ್ಲಿ ಸೌಭಾಗ್ಯಶಾಲಿಯಾಗುತ್ತಾನೆ. ತನಗೆ ಇಷ್ಟವಾದ ಗ್ರಹವನ್ನೂ ನಕ್ಷತ್ರವನ್ನಾದರೂ ಪೂಜಿಸಿದಲ್ಲಿ ಕ್ಷೇಮಿಯಾಗುತ್ತಾನೆ. ಇಷ್ಟಸಿದ್ಧಿಯನ್ನೂ ಹೊಂದುತ್ತಾನೆ. ತನ್ನ ನಕ್ಷತ್ರದಿಂದ ಕೂಡಿದ ಪೂರ್ಣಿಮೆಯುಳ್ಳ ಮಾಸವನ್ನು ಪೂಜಿಸಿದಲ್ಲಿಯೂ ಹೆಚ್ಚಾದ ಸೌಭಾಗ್ಯ ಹೊಂದುತ್ತಾನೆ. ನಕ್ಷತ್ರವನ್ನೂ, ಅದರ ಅಧಿಪತಿಯಾದ ಚಂದ್ರನನ್ನೂ ಉಪವಾಸದಿಂದಿದ್ದು ಪೂಜಿಸಬೇಕು. ಈ ನಕ್ಷತ್ರ ಪೂಜೆಯಿಂದಲೂ ಇಷ್ಟಸಿದ್ಧಿಯುಂಟಾಗುತ್ತದೆ. ಕೃತ್ತಿಕಾ ನಕ್ಷತ್ರದಲ್ಲಿ ಷಣ್ಮುಖನನ್ನು ಪೂಜಿಸಬೇಕು. ಇದರಿಂದ ಅಗ್ನಿಷ್ಟೋಮದ ಫಲವನ್ನು ಹೊಂದುತ್ತಾನೆ. ತನ್ನ ಕುಲಕ್ಕೂ ಕೀರ್ತಿ ತರುತ್ತಾನೆ. ಇದೇ ಕೃತ್ತಿಕೆಯಲ್ಲಿ ಖಡ್ಗವನ್ನು ಪೂಜಿಸಿದಲ್ಲಿ ವಿಜಯಶಾಲಿಯಾಗುತ್ತಾನೆ.

ಭೌಜಂಗೇ ನಾಗಮಭ್ಯರ್ಚ್ಯ ಶ್ರಿಯಂ ಪ್ರಾಪ್ನೋತ್ಯನುತ್ತಮಾಂ ।
ಕಾಮದೇವಮಥಾಭ್ಯರ್ಚ್ಯ ಭಾಗ್ಯೇ ಸೌಭಾಗ್ಯವಾನ್ಭವೇತ್ ॥ ೯೬ ॥

ಸಾವಿತ್ರಂ ಚ ತಥಾ ಹಸ್ತೇ ಶ್ರಿಯಂ ಪ್ರಾಪ್ನೋತ್ಯನುತ್ತಮಾಂ ।
[1]ಇಷ್ಟಗ್ರಹಾಭಿತದ್ದೇಹಂ ತನ್ನಾಮಾಭ್ಯಕ್ಷಸೇವಯಾ ॥ ೯೭ ॥

ಗಂಧರ್ವಂ ವಾ ಗ್ರಹಂ ವಾಪಿ ತಸ್ಮಾತ್ಕಾಮಾನವಾಪ್ನುಯಾತ್ ।
ಕೃಷ್ಣಪಕ್ಷಚತುರ್ದಶ್ಯಾಂ ಮಹಾಕಾಲಮಥಾರ್ಚಯೇತ್ ॥ ೯೮ ॥

ತಸ್ಮಾತ್ಕಾಮಮವಾಪ್ನೋತಿ ಯಥೇಷ್ಟಂ ನಾತ್ರ ಸಂಶಯಃ ।
ಮಾಹೇಶ್ವರಂ ಮಾತೃಗಣಂ ತಥಾ ತತ್ರಾಗ್ನಿಪೂಜನಂ ॥ ೯೯ ॥

ಏಕಮಾಸಾಂತರಂ ರಾಜನ್ಕಾಮಮಾಪ್ನೋತ್ಯಭೀಪ್ಸಿತಂ ॥ ೧೦೦ ॥

ತಥಾ ತುಂಬುರುಸಂಬದ್ಧಂ ಪಂಚಕಂ ಪೂಜಯೇನ್ನರಃ ।
ಸರ್ವತ್ರ ಜಯಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೧೦೧ ॥

---

೯೬-೧೦೦. ಆಶ್ಲೇಷಾನಕ್ಷತ್ರದಲ್ಲಿ ನಾಗರಾಜನನ್ನು ಪೂಜಿಸಿದಲ್ಲಿ ಹೆಚ್ಚಾದ ಸಂಪತ್ತನ್ನು ಹೊಂದುತ್ತಾನೆ. ಪೂರ್ವಫಲ್ಗುನಿಯಲ್ಲಿ ಕಾಮದೇವನನ್ನು ಪೂಜಿಸಿದಲ್ಲಿ, ಸೌಭಾಗ್ಯವನ್ನು ಹೊಂದುತ್ತಾನೆ. ಹಸ್ತನಕ್ಷತ್ರದಲ್ಲಿ ಸವಿತೃವನ್ನು ಪೂಜಿಸಿದಲ್ಲಿಯೂ ಲಕ್ಷ್ಮೀವಂತನಾಗುತ್ತಾನೆ. ಇಷ್ಟನಕ್ಷತ್ರದ ಅಭಿಮುಖವಾಗಿರುವ ಗ್ರಹವನ್ನೂ, ಗಂಧರ್ವಪತಿಯ ನಾಮೋಚ್ಚಾರಣೆಯಿಂದ ಗಂಧರ್ವನನ್ನೂ ಪೂಜಿಸಿದಲ್ಲಿ ಇಷ್ಟಸಿದ್ಧಿಯುಂಟಾಗುತ್ತದೆ. ಕೃಷ್ಣಪಕ್ಷದ ಚತುರ್ಥಿಯಲ್ಲಿ ಮಹಾಕಾಲನನ್ನು ಪೂಜಿಸಬೇಕು. ಇದರಿಂದಲೂ ಅಭಿಮತಸಿದ್ಧಿಯನ್ನು ಹೊಂದುತ್ತಾನೆ. ಅದೇ ದಿನದಲ್ಲಿ ಮಹೇಶ್ವರ ಸಂಬಂಧಿಯಾದ ಸಪ್ತಮಾತೃಕೆಗಳನ್ನೂ, ಅಗ್ನಿಯನ್ನೂ ಪೂಜಿಸಿದಲ್ಲಿ ಒಂದು ತಿಂಗಳೊಳಗೆ ಇಷ್ಟಸಿದ್ಧಿಯನ್ನೂ ಹೊಂದುತ್ತಾನೆ.

೧೦೧-೧೦೪. ಹಾಗೆಯೇ ತುಂಬುರುವಿನಿಂದ ಕೂಡಿದ ಐದು ದೇವಗಾಯಕರುಗಳನ್ನು ಪೂಜಿಸಿದರೂ ಎಲ್ಲಾ ಕಾರ್ಯದಲ್ಲಿಯೂ ಜಯಶೀಲನಾಗುತ್ತಾನೆ.

---

1 ಇದು ಅಶುದ್ಧ ಪಾಠ.

ಕೃತ್ತಿಕಾಸು ನರೋಽಭ್ಯರ್ಚ್ಯ ಸ್ಕಂದಪಾರ್ಶ್ವಚರಾಂಸ್ತಥಾ ।
ಆರೋಗ್ಯಂ ಮಹದಾಪ್ನೋತಿ ಸದಾ ವಾ ಮನಸೇಪ್ಸಿತಂ ॥ ೧೦೨ ॥

ನೃಸಿಂಹಪ್ರತಿಬದ್ಧಾಂತು ಪೂರ್ಣೇ ಚಂದ್ರೇ ಸಮರ್ಚಯೇತ್ ।
ನರೋ ಮಾತೃಗಣಂ ಚಾರ್ಚ್ಯ ಸರ್ವಾನ್ಕಾಮಾನವಾಪ್ನುಯಾತ್ ॥ ೧೦೩ ॥

ಏಕಾಂ ವಾ ಮಾತರಂ ರಾಜನ್ಕಾಮಾನಾಪ್ನೋತ್ಯಭೀಪ್ಸಿತಾನ್ ।
ವಾನಸ್ಪತ್ಯಮವಾಪ್ನೋತಿ ಪೂಜಯಿತ್ವಾ ವನಸ್ಪತೀನ್ ॥ ೧೦೪ ॥

ದೈತ್ಯಾನಾಂ ದಾನವಾನಾಂ ವಾ ತತ್ಪತ್ನೀ ಯೇ ತಥಾಪರೇ ।
ತೇಷಾಂ ಸಂಪೂಜನಂ ಕೃತ್ವಾ ಚತುರ್ದಶ್ಯಾಂ ಸುಖೀಭವೇತ್ ॥ ೧೦೫ ॥

ಕರಣೇ ವಾ ಮುಹೂರ್ತೇ ವಾ ಯಥಾವದ್ದೇವಮರ್ಚಯೇತ್ ।
ತಸ್ಮಾತ್ಕಾಮಮವಾಪ್ನೋತಿ ಗತಿಮಗ್ರ್ಯಾಂ ಚ ವಿಂದತಿ ॥ ೧೦೬ ॥

ಚೈತ್ರಮಾಸಾದಥಾರಭ್ಯ ಯಥೋಕ್ತೇನ ನರಃ ಸದಾ ।
ಇಷ್ಟಂ ದೇವಮಥಾಭ್ಯರ್ಚ್ಯ ಯಥೋಕ್ತಂ ಫಲಮಶ್ನುತೇ ॥ ೧೦೭ ॥

---

ಕೃತ್ತಿಕಾನಕ್ಷತ್ರದಲ್ಲಿ ಸ್ಕಂದನ ಪರಿಜನರನ್ನು ಪೂಜಿಸಿದಲ್ಲಿ ಸರ್ವಕಾಲದಲಿಯೂ ಇಷ್ಟವಾದ ಆರೋಗ್ಯವನ್ನು ಹೊಂದುತ್ತಾನೆ. ಪೂರ್ಣ ಚಂದ್ರನಿರುವ ದಿನ ಪೂರ್ಣಿಮಾದಲ್ಲಿ ನರಸಿಂಹನನ್ನು ಪೂಜಿಸಬೇಕು. ಆ ದಿನದಲ್ಲಿ ಮಾತೃಗಣಗಳನ್ನು ಪೂಜಿಸಿದರೂ ಸರ್ವಮನೋರಥ ಸಿದ್ಧಿಯುಂಟಾಗುತ್ತದೆ. ಮಾತೃಗಳಲ್ಲಿ ಯಾವುದಾದರೊಂದು ಮಾತೃವನ್ನು ಪೂಜಿಸಿದರೂ ಈ ಫಲಕ್ಕೆ ಅಡ್ಡಿ ಇಲ್ಲ. ವನಸ್ಪತಿಗಳನ್ನು ಪೂಜಿಸಿದಲ್ಲಿ, ವನಸ್ಪತಿ ಪ್ರಭುತ್ವವನ್ನು ಹೊಂದುತ್ತಾನೆ. ದೈತ್ಯದಾನವರನ್ನೂ ತತ್ಪತ್ನೀಯರನ್ನೂ ಚತುರ್ದಶಿಯಲ್ಲಿ ಪೂಜಿಸಿದ್ದೇ ಆದರೆ, ಸುಖ ಹೊಂದುತ್ತಾನೆ.

೧೦೬-೧೧೦. ಒಳ್ಳೆಯ ಮುಹೂರ್ತ ಮತ್ತು ಕರಣಗಳಲ್ಲಿ ದೇವತೆಯನ್ನು ಪೂಜಿಸಬೇಕು. ಇದರಿಂದ ಇಷ್ಟಸಿದ್ಧಿಯುಂಟಾವುದಲ್ಲದೆ ಉತ್ತಮ ಗತಿಯೂ ಲಭಿಸುತ್ತದೆ. ಚೈತ್ರಮಾಸ ಮೊದಲುಮಾಡಿ ಇಲ್ಲಿ ಹೇಳಿರುವ ಕ್ರಮದಿಂದ ಇಷ್ಟದೇವತೆಯನ್ನು ಪೂಜಿಸಿದಲ್ಲಿ ಉಕ್ತವಾಗಿರುವ ಫಲವನ್ನು ಹೊಂದುತ್ತಾನೆ,

ಸಂವತ್ಸರೇಣ ಧರ್ಮಜ್ಞ ನಕ್ಷತ್ರೇ ಯದಿ ವಾ ತಿಥೌ ।
ಗ್ರಹೇ ವಾ ಸರ್ವಧರ್ಮಜ್ಞ ಸೋಽಪವಾಸಸ್ಸಮಾಹಿತಃ ॥ ೧೦೮ ॥

ಸಂವತ್ಸರೇ ವಾಪ್ಯಯನೇ ಋತೌ ಮಾಸೇ ಚ ತದ್ದಲೇ ।
ನಕ್ತಾಶೀ ಸತತಂ ಪೂಜಾಂ ಕೃತ್ವಾ ತತ್ಸ್ವಾಮಿನಃ ಸದಾ ।
ತಾವತ್ಕಾಲಂ ಮಹಾಭಾಗ ತಸ್ಮಾತ್ಕಾಮಮವಾಪ್ನುಯಾತ್ ॥ ೧೦೯ ॥

ಚೈತ್ರಾತ್ಸಮಾರಭ್ಯ ಮಹಾನುಭಾವ
ರೋಚೇತ ರೋಚೇಶಮಥಾರ್ಚಯಾನಃ ।
ರೋಚೇಶತೋಽಪ್ಯಾತ್ಸರಮಂ ಸ ಕಾಮಂ
ಪ್ರಾಪ್ನೋತ್ಯಯತ್ನಾದ್ಯದುವಂಶಚಂದ್ರ ॥ ೧೧೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ತಿಥ್ಯುಪವಾಸದೇವತಾರ್ಚನ ವರ್ಣನೋ ನಾಮ
ಏಕವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

---

ವಿಹಿತವಾದ ನಕ್ಷತ್ರದಲ್ಲಾಗಲಿ, ತಿಥಿಯಲ್ಲಾಗಲಿ, ರಾಶಿಯಲ್ಲಾಗಲಿ ಉಪವಾಸ ದಿಂದಿದ್ದು ವ್ರತವನ್ನು ನಡೆಸಿದಲ್ಲಿ ಸಂವತ್ಸರದಲ್ಲಿಯೇ ಆ ಫಲವನ್ನು ಹೊಂದುತ್ತಾನೆ. ಸಂವತ್ಸರ ಕಾಲದಲ್ಲಾಗಲಿ, ಆಯನದಲ್ಲಾಗಲಿ, ಋತುವಿನಲ್ಲಾಗಲಿ, ಮಾಸದ ಲ್ಲಾಗಲಿ, ಪಕ್ಷದಲ್ಲಾಗಲಿ ನಡೆಸುವ ಆಯಾಯ ಪೂಜೆಯನ್ನು ನಡೆಸುವಾಗ ರಾತ್ರಿ ಯಲ್ಲಿಯೇ ಊಟಮಾಡಬೇಕು. ಆಯಾಯ ಕಾಲಾಧಿಪತಿಗಳ ಪೂಜೆಯನ್ನು ಯಾವಾಗಲೂ ನಡೆಸಿದಲ್ಲಿ ಅದರಿಂದ ಇಷ್ಟಸಿದ್ಧಿಯನ್ನು ಹೊಂದುತ್ತಾನೆ. ಚೈತ್ರ ಮಾಸದಲ್ಲಿ ಪ್ರಾರಂಭಿಸಿ ರೋಚೇಶನ ಪೂಜೆಯನ್ನು ಪ್ರೀತಿಯಿಂದ ಮಾಡಿದಲ್ಲಿ ಸಂತುಷ್ಟನಾದ ಆ ದೇವತೆಯಿಂದ ಇಷ್ಟಸಿದ್ಧಿಯನ್ನು ಅಲ್ಪಾಯಾಸದಿಂದಲೇ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ತಿಥ್ಯುಪವಾಸ ದೇವತಾರ್ಚನವರ್ಣನವೆಂಬ
ಇನ್ನೂರ ಇಪ್ಪತ್ತೊಂದನೆಯ ಅಧ್ಯಾಯ ಮುಗಿದಿದೆ.

॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ದ್ವಾವಿಂಶತ್ಯುತ್ತರಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಭಗವನ್ ಶ್ರೋತುಮಿಚ್ಛಾಮಿ ರೋಚೇಷು ಚ ಪೃಥಕ್ಪೃಥಕ್ ।
ಉಪೋಷಿತೇನ ಕಿಂ ಕಾರ್ಯಂ ಕಿಂ ಫಲಂ ಚ ತಥಾ ಭವೇತ್ ॥ ೧ ॥

॥ ಮಾರ್ಕಂಡೇಯ ಉವಾಚ ॥

ಇತಿಹಾಸಂ ತಥಾತ್ರೇಮಂ ನಿಬೋಧ ಗದತೋ ಮಮ ।
ಧನಾಧ್ಯಕ್ಷಸ್ಯ ಸಂವಾದಮಷ್ಟಾವಕ್ರಸ್ಯ ಚಾಪ್ಯಥ ॥ ೨ ॥

ಅಷ್ಟಾವಕ್ರಃ ಪುರಾ ಕನ್ಯಾಂ ಪ್ರಾರ್ಥಯಾಮಾಸ ಧರ್ಮವಿತ್ ।
ಋಷೇರ್ಭಾರ್ಗವಮುಖ್ಯಸ್ಯ ವದಾನ್ಯಸ್ಯ ತು ಸುಪ್ರಭಾಂ ॥ ೩ ॥

---

### ಇನ್ನೂರ ಇಪ್ಪತ್ತೆರಡನೆಯ ಅಧ್ಯಾಯ.

೧-೪. ವಜ್ರನು ಪ್ರಶ್ನೆಮಾಡುತ್ತಾನೆ :—ಪೂಜ್ಯರೇ, ರೋಚೆಗಳಲ್ಲಿ ಉಪವಾಸಮಾಡಿದವನು ಬೇರೆ ಬೇರೆ ಮಾಡಬೇಕಾದ ಕಾರ್ಯವೇನು? ಅದಕ್ಕೆ ಫಲವೇನು ? ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ :—ಈ ವಿಷಯದಲ್ಲಿ ಕುಬೇರನಿಗೂ, ಅಷ್ಟಾವಕ್ರನಿಗೂ ನಡೆದ ಸಂವಾದರೂಪವಾದ ಇತಿಹಾಸವಿದೆ. ಅದನ್ನು ಹೇಳುತ್ತೇನೆ ಕೇಳು :—ಪೂರ್ವಕಾಲದಲ್ಲಿ ಧರ್ಮಜ್ಞನಾದ ಅಷ್ಟಾವಕ್ರನು

ರೂಪದ್ರವಿಣಸಂಪನ್ನಾಂ ಸ ಚೋವಾಚ ಮುನಿಂ ಮುನಿಃ ।
ಸ್ತ್ರೀಸ್ವಭಾವೋ ಯದಿ ಜ್ಞಾತಸ್ತ್ವಯಾ ಧರ್ಮವಿದಾಂ ವರ ॥ ೪ ॥

ತತ್ತ್ವಹಂ ತವ ದಾಸ್ಯಾಮಿ ಕನ್ಯಾಂ ಬಾಲಮೃಗೇಕ್ಷಣಾಂ ।

॥ ಅಷ್ಟಾವಕ್ರ ಉವಾಚ ॥

ಸ್ತ್ರೀಸ್ವಭಾವೋ ನ ವಿಜ್ಞಾತೋ ಮಯಾ ಬ್ರಾಹ್ಮಣಸತ್ತಮ ॥ ೫ ॥
ಕುತಶ್ಚ ತನ್ಮಯಾ ಜ್ಞಾತಸ್ತನ್ಮಮಾಚಕ್ಷ್ವ ಪೃಚ್ಛತಃ ।

॥ ಭಾರ್ಗವ ಉವಾಚ ॥

ಉತ್ತರಾಂ ತ್ವಂ ದಿಶಂ ಪಶ್ಯ ಸಾ ತೇ ವಕ್ಷ್ಯತಿ ಸರ್ವಶಃ ॥ ೬ ॥
ಸ್ತ್ರೀಸ್ವಭಾವಂ ಮಹಾಭಾಗ ಗಚ್ಛ ಶೀಘ್ರಮತಂದ್ರಿತಃ ।

॥ ಮಾರ್ಕಂಡೇಯ ಉವಾಚ ॥

ಏವಮುಕ್ತಃ ಸ ಧರ್ಮಾತ್ಮಾ ಪ್ರಯಯಾವುತ್ತರಾಂ ದಿಶಂ ॥ ೭ ॥

---

ದಾನಶೀಲನಾದ ಭಾರ್ಗವಶ್ರೇಷ್ಠನ ಕನ್ಯೆಯಾದ ಸುಪ್ರಭೆಯನ್ನು ವಿವಾಹವಾಗಲು ಪ್ರಾರ್ಥಿಸಿದನು. ಕನ್ಯೆಯೂ ಸುರೂಪಿಣಿಯಾಗಿದ್ದಳು. ಆಗ ಭಾರ್ಗವಮುನಿಯು ಅಷ್ಟಾವಕ್ರಮುನಿಯನ್ನು ಕುರಿತು, ಹೀಗೆ ಹೇಳಿದನು :—ಎಲೈ ಧರ್ಮಜ್ಞನೇ, ಸ್ತ್ರೀಯರ ಸ್ವಭಾವವನ್ನು ನೀನು ತಿಳಿದಿರುವೆಯಾದರೆ ನಿನಗೆ ಸುಂದರಿಯಾದ ಈ ಕನ್ಯೆಯನ್ನು ಕೊಡುತ್ತೇನೆ. ಅಷ್ಟಾವಕ್ರನು ಹೇಳುತ್ತಾನೆ :—

೫-೬. ಎಲೈ ಬ್ರಾಹ್ಮಣೋತ್ತಮನೇ, ಸ್ತ್ರೀ ಸ್ವಾಭಾವವು ನನಗೆ ಗೊತ್ತಿಲ್ಲ. ಅದನ್ನು ನಾನು ಯಾರಿಂದ ತಿಳಿಯಬೇಕೆಂಬುದನ್ನು ಹೇಳು. ಇದಕ್ಕೆ ಉತ್ತರವಾಗಿ ಭಾರ್ಗವರು ಹೇಳುತ್ತಾರೆ :—ಉತ್ತರ ದಿಕ್ಕನ್ನು ನೋಡುತ್ತಾ ಹೊರಡು. ಆ ದಿಕ್ಕೇ ಸ್ತ್ರೀಸ್ವಭಾವವೆಲ್ಲವನ್ನೂ ನಿನಗೆ ಹೇಳಿಕೊಡುತ್ತದೆ. ಜಾಗರೂಕನಾಗಿ ಬೇಗ ಹೊರಡು. ಮುಂದಿನ ವೃತ್ತಾಂತವನ್ನು ಮಾರ್ಕಂಡೇಯರು ಹೇಳುತ್ತಾರೆ.

೭-೧೨ ಹೀಗೆ ಹೇಳಲ್ಪಟ್ಟ ಧಾರ್ಮಿಕನಾದ ಆ ಅಷ್ಟಾವಕ್ರನು ಗಂಗಾದ್ವಾರದ ಮೂಲಕ ತ್ವರೆಯಿಂದ ಉತ್ತರ ದಿಕ್ಕಿಗೆ ಹೊರಟನು. ಅನೇಕಾನೇಕ

ಗಂಗಾದ್ವಾರಾತ್ಕ್ರಮೇಣಾಥ ತ್ವರಿತೋ ಮುನಿಪುಂಗವಃ ।
ತೀರ್ಥಾನಿ ಸರಿತಶ್ಚೈವ ಶೈಲಾನಿ ನಗರಾಣಿ ಚ ॥ ೮ ॥

ವಿಲಂಘ್ಯ ಧನದಾವಾಸಮಾಸಸಾದ ಮಹಾತಪಾಃ ।
ಕೈಲಾಸೇ ಪರ್ವತಶ್ರೇಷ್ಠೇ ಸರ್ವಕಾಮಸಮೃದ್ಧಿಮತ್ ॥ ೯ ॥

ತತ್ರಾಸೀನಂ ಮಹಾಭಾಗಂ ಸ ದದರ್ಶ ಧನಾಧಿಪಂ ।
ವರಾಸನಗತಂ ವೀರಂ ಹಾರಭಾರಾಂಚಿತೋದರಂ ॥ ೧೦ ॥

ವಾಮಭಾಗೇ ಕಿರೀಟೇನ ವಿನೀತೇನ ವಿರಾಜಿತಂ ।
ಕುಂಡಲಾಭ್ಯಾಂ ವಿಚಿತ್ರಾಭ್ಯಾಂ ಕೇಯೂರೈರಂಗದೈಸ್ತಥಾ ॥ ೧೧ ॥

ಗದಾಧರಂ ಮಹಾಕಾಯಮೇಕಲೋಚನಪಿಂಗಲಂ ।
ತಥಾ ಚ ಶಂಖಪದ್ಮಾಭ್ಯಾಂ ನಿಧಿಭ್ಯಾಂ ಚ ವಿರಾಜಿತಂ ॥ ೧೨ ॥

ಯಕ್ಷೈಶ್ಚ ಸುಮಹಾಭಾಗೈರ್ಭೀಮರೂಪಪರಾಕ್ರಮೈ ।
ದೀರ್ಘಭದ್ರೇಣ ವೀರೇಣ ಪೂರ್ಣಭದ್ರೇಣ ಚಾಪ್ಯಥ ॥ ೧೩ ॥

---

ತೀರ್ಥಗಳನ್ನೂ, ನದಿಗಳನ್ನೂ, ಪರ್ವತಗಳನ್ನೂ ನಗರಗಳನ್ನೂ ದಾಟಿ, ಕುಬೇರನ ಸ್ಥಾನವನ್ನು ಹೊಂದಿದನು. ಶ್ರೇಷ್ಠವಾದ ಕೈಲಾಸ ಪರ್ವತದಲ್ಲಿ ಸರ್ವಸಮೃದ್ಧಿಯುಳ್ಳ ಆ ಕುಬೇರ ಭವನದಲ್ಲಿ ಆಸನಾರೂಢನಾಗಿಯೂ, ಅನೇಕ ಹಾರಗಳಿಂದ ತುಂಬಿದ ಹೃದಯವುಳ್ಳವನಾಗಿಯೂ, ಎಡಭಾಗದಲ್ಲಿ ವಿನೀತನಾಗಿರುವ ಕಿರೀಟದಿಂದ ಕೂಡಿಯೂ, ಚಿತ್ರವಿಚಿತ್ರವಾದ ಕುಂಡಲ, ಕಟಕಾದಿಗಳಿಂದ ಕೂಡಿಯೂ, ಗದಾಧಾರಿಯಾಗಿಯೂ, ಉನ್ನತಶರೀರನಾಗಿಯೂ, ಪಿಂಗಲವರ್ಣವುಳ್ಳ ಒಂದು ಕಣ್ಣಿನಿಂದ ಕೂಡಿಯೂ, ಶಂಖ ಮತ್ತು ಪದ್ಮಗಳೆಂಬ ನಿಧಿಗಳಿಂದ ಪ್ರಕಾಶಮಾನನಾಗಿಯೂ,

೧೩-೧೭. ಮಹಾಮಹಿಮರಾಗಿಯೂ, ಭಯಂಕರರಾಗಿಯೂ, ಪರಾಕ್ರಮಿಯಾಗಿಯೂ ಇರುವ ಯಕ್ಷರಿಂದಲೂ, ದೀರ್ಘಭದ್ರ, ಪೂರ್ಣಭದ್ರ, ಮಣಿಭದ್ರ, ಯಕ್ಷಭದ್ರ, ದೀರ್ಘಬಾಹು, ಮಹಾಬಾಹು, ಪದ್ಮ, ಕಿಂಜಲ್ಕ, ಸೃಂಜಯ, ಸ್ವಭದ್ರ, ಸುಪಾರ್ಶ್ವ, ಮಣಿಧರ ಮುಂತಾದ ವೀರಾಗ್ರೇಸರರಾದ ಯಕ್ಷರಿಂದಲೂ,

ಮಣಿಭದ್ರೇಣ ವೀರೇಣ ಯಕ್ಷಭದ್ರೇಣ ಚಾಪ್ಯಥ ।
ದೀರ್ಘಬಾಹುಮಹಾಬಾಹುಪದ್ಮಕಿಂಜಲ್ಕಸ್ಯಂಜಯ್ಯೈಃ ॥ ೧೪ ॥

ಸ್ವಭದ್ರೇಣ ಸುಪಾರ್ಶ್ವೇನ ತಥಾ ಮಣಿಧರೇಣ ಚ ।
ಯಕ್ಷೈಶ್ಚಾನ್ಯೈಶ್ಚ ಧರ್ಮಜ್ಞ ಮಹಾಬಲಪರಾಕ್ರಮೈಃ ॥ ೧೫ ॥

ನಾನಾವೇಶೈಶ್ಚ ಗಂಧರ್ವೈಃ ಮಹಾಸತ್ವೈರ್ಮಹಾಬಲೈಃ ।
ಚಿತ್ರಾಂಗದಶ್ಚಿತ್ರರಥಶ್ಚಿತ್ರಸೇನೋಽಥ ತುಂಬುರುಃ ॥ ೧೬ ॥

ಪೂರ್ಣಾಯುರನಘಶ್ಚೈವ ತಥಾ ಶಾಲಿಶಿರಾಃ ಪ್ರಭುಃ ।
ಶೃಂಗಾರವರ್ಣೋಽತಿಬಲೋ ಭೀಮೋ ಭೀಮಪರಾಕ್ರಮಃ ॥ ೧೭ ॥

ಏತೇ ಚಾನ್ಯೇ ಚ ಗಂಧರ್ವಾಸ್ತಥೈವಾಪ್ಸರಸಃ ಶುಭಾಃ ।
ಊರ್ವಶೀ ಮೇನಕಾ ರಂಭಾ ಮಿಶ್ರಕೇಶೀಹ್ಯಲಂಬುಸಾ ॥ ೧೮ ॥

ವಿಶ್ವಾಚೀ ಚ ಘೃತಾಚೀ ಚ ಪಂಚಚೂಡಾ ಮನೋರಮಾ ।
ಏತಾಭಿಶ್ಚ ತಥಾನ್ಯಾಭಿಃ ದೇವಸ್ತ್ರೀಭಿಃ ಸಹಸ್ರಶಃ ॥ ೧೯ ॥

ಸ ದದರ್ಶ ಧನಾಧ್ಯಕ್ಷಂ ಸಮಂತಾತ್ಪರಿವಾರಿತಂ ।
ಪಾದ್ಯಾರ್ಘ್ಯಾರ್ಚ ಮನೀಯಾದ್ಯೈಃ ಧನಾಧ್ಯಕ್ಷೇಣ ಪೂಜಿತಃ ॥ ೨೦ ॥

---

ಇತರ ಮಹಾಪುರುಷರಿಂದಲೂ, ನಾನಾ ವೇಷಧಾರಿಗಳಾದ, ಬಲಶಾಲಿಗಳಾದ ಗಂಧರ್ವರಿಂದಲೂ, ಚಿತ್ರಾಂಗದ, ಚಿತ್ರರಥ ಚಿತ್ರಸೇನ, ತುಂಬುರು, ಪೂರ್ಣಾಯು, ಅನಘ, ಶಾಲಶಿರಾ, ಶೃಂಗಾರವರ್ಣ, ಬಲಶಾಲಿಯಾದ ಭೀಮ ಇವರೇ ಮೊದಲಾದ ಗಾಯಕರಿಂದಲೂ, ಅಪ್ಸರೆಯರಿಂದಲೂ ಕೂಡಿ,

೧೮-೨೨. ಊರ್ವಶೀ, ಮೇನಕಾ, ರಂಭಾ, ಮಿಶ್ರಕೇಶೀ, ಅಲಂಬುಸಾ, ವಿಶ್ವಾಚೀ, ಘೃತಾಚೀ, ಪಂಚಚೂಡಾ, ಇವರಿಂದಲೂ, ಇತರ ದೇವಸ್ತ್ರೀಸಹಸ್ರದಿಂದಲೂ ಸುತ್ತುವರಿಯಲ್ಪಟ್ಟ ಧನಾಧಿಪತಿಯನ್ನು ನೋಡಿದನು. ಅವನಿಂದ ಅರ್ಘ್ಯಪಾದ್ಯಾದಿಗಳಿಂದ ಪೂಜಿಸಲ್ಪಟ್ಟು, ಆಸನಾರೂಢನಾದ ಅಷ್ಟಾವಕ್ರನು ಕುಬೇರನನ್ನು ಸ್ತೋತ್ರಮಾಡಿದನು.

ವರಾಸನಗತೋ ರಾಜಂಸ್ತುಷ್ಟಾವ ಧನದಂ ಪ್ರಭುಂ ।

॥ ಅಷ್ಟಾವಕ್ರ ಉವಾಚ ॥

ನಮೋಽಸ್ತು ತೇ ಧನಾಧ್ಯಕ್ಷ ಯಜ್ಞಾಧ್ಯಕ್ಷ ನಮೋಽಸ್ತು ತೇ ॥ ೨೧ ॥

ಮಹಾಬಾಹೋ ಮಹಾಸತ್ತ್ವ ರಾಜರಾಜಾಮರಪ್ರಭೋ ।
ಋಷಿಸಂಘಸ್ತುತಾಚಿಂತ್ಯ ವಾಮಮೌಲೇ ವರಪ್ರದ ॥ ೨೨ ॥

ಪಿಂಗಾಕ್ಷ ವಿಪುಲಗ್ರೀವ ದೇವೇಶ ನರವಾಹನ ।
ಗದಾಧರ ವಿಶಾಲಾಂಸ ಸೂರ್ಯತೇಜಸ್ಸಮಪ್ರಭ ॥ ೨೩ ॥

ಭವಾನ್ ಶರ್ವಸಖೋ ನಿತ್ಯಂ ವಿಷ್ಣೋರಂಶಸ್ತಥಾ ಭವಾನ್ ।
ದೇವಾಸುರೇಽಥ ಸಂಗ್ರಾಮೇ ಭವತಾ ವಿನಿಪಾತಿತಾಃ ॥ ೨೪ ॥

ಬಹವೋ ದಾನವಾ ವೀರ ಮಹಾಬಲಪರಾಕ್ರಮಾಃ ।
ಲೋಕಾನ್ಧಾರಯಸೇ ಸರ್ವಾಂಸ್ತ್ವಮೇಕೋ ಯಕ್ಷಪಾರ್ಥಿವಃ ॥ ೨೫ ॥

---

೨೧-೨೬. ಅಷ್ಟಾವಕ್ರರು ಹೇಳುತ್ತಾರೆ:—ಎಲೈ ಧನಾಧ್ಯಕ್ಷನೇ, ನಿನಗೆ ನಮಸ್ಕಾರ. ಯಜ್ಞಾಧ್ಯಕ್ಷನೇ ನಿನಗೆ ನಮಸ್ಕಾರ. ದೇವಪ್ರಭುವಾದ ನೀನು ಮಹಾಬಾಹುವಾಗಿಯೂ, ಮಹಾಬಲನಾಗಿಯೂ, ರಾಜರಾಜನಾಗಿಯೂ ಇರುತ್ತೀಯೆ. ಋಷಿಸಂಘದಿಂದ ಸ್ತೋತ್ರಮಾಡಲ್ಪಡುವವನೂ, ಅಚಿಂತ್ಯಮಹಿಮನೂ ವಕ್ರಮೌಲಿಯೂ, ವರಪ್ರದನೂ ಆಗಿರುತ್ತೀಯೆ. ಎಲೈ ಪಿಂಗಾಕ್ಷನೇ, ವಿಶಾಲ ಕಂಠನೇ, ದೇವೇಶನೇ, ನರವಾಹನನೇ, ಗದಾಧಾರಿಯೇ, ವಿಶಾಲ ಭುಜಗಳ ಮೇಲು ಭಾಗ ಉಳ್ಳವನೇ, ಸೂರ್ಯನಂತೆ ತೇಜಸ್ವಿಯೇ, ನೀನು ರುದ್ರನ ಸ್ನೇಹಿತನೂ, ವಿಷ್ಣುವಿನ ಅಂಶವೂ ಆಗಿದ್ದೀಯೆ. ದೇವಸುರ ಯುದ್ಧದಲ್ಲಿ ಪರಾಕ್ರಮಿಗಳಾದ ಅನೇಕಾನೇಕ ದಾನವರನ್ನು ಪರಾಕ್ರಮದಿಂದ ನಾಶಪಡಿಸಿದ್ದೀಯೆ. ಯಕ್ಷರಾಜನಾಗಿ ಎಲ್ಲಾ ಲೋಕಗಳನ್ನೂ ಒಬ್ಬನಾಗಿದ್ದೇ ಧರಿಸಿದ್ದೀಯೆ. ಭಕ್ತರಲ್ಲಿ ದಯಾಶಾಲಿ

ಧನತ್ರಾಸುಕಂಪೀ ಸತತಂ ಚೋತ್ತರಾಶಾಪ್ರಭುಃ ಪ್ರಭುಃ |
ಧರ್ಮಸೇತುರ್ಜಗತ್ಯಸ್ಮಿಂಸ್ತ್ವಯಿ ಸರ್ವಂ ಪ್ರತಿಷ್ಠಿತಂ || ೨೬ ||

ಏವಂ ಧನಾಧಿಪೇನೋಕ್ತಃ ಪ್ರತ್ಯುವಾಚ [1] ಮಹಾಮುನಿಃ |
ಧರ್ಮಂ ಮಹಾಫಲಂ ತ್ವತ್ತಃ ಶ್ರೋತುಮಿಚ್ಛಾಮಿ ವಿತ್ತಪ || ೨೭ ||

|| ವೈಶ್ರವಣ ಉವಾಚ ||

|| ಮಾರ್ಕಂಡೇಯ ಉವಾಚ ||

ಬ್ರಹ್ಮನ್ ಸ್ವೀಯಸ್ಯ ಚರುಚೌ ದೇವತಾಯಾಶ್ಚ ಪೂಜನಂ |
ಧರ್ಮಂ ಮಹಾಫಲಂ ವಿಪ್ರ ತನ್ಮೇ ನಿಗದತಃ ಶೃಣು || ೨೮ ||

ಸರ್ವೇಷು ವಿಪ್ರರೋಚೇಷು ಸೋಪವಾಸೋ ಜಿತೇಂದ್ರಿಯಃ |
ದೇವತಾಪೂಜನಂ ಕೃತ್ವಾ ಯಥೋಕ್ತಂ ಫಲಮಶ್ನುತೇ || ೨೯ ||

---

ಯಾಗಿಯೂ, ಉತ್ತರ ದಿಕ್ಕಿಗೆ ಪ್ರಭುವಾಗಿಯೂ ಇದ್ದೀಯೆ, ಜಗತ್ತಿನ ಧರ್ಮಗಳಿಗೆ ಧಾರಕನಾಗಿರುವ ನಿನ್ನಲ್ಲಿಯೇ ಎಲ್ಲವೂ ಸುಸ್ಥಿತವಾಗಿ ನಿಂತಿದೆ. ಮಾರ್ಕಂಡೇಯರು ಹೇಳುತ್ತಾರೆ.

೨೮-೩೧. ಬ್ರಾಹ್ಮಣೋತ್ತಮನೇ ತನ್ನ ಮನಃಪ್ರೀತಿಗೆ ತಕ್ಕಂತೆ ದೇವತೆಗಳ ಪೂಜೆಯೇ ಮಹಾಫಲವುಳ್ಳ ಧರ್ಮವೆಂದು ಹೇಳಲ್ಪಡುತ್ತದೆ. ಅದನ್ನು ನಾನು ಹೇಳುತ್ತೇನೆ ಕೇಳು. ಎಲ್ಲಾ ರೋಚಗಳಲ್ಲಿಯೂ ಜಿತೇಂದ್ರಿಯನಾಗಿದ್ದು ಉಪವಾಸ ಪೂರ್ವಕವಾಗಿ ದೇವತೆಯ ಪೂಜೆಯನ್ನು ಮಾಡಿದಲ್ಲಿ, ವಿಹಿತವಾಗಿರುವ ಫಲವನ್ನು ಹೊಂದುತ್ತಾನೆ. ಚೈತ್ರಶುಕ್ಲದಲ್ಲಿ ಮೊದಲು ಮಾಡಿಕೊಂಡು ಇದನ್ನು ನಡೆಸುವುದು ಪ್ರಶಸ್ತ. ಇವುಗಳಲ್ಲಿ ತನ್ನ ಇಚ್ಛೆಗೆ ತಕ್ಕಂತೆ ಸಂವತ್ಸರಪರ್ಯಂತವೂ ಯಾವುದನ್ನಾದರೂ ಸ್ವೀಕರಿಸಬಹುದು ಮೂವತ್ತು ರೋಚಗಳೂ ಸೇರಿ ಒಂದು ಮಾಸ

---

1 ಇಲ್ಲಿ ಏವಂ ಧನಾಧಿ ಪಂಸ್ತುತ್ಯಾಪ್ರತ್ಯುವಾಚ ಎಂದು ಪಾಠವಿರಬೇಕು.

ಚೈತ್ರ ಶುಕ್ಲ ಸಮಾರಂಭಾದ್ರೋಚೇ ವ್ರತಮನುತ್ತಮಂ ।
ರೋಚೇ ಯಥೇಷ್ಟಂ ಗೃಹ್ಣೀಯಾತ್ಸಂವತ್ಸರಮತಂದ್ರಿತಃ ॥ ೩೦ ॥

ತ್ರಿಂಶದ್ರೋಚಾನಿ ವಿಪ್ರೇಂದ್ರ ಮಾಸಮೇಕಂ ಸಮಾಹಿತಃ ।
ಸಂವತ್ಸರೇಣ ನಕ್ತಾಶೀ ಪೂಜಯೇದ್ರೋಚದೇವತಾಂ ॥ ೩೧ ॥

ಪ್ರತ್ಯಹಂ ಸುಮಹಾಭಾಗ ತೇನ ಕಾಮಮವಾಪ್ನುಯಾತ್ ।
ಆಷಾಢಮಾಸೇ ಯಃ ಕುರ್ಯಾದ್ರೋಚವ್ರತಮನುತ್ತಮಂ ॥ ೩೨ ॥

ನಕ್ತಭೋಜೀ ಪ್ರತಿದಿನಂ ಚೈಕಕಾಲಾಶನೋ ದ್ವಿಜಃ ।
ಆಹಾರಕಾಲಾದನ್ಯತ್ರ ತೋಯಪಾನಂ ವಿವರ್ಜಯೇತ್ ॥ ೩೩ ॥

ಬ್ರಾಹ್ಮರೋಚಾದಥಾರಭ್ಯ ಯಾವದ್ರೋಚಂ ತು ಪೌರುಷಂ ।
ರೋಚೇ ತು ಪೌರುಷೇ ಪ್ರಾಪ್ತೇ ಕೃತ್ವಾ ಬ್ರಾಹ್ಮಣತರ್ಪಣಂ ॥ ೩೪ ॥

ವಾಸಾಂಸಿ ದತ್ವಾ ವಿಪ್ರೇಭ್ಯಃ ಸುವರ್ಣಂ ರಜತಂ ತಥಾ ।
ಸ್ವರ್ಗಲೋಕಮವಾಪ್ನೋತಿ ದೀರ್ಘಕಾಲಂ ದ್ವಿಜೋತ್ತಮ ॥ ೩೫ ॥

---

ವಾಗುತ್ತದೆ. ಶಾಂತನಾಗಿದ್ದು ಸಂವತ್ಸರ ಪರ್ಯಂತರವೂ ರಾತ್ರಿಯಲ್ಲಿಯೇ ಭೋಜನಮಾಡುತ್ತಾ ರೋಚದೇವತೆಯನ್ನು ಪೂಜಿಸಬೇಕು. ಪ್ರತಿನಿತ್ಯ ದಲ್ಲಿಯೂ ಮಾಡುವ ಇಂತಹ ಪೂಜೆಯಿಂದ ಇಷ್ಟಸಿದ್ಧಿಯನ್ನು ಹೊಂದುತ್ತಾನೆ.

೩೨-೩೯. ಯಾವನು ರಾತ್ರಿಯಲ್ಲಿಯೇ ಭೋಜನಮಾಡುತ್ತಾ ಏಕಾಕಾಲಾ ಹಾರದಿಂದ ಆಷಾಢಮಾಸದಲ್ಲಿ ಈ ಉತ್ತಮವಾದ ರೋಚವ್ರತವನ್ನು ಆಚರಿಸು ತ್ತಾನೆಯೋ ಅವನು ಆಹಾರಕಾಲಕ್ಕಿಂತ ಬೇರೆ ಕಾಲದಲ್ಲಿ ತೀರ್ಥಪಾನವನ್ನೂ ಮಾಡಬಾರದು. ಬ್ರಾಹ್ಮರೋಚ ಮೊದಲು ಎಲ್ಲಾ ರೋಚಗಳೂ ಮಾನುಷರೋಚ ಗಳೆಂದಿಸುತ್ತವೆ. ಇಂತಹ ಪೌರುಷರೋಚಗಳಲ್ಲಿ ಬ್ರಾಹ್ಮಣರನ್ನೂ ತೃಪ್ತಿಪಡಿಸ ಬೇಕು. ವಸ್ತ್ರಗಳನ್ನೂ, ಸುವರ್ಣರಜತಾದಿಗಳನ್ನೂ ದಾನಮಾಡಿ ತೃಪ್ತಪಡಿಸ ಬೇಕು. ಹೇಗೆ ಮಾಡಿದವನು ಬಹುಕಾಲ ಸ್ವರ್ಗಸುಖವನ್ನು ಹೊಂದುತ್ತಾನೆ. ಪುನಃ ಮನುಷ್ಯನಾಗಿ ಹುಟ್ಟಿದಲ್ಲಿ ರೂಪವಂತನಾಗಿಯೂ, ಆರೋಗಿಯಾಗಿಯೂ ಯಾವಾಗಲೂ ಬಲಿಷ್ಠನಾಗಿಯೂ, ಶತ್ರುನಾಶಕನಾಗಿಯೂ ಆಗುತ್ತಾನೆ. ಉತ್ತಮ

ಜನ್ಮಚಾಸಾದ್ಯ ಮಾನುಷ್ಯಂ ರೂಪವಾನಭಿಜಾಯತೇ ।
ವಿರೋಗೋ ಬಲವಾನ್ನಿತ್ಯಂ ಶತ್ರುಜಿದ್ಬಲವಾನಪಿ ॥ ೩೬ ॥

ಸ್ತ್ರಿಯಶ್ಚ ಮುಖ್ಯಾಃ ಪ್ರಾಪ್ನೋತಿ ಕುಲೇ ಜನ್ಮ ತಥೋತ್ತಮೇ ।
ಸೌಭಾಗ್ಯಂ ಮಹದಾಪ್ನೋತಿ ಲಾವಣ್ಯಮಪಿ ಚೋತ್ತಮಂ ॥ ೩೭ ॥

ಸದ್ಭಿಃ ಮೈತ್ರೀಂ ತಥಾ ವಿದ್ಯಾಂ ಧರ್ಮೇ ಚೈವೋತ್ತಮಾಂ ಗತಿಂ ।
ವಾಹನಾನ್ಯಪಿ ಮುಖ್ಯಾನಿ ಯಥೇಚ್ಛಾನ್ಯದಭಿವಾಂಛತಿ ॥ ೩೮ ॥

ರೋಚೇಷು ಮಾಸೇ ಸಫಲಂ ತವೋಕ್ತಂ
ನಕ್ತಾಶಿನೋ ದೇವವರಸ್ಯ ವಿಪ್ರ ।
ಅತಃ ಪರಂ ತೇ ಕಥಯಾಮಿ ರೋಚೇ
ಪೃಥಕ್ಫಲಂ ಸಮ್ಯಗುಪೋಷಿತಸ್ಯ ॥ ೩೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ರೋಚೇಷು ಮಾಸೋಪವಾಸಫಲ ನಿರೂಪಣೋ ನಾಮ ದ್ವಾವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

---

ಸ್ತ್ರೀಯರನ್ನೂ ಹೊಂದುತ್ತಾನೆ. ಉತ್ತಮಕುಲದಲ್ಲಿಯೂ ಹುಟ್ಟುತ್ತಾನೆ. ಸೌಭಾಗ್ಯ ಶಾಲಿಯೂ, ಲಾವಣ್ಯವಂತನೂ ಆಗುತ್ತಾನೆ ಸತ್ಪುರುಷರ ಮೈತ್ರಿಯನ್ನೂ ಹೊಂದಿ ವಿದ್ಯಾವಂತನಾಗಿ ಧಾರ್ಮಿಕ ಬುದ್ಧಿಯನ್ನೂ ಹೊಂದುತ್ತಾನೆ. ತನ್ನ ಅಪೇಕ್ಷೆಯಂತೆ ಉತ್ತಮವಾದ ವಾಹನಗಳನ್ನು ಹೊಂದುತ್ತಾನೆ. ರಾತ್ರಿಯಲ್ಲಿಯೇ ಭೋಜನಮಾಡುತ್ತಾ ನಡೆಸುವ ದೇವತಾಪೂಜೆಗಳಲ್ಲಿ ಮಾಸಫಲವನ್ನು ಹೇಳಿದ್ದಾಯಿತು. ಇನ್ನು ಮುಂದೆ ಉಪವಾಸ ಪೂರ್ವಕವಾಗಿ ನಡೆಸಬಹುದಾದ ಈ ರೋಚಗಳ ಫಲವನ್ನೂ ಬೇರೆಬೇರೆಯಾಗಿಯೂ ಹೇಳುತ್ತೇನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ರೋಚಗಳಲ್ಲಿ ಮಾಸೋಪವಾಸ ಫಲನಿರೂಪಣವೆಂಬ ಇನ್ನೂರ ಇಪ್ಪತ್ತೆರಡನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ತ್ರಯೋವಿಂಶತ್ಯುತ್ತರದ್ವಿಶತತಮೋಽಧ್ಯಾಯಃ ||

**|| ವೈಶ್ರವಣ ಉವಾಚ ||**

**ಬ್ರಾಹ್ಮೇ ಬ್ರಹ್ಮಾಣಮಭ್ಯರ್ಚ್ಯ ಬ್ರಹ್ಮಲೋಕಂ ಪ್ರಪದ್ಯತೇ ।**
**ಅಶ್ವಮೇಧಮವಾಪ್ನೋತಿ ಪ್ರಾಜಾಪತ್ಯೇ ಪ್ರಜಾಪತಿಂ || ೧ ||**

**ಸ್ವರ್ಗರೋಚೇ ತಥಾ ಸ್ವರ್ಗಂ ಸ್ವರ್ಗಲೋಕಂ ಪ್ರಪದ್ಯತೇ ।**
**ಚಕ್ರರೋಚೇ ತಥಾ ಚಕ್ರಂ ವೈಷ್ಣವಂ ತು ಸುದರ್ಶನಂ || ೨ ||**

**ದ್ವಾದಶಾರಂ ನರಃ ಕೃತ್ವಾ ವರ್ಣಕೈಃ ಸಸುಗಂಧಿಭಿಃ ।**
**ಸಂಪೂಜ್ಯ ವತ್ಸರಸ್ಯಾಂತೇ ಸೌವರ್ಣಂ ವಿನಿವೇದಯೇತ್ || ೩ ||**

---

**ಇನ್ನೂರ ಇಪ್ಪತ್ತಮೂರನೆಯ ಅಧ್ಯಾಯ.**

೧–೪. ಕುಬೇರನು ಹೇಳುತ್ತಾನೆ :—ಬ್ರಾಹ್ಮರೋಚದಲ್ಲಿ ಬ್ರಹ್ಮನನ್ನು ಪೂಜಿಸಿದಲ್ಲಿ ಬ್ರಹ್ಮಲೋಕವನ್ನು ಹೊಂದುತ್ತಾನೆ. ಅಶ್ವಮೇಧದ ಫಲವನ್ನೂ ಹೊಂದುತ್ತಾನೆ. ಪ್ರಾಜಾಪತ್ಯರೋಚದಲ್ಲಿ ಪ್ರಜಾಪತಿಯನ್ನು ಪೂಜಿಸಬೇಕು. ಸ್ವರ್ಗರೋಚದಲ್ಲಿ ಸ್ವರ್ಗವನ್ನು ಪೂಜಿಸಿದಲ್ಲಿ ಸ್ವರ್ಗಲೋಕವನ್ನು ಹೊಂದುತ್ತಾನೆ. ಚಕ್ರರೋಚದಲ್ಲಿ ಚಕ್ರವನ್ನು ಪೂಜಿಸಬೇಕು. ಹನ್ನೆರಡು ಅರಗಳುಳ್ಳ ವೈಷ್ಣವ ಸುದರ್ಶನವನ್ನು ಸುಗಂಧಿಗಳಾದ ವರ್ಣಗಳಿಂದ ನಿರ್ಮಿಸಿ ಪೂಜಿಸಬೇಕು. ವರ್ಷದ ಕೊನೆಯಲ್ಲಿ ಪ್ರಭುವಾದ ವಾಸುದೇವನಿಗೆ ಸುವರ್ಣವನ್ನು ನಿವೇದಿಸಬೇಕು.

ವಾಸುದೇವಾಯ ದೇವಾಯ ದ್ವಿತೀಯಂ ಬ್ರಾಹ್ಮಣಾಯ ಚ ।
ರಿಪೂನ್ ಜಯತೇ ಸರ್ವಾನ್ ಬಾಹ್ಯಾನಾಭ್ಯಂತರಾನಪಿ ॥ ೪ ॥

ಚಕ್ರಮಪ್ರತಿಮಂ ತಸ್ಯ ಸರ್ವಗಂ ಚ ತಥಾ ಭವೇತ್ ।
ನಾಪ್ನೋತಿ ನಾರಕಂ ದುಃಖಂ ಸ್ವರ್ಗಲೋಕಂ ಚ ಗಚ್ಛತಿ ॥ ೫ ॥

ವಾನಸ್ಪತ್ಯೇ ತಥಾ ರೋಚೇ ಪೂಜಯಿತ್ವಾ ವನಸ್ಪತಿಂ ॥ ೬ ॥

ಉದ್ಯಾನಫಲಮಾಪ್ನೋತಿ ವಾಜಪೇಯಸ್ಯ ಮಾನವಃ ।
ವಾನಸ್ಪತ್ಯಂ ಚ ಸಫಲಂ ತಥಾ ಸರ್ವತ್ರ ವಿಂದತಿ ॥ ೭ ॥

ಅನ್ನರೋಚೇ ತಥೈವಾನ್ನಂ ವಾಸುದೇವಂ ಸಮರ್ಚಯೇತ್ ।
ಕ್ಷೇತ್ರಮಧ್ಯಗತಸ್ತ್ವನ್ನಂ ಪ್ರಾಪ್ನೋತಿ ಬಹುಮಾನವಃ ॥ ೮ ॥

ಪರಲೋಕೇ ತಥಾ ತೃಪ್ತಿಂ ಸ್ವರ್ಗಲೋಕೇ ತಥೈವ ಚ ।
ಅಹತೇ ವಾಸರೇ ಚಾಹ್ನಿ ವಾಸರಂ ಪೂಜ್ಯ ಮಾನವಃ ॥ ೯ ॥

---

ಮತ್ತೊಂದು ಸುವರ್ಣವನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ಹೀಗೆ ಮಾಡಿದವನು ಬಾಹ್ಯಶತ್ರುಗಳನ್ನೂ ಜಯಿಸುತ್ತಾನೆ. ಅವನ ಚಕ್ರವೂ ಅಸದೃಶವಾಗಿಯೂ ಸರ್ವಗಾಮಿಯಾಗಿಯೂ ಆಗುತ್ತದೆ, ಅವನಿಗೆ ನರಕದುಃಖದ ಭಯವಿಲ್ಲ. ಸ್ವರ್ಗಸುಖಕ್ಕೂ ಭಾಗಿಯಾಗುತ್ತಾನೆ.

೬–೧೧. ವಾನಸ್ಪತ್ಯರೋಚದಲ್ಲಿ ವನಸ್ಪತಿಯನ್ನು ಪೂಜಿಸಬೇಕು. ಈ ಪೂಜಕನು ಉದ್ಯಾನದ ಫಲವನ್ನು ಹೊಂದುವುದಲ್ಲದೆ ವಾಜಪೇಯ ಯಾಗದ ಫಲವನ್ನೂ ಹೊಂದುತ್ತಾನೆ. ಎಲ್ಲಾ ಕಡೆಗಳಲ್ಲೂ ಅವನ ವನಸ್ಪತಿಗಳು ಸಫಲಗಳಾಗುತ್ತವೆ. ಅನ್ನರೋಚದಲ್ಲಿ ಅನ್ನರೂಪಿಯಾದ ವಾಸುದೇವನನ್ನು ಪೂಜಿಸಬೇಕು. ಕ್ಷೇತ್ರದ ಮಧ್ಯದಲ್ಲಿದ್ದು ಹೀಗೆ ಪೂಜಿಸಿದವನು ಹೆಚ್ಚಾದ ಅನ್ನವನ್ನು ಹೊಂದುತ್ತಾನೆ. ಪರಲೋಕದಲ್ಲಿಯೂ, ಸ್ವರ್ಗಲೋಕದಲ್ಲಿಯೂ ಹಾಗೆಯೇ ಒಳ್ಳೆಯ ದಿನದಲ್ಲಿ ದಿನದೇವತೆಯನ್ನು ಪೂಜಿಸಿ ಸಂಕರ್ಷಣರೂಪಿಯಾದ ವಾಸುದೇವನಿಗೆ ನಿವೇದನೆಯನ್ನೂ ಮಾಡಿದಲ್ಲಿ ಆರೋಗ್ಯ, ರೂಪ, ಲಾವಣ್ಯ, ಸೌಭಾಗ್ಯಗಳನ್ನು

ನಿವೇದ್ಯ ವಾಸುದೇವಾಯ ದೇವಂ ಸಂಕರ್ಷಣಂ ವಿಭುಃ ।
ಆರೋಗ್ಯರೂಪಲಾವಣ್ಯಸೌಭಾಗ್ಯಾನಿ ಸಮಶ್ನುತೇ || ೧೦ ||

ಕಾಲರೋಚೇ ನರಃ ಕಾಲಂ ಸಮ್ಯಕ್ಸಂಪೂಜ್ಯ ಧರ್ಮವಿತ್ ।
ಮರಣೇ ಸ್ಮೃತಿಮಾಪ್ನೋತಿ ಮೃತಶ್ಚ ಪರಮಾಂ ಗತಿಂ || ೧೧ ||

ಆಗ್ನೇಯೇ ಪೂಜಯೇದ್ವಹ್ನಿಂ ಸರ್ವಾಲ್ಲೋಕಾನ್ಸಮಾಪ್ನುಯಾತ್ ।
ಸರ್ವಾಣಿ ವಾಗ್ನಿಕರ್ಮಾಣಿ ಸಿದ್ಧ್ಯಂತ್ಯಸ್ಯ ನ ಸಂಶಯಃ || ೧೨ ||

ಅಪಃಸಂಪೂಜಯನ್ನಾಥೇ ರತ್ನಮಾಪ್ನೋತ್ಯಥಾಂಬುಜಂ ।
ಜಲಕರ್ಮಾಣಿ ಸರ್ವಾಣಿ ಸಿದ್ಧ್ಯಂತ್ಯಸ್ಯ ನ ಸಂಶಯಃ || ೧೩ ||

ಸೌರೇ ಸೂರ್ಯಮಥಾಭ್ಯರ್ಚ್ಯ ನಿರೋಗತ್ವಮವಾಪ್ನುಯಾತ್ ।
ಚಾಂದ್ರೇ ಚಂದ್ರಂ ಸಮಭ್ಯರ್ಚ್ಯ ಪರಮಾಂ ನಿರ್ವೃತಿಂ ಲಭೇತ್ || ೧೪ ||

ಗೋರೋಚೇ ಗಾಂ ಸಮಭ್ಯರ್ಚ್ಯ ಸುರಭಿಂ ಲೋಕಮಾತರಂ ।
ಗಾಃ ಸಮಾಪ್ನೋತಿ ಧರ್ಮಜ್ಞ ತಥಾ ತಲ್ಲೋಕಮೇವ ಚ || ೧೫ ||

---

ಹೊಂದುತ್ತಾನೆ. ಕಾಲರೋಚದಲ್ಲಿ ಕಾಲವನ್ನು ಪೂಜಿಸಿದಲ್ಲಿ ಧರ್ಮಜ್ಞನಾಗಿದ್ದು ಮರಣಕಾಲದಲ್ಲಿ ಸ್ಮೃತಿಯನ್ನೂ ಹೊಂದುತ್ತಾನೆ. ಮೃತನಾಗಿಯೂ ಉತ್ತಮ ಗತಿಯನ್ನೇ ಹೊಂದುತ್ತಾನೆ.

೧೨-೧೫. ಆಗ್ನೇಯರೋಚದಲ್ಲಿ ಅಗ್ನಿಯನ್ನು ಪೂಜಿಸಿದಲ್ಲಿ ಎಲ್ಲಾ ಲೋಕಗಳನ್ನೂ ಹೊಂದುತ್ತಾನೆ. ಎಲ್ಲಾ ಅಗ್ನಿಕಾರ್ಯಗಳೂ ಇವನಿಗೆ ಸಿದ್ಧಿಸುತ್ತವೆ. ಇದರಲ್ಲಿ ಸಂದೇಹವಿಲ್ಲ. ವಾರುಣರೋಚದಲ್ಲಿ ಕಮಲವನ್ನು ಪೂಜಿಸಿದ್ದೇ ಆದರೆ ರತ್ನಲಾಭವುಂಟಾಗುತ್ತದೆ ಜಲಕ್ಕೆ ಸಂಬಂಧಿಸಿದ ಎಲ್ಲಾ ಕಾರ್ಯಗಳೂ ಇವನಿಗೆ ಸಿದ್ಧಿಸುತ್ತವೆ. ಸೌರರೋಚದಲ್ಲಿ ಸೂರ್ಯನನ್ನು ಪೂಜಿಸಿದಲ್ಲಿ ಆರೋಗ್ಯಭಾಗ್ಯವುಂಟಾಗುತ್ತದೆ. ಚಾಂದ್ರರೋಚದಲ್ಲಿ ಚಂದ್ರನನ್ನು ಪೂಜಿಸಿದಲ್ಲಿ ಬಹುಮಟ್ಟಿನ ಸುಖವನ್ನು ಹೊಂದುತ್ತಾನೆ. ಗೋರೋಚದಲ್ಲಿ ಲೋಕಮಾತೆಯಾದ ಕಾಮಧೇನುವನ್ನು ಪೂಜಿಸಿದ್ದೇ ಆದರೆ ಹೆಚ್ಚಾದ ಗೋಸಮೃದ್ಧಿಯಿಂದ ಬದುಕುತ್ತಾನೆ. ಗೋಲೋಕವನ್ನೂ ಹೊಂದುತ್ತಾನೆ.

ರೋಹಿಭಂ ನಿಯತೋ ಪ್ರಾಪ್ಯ ನಿಯತಿಂ ತು ಸಮರ್ಚಯೇತ್ ।
ದೀರ್ಘಜೀವಿತಮಾಪ್ನೋತಿ ಯತ್ರ ಯತ್ರಾಭಿಜಾಯತೇ ॥ ೧೬ ॥

ವೈಷ್ಣವೇ ವಿಷ್ಣುಮಭ್ಯರ್ಚ್ಯ ವಿಷ್ಣುಲೋಕಂ ಪ್ರಪದ್ಯತೇ ।
ರೌದ್ರೇ ರುದ್ರಮಥಾಭ್ಯರ್ಚ್ಯ ತಲ್ಲೋಕಂ ಪ್ರತಿಪದ್ಯತೇ ॥ ೧೭ ॥

ಪುತ್ರಾನಾಪ್ನೋತಿ ಕೌಮಾರೇ ಕುಮಾರಂ ಚಾರ್ಚಯೆನ್ನರಃ ।
ಪಿತ್ರ್ಯಾಣಾಮರ್ಚನಂ ಕೃತ್ವಾ ಪಿತೃರೋಚೇ ಸಮಾಹಿತಃ ॥ ೧೮ ॥

ಪೂಜಾಮಭೀಷ್ಟಾಮಾಪ್ನೋತಿ ಪಿತೃಲೋಕಂ ಚ ಗಚ್ಛತಿ ।
ವಾರುಣೇ ವರುಣಂ ದೇವಮಶ್ವಾನಾಪ್ನೋತಿ ಪೂಜಯನ್ ॥ ೧೯ ॥

ಅನಂತೇ ಚ ತಥಾನನ್ತಂ ಪೂಜಯಿತ್ವಾ ಮಹೀಧರಂ ।
ಅನಂತಂ ಫಲಮಾಪ್ನೋತಿ ಕರ್ಮಣಃ ಸುಕೃತಸ್ಯ ಚ ॥ ೨೦ ॥

ವಾಯವ್ಯೇ ವಾಯುಮಭ್ಯರ್ಚ್ಯ ವಾಣಿಜ್ಯೇ ಲಾಭಮಾಪ್ನುಯಾತ್ ।
ಯಾಮ್ಯೇ ಯಮಮಥಾಭ್ಯರ್ಚ್ಯ ನಾಪ್ನೋತಿ ನರಕಾದ್ಭಯಂ ॥ ೨೧ ॥

---

೧೬-೨೦. ವಿಧಿಯರೋಚನಕ್ಷತ್ರದಲ್ಲಿ ವಿಧಿಯನ್ನು ಪೂಜಿಸಬೇಕು ಇವನು ಯಾವ ಯಾವ ಜನ್ಮದಲ್ಲಿ ಹುಟ್ಟಿದರೂ ದೀರ್ಘವಾದ ಆಯಸ್ಸನ್ನು ಹೊಂದುತ್ತಾನೆ. ವೈಷ್ಣವರೋಚದಲ್ಲಿ ವಿಷ್ಣುವನ್ನು ಪೂಜಿಸಿದಲ್ಲಿ ವಿಷ್ಣುಲೋಕವನ್ನು ಹೊಂದುತ್ತಾನೆ. ರೌದ್ರರೋಚದಲ್ಲಿ .ಅವನ ಲೋಕವನ್ನು ಹೊಂದುತ್ತಾನೆ. ಕೌಮಾರ ರೋಚದಲ್ಲಿ ಷಣ್ಮುಖನನ್ನು ಪೂಜಿಸಿದಲ್ಲಿ ಪುತ್ರರನ್ನು ಹೊಂದುತ್ತಾನೆ. ಪಿತೃರೋಚದಲ್ಲಿ ಜಿತೇಂದ್ರಿಯನಾಗಿದ್ದು ಪಿತೃಗಳನ್ನು ಪೂಜಿಸಿದಲ್ಲಿ ಇಷ್ಟವಾದ ಪೂಜ್ಯತೆಯನ್ನು ಹೊಂದುತ್ತಾನೆ. ಪಿತೃಲೋಕವನ್ನೂ ಹೊಂದುತ್ತಾನೆ. ವಾರುಣ ರೋಚದಲ್ಲಿ ವರುಣನನ್ನು ಪೂಜಿಸಿದಲ್ಲಿ ಇಷ್ಟವಾದ ಅಶ್ವಗಳನ್ನು ಹೊಂದುತ್ತಾನೆ. ಅನಂತರೋಚದಲ್ಲಿ ಭೂಮಿಧಾರಿಯಾದ ಅನಂತನನ್ನು ಪೂಜಿಸಿದಲ್ಲಿ ತನ್ನ ಕರ್ಮಕ್ಕೂ ಅಪರಿಮಿತವಾದ ಫಲವುಂಟಾಗುತ್ತದೆ.

೨೧-೨೪. ವಾಯುವ್ಯರೋಚದಲ್ಲಿ ವಾಯುವನ್ನು ಪೂಜಿಸಿದಲ್ಲಿ ವ್ಯಾಪಾರದಲ್ಲಿ ಲಾಭಹೊಂದುತ್ತಾನೆ. ಯಾಮ್ಯರೋಚದಲ್ಲಿ ಯಮನನ್ನು ಪೂಜಿಸಿದಲ್ಲಿ ನರಕ ಭಯವುಂಟಾಗುವುದಿಲ್ಲ. ಸಾರಸ್ವತರೋಚದಲ್ಲಿ ಸರಸ್ವತೀದೇವಿಯನ್ನು ಪೂಜಿಸಿದಲ್ಲಿ

ಸಾರಸ್ವತೇನ ಚಾಭ್ಯರ್ಚ್ಯ ದ್ವಿಜ ದೇವೀಂ ಸರಸ್ವತೀಂ ।
ವಿದ್ಯಾಂ ಯಥೇಷ್ಟಾಮಾಪ್ನೋತಿ ತಥಾ ವಾಗ್ಮೀ ಚ ಜಾಯತೇ ॥ ೨೨ ॥

ಶ್ರೀರೋಚೇ ಶ್ರಿಯಮಭ್ಯರ್ಚ್ಯ ಶ್ರಿಯಂ ವಿಂದತಿ ಶೋಭನಾಂ ।
ಮದೀಯೇ ಚ ತಥಾ ರೋಚೇ ಮಾಂ ಚ ಸಂಪೂಜಯನ್ನರಃ ॥ ೨೩ ॥

ಧನಭಾಗ್ಯವತೇ ಸೋಹಿ ಯತ್ರ ಯತ್ರಾಭಿಜಾಯತೇ ।
ಶೈಲರೋಚೇ ತಥಾ ಶೈಲಂ ಪೂಜಯಿತ್ವಾ ಸುಖೀ ಭವೇತ್ ॥ ೨೪ ॥

ಭೂರೋಚೇ ಭುವಮಭ್ಯರ್ಚ್ಯ ಭುವಮಾಪ್ನೋತ್ಯನುತ್ತಮಾಂ ।
ವೇದಾನಾಮರ್ಚನಂ ಕೃತ್ವಾ ವೇದರೋಚೇ ಸಮಾಹಿತಃ ॥ ೨೫ ॥

ವೇದಾನಾಪ್ನೋತಿ ಪುರುಷಃ ಯಜ್ಞಾನಪಿ ನರಾಧಿಪಃ ।
ಪೌರುಷೇ ಚ ತಥಾ ರೋಚೇ ಜಲೇ ಪುರುಷಮರ್ಚಯೇನ್ ॥ ೨೬ ॥

ಸರ್ವಾನ್ ಕಾಮಾನವಾಪ್ನೋತಿ ಮೋಕ್ಷೋಪಾಯಂ ಚ ವಿಂದತಿ ।

---

ಯಥೇಷ್ಟವಾದ ವಿದ್ಯೆಯನ್ನು ಹೊಂದುತ್ತಾನೆ. ವಾಗ್ಮಿಯೂ ಆಗುತ್ತಾನೆ. ಶ್ರೀರೋಚದಲ್ಲಿ ಲಕ್ಷ್ಮಿಯನ್ನು ಪೂಜಿಸಿದಲ್ಲಿ ಒಳ್ಳೆಯ ಸಂಪತ್ತನ್ನು ಹೊಂದುತ್ತಾನೆ. ನನ್ನ ರೋಚದಲ್ಲಿ ನನ್ನನ್ನು ಪೂಜಿಸಿದ್ದೇ ಆದರೆ ಎಲ್ಲಾ ಜನ್ಮಗಳಲ್ಲಿಯೂ ಧನವಂತನಾಗಿಯೇ ಆಗುತ್ತಾನೆ. ಶೈಲರೋಚದಲ್ಲಿ ಪರ್ವತವನ್ನು ಪೂಜಿಸಿದಲ್ಲಿ ಸುಖಿಯಾಗಿ ಬದುಕುತ್ತಾನೆ.

೨೫-೨೭. ಭೂರೋಚದಲ್ಲಿ ಭೂಮಿಯನ್ನೂ ಪೂಜಿಸಿದವನು ಒಳ್ಳೆಯ ಭೂಮಿಯನ್ನು ಹೊಂದುತ್ತಾನೆ. ವೇದರೋಚದಲ್ಲಿ ವೇದವನ್ನು ಪೂಜಿಸಿದಲ್ಲಿ ವೇದಗಳನ್ನು ಹೊಂದುತ್ತಾನೆ. ಧೊರೆಯಾದವನು ಯಜ್ಞಗಳನ್ನೂ ಹೊಂದುತ್ತಾನೆ. ಪೌರುಷರೋಚದಲ್ಲಿ ಜಲದಲ್ಲಿ ಪುರುಷನನ್ನು ಪೂಜಿಸಿದ್ದೇ ಆದರೆ ಎಲ್ಲಾ ಮನೋರಥಗಳನ್ನೂ

ರೂಪೇಣ ಹೀನಂ ಸ್ಪರ್ಶೇನ ಹೀನಂ
ಗಂಧೇನ ಹೀನಂ ಚ ರಸೇನ ಹೀನಂ ।
ಶಬ್ದೇನ ಹೀನಂ ಪುರುಷಂ ಪುರಾಣಂ
ಸಂಪೂಜಯೆನ್ ಮೋಕ್ಷಪಥಂ ಪ್ರಯಾತಿ ॥ ೨೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪ್ರತಿರೋಚಫಲನಿರೂಪಣೋ ನಾಮ
ತ್ರಯೋವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

---

ಹೊಂದಿ ಮೋಕ್ಷೋಪಾಯವನ್ನೂ ಹೊಂದುತ್ತಾನೆ. ಪ್ರಾಕೃತವಾದ ರೂಪ, ಸ್ಪರ್ಶ, ಗಂಧ, ರಸ, ಶಬ್ದ ಇತ್ಯಾದಿಗಳಿಲ್ಲದಿರುವ ಪುರಾಣಪುರುಷನನ್ನು ಪೂಜಿಸಿದಲ್ಲಿ ಮೋಕ್ಷಮಾರ್ಗವನ್ನೇ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಪ್ರತಿರೋಚಫಲನಿರೂಪಣವೆಂಬ
ಇನ್ನೂರ ಇಪ್ಪತ್ತಮೂರನೆಯ ಅಧ್ಯಾಯ ಮುಗಿದಿದೆ.



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಚತುರ್ವಿಂಶತ್ಯುತ್ತರಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಇತಿ ರೋಚವ್ರತಂ ಶ್ರುತ್ವಾ ಭುಕ್ತ್ವಾ ಧನದವೇಶ್ಮನಿ ।
ಶ್ರುತ್ವಾ ಗೀತಂ ಚ ವಾದ್ಯಂ ಚ ದೃಷ್ಟ್ವಾ ನೃತ್ತಂ ಮನೋಹರಂ ॥ ೧ ॥

ತತ್ರೋಷ್ಯ ರಜನೀಮೇಕಾಂ ಧನಾಧ್ಯಕ್ಷೇಣ ಪೂಜಿತಃ ।
ಉದಗ್ಜಗಾಮ ಧರ್ಮಾತ್ಮಾ ಹಿಮಶೈಲಸ್ಯ ಸದ್ವಿಜಃ ॥ ೨ ॥

ಸ ಶೈಲದೇಶೇ ಕಸ್ಮಿಂಶ್ಚಿದ್ದದರ್ಶ ರುಚಿರಂ ಗೃಹಂ ।
ಶೀತಾಂಶುರಶ್ಮಿಜಾಲಾಭಂ ಸರ್ವಕಾಮಸಮೃದ್ಧಿಮತ್ ॥ ೩ ॥

---

### ಇನ್ನೂರ ಇಪ್ಪತ್ತನಾಲ್ಕನೆಯ ಅಧ್ಯಾಯ.

೧-೫. ಮಾರ್ಕಂಡೇಯರು ಹೇಳುತ್ತಾರೆ :— ಈ ರೀತಿ ರೋಚವ್ರತವನ್ನು ಕೇಳಿ, ಕುಬೇರನ ಗೃಹದಲ್ಲಿ ಭೋಜನಮಾಡಿ, ರಮ್ಯವಾದ ಗೀತವಾದ್ಯಗಳನ್ನೂ ಕೇಳಿ, ಮನೋಹರವಾದ ನೃತ್ತವನ್ನೂ ನೋಡಿ, ಆ ರಾತ್ರಿ ಅಲ್ಲಿಯೇ ತಂಗಿದ್ದು, ಕುಬೇರನಿಂದ ಸತ್ಕೃತನಾದ ಅಷ್ಟಾವಕ್ರಮುನಿಯು ಅಲ್ಲಿಂದ ಉತ್ತರದಿಕ್ಕಿಗೆ ಹೊರಟನು. ಹೋಗುವಾಗ ಪರ್ವತಪ್ರದೇಶದಲ್ಲಿ ರಮಣೀಯವಾದ ಮನೆ ಯೊಂದನ್ನು ನೋಡಿದನು. ಆ ಮನೆಯೂ ಚಂದ್ರಕಿರಣ ಸಮೂಹದಂತೆ ಶುಭ್ರ

ತಸ್ಮಿನ್ ಗೃಹೇ ದದರ್ಶಾಥ ವೃದ್ಧಾಂ ರೂಪವತೀಂ ಸ್ತ್ರಿಯಂ ।
ಸರ್ವಾಭರಣಸಂಪನ್ನಾಂ ಬಹ್ವೀಭಿಃ ಪರಿವಾರಿತಾಂ ॥ ೪ ॥

ತರುಣೀಭಿರ್ವರಸ್ತ್ರೀಭಿಶ್ಚಾರುವೇಶಾಭಿರೇವ ಚ ।
ಸಾ ಚ ತಂ ಪೂಜಯಾಮಾಸ ಪಾದ್ಯಾದಿಭಿರನುಕ್ರಮಾತ್ ॥ ೫ ॥

ಗಂಧತೈಲೇನ ಚಾಭ್ಯರ್ಚ್ಯ ಸ್ನಾಪಯಾಮಾಸ ಯಾದವ ।
ಸುಖಸ್ಪರ್ಶೈಶ್ಚ ಪವನೈಃ ಗಂಧೈಶ್ಚ ವಿವಿಧೈಸ್ತಥಾ । ೬ ॥

ಲಿಲೇಪ ಚಾಸ್ಯ ಗಾತ್ರಾಣಿ ಚಂದನೇನ ಸುಗಂಧಿನಾ ।
ವಸ್ತ್ರಾಲಂಕಾರಮಾಲ್ಯೈಶ್ಚ ಪೂಜಯಾಮಾಸ ತಂ ತಥಾ ॥ ೭ ॥

ಭೋಜಯಾಮಾಸ ಚಾನ್ನೇನ ಸರ್ವಕಾಮಸಮೃದ್ಧಿನಾ ।
ತಾಂಬೂಲಂ ಪ್ರದದೌ ಚಾಸ್ಮೈ ಸುಗಂಧಿ ಸುಮನೋಹರಂ ॥ ೮ ॥

ಹಾಗೆಯೂ ಸರ್ವವಸ್ತುಸಮೃದ್ಧವಾಗಿಯೂ ಇದ್ದಿತು. ಆ ಮನೆಯಲ್ಲಿ ವೃದ್ಧೆಯಾಗಿಯೂ, ರೂಪವತಿಯಾಗಿಯೂ ಇದ್ದ ಒಬ್ಬ ಸ್ತ್ರೀಯನ್ನು ನೋಡಿದನು. ಅವಳೂ ಸಹ ಸರ್ವಾಭರಣಭೂಷಿತಳಾಗಿಯೂ, ತರುಣಿಗಳೂ, ರೂಪವತಿಯರೂ, ಉತ್ತಮವೇಷಧಾರಿಣಿಗಳೂ ಆಗಿರುವ ಅನೇಕ ಪರಿಚಾರಿಣಿಗಳಿಂದ ಕೂಡಿದ್ದಳು. ಆ ಸ್ತ್ರೀಯೂ ಸಹ ಆ ಮುನಿಯನ್ನು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದಳು.

೬–೯ ಸುಗಂಧ ತೈಲದಿಂದ ಅಭ್ಯಂಜನಮಾಡಿ ಸ್ನಾನಮಾಡಿಸಿದಳು. ಸುಖ ಸ್ಪರ್ಶವುಳ್ಳ ಗಾಳಿಯಿಂದ ಸಂತೋಷಪಡಿಸಿದಳು. ವಿವಿಧವಾದ ಸುಗಂಧ ವಸ್ತುಗಳಿಂದಲೂ, ಒಳ್ಳೆಯ ಚಂದನದಿಂದಲೂ ಅವಯವಗಳನ್ನು ಲೇಪಿಸಿದಳು. ವಸ್ತ್ರ, ಆಭರಣ, ಪುಷ್ಪಮಾಲೆ ಮುಂತಾದುವುಗಳಿಂದಲೂ ಸಂತೋಷಪಡಿಸಿದಳು. ಸರ್ವ ಸಾಮಗ್ರಿಗಳಿಂದ ಕೂಡಿದ ಅನ್ನದಿಂದ ಭೋಜನಮಾಡಿಸಿ, ಸುಗಂಧಿಯಾಗಿರುವ ತಾಂಬೂಲವನ್ನೂ ಕೊಟ್ಟಳು. ಬಿಳಿಯ ವಸ್ತ್ರದ ಹೊದಿಕೆಯುಳ್ಳ ವೈಭವಯುತವಾದ

ಇಲ್ಲಿ ಅಭ್ಯಕ್ಷ್ಯ ಅಥವಾ ಅಭ್ಯಜ್ಯ ಎಂದು ಪಾಠವಿರಬೇಕು.

**ಶ್ವೇತೋತ್ತರಚ್ಛದಂ ಚಿತ್ರಂ ಸ್ವಾಸ್ತೀರ್ಣಂ ಪರಮರ್ಧಿಮತ್ |**
**ಗೃಹೇ ವಿಚಿತ್ರೇ ಶಯನಂ ಪ್ರದದೌ ಸುಮನೋಹರಂ ॥ ೯ ॥**

**ತಾವದ್ವಿಗ್ವಿಧೇ ಪರೇ ತತ್ರ ಸಾ ಚ ಸುಷ್ವಾಪ ಭಾಮಿನೀ |**
**ವಿಸರ್ಜಯಿತ್ವಾ ನಾರೀಸ್ತಾಃ ಸರ್ವಾ ಬಾಲಮೃಗೇಕ್ಷಣಾಃ ॥ ೧೦ ॥**

**ಶೀತಾಪದೇಶೇನ ತತೋ ವಿರಾತ್ರೇ ಶಯನಾತ್ಸ್ವಕಾತ್ |**
**ಅಷ್ಟಾವಕ್ರಸ್ಯ ಶಯನಂ ಜಗಾಮ ವರವರ್ಣಿನಿ ॥ ೧೧ ॥**

**ದೃಷ್ಟ್ವಾ ಶಯನಸಂಪ್ರಾಪ್ತಾಂ ಕಿಮೇತದಿತಿ ಸೋಽಬ್ರವೀತ್ |**
**ನಾನುರೂಪಮಿದಂ ತತ್ರೇ ವಯಸಶ್ಚಾರುಹಾಸಿನಿ ॥ ೧೨ ॥**

**ಅಭಗ್ನಬ್ರಹ್ಮಚರ್ಯೋಽಸ್ಮಿ ಪರದಾರವಿವರ್ಜಕಃ |**
**ಸ್ವಚ್ಛಂದಂ ಮಾಮವಜ್ಞಾಯ ಕಿಮಿದಂ ಕರ್ತುಮಿಹಸೇ ॥ ೧೩ ॥**

**ನ ವಯಂ ದ್ವಿಜ ಕಾರುಣ್ಯೇ ಚಪಲಾಃ ಕೇವಲಂ ಸ್ತ್ರಿಯಃ |**
**ವಯಸೋಽಂತೇಽಪಿ ಚಾಪಲ್ಯಂ ಭಜಾಮಃ ಕಾಮಚೋದಿತಾಃ ॥ ೧೪ ।**

ಹಾಸಿಗೆಯನ್ನು ಹಾಸಿ, ವಿಚಿತ್ರವಾದ ಗೃಹದಲ್ಲಿ ಶಯನಮಾಡಲು ಕಲ್ಪಿಸಿದಳು ತಾನೂ ಸಹ ಅಂತಹುದೇ ಒಂದು ಬೇರೆ ಹಾಸಿಗೆಯಲ್ಲಿ ಮಲಗಿದಳು

೧೦–೧೩ ಅನಂತರ ಆ ವನಿತೆಯು ತನ್ನ ಜೊತೆಯಲ್ಲಿದ್ದ ಎಲ್ಲಾ ಯುವತಿಯರನ್ನು ಬಿಟ್ಟು, ಮಧ್ಯರಾತ್ರಿಯಲ್ಲಿ ಛಳಿ ಎಂಬ ನೆಪದಿಂದ ತನ್ನ ಶಯನವನ್ನು ಬಿಟ್ಟು ಅಷ್ಟಾವಕ್ರನ ಶಯನಕ್ಕೆ ಬಂದು ಸೇರಿದಳು. ತನ್ನ ಹಾಸಿಗೆಗೆ ಬಂದ ಅವಳನ್ನು ನೋಡಿ ಅಷ್ಟಾವಕ್ರನು ಇದೇನು, ಎಲೈ ವನಿತೆಯೇ. ಇದು ನಿನ್ನ ವಯಸ್ಸಿಗೆ ತಕ್ಕುದಲ್ಲ ಬ್ರಹ್ಮಚರ್ಯವ್ರತನಿಷ್ಠೆಯುಳ್ಳ ನಾನು ಪರಸ್ತ್ರೀಯನ್ನು ತ್ಯಜಿಸಿರತಕ್ಕವನು ಇಂತಹ ನನ್ನನ್ನು ಲೆಕ್ಕಿಸದೆ, ಯಾವ ಇಷ್ಟವನ್ನು ಸಾಧಿಸಿಕೊಳ್ಳಲು ಆಶಿಸುತ್ತಿದ್ದೀಯೆ. ಎಂದು ಪ್ರಶ್ನಿಸಲು, ದಿಗ್ದೇವಿಯು ಉತ್ತರಿಸುತ್ತಾಳೆ :—

೧೪–೧೮ ಎಲೈ ಬ್ರಾಹ್ಮಣೋತ್ತಮನೇ, ಸ್ತ್ರೀಯರಾದ ನಾವು ಯೌವನದಲ್ಲಿ ಮಾತ್ರ ಚಪಲರಾಗುತ್ತೇವೆ ಎಂಬುದಿಲ್ಲ. ವಾರ್ಧಕಾವಸ್ಥೆಯಲ್ಲಿಯೂ ಕಾಮ

ನ ಶ್ರುತಂ ತತ್ತ್ವಯಾಮನ್ಯೇ ಸ್ತ್ರೀಶೀಲಂ ದ್ವಿಜಸತ್ತಮ ।
ನೈತಾ ವಯಸಿ ರಜ್ಯಂತೇ ನ ರೂಪೇ ನ ಕುಲೇ ಶ್ರುತೇ ॥ ೧೫ ॥

ಶೀಲೇ ವೇಶೇ ಧನೇ ಶೌರ್ಯೇ ರಜ್ಯಂತೇ ಕ್ವಚಿದೇವ ತು ।
ಕಾಮಯಂತ್ಯೇವ ಪುರುಷಂ ಯಥಾಲಾಭಮಿತಿ ಶ್ರುತಿಃ ॥ ೧೬ ॥

ಯಾಸಾಂ ಹಿ ರಕ್ಷಾ ಮಹತೀ ತಾಃ ಸ್ತ್ರೀಯಃ ಕುಬ್ಜವಾಮನೈಃ ।
ಪ್ರೇಷ್ಯೈರ್ವಾಪೀಹ ಸಜ್ಜಂತೇ ಪುಮಾಂಸಮಿತಿ ಭಾರ್ಗವ ॥ ೧೭ ॥

ನಾಗ್ನಿಸ್ತೃಪ್ಯತಿ ಕಾಷ್ಠೈರ್ವಾ ನಾಪಗಾಭಿರ್ಮಹೋದಧಿಃ ।
ನಾನ್ತಕಃ ಸರ್ವಭೂತೈರ್ವಾ ನಪುಂಭಿರ್ವಾಮಲೋಚನಾ ॥ ೧೮ ॥

ಲೀಲಯೈವ ಕುಲಂ ಘ್ನನ್ತಿ ಸ್ಮಯಮಾನಾಸ್ತು ಯೋಷಿತಃ ।
ದುರ್ಲಭಾಹಿ ಸ್ತ್ರೀರಮಣಾತ್ಸ್ವಭಾವೇನ ಭೃಗೂತ್ತಮ ॥ ೧೯ ॥

ರಹೋ ನಾಸ್ತಿ ಕ್ಷಣೋ ನಾಸ್ತಿ ನಾಸ್ತಿ ಚೋಪನಿಮನ್ತ್ರಕಃ ।
ತೇನ ಧರ್ಮಜ್ಞ ನಾರೀಣಾಂ ಸತೀತ್ವಮುಪಜಾಯತೇ ॥ ೨೦ ॥

---

ಪ್ರೇರಿತರಾಗಿ ಪುರುಷಸಂಗಮದಲ್ಲಿ ಚಾಪಲ್ಯ ಹೊಂದುತ್ತೇವೆ. ಎಲೈ ಬ್ರಾಹ್ಮಣನೇ ಸ್ತ್ರೀಯರ ಶೀಲವು ನಿನಗೆ ತಿಳಿದಿಲ್ಲವೆಂದು ತೋರುತ್ತಿದೆ. ಈ ಸ್ತ್ರೀಯರು ಅನುರೂಪವಾದ ವಯಸ್ಸಿನಲ್ಲಾಗಲಿ, ರೂಪದಲ್ಲಾಗಲಿ, ಕುಲದಲ್ಲಾಗಲಿ, ಶಾಸ್ತ್ರಜ್ಞಾನದಲ್ಲಾಗಲಿ ಅನುರಕ್ತರಾಗುವುದಿಲ್ಲ. ಶೀಲ, ವೇಶ, ಧನ, ಶೌರ್ಯ ಈ ಗುಣಗಳಲ್ಲಿ ಆಶೆಪಡುವವರು ಕೆಲವರು ಮಾತ್ರ. ಸಿಕ್ಕಿದ ಪುರುಷರನ್ನು ಕಾಮಿಸುವುದೇ ಇವರ ಸ್ವಭಾವವೆಂದು ಕೇಳಿದ್ದೇನೆ. ಯಾವ ಸ್ತ್ರೀಯರಿಗೆ ಹೆಚ್ಚಾದ ರಕ್ಷಣವಿರುತ್ತದೆಯೋ ಅವರೂ ಸಹ ಕುಬ್ಜರೂ, ವಾಮನರೂ, ಭೃತ್ಯರೂ ಆಗಿರುವವರೊಡನೆಯೂ ಸಮಾಗಮವನ್ನು ಅಪೇಕ್ಷಿಸುತ್ತಾರೆ. ಕಟ್ಟಿಗೆಗಳಿಂದ ಅಗ್ನಿಯು ಹೇಗೆ ತೃಪ್ತಿಹೊಂದುವುದಿಲ್ಲವೋ ನದಿಗಳಿಂದ ಮಹಾ ಸಮುದ್ರವು ಹೇಗೆ ತೃಪ್ತಿಪಡುವುದಿಲ್ಲವೋ ಎಲ್ಲಾ ಪ್ರಾಣಿಗಳಿಂದಲೂ ಯಮನು ಹೇಗೆ ತೃಪ್ತನಾಗುವುದಿಲ್ಲವೋ ಹಾಗೆಯೇ ಸ್ತ್ರೀಯರೂ ಪುರುಷರಿಂದ ತೃಪ್ತರಾಗುವುದೇ ಇಲ್ಲ.

೧೯–೨೩. ಮಂದಹಾಸದಿಂದ ಕೂಡಿ ಲೀಲೆಯಿಂದಲೇ ಸ್ತ್ರೀಯರು ಕುಲವನ್ನೇ ಹಾಳುಮಾಡುತ್ತಾರೆ. ಸ್ವಾಭಾವಿಕವಾಗಿ ರತಿಸ್ವಭಾವವಿಲ್ಲದ ಸ್ತ್ರೀಯು ದುರ್ಲಭ

ಪ್ರೇಷಿತಸ್ತ್ವಂ ಮಹಾಭಾಗ ಮತ್ಸಮೀಪಂ ಮಹಾತ್ಮನಾ ।
ಸ್ತ್ರೀಣಾಂ ಶೀಲಮಿಹ ಜ್ಞಾತುಮಸ್ಮದ್ದೃಷ್ಟಂ ತಥಾ ಶ್ರುತಂ ॥ ೨೧ ॥

ಏತಜ್ಜ್ಞಾತ್ವಾ ಜುಗುಪ್ಸಾ ಚ ಸ್ತ್ರೀಣಾಂ ಕಾರ್ಯಾ ನ ಚ ತ್ವಯಾ ।
ಮೂಲಂ ಧರ್ಮಾರ್ಥಕಾಮಾನಾಂ ಯತಸ್ತಾ ಏವ ಯೋಷಿತಃ ॥ ೨೨ ॥

ವಹ್ನಿರನ್ನಂ ಜಲಂ ಚೈವ ನರಾಣಾಂ ಧೃತಿಹೇತವಃ ।
ಘಾತಕಾಶ್ಚ ತ ಏವೋಕ್ತಾಸ್ತಥಾ ಜ್ಞೇಯಾಶ್ಚ ಯೋಷಿತಃ ॥ ೨೩ ॥

ವೃತ್ತಿರ್ಲೋಕೇ ಯಥಾ ನಾಸ್ತಿ ವಹ್ನ್ಯನ್ನಸಲಿಲೈರ್ವಿನಾ ।
ಗೃಹಾಶ್ರಮಸ್ತಥಾ ನಾಸ್ತಿ ವಿನಾಸ್ತ್ರೀಭಿಃ ಕಥಂಚನ ॥ ೨೪ ॥

ತಸ್ಮಾತ್ತಾಃ ಪ್ರಜ್ಞಯಾ ರಕ್ಷ್ಯಾ ನೋಗ್ರೇಣ ಮೃದುನಾ ನ ಚ ।
ಸ್ತ್ರೀಯೋಮೂಲಮನರ್ಥಾನಾಂ ತ್ರಿವರ್ಗಸ್ಯ ಚ ಸಾಧನಂ ॥ ೨೫ ॥

---

ಳೆಂದೇ ತಿಳಿ. ಎಲೈ ಧಾರ್ಮಿಕನೇ, ಸ್ತ್ರೀಯರಿಗೆ ಏಕಾಂತ ಸ್ಥಾನವಿಲ್ಲದೆಯಾಗಲಿ, ಏಕಾಂತಕಾಲವಿಲ್ಲದೆಯಾಗಲಿ. ಅಪೇಕ್ಷಿಸುವ ಪುರುಷನಿಲ್ಲದಿರುವಾಗಲಿ ಅವರ ಸತೀತ್ವವು ಸ್ವಲ್ಪಮಟ್ಟಿಗೆ ಉಳಿದಿರುತ್ತದೆ. ಎಲೈ ಮಹಾತ್ಮನೇ, ಸ್ತ್ರೀಯರ ಶೀಲವನ್ನು ತಿಳಿಯಲು ನೀನು ಆ ಮಹಾತ್ಮನಿಂದ ನನ್ನಲ್ಲಿಗೆ ಕಳುಹಿಸಲ್ಪಟ್ಟಿದ್ದೀಯೆ, ನಾನು ನೋಡಿರುವ ಮತ್ತು ಕೇಳಿರುವ ಅಂತಹ ಶೀಲವನ್ನು ನಿನಗೆ ಈ ರೀತಿ ಹೇಳಿದ್ದೇನೆ. ಇದನ್ನು ತಿಳಿದ ನೀನು ಸ್ತ್ರೀಯರ ವಿಷಯದಲ್ಲಿ ಜಿಗುಪ್ಸೆ ಹೊಂದಬಾರದು. ಏಕೆಂದರೆ ಇಂತಹ ಸ್ತ್ರೀಯರೇ ಧರ್ಮಾರ್ಥಕಾಮಗಳಿಗೆ ಮೂಲದಂತೆ ಇದ್ದಾರೆ. ಅಗ್ನಿ, ಅನ್ನ, ಜಲ ಇವುಗಳು ದೇಹಧಾರಣಸಾಧನಗಳೆಂದು ಹೇಳಲ್ಪಟ್ಟಿವೆ ಇವುಗಳೇ ಕಾಲವಿಶೇಷದಲ್ಲಿ ಘಾತಕಗಳೇ ಆಗುತ್ತವೆ. ಸ್ತ್ರೀಯರೂ ಸಹ ಇದೇ ರೀತಿಯಾದವರೆಂದು ತಿಳಿಯಬೇಕು.

೨೪–೨೯ ಅಗ್ನಿ, ಅನ್ನ, ಜಲ ಇವುಗಳನ್ನು ಬಿಟ್ಟು ಲೋಕದಲ್ಲಿರಲು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಗೃಹಸ್ಥಾಶ್ರಮದ ಜೀವನವೂ ಸಹ ಈ ಸ್ತ್ರೀಯರಿಲ್ಲದೆ ನಡೆಯಲು ಸಾಧ್ಯವೇ ಇಲ್ಲ. ಆದುದರಿಂದ ಈ ಸ್ತ್ರೀಯರನ್ನು ಬುದ್ಧಿವಂತಿಕೆಯಿಂದ ರಕ್ಷಿಸಿಕೊಳ್ಳಬೇಕು. ಇವರ ವಿಷಯದಲ್ಲಿ ಬಹಳ ಉಗ್ರವಾದ ವರ್ತನೆಯೂ

ತಾಸಾಂ ನಗಚ್ಛೇದ್ವಿಶ್ವಾಸಂ ಮಣಿವದ್ಗೋಪಯೇತ್ತು ತಾಃ ।
ಗೃಹಕಾರ್ಯೇದ್ಯತಾಃ ಕೃತ್ವಾ ರಕ್ಷ್ಯಾಸ್ತಾ ಭೂತಿಮಿಚ್ಛತಾ ॥ ೨೬ ॥

ಏತಚ್ಛ್ರುತ್ವಾ ದ್ವಿತೀಯೇऽಹ್ನಿ ಪೂಜಿತಃ ಸ ತಯಾ ಸ್ತ್ರಿಯಾ ।
ಜಗಾಮ ಧನದಾವಾಸಂ ತತೋऽಪಿ ಶ್ವಶುರಾಲಯಂ ॥ ೨೭ ॥

ತತಃ ಶ್ವಶುರಮಾಸಾದ್ಯ ಸರ್ವಂ ತಸ್ಮೈನ್ಯವೇದಯತ್ ।
ಸ ಚ ಪಪ್ರಚ್ಛ ತಂ ವಿಪ್ರಂ ಶ್ರುತ್ವಾ ಸ್ತ್ರೀಣಾಂ ವಿಚೇಷ್ಟಿತಂ ॥ ೨೮ ॥

ಬುದ್ಧಿರ್ನಿವೇಷ್ಟುಂ ಸಂಜಾತಾ ನ ವಾ ಜಾತಾ ವದಸ್ವ ತತ್ ।
ಏತಚ್ಛ್ರುತ್ವೋತ್ತರಂ ವಾಕ್ಯಮಷ್ಟಾವಕ್ರೋऽಬ್ರವೀನ್ಮುನಿಂ ॥ ೨೯ ॥

ನ ಚಾಪ್ಯೇಷಾ ಗತಿಃ ಕ್ಷೇಮ್ಯಾ ನ ಚಾನ್ಯಾ ವಿದ್ಯತೇ ಗತಿಃ ।
ತಸ್ಮಾತ್ಪ್ರಯಚ್ಛ ಧರ್ಮಜ್ಞ ಪತ್ನ್ಯರ್ಥಂ ಸ್ವಸುತಾಂ ಮಮ ॥ ೩೦ ॥

ಏತಚ್ಛ್ರುತ್ವಾ ದದೌ ತಸ್ಮೈ ಸ್ವಸುತಾಂ ಭಾರ್ಗವೋ ಮುನಿಃ ।
ತಿಥೌ ದಿವಸನಕ್ಷತ್ರೇ ಮುಹೂರ್ತೇ ಚಾಭಿಪೂಜಿತೇ ॥ ೩೧ ॥

---

ಸರಿಯಲ್ಲ. ಬಹಳ ಮೃದುವಾದ ವರ್ತನೆಯೂ ಸರಿಯಲ್ಲ. ಈ ಸ್ತ್ರೀಯರೇ ಅನರ್ಥಕ್ಕೂ ಕಾರಣರಾಗುತ್ತಾರೆ. ಧರ್ಮಾದಿ ತ್ರಿವರ್ಗಕ್ಕೂ ಸಾಧಕರಾಗುತ್ತಾರೆ. ಇವರ ವಿಷಯದಲ್ಲಿ ವಿಶ್ವಾಸವಿಡಬಾರದು. ರತ್ನದಂತೆ ಇವರನ್ನು ಗೋಪನದಿಂದಲೇ ರಕ್ಷಿಸಿಕೊಳ್ಳಬೇಕು. ಅಭ್ಯುದಯದಲ್ಲಿ ಆಶೆಯುಳ್ಳವನು ಇವರನ್ನು ಮನೆಗೆಲಸದಲ್ಲಿ ವಿಶೇಷಾಸಕ್ತಿ ಉಂಟುಮಾಡಿ ರಕ್ಷಿಸಬೇಕು. ಈ ಮಾತುಗಳನ್ನೆಲ್ಲಾ ಕೇಳಿ, ಎರಡನೇ ದಿನವೂ ಅಲ್ಲಿದ್ದು, ಅಷ್ಟಾವಕ್ರನು ಅವಳಿಂದ ಸತ್ಕೃತನಾಗಿ ಪುನಃ ಕುಬೇರನ ಮನೆಗೂ ಬಂದು ಅಲ್ಲಿಂದ ತನ್ನ ಮಾವನ ಮನೆಗೂ ಬಂದನು. ಮಾವನನ್ನು ಕಂಡು ಎಲ್ಲವನ್ನೂ ಅವನಿಗೆ ಹೇಳಿದನು ಅವನೂ ಸಹ ಅಷ್ಟಾವಕ್ರನನ್ನು ಕುರಿತು, ಹೀಗೆ ಹೇಳಿದನು :—ಸ್ತ್ರೀಯರ ಶೀಲ ಸ್ವಭಾವಗಳನ್ನು ತಿಳಿದ ಮೇಲೆ ನಿನಗೆ ಗೃಹಸ್ಥಾಶ್ರಮವನ್ನು ಪ್ರವೇಶಿಸಲು ಬುದ್ಧಿಯುಂಟಾಯಿತೇ ಇಲ್ಲವೇ ಹೇಳು. ಇದಕ್ಕೆ ಅಷ್ಟಾವಕ್ರನು ಉತ್ತರ ಹೇಳುತ್ತಾನೆ :—

೩೦–೩೩. ಸ್ತ್ರೀಯರ ಸಂಗದಿಂದ ಕೂಡಿರುವ ಈ ಮಾರ್ಗವು ಕ್ಷೇಮಕರವೇನೂ ಅಲ್ಲ. ಆದರೆ ಈ ಮಾರ್ಗವನ್ನು ಬಿಟ್ಟು ಬದುಕಲು ಸಾಧ್ಯವೂ ಇಲ್ಲ

ತ್ರಿವರ್ಗಮೂಲಂ ಸಂಪ್ರಾಪ್ಯ ತಾಂ ಭಾರ್ಯಾಮಸಿತೇಕ್ಷಣಾಂ ।
ಜಗಾಮ ಪರಮಾಂ ತುಷ್ಟಿಂ ಮುಮುದೇ ಚ ತಯಾ ಸಹ		॥ ೩೨ ॥

ರರಕ್ಷ ಚೈನಾಂ ಸತತೋ ಮಹಾತ್ಮಾ
ಕೃತ್ವಾ ಚ ನಿತ್ಯಂ ಗೃಹಕಾರ್ಯಯುಕ್ತಾಂ ।
ಆರಾಧಯಾಮಾಸ ಚ ಸಾ ದ್ವಿಜೇಂದ್ರಂ
ಧರ್ಮೇ ನಿವಿಷ್ಟಾ ಪರಮಾ ಚ ಸಾಧ್ವೀ		॥ ೩೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಅಷ್ಟಾವಕ್ರದಿಕ್ಸಂವಾದೋ ನಾಮ
ಚತುರ್ವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

---

ಆದುದರಿಂದ ಧರ್ಮಜ್ಞನಾದ ನೀನು ಕನ್ಯೆಯನ್ನು ಭಾರ್ಯಾರ್ಥವಾಗಿ ನನಗೆ ಕೊಡಬೇಕು. ಈ ಮಾತನ್ನು ಕೇಳಿದ ಭಾರ್ಗವನು ತನ್ನ ಕನ್ಯೆಯನ್ನು ಅವನ ಕೋರಿಕೆಯಂತೆ ಶುಭಕರವಾದ ತಿಥಿನಕ್ಷತ್ರ ದಿನ ಮುಹೂರ್ತಾದಿಗಳ ನಿರೀಕ್ಷೆಯಿಂದ ಅವನಿಗೆ ಕೊಟ್ಟು ವಿವಾಹಮಾಡಿದನು. ತ್ರಿವರ್ಗಕ್ಕೆ ಮೂಲಕಾರಣಳಾದ, ಸುಂದರಿಯಾದ ಆ ಭಾರ್ಯೆಯನ್ನು ಹೊಂದಿ, ಅಷ್ಟಾವಕ್ರನೂ ತೃಪ್ತಿಯಿಂದ ಆವಳೊಡನೆ ಸಂತೋಷದಿಂದಿದ್ದನು. ಅವಳನ್ನು ಗೃಹಕಾರ್ಯವ್ಯಾಪೃತಳನ್ನಾಗಿ ಮಾಡಿ ಸರಿಯಾಗಿ ರಕ್ಷಿಸಿದನು. ಅವಳೂ ಪತಿವ್ರತೆಯಾಗಿದ್ದು ಧಾರ್ಮಿಕಬುದ್ಧಿಯಿಂದ ಅಷ್ಟಾವಕ್ರನನ್ನೂ ಸಂತೋಷದಿಂದ ಪೂಜಿಸಿದಳು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಅಷ್ಟಾವಕ್ರದಿಕ್ಸಂವಾದವೆಂಬ
ಇನ್ನೂರ ಇಪ್ಪತ್ತನಾಲ್ಕನೆಯ ಅಧ್ಯಾಯ
ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಪಂಚವಿಂಶತ್ಯುತ್ತರದ್ವಿಶತತಮೋಽಧ್ಯಾಯಃ ||

|| ವಜ್ರ ಉವಾಚ ||

**ವ್ರತಂ ಕಂಚಿನ್ಮಮಾಚಕ್ಷ್ವ ಸರ್ವಕಲ್ಮಷನಾಶನಂ ।**
**ವ್ರತಾನಾಮುತ್ತಮಂ ಬ್ರಹ್ಮನ್ಪವಿತ್ರಂ ಪುಣ್ಯವರ್ಧನಂ || ೧ ||**

|| ಮಾರ್ಕಂಡೇಯ ಉವಾಚ ||

**ರೋಚಂ ತು ಪೌರುಷಂ ಪ್ರಾಪ್ಯ ಸೋಪವಾಸೋ ಜಿತೇಂದ್ರಿಯಃ || ೨ ||**

**ಪೌರುಷೇಣ ಚ ಸೂಕ್ತೇನ ಸ್ನಾತಃ ಪ್ರಯತಮಾನಸಃ ।**
**ತೇನೈವ ತರ್ಪಣಂ ಕೃತ್ವಾ ಜಾಪ್ಯಂ ಚ ಮನುಜೋತ್ತಮ || ೩ ||**

---

### ಇನ್ನೂರ ಇಪ್ಪತ್ತೈದನೆಯ ಅಧ್ಯಾಯ.

೧-೫. ವಜ್ರನು ಪ್ರಶ್ನೆಮಾಡುತ್ತಾನೆ :—ಪೂಜ್ಯರೇ ಎಲ್ಲಾ ವ್ರತಗಳಲ್ಲಿಯೂ ಅತ್ಯುತ್ತಮವಾದ ಮತ್ತು ಪಾಪನಾಶಕವೂ, ಪುಣ್ಯಪ್ರದವೂ ಆದ ಒಂದು ವ್ರತವನ್ನು ನನಗೆ ಹೇಳಬೇಕು. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ :— ಪೌರುಷರೋಚವನ್ನು ಹೊಂದಿದಾಗ ಜಿತೇಂದ್ರಿಯನಾಗಿದ್ದು ಉಪವಾಸ ಮಾಡಿ ಪುರುಷಸೂಕ್ತದಿಂದ ಸ್ನಾನಮಾಡಿ ಶುದ್ಧನಾಗಬೇಕು. ಆ ಪುರುಷಸೂಕ್ತದಿಂದಲೇ

**ಅಷ್ಟಪತ್ರಸ್ಯ ಪದ್ಮಸ್ಯ ಮಧ್ಯೇ ಹಂಸಂ ಜನಾರ್ದನಂ ।**
**ಪೌರುಷೇಣ ಚ ಸೂಕ್ತೇನ ಸತ್ಕೃತಂ ಪೂಜಯೇನ್ನರಃ ॥ ೪ ॥**

**ಪುಷ್ಪೈರ್ಭೂಯಸ್ತಥಾ ಧೂಪೈಃ ಫಲೈಶ್ಚ ತದನಂತರಂ ।**
**ದೀಪೇನ ಚ ತತೋ ರಾಜನ್ ನೈವೇದ್ಯೇನ ತತಃ ಪರಂ ॥ ೫ ॥**

**ಪೌರುಷೇಣ ಚ ಸೂಕ್ತೇನ ತತೋ ವಹ್ನಿಂ ಸಮರ್ಚಯೇತ್ ।**
**ತತಸ್ತು ಧೇನುರ್ದಾತವ್ಯಾ ಕವರ್ಷಾಂತೇ ಚ ಪಯಸ್ವಿನೀ ॥ ೬ ॥**

**ಸಂವತ್ಸರಮಿದಂ ಕೃತ್ವಾ ವ್ರತಂ ಪರಮಪಾವನಂ ।**
**ಸರ್ವಾನ್ಕಾಮಾನವಾಪ್ನೋತಿ ಯೇ ದಿವ್ಯಾ ಯೇ ಚ ಮಾನುಷಾಃ ॥ ೭ ॥**

**ಅಶ್ವಮೇಧಮವಾಪ್ನೋತಿ ರಾಜಸೂಯಂ ಚ ವಿಂದತಿ ।**
**ಭುಂಜ್ತ್ವಾ ಭೋಗಾಂಸ್ತತಃ ಪಶ್ಚಾನ್ಮೋಕ್ಷಮಾಪ್ನೋತ್ಯಸಂಶಯಂ ॥ ೮ ॥**

**ಮಾಂಗಲ್ಯಮೇತತ್ಪರಮಂ ಪವಿತ್ರಂ**
**ಶ್ರೀವರ್ಧನಂ ಧರ್ಮವಿವರ್ಧನಂ ಚ ।**

---

ತರ್ಪಣವನ್ನೂ, ಜಪವನ್ನೂ ನೆರವೇರಿಸಿ ಅಷ್ಟದಳಗಳುಳ್ಳ ಪದ್ಮದಲ್ಲಿ ಮಧ್ಯಭಾಗದಲ್ಲಿ ಹಂಸರೂಪಿಯಾದ ಜನಾರ್ದನನನ್ನು ಪ್ರತಿಷ್ಠಿಸಿ ಪುರುಷಸೂಕ್ತದಿಂದಲೇ ಸತ್ಕರಿಸಿ ಪೂಜಿಸಬೇಕು. ಹೇರಳವಾದ ಪುಷ್ಪಗಳಿಂದಲೂ, ಧೂಪದೀಪ, ಫಲ ನೈವೇದ್ಯಾದಿಗಳಿಂದಲೂ ಪೂಜಿಸಬೇಕು.

೬-೯. ಪುರುಷಸೂಕ್ತದಿಂದ ಅಗ್ನಿಯನ್ನು ಪೂಜಿಸಬೇಕು. ವ್ರತದ ಕೊನೆಯಲ್ಲಿ ಕರೆಯುವ ಹಸುವನ್ನೂ ದಾನಮಾಡಬೇಕು. ಪಾವನತಮವಾದ ಈ ವ್ರತವನ್ನು ಒಂದು ವರ್ಷಕಾಲ ಮಾಡಿದಲ್ಲಿ ದಿವ್ಯವೂ, ಮಾನುಷವೂ ಆದ ಎಲ್ಲಾ ಮನೋರಥಗಳೂ ಸಫಲವಾಗುತ್ತದೆ. ಅಶ್ವಮೇಧದ ಮತ್ತು ರಾಜಸೂಯದ ಫಲವನ್ನು ಹೊಂದುತ್ತಾನೆ. ಇಹಲೋಕದ ಭೋಗಗಳನ್ನೆಲ್ಲಾ ಅನುಭವಿಸಿ

ವ್ರತೋತ್ತಮಂ ಪಾಪಹರಂ ನೃಲೋಕೇ
ಹಂಸವ್ರತಾಖ್ಯಂ ಪುರುಷೇಣ ಕಾರ್ಯಂ ॥ ೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಹಂಸವ್ರತನಿರೂಪಣೋ ನಾಮ
ಪಂಚವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

---

ಅನಂತರ ಮೋಕ್ಷವನ್ನೇ ಹೊಂದುತ್ತಾನೆ. ಈ ವ್ರತವು ಮಂಗಲಪ್ರದವೂ, ಪವಿತ್ರವೂ ಲಕ್ಷ್ಮೀಪ್ರದವೂ, ವೃದ್ಧಿಕಾರಕವೂ ಆಗಿದೆ. ಸರ್ವಪಾಪನಾಶಕವಾದ ಈ ಹಂಸ ವ್ರತವನ್ನು ಪುರುಷನು ಮಾಡಿಯೇ ಮಾಡಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಹಂಸವ್ರತನಿರೂಪಣವೆಂಬ ಇನ್ನೂರ
ಇಪ್ಪತ್ತೈದನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

### || ಷಟ್ತ್ರಿಂಶತ್ಯುತ್ತರದ್ವಿಶತತಮೋಽಧ್ಯಾಯಃ ||

|| ವಜ್ರ ಉವಾಚ ||

**ವಿಷ್ಣುನಾ ದೇವದೇವೇನ ಹಂಸರೂಪೇಣ ಕಿಂ ಕೃತಂ |**
**ಏನಂ ಮೇ ಸಂಶಯಂ ಛಿಂಧಿ ಮಾರ್ಕಂಡೇಯ ಮಹಾಮುನೇ || ೧ ||**

|| ಮಾರ್ಕಂಡೇಯ ಉವಾಚ ||

**ಆಸೀತ್ಪ್ರಜಾ ಜ್ಞಾನನಿಷ್ಠಾ ಪೂರ್ವಂ ಕೃತಯುಗೇ ನೃಪ |**
**ಜನಾನಾಂ ಜ್ಞಾನನಿಷ್ಠತ್ವಾತ್ತದಾ ಯದುಕುಲೋದ್ವಹ || ೨ ||**

**ಸ್ವಯಂ ಪ್ರಭುತ್ವಮಭವತ್ತಥಾ ದೇವಗಣಾನಿ ಚ |**
**ತಥಾ ಕೃತಯುಗಸ್ಯಾಂತೇ ಪ್ರಾವರ್ತಂತ ಪರಿಗ್ರಹೇ || ೩ ||**

---

### ಇನ್ನೂರ ಇಪ್ಪತ್ತಾರನೆಯ ಅಧ್ಯಾಯ.

೧-೪. ವಜ್ರನು ಪ್ರಶ್ನೆ ಮಾಡುತ್ತಾನೆ:—ದೇವತೋತ್ತಮನಾದ ಮಹಾ ವಿಷ್ಣುವು ಹಂಸರೂಪ ಹೊಂದಿ ಏನು ಮಾಡಿದನು. ಮಹಾಮುನಿಗಳಾದ ತಾವು ಈ ಸಂಶಯವನ್ನೂ ಹೋಗಲಾಡಿಸಬೇಕು. ಇದಕ್ಕೆ ಉತ್ತರವಾಗಿ ಮಾರ್ಕಂಡೇಯರು ಹೇಳುತ್ತಾರೆ:—ಕೃತಯುಗವೆಂಬ ಪೂರ್ವಕಾಲದಲ್ಲಿ ಪ್ರಜೆಗಳೆಲ್ಲರೂ ಜ್ಞಾನನಿಷ್ಠರಾಗಿಯೇ ಇದ್ದರು. ಎಲ್ಲರೂ ಜ್ಞಾನಿಗಳೇ ಆಗಿದ್ದ ಆ ಕಾಲದಲ್ಲಿ ಅವಿವೇಕಕ್ಕೆ ಅವಕಾಶವೇ ಇಲ್ಲದಿದ್ದುದರಿಂದ ಪ್ರಜೆಗಳೂ, ದೇವತೆಗಳೂ ಸಹ ತಾವೇ ಪ್ರಭುತ್ವ

**ಪರಿಗ್ರಹಾತ್ತಥಾ ಲೋಭೋಲೋ ಭಾದ್ದ್ವೇಷೋऽಭವತ್ತತಃ ।**
**ರಾಗದ್ವೇಷಾಭಿಭೂತಾನಾಂ ಜ್ಞಾನಮನ್ತರಧೀಯತ ॥ ೪ ॥**

**ನಷ್ಟಜ್ಞಾನೇ ತಥಾಲೋಕೇ ಧರ್ಮೋ ನಾಶಮುಪಾಗಮತ್ ।**
**ಧರ್ಮೇ ನಷ್ಟೇ ತು ನಶ್ಯಂತಂ ದೃಷ್ಟ್ವಾ ಲೋಕಂ ಜನಾರ್ದನಃ ॥ ೫ ॥**

**ಭೂತ್ವಾ ಹಂಸಸಮೋ ವರ್ಣೇ ವಿಜಹಾರ ಮಹೀಮಿಮಾಂ ।**
**ಸುಪಕ್ಷೋ ವೇದಚರಣಃ ಸುಚಂಚುಃ ಸ್ವಾಯತೇಕ್ಷಣಃ ॥ ೬ ॥**

**ಸ ದದರ್ಶ ತದಾ ದೇಶೇ ಕಸ್ಮಿಂಶ್ಚಿತ್ಸಂಸ್ಥಿತಾನೃಷೀನ್ ।**
**ಧ್ಯಾಯತೋ ಮೂಢವಿಜ್ಞಾನಾನ್ ಕಿಂಕರ್ತವ್ಯಪರಾಯಣಾನ್ ॥ ೭ ॥**

**ಸ ತಾನ್ ದೃಷ್ಟ್ವಾ ತು ಪಪ್ರಚ್ಛ ತೇಷಾಂ ಕುಶಲಮವ್ಯಯಂ ।**
**ತೇ ತಮೂಚುಃ ಕುತೋ ನಷ್ಟೇ ಜ್ಞಾನೇ ನಃ ಕುಶಲಂ ದ್ವಿಜ ॥ ೮ ॥**

---

ವನ್ನು ಹೊಂದಿದ್ದರು. ಬಹುಕಾಲ ಹಾಗೆಯೇ ಇದ್ದು ಕೃತಯುಗದ ಕೊನೆಯಲ್ಲಿ ಪ್ರಜೆಗಳು ಸಂಗ್ರಹ ಬುದ್ಧಿ ಹೊಂದುತ್ತಾ ಬಂದರು. ಆ ಬುದ್ಧಿಯಿಂದ ಅಪ್ರಾಪ್ತ ವಾದ ಇಷ್ಟವಸ್ತುವಿನಲ್ಲಿ ಆಶೆಯೂ, ಅದಕ್ಕೆ ವಿರೋಧಿಯಾದವರಲ್ಲಿ ದ್ವೇಷವೂ ಉಂಟಾಯಿತು. ಆಗ ರಾಗದ್ವೇಷಗಳಿಂದ ಕೂಡಿದ ಪ್ರಜಾವರ್ಗಕ್ಕೆ ಜ್ಞಾನವು ಅಂತರ್ಧಾನಹೊಂದಿ ದುರ್ಲಭವಾಗುತ್ತ ಬಂದಿತು.

೫-೧೦. ಲೋಕದಲ್ಲಿ ಜ್ಞಾನವು ನಾಶಹೊಂದಿದನಂತರ ಧರ್ಮವೂ ನಾಶ ಹೊಂದಿತು. ಧರ್ಮವೂ ನಾಶಹೊಂದಿದಾಗ ಧರ್ಮಮೂಲವಾದ ಲೋಕವೂ ನಾಶ ವಾಗುತ್ತಿರುವುದನ್ನು ನೋಡಿ ಜನಾರ್ದನನು ಹಂಸಕ್ಕೆ ಸಮಾನವಾದ ವರ್ಣವನ್ನು ಹೊಂದಿ ಭೂಮಿಯಲ್ಲೆಲ್ಲಾ ವಿಹರಿಸಿದನು. ರಮ್ಯವಾದ ರೆಕ್ಕೆಗಳಿಂದ ಕೂಡಿಯೂ, ವೇದಗಳೆಂಬ ಪಾದಗಳಿಂದ ಕೂಡಿಯೂ, ಒಳ್ಳೆಯ ಕೊಕ್ಕಿನಿಂದಲೂ ವಿಶಾಲವಾದ ಕಣ್ಣುಗಳಿಂದಲೂ ಕೂಡಿ ಭೂಮಿಯಲ್ಲೆಲ್ಲಾ ಸಂಚರಿಸುವಕಾಲದಲ್ಲಿ ಒಂದಾನೊಂದು ದೇಶದಲ್ಲಿ ಜ್ಞಾನವಿಲ್ಲದೆಯೂ, ಏನುಮಾಡಬೇಕೆಂಬ ಚಿಂತೆಯಲ್ಲಿ ಆಸಕ್ತರಾಗಿಯೂ ಧ್ಯಾನೋನ್ಮುಖರಾಗಿಯೂ ಇರುವ ಋಷಿಗಳನ್ನು ಕಂಡನು. ಹಂಸರೂಪಿಯಾದ

ತಾನಬ್ರವೀನ್ಮುನೀನ್ ಸರ್ವಾನ್ ಸ ಹಂಸಃ ಪಕ್ಷಿರಾಟ್ ತತಃ ।
ಜ್ಞಾನಂ ಪ್ರಕಾಶಯಿಷ್ಯಾಮಿ ತನ್ನಿಬೋಧತ ಸತ್ತಮಾಃ		॥ ೯ ॥

ಏತಚ್ಛ್ರುತ್ವಾ ಶುಭಂ ವಾಕ್ಯಂ ಹಂಸೇನೋಕ್ತಂ ಮಹಾತ್ಮನಾ ।
ಹಂಸಮೂಚುರ್ಮಹಾತ್ಮಾನೋ ಭವ ತ್ರಾತಾ ದ್ವಿಜೋತ್ತಮ		॥ ೧೦ ॥

ಜ್ಞಾನನಾಶೇನ ಸಕಲಂ ಮಾ ನಶ್ಯತ್ವಖಿಲಂ ಜಗತ್ ।
ಆದಾವೇವ ತ್ವಮಾತ್ಮಾನಂ ಬ್ರೂಹ್ಯಸ್ಮಾಕಂ ಮಹಾಖಗ		॥ ೧೧ ॥

ವಯಂ ಹಿ ಭ್ರಷ್ಟವಿಜ್ಞಾನಾಃ ತ್ವಾಂ ನ ವಿದ್ಮೋ ಮಹಾದ್ಯುತೇ ।
ತಾನಬ್ರವೀದ್ದ್ವಿಜಾನ್ ಹಂಸೋ ವಿಷ್ಣುರಸ್ಮಿ ದ್ವಿಜೋತ್ತಮಾಃ		॥ ೧೨ ॥

ತಂ ತೇ ಜ್ಞಾತ್ವಾ ತದಾ ವಿಷ್ಣುಂ ಪೂಜಯಾಮಾಸುರಂಜಸಾ ।
ಅಬ್ರುವಂಶ್ಚ ತಥಾ ಜ್ಞಾನಂ ಯಥೋಕ್ತಂ ತೇನ ಯಾದವ		॥ ೧೩ ॥

---

ಜನಾರ್ದನನು ಅವರನ್ನು ಕುರಿತು ಕುಶಲಪ್ರಶ್ನೆಮಾಡಿದನು. ಅವರೂ ಸಹ ಎಲೈ ಪಕ್ಷಿಯೇ, ಜ್ಞಾನವು ನಷ್ಟವಾದ ಮೇಲೆ ಸುಖವೆಲ್ಲಿಂದ ಬಂದೀತು ಎಂದರು. ಆಗ ಅವರನ್ನು ಕುರಿತು ಪಕ್ಷಿಯರೂಪದಿಂದ ಜನಾರ್ದನನು ಎಲೈ ಸಾಧುಗಳೇ ನಾನು ಜ್ಞಾನವನ್ನು ಪ್ರಕಾಶಪಡಿಸುತ್ತೇನೆ. ತಿಳಿದುಕೊಳ್ಳಿರಿ ಎಂದನು. ಮಹಾತ್ಮನಾದ ಹಂಸದಿಂದ ಈ ವಚನವನ್ನು ಕೇಳಿ ಋಷಿಗಳೆಲ್ಲರೂ ಜ್ಞಾನವನ್ನು ಉಪದೇಶಿಸಿ ನೀನೇ ನಮಗೆ ರಕ್ಷಕನಾಗು ಎಂದು ಪ್ರಾರ್ಥಿಸಿದರು.

೧೧-೧೪. ಜ್ಞಾನದ ನಾಶದಿಂದ ಜಗತ್ತೆಲ್ಲವೂ ನಾಶವಾಗಬಾರದು. ಮೊದಲು ನೀನು ಯಾರು ಎಂಬುದನ್ನು ನಮಗೆ ತಿಳಿಸಬೇಕು. ನೀನೂ ಮಹಾಹಂಸನಾಗಿಯೇ ತೋರುತ್ತಿದ್ದೀಯೇ. ನಾವು ನಷ್ಟಜ್ಞಾನರಾಗಿರುವುದರಿಂದ ತೇಜಸ್ವಿಯಾಗಿರುವ ನಿನ್ನ ವಾಸ್ತವಿಕಸ್ವರೂಪವನ್ನು ತಿಳಿಯಲು ಅಶಕ್ತರಾಗಿದ್ದೇವೆ. ಆಗ ಅವರನ್ನು ಕುರಿತು ಹಂಸವು ಬ್ರಾಹ್ಮಣೋತ್ತಮರೇ, ನಾನು ವಿಷ್ಣುವಾಗಿದ್ದೇನೆ ಎಂದಿತು. ಆಗ ಋಷಿಗಳೆಲ್ಲರೂ ವಿಷ್ಣುವೆಂದು ತಿಳಿದು ಆ ಹಂಸವನ್ನು ಪೂಜಿಸಿದರು. ಯಥೋಕ್ತವಾದ ಜ್ಞಾನವನ್ನೂ ಪ್ರಶ್ನೆಮಾಡಿ ಅವನಿಂದ ಹೊಂದಿದರು. ಅನಂತರ ಅವರು

ಬೆದುಕ್ಷ್ಮ ಗೂಢಂ ಶಿಷ್ಯೇಭ್ಯೋ ನಾತಭೀತಾಸ್ತಥಾ ವರಂ ।
ತತಃ ಪ್ರಭೃತಿ ಲೋಕೇಽಸ್ಮಿನ್ ಜ್ಞಾನಿನಃ ಕೇಚಿದೇವ ತು ॥ ೧೪ ॥

ಏವಂ ಕೃತ್ವಾ ವಿಷ್ಣುನಾ ಹಂಸರೂಪಂ
ಜ್ಞಾನಂ ನಷ್ಟಂ ವಿಪ್ರಮುಖ್ಯೇಷು ದತ್ತಂ ।
ಜ್ಞಾನೇ ಪ್ರಾಪ್ತೇ ಭೂತಲೇ ನಷ್ಟಶೋಕಾಃ
ಸರ್ವೇ ಚಾಸನ್ ವಿಪ್ರಮುಖ್ಯಾನ್ನವೀರ ॥ ೧೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಹಂಸಗೀತಾಯಾಂ ಹಂಸಪ್ರಾದುರ್ಭಾವ
ವರ್ಣನೋನಾಮ ಷಡ್ವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

---

ಶಿಷ್ಯದೋಷದಿಂದ ಜ್ಞಾನವು ನಷ್ಟವಾಗುತ್ತದೆಂಬ ಭಯದಿಂದ ಅತ್ಯಂತ ಭಕ್ತರಾದ ಕೆಲವು ಶಿಷ್ಯರಿಗೆ ಮಾತ್ರ ರಹಸ್ಯವಾಗಿ ಉಪದೇಶಿಸಿದರು. ಆ ಕಾಲ ಮೊದಲು ಜಗತ್ತಿನಲ್ಲಿ ಕೇವಲ ಕೆಲವರು ಮಾತ್ರವೇ ಜ್ಞಾನಿಗಳಾಗಿರುವಂತಾಯಿತು.

೧೫. ಈ ರೀತಿ ವಿಷ್ಣುವು ಹಂಸಾವತಾರ ಹೊಂದಿ ನಷ್ಟವಾಗಿದ್ದ ಜ್ಞಾನವನ್ನು ಬ್ರಾಹ್ಮಣರಿಗೆ ಉಂಟುಮಾಡಿದನು. ಜ್ಞಾನವನ್ನು ಹೊಂದಿದ ಮೇಲೆ ಭೂಮಿಯಲ್ಲಿರುವ ಎಲ್ಲಾ ವಿಪ್ರವರ್ಯರೂ ಶೋಕವಿಲ್ಲದೆ ಸಂತುಷ್ಟರಾದರು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಹಂಸಗೀತೆಯ ಹಂಸಪ್ರಾದುರ್ಭಾವವರ್ಣನವೆಂಬ
ಇನ್ನೂರ ಇಪ್ಪತ್ತಾರನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಸಪ್ತವಿಂಶತ್ಯುತ್ತರ ದ್ವಿಶತತಮೋಽಧ್ಯಾಯಃ ||

|| ವಜ್ರ ಉವಾಚ ||

ಕಿಮುಕ್ತಂ ತೇನ ಹಂಸೇನ ಋಷೀಣಾಂ ಭಾವಿತಾತ್ಮನಾಂ ।
ಏತಂ ಮೇ ಸಂಶಯಂ ಛಿಂಧಿ ಭೃಗುವಂಶವಿವರ್ಧನ || ೧ ||

|| ಮಾರ್ಕಂಡೇಯ ಉವಾಚ ||

ಬಹೂಕ್ತಂ ತೇನ ಹಂಸೇನ ಚರ್ಷೀಣಾಂ ಭಾವಿತಾತ್ಮನಾಂ ।

ತಸ್ಮಾತ್ಕಿಂಚಿದಹಂ ವಕ್ಷ್ಯೇ ತನ್ಮೇ ನಿಗದತಃ ಶೃಣು || ೨ ||

|| ಋಷಯ ಊಚುಃ ||

ವರ್ಣಾನಾಮಾಶ್ರಮಾಣಾಂ ಚ ಬ್ರೂಹಿ ಧರ್ಮಂ ದ್ವಿಜೋತ್ತಮ ।
ತಥಾ ಭಕ್ಷ್ಯಮಭಕ್ಷ್ಯಂ ಚ ಶೌಚಾಶೌಚೇ ತಥೈವ ಚ || ೩ ||

---

### ಇನ್ನೂರ ಇಪ್ಪತ್ತೇಳನೆಯ ಅಧ್ಯಾಯ.

೧-೫. ವಜ್ರನು ಪ್ರಶ್ನೆಮಾಡುತ್ತಾನೆ :—ಆ ಹಂಸವು ಋಷಿಗಳಾದ ಆ ಮಹಾಪುರುಷರನ್ನು ಕುರಿತು ಏನು ಹೇಳಿತು. ಅದನ್ನು ತಿಳಿಸಿ ನಮ್ಮ ಸಂಶಯವನ್ನು ಹೋಗಲಾಡಿಸಬೇಕು. ಮಾರ್ಕಂಡೇಯರು ಹೇಳುತ್ತಾರೆ :—ಮಹಾತ್ಮರಾದ ಆ ಋಷಿಗಳಿಗೆ ಹಂಸವು ಅನೇಕ ವಿಷಯದಲ್ಲಿ ಬಹಳ ಉಪದೇಶಮಾಡಿತು. ಅದರಲ್ಲಿ

॥ ಹಂಸ ಉವಾಚ ॥

ಯಜನಂ ಯಾಜನಂ ದಾನಂ ವಿಶಿಷ್ಟಶ್ಚ ಪರಿಗ್ರಹಃ ।
ಅಧ್ಯಾಪನಮಧ್ಯಯನಂ ವಿಪ್ರಕರ್ಮಪ್ರಕೀರ್ತಿತಂ ॥ ೪ ॥

ದಾನಮಧ್ಯಯನಂ ಯಜ್ಞಃ ಪಾಶುಪಾಲ್ಯಂ ವಣಿಕ್ಕ್ರಿಯಾ ।
ಅಮಾತ್ಸರ್ಯಂ ಚ ಧರ್ಮಜ್ಞ ಧರ್ಮಸ್ಸಾಧಾರಣೋ ಮತಃ ॥ ೫ ॥

ಅನುಲೋಮ್ಯೇನ ವರ್ಣಾನಾಂ ಜಾತಿರ್ಮಾತೃಸಮಾ ಭವೇತ್ ।
ಪ್ರಾತಿಲೋಮ್ಯೇಧ್ಭವಾಸ್ಸರ್ವೇ ಭವನ್ತ್ಯಾರ್ಯವಿಗರ್ಹಿತಾಃ ॥ ೬ ॥

ಸೂತೋ ವೈದೇಹಕಶ್ಚೈವ ಚಂಡಾಲಶ್ಚ ದ್ವಿಜೋತ್ತಮಾಃ ।
ವಿಜ್ಞೇಯಾ ಬ್ರಾಹ್ಮಣೀಪುತ್ರಾಃ ಕ್ಷತ್ರವಿಟ್ಛೂದ್ರಯೋನಿತಃ ॥ ೭ ॥

---

ಸ್ವಲ್ಪಾಂಶವನ್ನು ಮಾತ್ರ ನಾನು ಇಲ್ಲಿ ನಿಮಗೆ ಹೇಳುತ್ತೇನೆ ಕೇಳಿರಿ. ಋಷಿಗಳು ಹೇಳುತ್ತಾರೆ:—ವರ್ಣಗಳ ಮತ್ತು ಆಯಾಯ ಆಶ್ರಮಗಳ ಧರ್ಮವನ್ನು ಹೇಳಬೇಕು. ಹಾಗೆಯೇ ಭಕ್ಷ್ಯಾಭಕ್ಷ್ಯವಿಷಯಗಳನ್ನೂ ಶೌಚಾಶೌಚ ವಿಚಾರವನ್ನೂ ಸಹ ಹೇಳಬೇಕು. ಹಂಸವು ಹೇಳುತ್ತದೆ:—ಯಜನ, ಯಾಜನ, ದಾನ, ಶುದ್ಧವಾದ ಪರಿಗ್ರಹ, ಅಧ್ಯಾಪನ, ಅಧ್ಯಯನ ಈ ಆರು ಬ್ರಾಹ್ಮಣ ಕರ್ಮಗಳು. ದಾನ, ಅಧ್ಯಯನ, ಯಜ್ಞ, ಪಶುಪಾಲನ ಇವು ವಣಿಕ್ರಿಯೆ (ವೈಶ್ಯ) ಗಳು ಅಮಾತ್ಸರ್ಯವೆಂಬುದು ಎಲ್ಲಾ ವರ್ಣಗಳಿಗೂ ಸಾಧಾರಣವಾದ ಧರ್ಮ.

೬-೯. ಅನುಲೋಮಕ್ರಮದಿಂದ ಹುಟ್ಟಿದವರಿಗೆ ಮಾತೃವಿಗೆ ಸಮಾನವಾದ ಜಾತಿಯು ಉಂಟಾಗುತ್ತದೆ. ಪ್ರತಿಲೋಮಕ್ರಮದಿಂದ ಹುಟ್ಟಿದವರು ಎಲ್ಲರೂ ನಿಕೃಷ್ಟರಾಗಿಯೇ ಆಗುತ್ತಾರೆ. ಬ್ರಾಹ್ಮಣಸ್ತ್ರೀಯಲ್ಲಿ ಪ್ರತಿಲೋಮಕ್ರಮದಿಂದ ಕ್ಷತ್ರಿಯ, ವೈಶ್ಯ, ಶೂದ್ರರಿಂದ ಹುಟ್ಟಿದವರು. ಸೂತ, ವೈದೇಹಕ, ಚಂಡಾಲ ಎಂಬ ಜಾತಿಗಳನ್ನು ಕ್ರಮವಾಗಿ ಹೊಂದುತ್ತಾರೆ. ಕ್ಷತ್ರಿಯ ಸ್ತ್ರೀಯಲ್ಲಿ, ವೈಶ್ಯ. ಶೂದ್ರರಿಂದ ಹುಟ್ಟಿದವರು, ಕ್ರಮವಾಗಿ ಮಾಗಧ, ಪುಲ್ಕಸ ಜಾತಿಯುವರೆಂದೂ, ವೈಶ್ಯ

ಮಾಗಧಃ ಪುಕ್ಕಸಶ್ಚೈವ ವಿಟ್‌ಶೂದ್ರೈಃ ಕ್ಷತ್ರಿಯಾಸುತೌ ।
ಆಯೋಗವಶ್ಚ ವೈಶ್ಯಾಯಾಂ ಶೂದ್ರಪುತ್ರಃ ಪ್ರಕೀರ್ತಿತಃ ॥ ೮ ॥

ಅನ್ಯೇ ವಕ್ತುಂ ನ ಶಕ್ಯಂತೇ ಸಂಕರಾತ್ಸಂಕರೋದ್ಭವಾಃ ।
ವಿವಾಹಃ ಸದೃಶ್ಯೈಷಾಂ ನೋತ್ತಮೈರ್ನಾಧಮೈಃ ಸಹ ॥ ೯ ॥

ಸೂತಾನಾಮಶ್ವಸಾರಥ್ಯಂ ಮಾಗಧಾನಾಂ ಸ್ತುತಿಕ್ರಿಯಾ ।
ವೈದೇಹಸ್ಯಾತ್ತಂತ್ರಿಜೀವಃ ಪುಕ್ಕಸಾನಾಂ ಚ ವ್ಯಾಧತಾ ॥ ೧೦ ॥

ಆಯೋಗವಸ್ಯ ಶಿಲ್ಪಾನಿ ರಂಗಾವತರಣಂ ತಥಾ ।
ಚಂಡಾಲಾನಾಮಸಂಸ್ಪರ್ಶಸ್ತಥಾ ವೈಧವ್ಯಗಾಮಿತಾ ॥ ೧೧ ॥

ಗೋಬ್ರಾಹ್ಮಣಾರ್ಥೇ ಸಮರೇ ಹತಾನಾಂ
ಸ್ತ್ರೀಬಾಲಹೇತೋರ್ಯದಿ ವಾಪ್ಯಶೇಷಂ ।

---

ಸ್ತ್ರೀಯಲ್ಲಿ ಶೂದ್ರನಿಂದ ಹುಟ್ಟಿದವನು ಆಯೋಗಜಾತಿಯವನೆಂದೂ ಹೇಳಲಾಗಿದೆ. ಇಂತಹ ಸಂಕರ ಜಾತಿಗಳಿಂದ ಉಂಟಾಗುವ ಸಂಕರ ಭೇದಗಳು ಅಸಂಖ್ಯೆಗಳಾದ್ದರಿಂದ ಹೇಳಲು ಸಾಧ್ಯವಿಲ್ಲ. ಇದರಲ್ಲಿ ಸಮಾನ ವರ್ಣದವರಿಗೆ ವಿವಾಹವು ಉತ್ತಮ. ಅಧಮಜಾತಿಯವರಿಗೆ ಉತ್ತಮಜಾತಿಯವರೊಡನೆ ವಿವಾಹವು ಉತ್ತಮವಲ್ಲ.

೧೦-೧೨. ಸೂತರಿಗೆ ಕುದುರೆಯನ್ನು ಪ್ರೇರಿಸುವಂತಹ ಸಾರಥಿಕಾರ್ಯವೂ, ಮಾಗಧರಿಗೆ ಸ್ತೋತ್ರಕಾರ್ಯವೂ, ವೈದೇಹನಿಗೆ ತಂತ್ರೀವಾದ್ಯದಿಂದ ಜೀವನವೂ, ಪುಕ್ಕಸರಿಗೆ ವ್ಯಾಧವೃತ್ತಿಯೂ, ಆಯೋಗವನಿಗೆ ಶಿಲ್ಪಕಾರ್ಯವೂ ಮತ್ತು ರಂಗಭೂಮಿಯ ನಟವ್ಯಾಪಾರವೂ ವಿಹಿತವಾಗಿವೆ. ಚಂಡಾಲಜಾತಿಯವನಿಗೆ ಇತರರ ಸ್ಪರ್ಶವಿಲ್ಲ. ಮತ್ತು ವಿಧವಾಗಮನವೂ ಉಂಟು. ಈ ವಿಧವಾದ ಬೇರೆ ಬೇರೆ ಕರ್ಮಗಳಿಂದ ಜೀವಿಸುವ ಪ್ರತಿ ಲೋಮಜಾತಿಯವರಿಗೂ ಸಹ ಗೋಬ್ರಾಹ್ಮಣ

ಸ್ವಾಮ್ಯರ್ಥಕಾರ್ಯೇಂ ಯದಿವಾ ಪ್ರಕುರ್ವತಾಂ
ಸಿದ್ಧಿಃ ಪ್ರದಿಷ್ಟಾ ನ ಹಿ ಸಂಶಯೋತ್ರ ॥ ೧೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಹಂಸಗೀತಾಯಾಂ ವರ್ಣಧರ್ಮವರ್ಣನೋ ನಾಮ ಸಪ್ತವಿಂಶತ್ಯುತ್ತರಶತತಮೋಽಧ್ಯಾಯಃ

---

ಹಿತಕ್ಕಾಗಿ ನಡೆದ ಯುದ್ಧಗಲ್ಲಿ ಅಥವಾ ಸ್ತ್ರೀಯರ ಮತ್ತು ಬಾಲರ ರಕ್ಷಣೆಗಾಗಿ ನಡೆದ ಯುದ್ಧದಲ್ಲಿ, ಅಥವಾ ಸ್ವಾಮಿಯ ಕಾರ್ಯಕ್ಕಾಗಿ ಉಂಟಾದ ಸಂಘರ್ಷದಲ್ಲಿ ಮೃತರಾದಲ್ಲಿ ಒಳ್ಳೆಯ ಗತಿಯೇ ಉಂಟಾಗುತ್ತದೆ. ಇದರಲ್ಲಿ ಸಂಶಯವಿಲ್ಲ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಹಂಸಗೀತೆಯಲ್ಲಿ ವರ್ಣಧರ್ಮವರ್ಣನವೆಂಬ ಇನ್ನೂರ ಇಪ್ಪತ್ತೇಳನೆಯ ಅಧ್ಯಾಯ ಮುಗಿದಿದೆ.

॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ಅಷ್ಟಾವಿಂಶತ್ಯುತ್ತರದ್ವಿಶತತಮೋಽಧ್ಯಾಯಃ ॥

॥ ಹಂಸ ಉವಾಚ ॥

ಉಪನೀಯ ಗುರುಃ ಶಿಷ್ಯಂ ಶಿಕ್ಷಯೇಚ್ಛೌಚಮಾದಿತಃ ।
ಆಚಾರಮಗ್ನಿಕಾರ್ಯಂ ಚ ಸಂಧ್ಯೋಪಾಸನಮೇವ ಚ ॥ ೧ ॥

ಪ್ರಯತಃ ಕಲ್ಯಮುತ್ಥಾಯ ಸ್ನಾತೋ ಹುತಹುತಾಶನಃ ।
ಅಭಿಗಮ್ಯ ಗುರೋಃ ಕುರ್ಯಾತ್ಪ್ರಯತಸ್ತ್ವಭಿವಾದನಂ ॥ ೨ ॥

ಅನುಜ್ಞಾತಸ್ತು ಗುರುಣಾ ತತೋಽಧ್ಯಯನಮಾಚರೇತ್ ।
ಭೈಕ್ಷಚರ್ಯಾಂ ತತಃ ಕುರ್ಯಾದ್ಬ್ರಾಹ್ಮಣೇಷು ಯಥಾವಿಧಿ ॥ ೩ ॥

---

### ಇನ್ನೂರ ಇಪ್ಪತ್ತೆಂಟನೆಯ ಅಧ್ಯಾಯ.

೧-೭. ಗುರುವಾದವನು (ತಂದೆ) ಶಿಷ್ಯನಿಗೆ ಉಪನಯನಮಾಡಿ ಶೌಚ, ಆಚಾರ, ಅಗ್ನಿಕಾರ್ಯಸಂಧ್ಯೋಪಾಸನ ಇವನ್ನು ಅವನಿಗೆ ಕಲಿಸಬೇಕು. ಹೀಗೆ ಶಿಕ್ಷೆಹೊಂದಿದ ಶಿಷ್ಯನು ತನ್ನ ಬ್ರಹ್ಮಚರ್ಯಾಶ್ರಮಕ್ಕೆ ತಕ್ಕಂತೆ ಶುದ್ಧನಾಗಿದ್ದು ಪ್ರತ್ಯೂಷಕಾಲದಲ್ಲೇ ಎದ್ದು ಸ್ನಾನಮಾಡಿ ಅಗ್ನಿಕಾರ್ಯಗಳನ್ನೂ ಮಾಡಿ ಗುರುವಿನ ಸಮೀಪಕ್ಕೆ ಬಂದು ಅವನನ್ನು ವಂದಿಸಬೇಕು. ಅವನ ಅಪ್ಪಣೆ ಪಡೆದು ಅಧ್ಯಯನ ವನ್ನು ಪ್ರಾರಂಭಿಸಬೇಕು. ಅಧ್ಯಯನ ಮುಗಿದ ಮೇಲೆ ಗುರುವಿನ ಮನೆಯನ್ನು ಬಿಟ್ಟು ಇತರ ಬ್ರಾಹ್ಮಣಗೃಹದಲ್ಲಿ ಯಥಾವಿಧಿಯಾಗಿ ಭಿಕ್ಷೆಮಾಡಿ ಬಂದ ಅನ್ನವನ್ನು

ಗುರೋಃ ಕುಲೇ ನ ಭಿಕ್ಷೇತ ಭುಂಜೀತ ತದನುಜ್ಞಯಾ ।
ಹಿತಪ್ರಿಯೋ ಗುರೋಃ ಕಾರ್ಯೇ ಭಕ್ತ್ಯಾ ಹಂಕಾರವರ್ಜಿತಃ ॥ ೪ ॥

ಮಧುಮಾಂಸಾಂಜನಂ ಶ್ರಾದ್ಧಂ ನೃತ್ತಂ ಗೀತಂ ಚ ಸಾಹಸಂ ।
ಹಿಂಸಾಂ ಪರಾಪವಾದಂ ಚ ಮಂಡನಂ ಚ ವಿವರ್ಜಯೇತ್ ॥ ೫ ॥

ಮೇಖಲಾಮಜಿನಂ ದಂಡಂ ಧಾರಯೇತ್ಪ್ರಯತಃ ಸದಾ ।
ವಿನಷ್ಟಾನ್ಯಪ್ಸು ವಿಕ್ಷಿಪ್ಯ ತಥಾನ್ಯಾನಪಿ ಧಾರಯೇತ್ ॥ ೬ ॥

ಅಧಃಶಾಯೀ ಭವೇನ್ನಿತ್ಯಂ ಬ್ರಹ್ಮಚಾರೀ ಸಮಾಹಿತಃ ।
ಏವಂವ್ರತಸ್ತು ಕುರ್ವೀತ ವೇದಸ್ವೀಕರಣಂ ಬುಧಃ ॥ ೭ ॥

ಗುರವೇ ವಚನಂ ದತ್ವಾ ಸ್ನಾಯಾಚ್ಚ ತದನುಜ್ಞಯಾ ।
ಆಶರೀರವಿಮೋಕ್ಷಾದ್ವಾ ವಸೇದ್ಗುರುಕುಲೇ ದ್ವಿಜಃ ॥ ೮ ॥

ಏವಂ ವ್ರತಾಂತೇ ಗುರವೇ ಚ ದತ್ವಾ
ವರಂ ಯಥಾವತ್ಪರಿಪೂರ್ಣವಿದ್ಯಃ ।

---

ಗುರುವಿನ ಅಪ್ಪಣೆಪಡೆದು ಭುಂಜಿಸಬೇಕು. ಗುರುವಿಗೆ ಪ್ರಿಯವಾಗಿಯೂ ಮತ್ತು ಹಿತವಾಗಿಯೂ ಇರುವ ಕಾರ್ಯವನ್ನು ಅಹಂಕಾರದಿಂದ ಬಿಡಲ್ಪಟ್ಟವನಾಗಿ ಕೇವಲ ಭಕ್ತಿಯಿಂದ ಮಾಡಬೇಕು. ಮಧುಮಾಂಸಾದಿಭಕ್ಷಣ, ಅಭ್ಯಂಜನ, ಶ್ರಾದ್ಧಭೋಜನ ನೃತ್ತಗೀತಾದಿಗಳು, ಸಾಹಸಕಾರ್ಯ, ಹಿಂಸಾ, ಪರದೂಷಣೆ, ಅಲಂಕಾರ ಇವನ್ನು ಸಂಪೂರ್ಣವಾಗಿ ತ್ಯಜಿಸಬೇಕು. ಯಾವಾಗಲೂ ಮೌಂಜೀ, ಕೃಷ್ಣಾಜಿನ, ದಂಡ ಇವನ್ನು ಧರಿಸಿ ಶುದ್ಧನಾಗಿರಬೇಕು. ನೆಲದ ಮೇಲೆಯೇ ಮಲಗುತ್ತಾ ಮನಶ್ಶಾಂತಿಯಿಂದ ಬ್ರಹ್ಮಚರ್ಯಹೊಂದಿರಬೇಕು. ಈ ರೀತಿ ಇದ್ದು ಗುರುವಿನಿಂದ ವೇದವನ್ನು ಸ್ವೀಕರಿಸಬೇಕು.

೮-೯. ವೇದಗಳನ್ನು ರಕ್ಷಿಸಿಕೊಳ್ಳುವ ವಿಷಯದಲ್ಲಿ ಗುರುವಿಗೆ ಮಾತು ಕೊಟ್ಟು ಅವನ ಅಪ್ಪಣೆಯಂತೆ ವ್ರತಸ್ನಾನ ಹೊಂದಬೇಕು. (ಅನಂತರ ವಿವಾಹಕ್ಕೆ ಅರ್ಹನಾಗುತ್ತಾನೆ ಎಂದು ತಾತ್ಪರ್ಯ) ಅಥವಾ ಶರೀರತ್ಯಾಗ ಉಂಟಾಗುವವರಿಗೂ ಗುರುಕುಲದಲ್ಲಿಯೇ ಇದ್ದು ಬ್ರಹ್ಮಚರ್ಯವನ್ನು ಆಚರಿಸಬೇಕು (ಇವನು ನೈಷ್ಠಿಕ

ಗೃಹಾಶ್ರಮೀಸ್ಯಾದ್ವಿಧಿವದ್ದ್ವಿಜೇಂದ್ರೋ
ಯೋಶ್ರಾಸ್ಯ ಲೋಕೇ ದ್ವಿತೀಯಃ ಪ್ರದಿಷ್ಟಂ ॥ ೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಹಂಸಗೀತಾಯಾಂ ಬ್ರಹ್ಮಚಾರಿವ್ರತವರ್ಣನೋ
ನಾಮಾಷ್ಟಾವಿಂಶತ್ಯುತ್ತರದ್ವಿಶತತಮೋಽಧ್ಯಾಯಃ

---

ಬ್ರಹ್ಮಚಾರಿ ಎನಿಸುತ್ತಾನೆ) ವ್ರತಸ್ನಾನ ಹೊಂದಿದ ಮೊದಲನೆಯ ಬ್ರಹ್ಮಚಾರಿಯು ವ್ರತವು ಮುಗಿದ ಮೇಲೆ ಗುರುವಿಗೆ ಯಥಾಶಕ್ತಿ ದಕ್ಷಿಣೆಯನ್ನು ಕೊಟ್ಟು ಶಕ್ತಿಗೆ ತಕ್ಕಂತೆ ವಿದ್ಯಾಪೂರ್ತಿಹೊಂದಿ ಗೃಹಸ್ಥಾಶ್ರಮವನ್ನು ಹೊಂದಬೇಕು. ಇದೇ ಇಹ ಲೋಕದ ಜೀವನದಲ್ಲಿ ಎರಡನೆಯದು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಹಂಸಗೀತೆಯಲ್ಲಿ ಬ್ರಹ್ಮಚಾರಿವ್ರತವರ್ಣನವೆಂಬ
ಇನ್ನೂರ ಇಪ್ಪತ್ತೆಂಟನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕೋನತ್ರಿಂಶದುತ್ತರದ್ವಿಶತತಮೋಽಧ್ಯಾಯಃ ||

|| ಹಂಸ ಉವಾಚ ||

ತತೋ ಗೃಹಾಶ್ರಮೇ ತಿಷ್ಠನ್ನಗ್ನೀನಾಧಾಯ ಧರ್ಮವಿತ್ |
ಕೃತ್ವಾ ವಿವಾಹಂ ವಿಧಿವದ್ಧರ್ಮೇಣ ಚ ಧನಾಗಮಂ || ೧ ||

ತ್ರಿವರ್ಗಂ ತತ್ರ ಸೇವೇತ ಯಜ್ಞೈಶ್ಚ ವಿವಿಧೈರ್ಯಜೇತ್ |
ಆಚಾರಪಾಲನಂ ಕುರ್ಯಾದ್ವೇದಾಧ್ಯಯನಮೇವ ಚ || ೨ ||

ಉತ್ಸರ್ಗಂ ಛಂದಸಾಂ ಕುರ್ಯಾಚ್ಛುಕ್ಲಾಂತೇ ಶ್ರಾವಣಸ್ಯ ಚ |
ಪೌಷಮಾಸಸ್ಯ ರೋಹಿಣ್ಯಾಮುಪಾಕರ್ಮ ವಿಧೀಯತೇ || ೩ ||

---

### ಇನ್ನೂರ ಇಪ್ಪತ್ತೊಂಭತ್ತನೆಯ ಅಧ್ಯಾಯ.

೧-೫. ಹಂಸವು ಹೇಳುತ್ತದೆ:—ಅನಂತರ ಗೃಹಸ್ಥಾಶ್ರಮವನ್ನು ಹೊಂದಿ ಅಗ್ನ್ಯಾಧಾನಮಾಡಿ ಯಥಾವಿಧಿಯಾಗಿ ವಿವಾಹಮಾಡಿಕೊಂಡು ಧರ್ಮಮಾರ್ಗದಿಂದ ಧನವನ್ನು ಸಂಪಾದಿಸಿ ವಿವಿಧವಾದ ಯಜ್ಞಗಳನ್ನು ಮಾಡಬೇಕು. ಶ್ರಾವಣಶುಕ್ಲ ಪಕ್ಷದ ಕೋನೆಯದಿನದಲ್ಲಿ ವೇದಗಳ ವಿಸರ್ಜನೆಯನ್ನೂ ಪುಷ್ಯಮಾಸದ ರೋಹಿಣೀ ನಕ್ಷತ್ರದಲ್ಲಿ ಉಪಾಕರ್ಮವನ್ನೂ ಮಾಡಬೇಕು. ಉತ್ಸರ್ಗಮಾಡಿದ ನಂತರ ವೇದ ವನ್ನು ಅಧ್ಯಯನಮಾಡಬಾರದು. ಆ ಕಾಲದಲ್ಲಿ ದ್ವಿಜರು ಶಾಸ್ತ್ರಾಧ್ಯಯನ ಮಾಡ ತಕ್ಕದ್ದು. ಗೃಹಸ್ಥ ಧರ್ಮದಲ್ಲಿರುವವರು ಸರ್ವಕಾಲದಲ್ಲಿಯೂ ಅತಿಥಿಗಳ ಪೂಜೆ

ಉತ್ಸರ್ಗಾನಂತರಂ ವೇದಂ ನಾಧೀಯೀತ ಕದಾಚನ ।
ತತ್ರಾಪಿ ಶಾಸ್ತ್ರಾಧ್ಯಯನಂ ದ್ವಿಜಾತೀನಾಂ ವಿಧೀಯತೇ ॥ ೪ ॥

ಯತ್ನಃ ಕಾರ್ಯಃ ಪೂಜನೇ ಚಾತಿಥೀನಾಂ
ಚೈತತ್ಕಾರ್ಯಂ ಸರ್ವಕಾಲಂ ಗೃಹಸ್ಥೈಃ ।
ನಾನ್ಯೋ ಧರ್ಮೋ ವಿದ್ಯತೇ ತಸ್ಯ ವಿಪ್ರಾ-
ಶ್ಚೈತದ್ಧರ್ಮಂ ತಸ್ಯ ಶ್ರೇಷ್ಠಂ ಪ್ರದಿಷ್ಟಂ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಹಂಸಗೀತಾಯಾಂ ಗೃಹಸ್ಥಧರ್ಮವರ್ಣನೋ
ನಾಮ ಏಕೋನತ್ರಿಂಶದುತ್ತರದ್ವಿಶತತಮೋಽಧ್ಯಾಯಃ

---

ಮಾಡುತ್ತಾ ಆ ಪ್ರಯತ್ನದಲ್ಲಿಯೇ ಇರಬೇಕು. ಆ ಗೃಹಸ್ಥರಿಗೆ ಇದಕ್ಕಿಂತ ಬೇರೆ ಯಾದ ಮುಖ್ಯಧರ್ಮವಿಲ್ಲ. ಇದೇ ಅವರಿಗೆ ವಿಹಿತವಾಗಿರುವ ಶ್ರೇಷ್ಠವಾದ ಧರ್ಮ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಹಂಸಗೀತೆಯ ಗೃಹಸ್ಥಧರ್ಮವರ್ಣನವೆಂಬ
ಇನ್ನೂರ ಇಪ್ಪತ್ತೊಂಭತ್ತನೆಯ ಅಧ್ಯಾಯ ಮುಗಿದುದು.



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

### ॥ ತ್ರಿಂಶದುತ್ತರದ್ವಿಶತತಮೋಽಧ್ಯಾಯಃ ॥

**॥ ಹಂಸ ಉವಾಚ ॥**

**ಕೀನಾಶಬದ್ಧಚೋರಾಣಾಂ ಕ್ಲೀಬರಂಗಾವತಾರಿಣಾಂ ।**
**ಪತಿತವ್ರಾತ್ಯದುಷ್ಟಾನಾಂ ತಥಾ ಬಂಧನರಕ್ಷಿಣಾಂ ॥ ೧ ॥**

**ಉದಕ್ಯಾವಿಧವಾಪಾಪ ಪಾಷಂಡವಧಜೀವಿನಾಂ ।**
**ಚಿಕಿತ್ಸಾಜೀವಕವ್ಯಾಧಪುಂಶ್ಚಲೀ ನೃಪವಿದ್ವಿಷಾಂ ॥ ೨ ॥**

**ಚರ್ಮಕಾರಾಯುಧಾಜೀವಿ ಶಸ್ತ್ರವಿಕ್ರಯಕಾರಿಣಾಂ ।**
**ಚೈಲಧಾವನೃಶಂಸಾರ್ತ ಸ್ತ್ರೀಜಿತ ಗ್ರಾಮಯಾಜಿನಾಂ ॥ ೩ ॥**

**ತುನ್ನವಾಯಕದಂಬಸ್ಯ ಕೂಟಕೃಚ್ಛೂದ್ರಯಾಜಿನಾಂ ।**
**ವಿಷಾಮನ್ನಂ ನ ಭೋಕ್ತವ್ಯಂ ಯಚ್ಚ ದದ್ಯಾದನರ್ಚಿತಂ ॥ ೪ ॥**

---

**ಇನ್ನೂರ ಮೂವತ್ತನೆಯ ಅಧ್ಯಾಯ.**

೧-೪. ಹಂಸವು ಹೇಳುತ್ತದೆ :— ಹಿಂಸಕ, ಕಾರಾಗೃಹಬದ್ಧ, ಚೋರ, ನಪುಂಸಕ, ನಟವೃತ್ತಿ, ಪತಿತ, ದುಷ್ಕರ್ಮಿ, ದುಷ್ಟ, ಮತ್ತು ಕಾರಾಗೃಹರಕ್ಷಕ, ಋತುಮತೀಗಾಮಿ, ವಿಧವಾಗಾಮಿ, ಪಾಷಂಡಿ, ವಧಜೀವಿ, ವೈದ್ಯವೃತ್ತಿಯುಳ್ಳವನು. ಬೇಡ, ಜಾರಿಣೀ, ರಾಜದ್ವೇಷಿ, ಚರ್ಮಕಾರ, ಆಯುಧಜೀವಿ, ಶಸ್ತ್ರವಿಕ್ರಯಕಾರಿ, ಅಗಸ, ಕ್ರೂರಿ, ದುಃಖಿ, ಸ್ತ್ರೀಜಿತ, ಗ್ರಾಮಯಾಜಿ, ಹೊಲಿಯುವವರು, ವಂಚಕ, ಶೂದ್ರಯಾಜಿ, ಇವರ ಅನ್ನವನ್ನೂ ಸತ್ಕಾರಪೂರ್ವಕವಾಗಿ ಲಭಿಸದಿರುವ ಅನ್ನವನ್ನೂ ಭುಂಜಿಸಬಾರದು.

ಪರ್ಯಾಯಾನ್ನ ಕ್ಷುತಂ ಚೈವ ಸಂಘುಷ್ಟಂ ಪತಿತೇಕ್ಷಿತಂ |
ಶುಲ್ಕಂ ಪರ್ಯುಷಿತೋಚ್ಛಿಷ್ಟಂ ತಥಾಚೋಚ್ಛಿಷ್ಟಜೀವಿನಃ || ೫ ||

ಉದಕ್ಯಯಾ ತಥಾಸ್ಪೃಷ್ಟಂ ಯಚ್ಚಾಘ್ರಾತಂ ಗವಾ ಶುನಾ |
ಕೇಶಕೀಟಾವಪನ್ನಂ ಚ ಪಕ್ಷಿಜಗ್ಧಂ ತಥೈವ ಚ || ೬ ||

ದಾಸಾರ್ಧಸೀರಿ ಗೋಪಾಲನಾಪಿತಾನ್ನಂ ತಥಾವಿನಾಂ |
ಶೂದ್ರಸ್ಯಾನ್ನಂ ತಥಾ ಶ್ರಾದ್ಧಮಾತ್ಮವಿಕ್ರಯಿಣಸ್ತಥಾ || ೭ ||

ಅನ್ನಂ ಪರ್ಯುಷಿತಂ ಭೋಜ್ಯಂ ಸ್ನೇಹಾಕ್ತಂ ರಾಗಷಾಡವತ್ |
ನಿಸ್ನೇಹಾ ಅಪಿ ಗೋಧೂಮಯವಪೌರಾಣನಿಂಬಕಾಃ || ೮ ||

ಅಜಾಗೋಮಹಿಷೀವರ್ಜಂ ಸರ್ವಾಣ್ಯಪಿ ಪಯಾಂಸಿ ಚ |
ಅನಿರ್ದಶಾಹಂ ತೇಷಾಂ ವೈ ವಿವತ್ಸಾಯಾಶ್ಚ ಗೋಸ್ತಥಾ || ೯ ||

---

೫-೧೦. ಸರದಿಯ ಮೇರೆ ಹಾಕುವ ಅನ್ನ, ಶೀನಿನಿಂದ ದೂಷಿತ. ಕೂಗಿ ಬಡಿಸುವ ಅನ್ನ, ಪತಿತದೃಷ್ಟವಾದ ಒಣಗಿಹೋದ ಅನ್ನ, ತಂಗಳನ್ನ, ಎಂಜಲಿನಿಂದ ಜೀವಿಸುವವನ ಅನ್ನ ಋತುಮತೀಸ್ಪರ್ಶಹೊಂದಿದ ಅನ್ನ, ಹಸು, ನಾಯಿ ಮುಂತಾದ ವುಗಳಿಂದ ಮೂಸಿನೋಡಲ್ಪಟ್ಟ ಅನ್ನ, ಕೂದಲು ಮತ್ತು ಕ್ರಿಮಿಗಳಿಂದ ದುಷ್ಟವಾದ ಅನ್ನ, ಪಕ್ಷಿಗಳಿಂದ ತಿಂದುಮಿಕ್ಕಿರುವ ಅನ್ನ, ದಾಸ, ಉಳುವವ, ಗೋಪಾಲ, ನಾಪಿತ, ಇವರ ಅನ್ನ, ಕುರಿಯಸೇವಕರ ಅನ್ನ, ಶೂದ್ರಾನ್ನ, ಆತ್ಮವಿಕ್ರಯಿಯಾದ ವನ ಶ್ರಾದ್ಧಾನ್ನ, ಈ ಅನ್ನಗಳನ್ನು ಭಕ್ಷಣಮಾಡಬಾರದು. ತಂಗಳನ್ನವನ್ನು ತುಪ್ಪ, ಎಣ್ಣೆ ಮೊದಲಾದ ಸ್ನೇಹವಸ್ತುಗಳಿಂದ ಕೂಡಿದ್ದಲ್ಲಿ ಭಕ್ಷ್ಯದಂತೆ ಭುಂಜಿಸಬಹುದು. ಗೋಧಿ, ಯವೆ, ಹಳೆಯದಾದ ನಿಂಬವೇ ಮೊದಲಾದುವುಗಳನ್ನು ಸ್ನೇಹಸಂಬಂಧ ವಿಲ್ಲದಿದ್ದರೂ ಭುಂಜಿಸಬಹುದು. ಆಡು, ಹಸು, ಎಮ್ಮೆ ಇವುಗಳ ಹಾಲು ಹೊರತು ಬೇರೆ ಹಾಲನ್ನು ಉಪಯೋಗಿಸಬಾರದು. ಇವುಗಳ ಹಾಲನ್ನೂ ಸಹ ಕರುಹಾಕಿ ಹತ್ತುದಿನ ತುಂಬುವುದಕ್ಕೆ ಮುಂಚಿತವಾಗಿ ಉಪಯೋಗಿಸಬಾರದು. ಕರುವಿಲ್ಲದ

ಕಪಿಂಜಲಸ್ತಿತ್ತಿರಿಶ್ಚ ಮಯೂರೋ ಲಾವಕಸ್ತಥಾ ।
ಏತೇ ಹಿ ಪಕ್ಷಿಣೋ ಭಕ್ಷ್ಯಾಃ ನ ತು ಶೇಷಾಃ ಕಥಂಚನ　　॥ ೧೦ ॥

ಶಶಕಃ ಶಲ್ಯಕೋ ಗೋಧಾ ಖಡ್ಗಃ ಕೂರ್ಮಸ್ತಥೈವ ಚ ।
ಭಕ್ಷ್ಯಾಃ ಪಂಚನಖೇಷ್ವಾಹುರಭಕ್ಷ್ಯಾಶ್ಚೋಭಯಾದತಃ　　॥ ೧೧ ॥

ಸರ್ವೇಚೈಕಶಫಾ ವರ್ಜ್ಯಾಸ್ತಥಾಜ್ಞಾತಾ ಮೃಗದ್ವಿಜಾಃ ।
ಲಶುನಂ ಗೃಂಜನಂ ಚೈವ ಪಲಾಂಡುಕವಕಾನಿ ಚ　　॥ ೧೨ ॥

ಲೋಹಿತಾನ್ವೃಕ್ಷನಿರ್ಯಾಸಾನ್ ಶಿಗ್ರುಶ್ಲೇಷ್ಮಾತಕಂ ತಥಾ ।
ಅಭಕ್ಷ್ಯಾಣಿ ದ್ವಿಜಾತೀನಾಂ ಖುರ್ಖಂಡಾನಿ ತಥೈವಚ　　॥ ೧೩ ॥

ವೃಥಾ ಕೃಸರಸಂಯಾವಪಾಯಸಾಪೂಪಶಷ್ಕುಲೀಃ ।
ಅನುಪಾಕೃತಮಾಂಸಾನಿ ದೇವಾನ್ನಾನಿ ಹವೀಂಷಿ ಚ　　॥ ೧೪ ॥

ಮಾಂಸಾಶನಂ ನೈವ ಬುಧಸ್ತು ಕುರ್ಯಾ
ದ್ವೃಥಾ ದ್ವಿಜೇಂದ್ರಾ ನರಕಸ್ಯ ಹೇತುಂ ।

---

ಹಸುವಿನ ಹಾಲನ್ನೂ ಉಪಯೋಗಿಸಬಾರದು. ಕಪಿಂಜಲ, ತಿತ್ತಿರಿ, ನವಿಲು, ಲಾವಕ ಇವು ಮಾತ್ರ ಭಕ್ಷ್ಯಗಳಾಗುತ್ತವೆ. ಉಳಿದ ಪಕ್ಷಿಗಳನ್ನು ಆಹಾರಕ್ಕಾಗಿ ಉಪಯೋಗಿಸಬಾರದು.

೧೧-೧೫. ಐದು ಉಗುರುಗಳುಳ್ಳ ಪ್ರಾಣಿಗಳಲ್ಲಿ ಮೊಲ, ಮುಳ್ಳುಹಂದಿ, ಉಡು, ಖಡ್ಗ, ಆಮೆ, ಈ ಐದು ಪ್ರಾಣಿಗಳೇ ಭಕ್ಷ್ಯಗಳು. ಇವುಗಳಿಂದ ಬೇರೆಯಾದ ಐದು ಉಗುರುಗಳಿರುವ ಮತ್ತು ಇಲ್ಲದ ಪ್ರಾಣಿಗಳು ವರ್ಜ್ಯವಾಗುತ್ತವೆ. ಒಂದೇ ಗೊರಸುಳ್ಳ ಎಲ್ಲಾ ಪ್ರಾಣಿಗಳೂ ಮತ್ತು ತಿಳಿಯದಿರುವ ಪಕ್ಷಿಮೃಗಗಳೂ ವರ್ಜ್ಯಗಳು. ಬೆಳ್ಳುಳ್ಳಿ, ಬಂಗಿಸೊಪ್ಪು, ಈರುಳ್ಳಿ, ಅಣಬೆ, ಕೆಂಪಾದ ಮರಗಳ ಹಾಲು, ನುಗ್ಗೆ, ಚೊಳ್ಳೆಹಣ್ಣು, ಇವನ್ನೂ ಅಶುಚಿಯಾದ ವಸ್ತುಗಳನ್ನೂ ಸೇರಿಸಬಾರದು. ಉತ್ಸವಾದಿ ಯಾವ ಕಾರಣವೂ ಇಲ್ಲದೆ ಚಿಗಳಿ, ಒಬ್ಬಟ್ಟು, ಪಾಯಸ, ಅಪೂಪ, ಚಕ್ಕುಲಿ ಮುಂತಾದುವನ್ನು ವ್ಯರ್ಥವಾಗಿ ಮಾಡಿ ಭುಂಜಿಸಬಾರದು. ಅಭಿಮಂತ್ರಿಸಿ, ದೇವತೆಗಳಿಗೆ ಅರ್ಪಿಸಲ್ಪಡದ ಮಾಂಸವನ್ನೂ, ದೇವಾನ್ನವನ್ನೂ,

ಮಾಸಂ ಹಿ ಯೋ ನಾತ್ತಿ ಸ ಯಾತಿ ನಾಕಂ
ಲೋಕೇ ತಥಾಸ್ಮಿನ್ ಸುಖಸಂಗತಿಃ ಸ್ಯಾತ್ ॥ ೧೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಹಂಸಗೀತಾಯಾಂ ಭಕ್ಷ್ಯಾಭಕ್ಷ್ಯವರ್ಣನೋ
ನಾಮ ತ್ರಿಶಂದುತ್ತರದ್ವಿಶತತಮೋಽಧ್ಯಾಯಃ

---

ಹವಿಸ್ಸನ್ನೂ ಭಕ್ಷಿಸಕೂಡದು. ಪಂಡಿತನಾದವನು ಮಾಂಸವನ್ನು ಭಕ್ಷಿಸಲೇಬಾರದು. ಅದರ ಭಕ್ಷಣವು ಪ್ರಾಣಿಹಿಂಸಾಮೂಲವಾದ ನರಕಕ್ಕೆ ಕಾರಣವಾಗುತ್ತದೆ. ಆದ್ದರಿಂದ ಯಾವನು ಮಾಂಸವನ್ನು ಭಕ್ಷಿಸದೇ ಇರುತ್ತಾನೆಯೋ ಅವನು ಇಹಲೋಕದಲ್ಲಿಯೂ ಸುಖದಿಂದಿರುತ್ತಾನೆ. ಸ್ವರ್ಗವನ್ನೂ ಹೊಂದುತ್ತಾನೆ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಹಂಸಗೀತೆಯ ಭಕ್ಷ್ಯಾಭಕ್ಷ್ಯವರ್ಣನವೆಂಬ
ಇನ್ನೂರ ಮೂವತ್ತನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಏಕತ್ರಿಂಶದುತ್ತರದ್ವಿಶತತಮೋಽಧ್ಯಾಯಃ ||

|| ಹಂಸ ಉವಾಚ ||

ಪಾಷಾಣರುಕ್ಮರಜತಸನ್ನತೋ[1]ಯಾಜವರ್ಮಣಾಂ ।
ಪತ್ರಮೂಲಫಲಾನಾಂ ಚ ತೃಣಾನಾಂ ಚ ತಥಾ ದ್ವಿಜಾಃ ॥ ೧ ॥

ವೈದಲಾನಾಂ ಚ ರಜ್ಜೂನಾಂ ವಾರಿಣಾ ಶುದ್ಧಿರಿಷ್ಯತೇ ।
ಉಷ್ಣೇನ ಪಾತ್ರಚಮಸಸ್ರುಕ್ಸ್ರುವಾಣಾಂ ವಿಧೀಯತೇ ॥ ೨ ॥

ಭೂಶುದ್ಧಿರ್ಮಾರ್ಜನಾದ್ದಾಹಾತ್ಕಾಲಾಜ್ಗೋ[2]ಕ್ರಮಣಾತ್ತಥಾ ।
ಅಮ್ಲೋದಕೇನ ತಾಮ್ರಸ್ಯ ತಥಾ ಕಾಂಸಸ್ಯ ಭಸ್ಮನಾ ॥ ೩ ॥

---

### ಇನ್ನೂರ ಮೂವತ್ತೊಂದನೆಯ ಅಧ್ಯಾಯ.

೧-೫. ಕಲ್ಲು, ಚಿನ್ನ, ಬೆಳ್ಳಿ, ಪತ್ರ, ಗೆಡ್ಡೆಗೆಣಸು, ಫಲ, ಹುಲ್ಲು, ಬಿದಿರಿನ ಪಾತ್ರೆ, ಹಗ್ಗಗಳು ಇವಕ್ಕೆಲ್ಲಾ ಕೇವಲ ಜಲದಿಂದಲೇ ಶುದ್ಧಿಯುಂಟಾಗುತ್ತದೆ, ಯಜ್ಞಪಾತ್ರೆಗಳು, ಚಮಸ, ಸ್ರುಕ್ಸ್ರುವಗಳಿಗೆ ಉಷ್ಣೋದಕದಿಂದಲೇ ಶುದ್ಧಿ, ಸಾರಿಸುವುದರಿಂದಲೂ, ಬೆಂಕಿಯಿಂದ ಸುಡುವುದರಿಂದಲೂ, ನೇಗಿಲಿನಿಂದ ಉಳುವುದರಿಂದಲೂ ಭೂಮಿಯು ಶುದ್ಧಿಹೊಂದುತ್ತದೆ. ತಾಮ್ರಪಾತ್ರೆಗೆ ಹುಳಿಯ ನೀರಿನಿಂದಲೂ, ಕಂಚಿಗೆ ಭಸ್ಮದಿಂದಲೂ, ಶುದ್ಧಿ. ಇತರ ಲೋಹಗಳಿಗೆ ಚನ್ನಾಗಿ

---

1 ಇದು ಅಶುದ್ಧ ಪಾಠ. 2 ಇಲ್ಲಿ ಲಾಂಗಲಕ್ರಮಣಾತ್ತಥಾ ಎಂದು ಪಾಠವಿರಬೇಕು.

**ನಿರ್ಮಲೀಕರಣಾಚ್ಛುದ್ಧಿಃ ಸರ್ವಲೋಹಸ್ಯ ಚೇಷ್ಯತೇ ।**
**ಸ್ಫ್ಯಶೂರ್ಪಾಜಿನಧಾನ್ಯಾನಾಂ ಮುಸಲೋಲೂಖಲಾಶ್ಮನಾಂ ॥ ೪ ॥**

**ಪ್ರೋಕ್ಷಣಂ ಸಂಹತಾನಾಂ ಚ ಬಹೂನಾಂ ಧಾನ್ಯವಾಸಸಾಂ ।**
**ಗೋಮೂತ್ರೇಣ ಚ ಶೃಂಗಾಸ್ಥ್ನಾಂ ತಕ್ಷಣಾದ್ದಾರವಸ್ಯ ಚ ॥ ೫ ॥**

**ದ್ರವಾಣಾಮಪಿ ದ್ರವ್ಯಾಣಾಂ ಶುದ್ಧಿರುತ್ಪ್ಲವನಾತ್ ಸ್ಮೃತಾ ।**
**ಸೋಷ್ಣೈರುದಕಗೋಮೂತ್ರೈಃ ಶುಧ್ಯಂತ್ಯಾವಿಕಕೌಶಿಕಾಃ ॥ ೬ ॥**

**ಸಶ್ರೀಫಲೈರಂಶುಪಟ್ಟಂ ಮಾಂಜಿಷ್ಠೈಃ ಕುತಪಂ ತಥಾ ।**
**ಸಗೌರಸರ್ಷಪೈಃ ಕ್ಷೌಮಾಃ ಪುನಃಪಾಕೈಃ ಮಹೀಮಯಂ ॥ ೭ ॥**

**ಮಲೈರ್ಮದ್ಯೈಃ ಸುರಾಭಿಶ್ಚ ಸ್ಪೃಷ್ಟಂ ಪಾಕಾನ್ನಶುದ್ಧ್ಯತಿ ।**
**ವಸಾಶುಕ್ರಮಸೃಙ್ಮಜ್ಜಾ ಮೂತ್ರವಿಟ್ ಕರ್ಣವಿಣ್ಣಖಾಃ ॥ ೮ ॥**

---

ಬೆಳಗಿದಲ್ಲಿ ಆ ನೀರಿನಿಂದಲೇ ಶುದ್ಧಿ. ಕುಕ್ಕೆ, ಮೊರ, ಅಜಿನ, ಧಾನ್ಯ, ಒನಕೆ, ಒರಳು, ಅರೆಯುವ ಕಲ್ಲು, ಇವುಗಳಿಗೂ ಒಟ್ಟಾಗಿರುವ ಧಾನ್ಯರಾಶಿ ವಸ್ತ್ರಗಳು ಇವಕ್ಕೂ ಪ್ರೋಕ್ಷಣದಿಂದಲೇ ಶುದ್ಧಿಯುಂಟಾಗುತ್ತದೆ. ಕೊಂಬು, ಮೂಳೆ ಇವುಗಳಿಗೆ ಗೋಮೂತ್ರದಿಂದಲೂ ಮರದ ಪಾತ್ರೆಗೆ ಪುನಃ ಕೆತ್ತುವುದರಿಂದಲೂ, ಶುದ್ಧಿಯುಂಟಾಗುತ್ತದೆ.

೬-೧೦. ದ್ರವದ್ರವ್ಯಗಳಿಗೆ ಮೇಲುಭಾಗದಲ್ಲಿ ಕಲಕುವುದರಿಂದಲೂ, ಕುರಿಯ ನೂಲಿನ ಮತ್ತು ದರ್ಭೆಗಳಿಂದ ಮಾಡಿದ ವಸ್ತುಗಳಿಗೆ ಅಥವಾ ರೇಷ್ಮೆಯ ವಸ್ತುಗಳಿಗೆ ಉಷ್ಣವಾಗಿರುವ ನೀರು ಮತ್ತು ಗೋಮೂತ್ರಗಳಿಂದಲೂ ಶುದ್ಧಿಯುಂಟಾಗುತ್ತದೆ. ಜರತಾರಿಯ ಪಟ್ಟೆವಸ್ತ್ರಗಳು ಬಿಲ್ವಪತ್ರೆಯ ಕಾಯಿನಿಂದೊಡಗೂಡಿದ ಜಲದಿಂದಲೂ, ಸಣ್ಣ ಬುದ್ದಲಿಯು ಮಂಜಿಷ್ಠೋದಕದಿಂದಲೂ ಶುದ್ಧವಾಗುತ್ತವೆ. ಪಟ್ಟೆವಸ್ತ್ರಗಳು, ಬಿಳಿಯ ಸಾಸವೆಯೊಡಗೂಡಿದ ಜಲದಿಂದಲೂ, ಮಣ್ಣಿನ ಪಾತ್ರೆಗಳು ಪುನಃ ಪಾಕದಿಂದಲೂ ಶುದ್ಧಿಹೊಂದುತ್ತವೆ. ಆದರೆ ಮಲಗಳಿಂದಲೂ, ಮದ್ಯಗಳಿಂದಲೂ ಸುರಾ ಎಂಬ ಮದ್ಯವಿಶೇಷದಿಂದಲೂ ಸ್ಪರ್ಶಹೊಂದಿರುವ ಮಣ್ಣಿನ ಪಾತ್ರೆಯು ಪಾಕದಿಂದ ಶುದ್ಧವಾಗುವುದಿಲ್ಲ. ವಸೆ, ಶುಕ್ರ, ರಕ್ತ, ಮಜ್ಜಾ,

ಶ್ಲೇಷ್ಮಾಶ್ರುದೂಷಿಕಾಃ ಸ್ವೇದೋ ದ್ವಾದಶ್ಯೈತೇ ನೃಣಾಂ ಮಲಾಃ ।
ಖಾರ್ಜೂರಮೈಕ್ಷವಂ ಟಾಂಕಂ ಮೃದ್ವೀಕಾರಸಮೇವ ಚ ॥ ೯ ॥

ಮದ್ಯಾನ್ಯೇತಾನಿ ಜಾನೀಯಾಚ್ಛುಕ್ತಮಾಸವಮೇವ ಚ ।
ಗೌಡೀ ಪೈಷ್ಟೀ ಚ ಮಾಧ್ವೀ ಚ ವಿಜ್ಞೇಯಾ ತ್ರಿವಿಧಾ ಸುರಾ ॥ ೧೦ ॥

ಅಮೇಧ್ಯಾಙ್ಗಸ್ಯ ಮೃತ್ತೋಯೈಃ ಶುದ್ಧಿರ್ಗಂಧಾಪಕರ್ಷಣಾತ್ ।
ಕೃತ್ವಾ ಮೂತ್ರಪುರೀಷಂ ಚ ಭುಕ್ತ್ವಾ ಸುಪ್ತ್ವೋತ್ಥಿತಸ್ತಥಾ ॥ ೧೧ ॥

ರಥ್ಯಾಮಾಕ್ರಮ್ಯ ಚಾಚಾಮೇದುಪವಿಷ್ಟ ಉದಙ್ಮುಖಃ ।
ಶಾವಂ ತದಙ್ಗಧೂಪಂ ಚ ಚಾಂಡಾಲಂ ಸೂತಿಕಾಂ ತಥಾ ॥ ೧೨ ॥

ಶವಸ್ಪೃಶಂ ತಥಾ ಸ್ಪೃಷ್ಟ್ವಾ ಕಟಧೂಮೇ ಸಮೈಥುನೇ ।
ಸ್ನಾನಮೇತೇಷು ಕರ್ತವ್ಯಮಶ್ರುಪಾತೇ ಚ ದುಃಖಜೇ ॥ ೧೩ ॥

ಸರ್ವೇಷಾಂ ವಾಯುನಾ ಶುದ್ಧಿರ್ಗೃಹಾಣಾಂ ಲೇಪನೇನ ಚ ।
ಆಕರಾಃ ಶುಚಯಃ ಸರ್ವೇ ಮುಖಜಾ ಯೋಷ್ಟ ವಿಪ್ರುಷಃ ॥ ೧೪ ॥

---

ಮೂತ್ರ, ಅಮೇಧ್ಯ, ಕಿವಿಯ ಗುಗ್ಗೆ, ಉಗುರು, ಶ್ಲೇಷ್ಮ, ಕಣ್ಣೀರು, ಕಣ್ಣಿನ ಕೊಳಕು, ಬೆವರು ಈ ಹನ್ನೆರಡು ಮನುಷ್ಯರ ಮಲವೆನಿಸಿಕೊಳ್ಳುತ್ತವೆ. ಖರ್ಜೂರ, (ಖರ್ಜೂರದಿಂದ ಮಾಡಿದ್ದು) ಐಕ್ಷವ, (ಕಬ್ಬಿನಿಂದ ಮಾಡಿದ್ದು) ಟಾಂಕ, (ಟಂಕ ಗಳಿಂದ ಮಾಡಿದ್ದು) ಮೃದ್ವೀಕಾರಸ, (ದ್ರಾಕ್ಷಾರಸ) ಇವು ನಾಲ್ಕು ಮದ್ಯಗಳೆನಿಸು ತ್ತವೆ. ಪಾಕದಿಂದ ಮಾಡಿದ ಆಸವವೂ ಮದ್ಯವಾಗುತ್ತದೆ. ಗೌಡೀ. ಪೈಷ್ಟೀ, ಮಾಧ್ವೀ ಎಂದು ಸುರೆಯು ಮೂರು ವಿಧ.

೧೧-೧೫. ಅಮೇಧ್ಯ ಸ್ಪರ್ಶಹೊಂದಿದ ಅಂಗಕ್ಕೆ ದುರ್ಗಂಧವನ್ನು ಹೋಗ ಲಾಡಿಸಿ ಮೃತ್ತಿಕಾಜಲದಿಂದ ಶುದ್ಧಿಯುಂಟಾಗುತ್ತದೆ. ಮಲಮೂತ್ರ ವಿಸರ್ಜನೆ ಮಾಡಿದ ನಂತರವೂ, ಭೋಜನಮಾಡಿದ ನಂತರವೂ ಮಲಗಿ ಎದ್ದ ಮೇಲೆಯೂ, ಬೀದಿಯಲ್ಲಿ ಸಂಚರಿಸಿ ಬಂದ ಮೇಲೆಯೂ ಸಹ ಉತ್ತರಾಭಿಮುಖವಾಗಿ ಕುಳಿತು ಆಚಮನ ಮಾಡಬೇಕು. ಶವಸಂಬಂಧಿ ವಸ್ತುಗಳನ್ನು ಸ್ಪರ್ಶಮಾಡಿಯೂ, ಆ ಧೂಪವನ್ನು ಸೇವಿಸಿಯೂ, ಚಂಡಾಲ, ಸೂತಿಕಾ ಮತ್ತು ಶವಸ್ಪರ್ಶಿಗಳ ಸಂಸ್ಪರ್ಶ

**ರಾಜಾ ನ ದುಷ್ಟೋ ನ ತಥಾ ಚ ವಾಯು**
**ರ್ದುಷ್ಟಾ ದ್ವಿಜೇಂದ್ರಾ ನ ಚ ಮಕ್ಷಿಕಾ ವೈ ।**
**ಅದುಷ್ಟಮುಕ್ತಂ ಚ ತಥಾಪ್ಯದೃಷ್ಟ-**
**ಸದೃಷ್ಟಮುಕ್ತಂ ಚ ತಥಾಂಶುಜಾಲಂ || ೧೫ ||**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಹಂಸಗೀತಯಾಂ ದ್ರವ್ಯಶುದ್ಧಿವರ್ಣನೋ ನಾಮ ಏಕತ್ರಿಂಶದುತ್ತರದ್ವಿಶತತಮೋऽಧ್ಯಾಯಃ**

---

ವಾದಲ್ಲಿಯೂ, ಮತ್ತು ಸ್ತ್ರೀಪುರುಷರ ಸಂಬಂಧವುಳ್ಳ ಚಾಪೆ ಮೊದಲಾದುವುಗಳ ಗಂಧಸೇವನೆಯಾದಲ್ಲಿಯೂ, ದುಃಖದಿಂದ ಕಣ್ಣೀರು ಬಿಟ್ಟಾಗಲೂ ಸಹ ಸ್ನಾನ ಮಾಡಿ ಶುದ್ಧಿಹೊಂದಬೇಕು. ಎಲ್ಲಾ ಪದಾರ್ಥಗಳಿಗೂ ವಾಯುವಿನಿಂದಲೂ ಮನೆಗಳಿಗೆ ಗೋಮಯ ಮತ್ತು ಸುಣ್ಣ ಇವುಗಳ ಲೇಪನದಿಂದಲೂ ಶುದ್ಧಿಯುಂಟಾಗುತ್ತದೆ. ಪದಾರ್ಥಗಳ ಸಂಗ್ರಹಗಳು ಯಾವಾಗಲೂ ಶುಚಿಯಾಗಿರುತ್ತವೆ. ಮುಖದಿಂದ ಉಂಟಾದ ಬಿಂದುಗಳೂ, ಶುಚಿಗಳು. ರಾಜನಿಗೂ ವಾಯುವಿಗೂ, ನೊಣಗಳಿಗೂ ಅಶುದ್ಧಿಯೇ ಇಲ್ಲ. ಇತರ ದೃಷ್ಟಾದೃಷ್ಟವಾದ ಎಲ್ಲಾ ವಸ್ತುಗಳಿಗೂ ಸೂರ್ಯಕಿರಣಸಂಪರ್ಕವೇ ಶುದ್ಧಿಗೆ ಕಾರಣವಾಗುತ್ತದೆಯಾದ್ದರಿಂದ ಆ ವಸ್ತುಗಳೂ ದುಷ್ಟಗಳಾಗುವುದಿಲ್ಲ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರದ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದದಲ್ಲಿ ಹಂಸಗೀತೆಯ ದ್ರವ್ಯಶುದ್ಧಿವರ್ಣನವೆಂಬ ಇನ್ನೂರ ಮೂವತ್ತೊಂದನೆಯ ಅಧ್ಯಾಯ ಮುಗಿದಿದೆ.



|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ದ್ವಾತ್ರಿಂಶದುತ್ತರದ್ವಿಶತತಮೋಽಧ್ಯಾಯಃ ||

|| ಹಂಸ ಉವಾಚ ||

**ದಶಾಹಂ ಶಾವಮಾಶೌಚಂ ಸಪಿಂಡೇಷು ವಿಧೀಯತೇ ।**
**ಬ್ರಾಹ್ಮಣಸ್ಯ ದ್ವಿಜಶ್ರೇಷ್ಠಾಃ ದ್ವಾದಶಾಹಂ ಮಹೀಭುಜಃ ॥ ೧ ॥**

**ಪಕ್ಷಂ ವೈಶ್ಯಸ್ಯ ಶೂದ್ರಸ್ಯ ಮಾಸಂ ಚೈವ ವಿಧೀಯತೇ ।**
**ಜನನೇ ಚೈವ ಮರಣೇ ನೃಪುಣ್ಯಾಚ್ಛುದ್ಧಿಮಿಚ್ಛತಾಂ ॥ ೨ ॥**

**ಪ್ರಥಮಾಂತೇವಿಶುದ್ಧಿಃ ಸ್ಯಾತ್ಸಮಾನಸ್ಯ ದ್ವಿಜೋತ್ತಮಾಃ ।**
**ದ್ವಿತೀಯಾಂತೇ ತಥಾ ಜ್ಞೇಯಾ ಅಸಮಾನಸ್ಯ ನಿತ್ಯದಾ ॥ ೩ ॥**

---

### ಇನ್ನೂರ ಮೂವತ್ತೆರಡನೆಯ ಅಧ್ಯಾಯ.

೧-೩. ಹಂಸವು ಹೇಳುತ್ತದೆ :—ಸಾಪಿಂಡ್ಯವುಳ್ಳ ಜ್ಞಾತಿಗಳಲ್ಲಿ ಪರಸ್ಪರವಾದ ಶಾವಾಶೌಚವು ಹತ್ತುದಿನ ಪೂರ್ತಿಯಾಗಿ ವಿಹಿತವಾಗಿದೆ. ಇದು ಬ್ರಾಹ್ಮಣರಿಗೆ ಮಾತ್ರ, ಕ್ಷತ್ರಿಯರಿಗೆ ಹನ್ನೆರಡುದಿನ ಪೂರ್ತಿ, ವೈಶ್ಯರಿಗೆ ಒಂದು ಪಕ್ಷ, ಶೂದ್ರರಿಗೆ ಒಂದು ಮಾಸ. ಜನನಮರಣಾಶೌಚಗಳು ಒಂದೇ ಕಾಲದಲ್ಲಿ ಉಂಟಾದಲ್ಲಿ, ಎರಡೂ ಸಮಪರಿಮಾಣವಾಗಿದ್ದಲ್ಲಿ ಜನನಾಶೌಚದ ಕೊನೆಯಲ್ಲಿಯೇ ಮತ್ತೊಂದು ನಿವೃತ್ತವಾಗಿ ಶುದ್ಧಿಯುಂಟಾಗುತ್ತದೆ. ಅಸಮಾನವಾಗಿದ್ದಲ್ಲಿ ಮರಣಾಶೌಚದ ಕೊನೆಯ ದಿನವೇ ಆಶೌಚನಿವೃತ್ತಿಯುಂಟಾಗಿ ಶುದ್ಧಿಯುಂಟಾಗುತ್ತದೆ. ಹತ್ತು ದಿನ ಕಳೆಯುವುದರೊಳಗೇ ಜನನ ಅಥವಾ ಮರಣಗಳನ್ನು ಕೇಳಿದಲ್ಲಿ,

ಅವ್ಯತೀತೇ ದಶಾಹೇ ತು ಶ್ರುತ್ವಾ ಮರಣಜನ್ಮನೀ ।
ಯಚ್ಛೇಷಂ ದಶರಾತ್ರಸ್ಯ ತಾವದೇವಾಶುಚಿರ್ಭವೇತ್ ॥ ೪ ॥

ಅತೀತೇ ದಶರಾತ್ರೇ ತು ವರ್ಷಸ್ಯಾಭ್ಯಂತರೇ ತಥಾ ।
ತ್ರಿರಾತ್ರಾಚ್ಛುರುದ್ದಿಷ್ಟಾ ಸ್ನಾತಸ್ಯ ತು ತತಃ ಪರಂ ॥ ೫ ॥

ರಾತ್ರಿಭಿಃ ಮಾಸತುಲ್ಯಾಭಿಃ ಗರ್ಭಸ್ರಾವೇ ವಿಶೋಧನಂ ।
ಅದಂತಜನ್ಮನಃ ಸದ್ಯಃ ಆಚೂಡಸ್ಯಾಹ್ಯಹರ್ನಿಶಂ ॥ ೬ ॥

ತ್ರಿರಾತ್ರಮಾವ್ರತಾದೇಶಾದ್ದಶರಾತ್ರಮತಃಪರಂ ।
ಕನ್ಯಾನಾಂ ತು ವ್ರತಸ್ಥಾನೇ ವಿವಾಹಃ ಪರಿಕೀರ್ತಿತಃ ॥ ೭ ॥

ವಿವಾಹಿತಾಸು ನಾಶೌಚಂ ಪಿತೃಪಕ್ಷೇ ವಿಧೀಯತೇ ।
ಮಾತಾಮಹೇ ತ್ರಿರಾತ್ರಂ ಸ್ಯಾದ್ಭಾರ್ಯಾಸ್ವನ್ಯಗತಾಸು ಚ ॥ ೮ ॥

ಪರಪೂರ್ವಾಸು ಚಸ್ವಾಸು ಪುತ್ರೇಷ್ವನ್ಯಗತೇಷು ಚ ।
ಆಚಾರ್ಯೇ ಚ ತಥಾ ಪ್ರೇತೇ ನಿವಾಸವಸುಧಾಧಿಪೇ ॥ ೯ ॥

---

೪-೮. ಹತ್ತು ದಿನಗಳಲ್ಲಿ ಉಳಿದಿರುವ ದಿನಗಳು ಮಾತ್ರವೇ ಆಶೌಚವಿರಬೇಕು. ಹತ್ತು ರಾತ್ರಿಯೂ ನಳೆದ ನಂತರ ವರ್ಷದೊಳಗೆ ಕೇಳಿದಲ್ಲಿ ಮೂರು ರಾತ್ರಿ ಆಶೌಚವಿದ್ದು ಶುದ್ಧನಾಗುತ್ತಾನೆ. ವರ್ಷದ ಅನಂತರ ಕೇಳಿದಲ್ಲಿ ಸ್ನಾನ ಮಾತ್ರದಿಂದಲೇ ಶುದ್ಧಿಯುಂಟಾಗುತ್ತದೆ. ಗರ್ಭಸ್ರಾವ ಉಂಟಾದಲ್ಲಿ ತಿಂಗಳಿಗೆ ಸಮಸಂಖ್ಯೆಯುಳ್ಳ ರಾತ್ರಿಗಳಲ್ಲಿ ಮಾತ್ರ ಆಶೌಚಿಯಾಗುತ್ತಾನೆ. ಹಲ್ಲುಗಳು ಹುಟ್ಟುವುದರೊಳಗೆ ಮರಣವಾದಲ್ಲಿ ಸದ್ಯಃ ಶುದ್ಧಿ. ಚೂಡಾಕರ್ಮಕ್ಕೆ ಮೊದಲು ಆದಲ್ಲಿ ಒಂದು ದಿನ (ಅಹೋರಾತ್ರ). ಉಪನಯನಕ್ಕೆ ಮೊದಲು ಆದಲ್ಲಿ ಮೂರು ರಾತ್ರಿ, ಅನಂತರ ದಶರಾತ್ರಾಶೌಚ. ಸ್ತ್ರೀಯರಿಗೆ ಉಪನಯನಸ್ಥಾನದಲ್ಲಿ ವಿವಾಹವೇ ವಿಹಿತವಾಗಿದೆ. ವಿವಾಹ ಹೊಂದಿರುವ ಸ್ತ್ರೀಯರಿಗೆ ತಂದೆಯ ಕಡೆಯ ಆಶೌಚವಿಲ್ಲ. ಮಾತಾಮಹನ ವಿಷಯದಲ್ಲಿ ಮೂರು ದಿನ ಆಶೌಚ. ಮತ್ತೊಬ್ಬನನ್ನು ಆಶ್ರಯಿಸಿರುವ ಭಾರ್ಯಾವಿಷಯದಲ್ಲಿಯೂ ತ್ರಿರಾತ್ರಾಶೌಚ.

೯-೧೦. ಮೊದಲು ಮತ್ತೊಬ್ಬನನ್ನು ವಿವಾಹವಾಗಿದ್ದು ಈಗ ತನ್ನನ್ನಾಶ್ರಯಿಸಿರುವ ಭಾರ್ಯೆಯ ವಿಷಯದಲ್ಲಿಯೂ, ತಾಯಿಯೊಡನೆ ಮತ್ತೊಬ್ಬನನ್ನು

ಆಚಾರ್ಯಪತ್ನೀಪುತ್ರೇಷು ಶಿಷ್ಯೆ ಸಬ್ರಹ್ಮಚಾರಿಷು ।
ಏಕರಾತ್ರಮಶೌಚಂ ಸ್ಯಾದನ್ನದೇ ತು ತಥಾ ಮೃತೇ ॥ ೧೦ ॥

ಭೃಗ್ವಗ್ನಿನಾಶಕಾಂಭೋಭಿರ್ಹತಾನಾಮಾತ್ಮಘಾತಿನಾಂ ।
ಪತಿತಾನಾಂ ಚ ನಾಶೌಚಂ ವಿದ್ಯುಚ್ಛಸ್ತ್ರಹತಾಶ್ಚ ಯೇ ॥ ೧೧ ॥

ಛತ್ರಿವ್ರತಿಬ್ರಹ್ಮಚಾರಿನೃಪಕೋಶಕದೀಕ್ಷಿತಾಃ ।
ನಾಶೌಚಭಾಜಃ ಕಥಿತಾ ರಾಜಾಜ್ಞಾಕಾರಿಣಶ್ಚ ಯೇ ॥ ೧೨ ॥

ಅತೀತವಾರ್ಷಿಕೇ ಶೂದ್ರೇ ಪಂಚಾಹಾಚ್ಛುದ್ಧಿರಿಷ್ಯತೇ ।
ದ್ವಾದಶಾಹೇನ ಶುದ್ಧಿಃ ಸ್ಯಾದತೀತೇ ವತ್ಸರತ್ರಯೇ ॥ ೧೩ ॥

ಗತೈಃ ಸಂವತ್ಸರೈಃ ಷಡ್ಭಿಃ ಮಾಸೇನ ಪರಿಕೀರ್ತಿತಾ ।
ಪ್ರೇತಾನುಗಮನೇ ಸ್ನಾನಂ ಘೃತಪ್ರಾಶಶ್ಚ ಶೋಧನಂ ॥ ೧೪ ॥

---

ಸೇರಿರುವ ಪುತ್ರರ ವಿಷಯದಲ್ಲಿಯೂ ಸಹ ತ್ರಿರಾತ್ರಾಶೌಚ. ಆಚಾರ್ಯನೂ, ತನ್ನ ದೇಶದ ದೊರೆಯೂ, ಆಚಾರ್ಯನ ಪತ್ನೀಪುತ್ರರೂ, ಶಿಷ್ಯ, ಸತೀರ್ಥ, ಮತ್ತು ಅನ್ನದಾತ ಇವರು ಮೃತರಾದಲ್ಲಿ ಒಂದು ರಾತ್ರಿ ಆಶೌಚವಿರಬೇಕು

೧೧-೧೪. ಪರ್ವತಾದಿ ಶಿಖರಗಳಿಂದ ಬಿದ್ದೂ, ಮತ್ತು ಅಗ್ನಿ, ಜಲ ಇವುಗಳಿಂದ ಆತ್ಮಘಾತ ಹೊಂದಿಯೂ, ಮತ್ತು ಪತಿತರಾಗಿಯೂ, ಸಿಡಿಲು, ಶಸ್ತ್ರ ಇವುಗಳಿಂದ ಹತರಾಗಿಯೂ ಆದವರಿಗಾಗಿ ಆಶೌಚವಿರಬೇಕಾದುದಿಲ್ಲ. ರಾಜನ ಛತ್ರಧಾರಿ, ಸನ್ಯಾಸಿ, ಬ್ರಹ್ಮಚಾರಿ, ದೊರೆ, ಕೋಶಾಧಿಕಾರಿ, ದೀಕ್ಷಿತ, ರಾಜಾಜ್ಞಾಕಾರಿಗಳು ಇವರಿಗೆ ಆಶೌಚವಿಲ್ಲ. ಒಂದು ವರ್ಷ ಕಳೆದಿರುವ ಶೂದ್ರ ಮರಣದಲ್ಲಿ ಐದು ದಿನ ಆಶೌಚವಿದ್ದು ಶುದ್ಧಿಹೊಂದಬಹುದು. ಮೂರು ವರ್ಷ ಕಳೆದ ಅಂತಹ ಶೂದ್ರನ ಮರಣದಲ್ಲಿ ಹನ್ನೆರಡು ದಿನ ಆಶೌಚವಿದ್ದು ಶುದ್ಧಿಹೊಂದಬೇಕು. ಆರು ವರ್ಷ ಕಳೆದಿದ್ದಲ್ಲಿ ಒಂದು ತಿಂಗಳು ಪೂರ್ತಿ ಆಶೌಚವಿರಬೇಕು. ಶವಾನುಗಮನ ಮಾಡಿದಲ್ಲಿ, ಸ್ನಾನಮಾಡಿ, ಘೃತಪ್ರಾಶನಮಾಡಿದಲ್ಲಿ ಆಶೌಚ ನಿವೃತ್ತಿಯಾಗುತ್ತದೆ.

ಜನನಮರಣಯೋರ್ದಶಾಹೇನ
　　ಭವತಿಶೌಚವಿಧಿರ್ನ ವಿಪ್ರಭೋಜ್ಯಂ ।
ನ ಚ ಭವತಿ ಪ್ರತಿಗ್ರಹೇಽಪಿ ದೋಷೋ
　　ದ್ವಿಪದಚತುಷ್ಪದಧಾನ್ಯದಕ್ಷಿಣಾಸು　　॥ ೧೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಹಂಸಗೀತಾಯಾಂ ಆಶೌಚವಿಧಿವರ್ಣನೋ
ನಾಮ ದ್ವಾತ್ರಿಂಶದುತ್ತರ ದ್ವಿಶತತಮೋಽಧ್ಯಾಯಃ

---

ಜನನಮರಣಗಳಲ್ಲಿ ಹತ್ತು ದಿನವಾದ ನಂತರ ಶುದ್ಧಿಯುಂಟಾಗುತ್ತದೆ. ಆಶೌಚ ಕಾಲದಲ್ಲಿ ಅವನ ಅನ್ನವು ಬ್ರಾಹ್ಮಣರಿಗೆ ಭೋಜ್ಯವಲ್ಲ. ಆದರೆ ಜಾತಕರ್ಮಾದ್ಯಂಗವಾದ ಧನಧಾನ್ಯ ಗವಾದಿಗಳನ್ನು ಅವನಿಂದ ಸ್ವೀಕರಿಸಿದಲ್ಲಿ ದೋಷವಿಲ್ಲ.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಹಂಸಗೀತೆಯ ಆಶೌಚವಿಧಿವರ್ಣನವೆಂಬ
ಇನ್ನೂರ ಮೂವತ್ತೆರಡನೆಯ ಅಧ್ಯಾಯ ಮುಗಿದಿದೆ.



॥ ಓಂ ॥

॥ ಶ್ರೀ ಹಯಗ್ರೀವಾಯ ನಮಃ ॥

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### ॥ ತ್ರಯಸ್ತ್ರಿಂಶದುತ್ತರದ್ವಿಶತತಮೋಽಧ್ಯಾಯಃ ॥

॥ ಹಂಸ ಉವಾಚ ॥

**ಅಂಗುಲ್ಯಗ್ರೇ ಸ್ಮೃತಂ ದೈವಂ ಪಿತ್ರ್ಯಂ ತರ್ಜನಿಮೂಲಗಂ ।**
**ಅಂಗುಷ್ಠಮೂಲೇ ಬ್ರಾಹ್ಮಂ ತು ಕನಿಷ್ಠಾಯಾಶ್ಚ ಮಾನುಷಂ ॥ ೧ ॥**

**ಉಪಸ್ಪೃಶೇತ್ತು ಬ್ರಾಹ್ಮೇಣ ದೇವಾನ್ ದೈವೇನ ತರ್ಪಯೇತ್ ।**
**ಪಿತ್ರ್ಯಾನ್ ಪಿತ್ರ್ಯೇಣ ಧರ್ಮಜ್ಞ ಮಾನುಷ್ಯೇಣ ತಥಾ ಪಿಬೇತ್ ॥ ೨ ॥**

**ಅವಿಕಾರ್ಯೇ ತಥಾ ಜಪ್ಯೇ ಯಜನೇ ಯಾಜನೇ ತಥಾ ।**
**ಅಧ್ಯಾಪನೇ ಚಾಧ್ಯಯನೇ ಭವೇನ್ನಾನ್ಯಮನಾ ನರಃ ॥ ೩ ॥**

---

### ಇನ್ನೂರ ಮೂವತ್ತಮೂರನೆಯ ಅಧ್ಯಾಯ.

೧-೩. ಹಂಸವು ಹೇಳುತ್ತದೆ:—ಅಂಗುಲಿಗಳ ಅಗ್ರಭಾಗವು, ದೈವ, (ತೀರ್ಥ) ಸ್ಥಾನವೆಂದೂ, ತರ್ಜನಿಯ ಬುಡದ ಪ್ರದೇಶವು ಪಿತೃತೀರ್ಥಸ್ಥಾನವೆಂದೂ, ಅಂಗುಷ್ಠದ ಬುಡವು ಬ್ರಾಹ್ಮ (ತೀರ್ಥ) ಸ್ಥಾನವೆಂದೂ, ಕನಿಷ್ಠಿಕೆಯ ಮೂಲ ಭಾಗವು ಮಾನುಷ(ತೀರ್ಥ) ಸ್ಥಾನವೆಂದೂ ಹೇಳಲ್ಪಟ್ಟಿವೆ ಆಚಮನವನ್ನು ಬ್ರಾಹ್ಮ ತೀರ್ಥದಿಂದಲೂ, ದೇವತಾ ತರ್ಪಣವನ್ನು ದೈವತೀರ್ಥದಿಂದಲೂ ಮಾಡಬೇಕು. ಪಿತೃತರ್ಪಣವನ್ನು ಪಿತೃ ತೀರ್ಥದಿಂದ ಮಾಡಬೇಕು. ಮಾನುಷ ತೀರ್ಥದಿಂದ ಪಾನಾದಿಗಳನ್ನು ಮಾಡಬೇಕು. ಮನೋವಿಕಾರವಿಲ್ಲದ ಜಪಾದಿ ಕಾಲದಲ್ಲಿಯೂ,

ಏತೇಷ್ವೇವ ತು ಕಾರ್ಯೇಷು ಗುರೂಣಾಮಪಿ ಸನ್ನಿಧೌ ।
ಉದ್ಧರೇದ್ದಕ್ಷಿಣಂ ಪಾಣಿಂ ಗೃಹ್ಣೀಯಾನ್ನ ಚ ಪಾದುಕೇ　　॥ ೪ ॥

ಅಗ್ನಿಕಾರ್ಯಂ ದೇವಕಾರ್ಯಮುಪಸ್ಪರ್ಶನಮೇವ ಚ ।
ಭೋಜನಂ ಪಿತೃಕಾರ್ಯಂ ಚ ಬಹಿರ್ಜಾನು ನ ಕಾರಯೇತ್　　॥ ೫ ॥

ನ ನಾಮ ದೀಕ್ಷಿತಸ್ಯೇಹ ಗೃಹ್ಣೀಯಾತ್ ವೃಷ್ಟ್ಯಯಃ ಕ್ವಚಿತ್ ।
ಗುರೋರ್ನಕೇವಲಂ ನಾಮ ಗೃಹೀತವ್ಯಮಥಾಪಿ ಚ　　॥ ೬ ॥

ಯಾಚಮಾನಂ ಯಥಾಶಕ್ತಿ ನ ಕುರ್ಯಾದ್ವಿಮುಖಂ ಕ್ವಚಿತ್ ।
ದೈವಂ ಪೌರ್ವಾಹ್ಣಿಕಂ ಕಾರ್ಯಂ ತ್ವಪರಾಹ್ಣೇ ತು ಪೈತೃಕಂ　　॥ ೭ ॥

ಅತಿಥೀನಾಂ ತಥಾ ಪೂಜಾ ಸರ್ವಕಾಲಂ ವಿಧೀಯತೇ ।
ಯದ್ವಿಶಿಷ್ಟತಮಂ ಲೋಕೇ ಯಚ್ಚಾಸ್ತಿ ದಯಿತಂ ಗೃಹೇ　　॥ ೮ ॥

---

ಯಜನ, ಯಾಜನ, ಅಧ್ಯಯನ, ಅಧ್ಯಾಪನ ಇತ್ಯಾದಿ ಕಾಲಗಳಲ್ಲಿಯೂ ಅನ್ಯ ಮನಸ್ಕನಾಗಿರಬಾರದು. ಇವುಗಳನ್ನು ಆಚರಿಸುವ ಕಾಲದಲ್ಲಿಯೂ, ಗುರುಸಾನ್ನಿಧ್ಯ ದಲ್ಲಿಯೂ ಉಪವೀತಿಯಾಗಿರಬೇಕು ಪಾದುಕೆಗಳನ್ನು ಧರಿಸಿರಬಾರದು. ಅಗ್ನಿ ಕಾರ್ಯ, ದೇವಕಾರ್ಯ, ಆಚಮನ, ಭೋಜನ, ಪಿತೃಕಾರ್ಯ ಇವುಗಳನ್ನು ಮಾಡುವಾಗ ಬಲಗೈಯನ್ನು ಮುಂಡಿಯಿಂದ ಹೊರಗೆ ಇಟ್ಟು ಮಾಡಬಾರದು.

೬-೧೦. ಯಜ್ಞದಲ್ಲಿ ದೀಕ್ಷಿತನಾಗಿರುವ ಯಜಮಾನನ ಹೆಸರನ್ನು ಋತ್ವಿಜರೇ ಮೊದಲಾದ ಕ್ರಿಯಾಕರ್ತೃಗಳು ಉಚ್ಚರಿಸಬಾರದು. ಗುರುವಿನ ನಾಮವನ್ನೂ ಉಚ್ಚರಿಸಬಾರದು. ಯಾಚಕನಾಗಿ ಬಂದವನನ್ನು ಯಥಾಶಕ್ತಿ ತೃಪ್ತಿಗೊಳಿಸಬೇಕೇ ಹೊರತು ವಿಮುಖನನ್ನಾಗಿ ಮಾಡಬಾರದು. ದೈವಿಕವಾದ ವ್ಯಾಪಾರವನ್ನು ಪೂರ್ವಾಹ್ಣದಲ್ಲಿಯೂ, ಪಿತೃಕರ್ಮವನ್ನು ಅಪರಾಹ್ಣದಲ್ಲಿಯೂ, ಅತಿಥಿಪೂಜೆಯನ್ನು ಮಾತ್ರ ಸರ್ವಕಾಲದಲ್ಲಿಯೂ ಮಾಡತಕ್ಕದ್ದು. ಯಾವುದು ಲೋಕದಲ್ಲಿ ಉತ್ಕೃಷ್ಟ ವಸ್ತುವೆಂದು ತಿಳಿದಿರುತ್ತದೆಯೋ, ತನಗೆ ಇಷ್ಟವಾದ ಯಾವ ವಸ್ತುವು ಮನೆಯಲ್ಲಿದೆಯೋ ಅಂತಹ ವಸ್ತುವನ್ನು ಗುಣಶಾಲಿಯಾದ ಉತ್ತಮ ಪಾತ್ರದಲ್ಲಿ ದಾನಮಾಡಬೇಕು. ಇದರಿಂದ ಇವನು ಅವೇಕ್ಷಿಸುವ ಅಂತಹ ವಸ್ತು

ತತ್ತದ್ಗುಣವತೇ ದೇಯಂ ತದೇವಾಕ್ಷಯಮಿಚ್ಛತಾ ।
ಪ್ರಿಯಾಣಿ ಲಭತೇ ಲೋಕೇ ಪ್ರಿಯದಃ ಪ್ರಿಯಕೃತ್ತಥಾ ॥ ೯ ॥

ಪ್ರತಿಶ್ರುತಂ ಪ್ರಯತ್ನೇನ ದಾತವ್ಯಮ್ಮೃಷಿಸತ್ತಮಾಃ ।
ಅಪ್ರಯಚ್ಛಂಸ್ತದಾಪ್ನೋತಿ, ಮೂರ್ತೀಷ್ವಕೃತಸಂಶಯಂ ॥ ೧೦ ॥

ನರಕಂ ಮಹದಾಪ್ನೋತಿ ಶೃಗಾಲಶ್ಚೈವ ಜಾಯತೇ ।
ಮಾತಾಪಿತಾಗುರುಶ್ಚೈವ ಜ್ಯೇಷ್ಠೋ ಭ್ರಾತಾ ತಥಾ ಸ್ವಸಾ ॥ ೧೧ ॥

ಪಿತೃವ್ಯೋ ಮಾತುಲಶ್ಚೈವ ತಥಾ ಮಾತೃಷ್ವಸಾ ದ್ವಿಜಾಃ ।
ಪಿತೃಷ್ವಸಾ ತಥಾ ಶ್ವಶ್ರೂಃ ಗುರುಭಾರ್ಯಾ ತಥೈವ ಚ ॥ ೧೨ ॥

ಮಾತಾಮಹಶ್ಚ ಶ್ವಶುರಃ ಪೂಜನೀಯಾಃ ಪ್ರಯತ್ನತಃ ।
ಪ್ರತ್ಯುತ್ಥಾನಂ ಚ ಕರ್ತವ್ಯಂ ತೇಷಾಂ ಪೂರ್ವಾಭಿವಾದನಂ ॥ ೧೩ ॥

ಮಾತುಲಶ್ಚ ಪಿತೃವ್ಯಶ್ಚ ಯದಾಸ್ಯಾತಾಂ ಕನೀಯಸೌ ।
ನಾಭಿವಾದ್ಯಾಸ್ತು ತೇ ಪೂರ್ವಂ ಪ್ರತ್ಯುತ್ಥಾನಂ ತು ಕಾರಯೇತ್ ॥ ೧೪ ॥

---

ಗಳೂ ಮನೆಯಲ್ಲಿ ಅಕ್ಷಯವಾಗುತ್ತವೆ. ಲೋಕದಲ್ಲಿ ಪ್ರಿಯವಾದ ವಸ್ತುಗಳನ್ನು ದಾನಮಾಡುವವನೂ, ಇತರ ಪ್ರಿಯ ಕಾರ್ಯವನ್ನು ನೆರವೇರಿಸುವವನೂ, ಪುನಃ ಪ್ರಿಯವಾದ ಅಂತಹ ವಸ್ತುಗಳನ್ನು ಹೊಂದಿಯೇ ಹೊಂದುತ್ತಾನೆ. ಪ್ರತಿಜ್ಞೆ ಮಾಡಿದವನು ಅಂತಹ ಪ್ರತಿಜ್ಞಾತ ವಸ್ತುವನ್ನು ದಾನಮಾಡಿಯೇ ಮಾಡಬೇಕು. ಹಾಗೆ ದಾನಮಾಡದಿರುವವನು ಇಷ್ಟದೇವತೆಯ ಸಂದೇಹಕ್ಕೆ ಪಾತ್ರನಾಗುತ್ತಾನೆ.

೧೧-೧೪ ಕ್ಲೇಶಕರವಾದ ನರಕವನ್ನೂ ಹೊಂದುತ್ತಾನೆ. ನರಿಯಾಗಿಯೂ ಹುಟ್ಟುತ್ತಾನೆ. ತಾಯಿ, ತಂದೆ, ಗುರು, ಜ್ಯೇಷ್ಠಭ್ರಾತಾ, ತಂಗಿ, ದೊಡ್ಡಪ್ಪ, ಸೋದರಮಾವ, ಚಿಕ್ಕತಾಯಿ, ಸೋದರತ್ತೆ, ಅತ್ತೆ, ಗುರುಪತ್ನೀ, ತಾಯಿಯ ತಂದೆ, ಮಾವ ಇವರನ್ನು ಪ್ರಯತ್ನದಿಂದಲೂ ಪೂಜಿಸಬೇಕು. ಪ್ರತ್ಯುತ್ಥಾನಾಭಿವಾದನ ಗಳನ್ನೂ ಮಾಡಬೇಕು. ಸೋದರಮಾವನೂ, ಚಿಕ್ಕಪ್ಪನೂ ವಯಸ್ಸಿನಲ್ಲಿ ಚಿಕ್ಕವ ರಾಗಿದ್ದಲ್ಲಿ ಅಭಿವಾದನವಿಲ್ಲದೆ ಕೇವಲ ಪ್ರತ್ಯುತ್ಥಾನಮಾತ್ರ ಮಾಡಬೇಕು. ಎಂಜಲಿ ನಲ್ಲಿರುವಾಗ ತಲೆಯನ್ನು ಮುಟ್ಟಬಾರದು. ಎಲ್ಲಾ ಪ್ರಾಣಗಳೂ ತಲೆಯನ್ನೇ ಆಶ್ರಯಿಸಿರುತ್ತವೆ.

ಉಚ್ಛಿಷ್ಟೋ ನಸ್ಪೃಶೇಚ್ಛೀರ್ಷಂ ಸರ್ವೇಪ್ರಾಣಾಸ್ತದಾಶ್ರಯಾಃ ।
ಪೂರ್ವಾಂ ಸಂಧ್ಯಾಂ ಜಪಂಸ್ತಿಷ್ಠೇದಾಸೀನಶ್ಚೈವ ಪಶ್ಚಿಮಾಂ ॥ ೧೫ ॥

ಮಧ್ಯಂದಿನೇ ನಿಶಾಕಾಲೇ ತ್ವರ್ಧರಾತ್ರೇ ವಿಶೇಷತಃ ।
ಚತುಷ್ಪಥಂ ನ ಸೇವೇತ ಉಪಸಂಧ್ಯೇ ತಥೈವ ಚ ॥ ೧೬ ॥

ನಾಸ್ತಿಕ್ಯಂ ವೇದನಿಂದಾಂ ಚ ದೇವತಾನಾಂ ಚ ಕುತ್ಸನಂ ।
ದ್ವೇಷಸ್ತಂಭಾತಿಮಾನೌ ಚ ತೈಕ್ಷ್ಣ್ಯಂ ಚೈವ ವಿವರ್ಜಯೇತ್ ॥ ೧೭ ॥

ಪರಸ್ಯ ದಂಡಂ ನೋದ್ಯಚ್ಛೇತ್ ಕ್ರುದ್ಧೋ ನೈನಂ ನಿಪಾತಯೇತ್ ।
ಅನ್ಯತ್ರಪುತ್ರಾಚ್ಛಿಷ್ಯಾದ್ವಾ ಶಿಷ್ಟ್ಯರ್ಥಂ ತಾಡನಂ ಸ್ಮೃತಂ ॥ ೧೮ ॥

ನ ಬ್ರಾಹ್ಮಣಂ ಪರಿವದೇನ್ನಕ್ಷತ್ರಾಣಿ ನ ನಿರ್ದಿಶೇತ್ ।
ತಿಥಿಂ ಪಕ್ಷಸ್ಯ ನ ಬ್ರೂಯಾತ್ತಥಾಸ್ಯಾಯುರ್ನರಿಷ್ಯತೇ ॥ ೧೯ ॥

---

೧೫-೧೮. ಪ್ರಾತಃಕಾಲದ ಸಂಧ್ಯಾವಂದನವನ್ನು ನಿಂತುಕೊಂಡೇ ಜಪಿಸಿಯೂ, ಸಾಯಂಕಾಲದ ಸಂಧ್ಯೆಯನ್ನು ಕುಳಿತು ಜಪಿಸಿಯೂ ನೆರವೇರಿಸಬೇಕು. ಮಧ್ಯಾಹ್ನದಲ್ಲಿಯೂ, ರಾತ್ರಿಯಲ್ಲಿಯೂ, ಅರ್ಧರಾತ್ರಿಯಲ್ಲಿಯೂ ಜಪವನ್ನು ವಿಶೇಷ ರೀತಿಯಿಂದ ಮಾಡಬೇಕು ಸಂಧ್ಯಾಸಮಯಗಳಲ್ಲಿ ನಾಲ್ಕು ಬೀದಿಯ ಚೌಕಗಳಲ್ಲಿ ಕೂಡಬಾರದು. ನಾಸ್ತಿಕತನ, ವೇದನಿಂದಾ, ದೇವತೆಗಳ ನಿಂದೆ, ದ್ವೇಷ, ಸ್ತಬ್ಧತೆ, ಹೆಚ್ಚಾದ ಅಹಂಕಾರ, ಕ್ರೂರಸ್ವಭಾವ ಇವುಗಳನ್ನು ಬಿಡಬೇಕು. ಮತ್ತೊಬ್ಬನನ್ನು ಶಿಕ್ಷಿಸಲು ದೊಣ್ಣೆಯನ್ನು ಎತ್ತಬಾರದು. ಕೋಪದಿಂದ ಅವನನ್ನು ಆಕ್ರಮಿಸಲೂ ಬಾರದು ಶಿಕ್ಷೆಗಾಗಿ ಪುತ್ರ ಮತ್ತು ಶಿಷ್ಯ ಇವರ ವಿಷಯದಲ್ಲಿ ಸ್ವಲ್ಪಮಟ್ಟಿಗೆ ತಾಡನವನ್ನು ಉಪಯೋಗಿಸಬಹುದು.

೧೯-೨೩. ಬ್ರಾಹ್ಮಣನನ್ನು ನಿಂದಿಸಬಾರದು. ನಕ್ಷತ್ರಗಳನ್ನು ಕೈಬೆರಳಿನಿಂದ ನಿರ್ದೇಶಿಸಿ ತೋರಿಸಬಾರದು. ಪಕ್ಷದ ತಿಥಿಗಳು ಇಷ್ಟೇ ಇವೆ ಎಂದು ಹೇಳಬಾರದು. ಹಾಗೆ ಹೇಳಿದಲ್ಲಿ ಆಯುಸ್ಸು ಕ್ಷೀಣವಾಗುತ್ತದೆ. ಸೂರ್ಯಾಸ್ತಕ್ಕೆ ಮೊದಲು ಮಲಗಬಾರದು. ಉದಯಾನಂತರವೂ ಮಲಗಿರಬಾರದು. ಕನ್ನಡಿಯು ಮಲಿನವಾಗಿದ್ದಲ್ಲಿ ಬುದ್ಧಿಶಾಲಿಯು ಅದನ್ನು ನೋಡಬಾರದು. ದೇವತಾಪೂಜೆಯನ್ನು ಮಾಡದೆ ಗುರು,

ಪ್ರಾಗಸ್ತಶಾಯೀ ನ ಭವೇನ್ನಚಾಭ್ಯುದಯಶಾಯಿಕಃ ।
ಅಪಲೋಕ್ಯೋ ನ ಚಾದರ್ಶೋ ಮಲಿನೋ ಬುದ್ಧಿಮತ್ತರೈಃ ॥ ೨೦ ॥

ಅಕೃತ್ವಾ ದೇವತಾಪೂಜಾಂ ನಾನ್ಯಂ ಗಚ್ಛೇತ್ಕದಾಚನ ।
ಅನ್ಯತ್ರ ತು ಗುರುಂ ವೃದ್ಧಂ ಧಾರ್ಮಿಕಂ ವಾ ವಿಚಕ್ಷಣಂ ॥ ೨೦ ॥

ವರ್ಜಯೇಚ್ಚ ತಥಾ ಪ್ರಾಜ್ಞಾ ಶ್ಚಾಸನಾಕರ್ಷಣಂ ಸದಾ ।
ಸ್ನಾತ್ವಾ ತು ನಾವಮಾರ್ಜೇತ ಗಾತ್ರಾಣಿ ತು ವಿಚಕ್ಷಣಃ ॥ ೨೨ ॥

ವಿಪರ್ಯಯಂ ನ ಕುರ್ವೀತ ವಾಸಸೋ ಬುದ್ಧಿಮಾನ್ನರಃ ।
ತಥಾ ನಾನ್ಯಧೃತಂ ಧಾರ್ಯಂ ನ ಚಾಪದಶಮೇವ ಚ ॥ ೨೩ ॥

ಅನ್ಯದೇವ ಭವೇದ್ವಾಸಃ ಶಯನೀಯೇ ದ್ವಿಜೋತ್ತಮಾಃ ।
ಅನ್ಯದ್ರಥ್ಯಾಸು ದೇವಾನಾಂ ತ್ವರ್ಚಾಯಾಮನ್ಯದೇವ ತು ॥ ೨೪ ॥

ಉಪವಾಸಂ ತು ಕುರ್ವೀತ ಸ್ನಾತಃ ಶುಚಿರಲಂಕೃತಃ ।
ಪರ್ವಕಾಲೇಷು ಸರ್ವೇಷು ಬ್ರಹ್ಮಚಾರೀ ತಥಾ ಭವೇತ್ ॥ ೨೫ ॥

---

ವೃದ್ಧ, ಧಾರ್ಮಿಕರು ಇವರನ್ನು ಹೊರತು ಇತರರ ದರ್ಶನವನ್ನೇ ಆಗಲಿ ಕಾರ್ಯಾಂತರವನ್ನೇ ಆಗಲಿ ಮಾಡಬಾರದು. ಯಾವಾಗಲೂ ಆಸನವನ್ನು ತಾನಾಗಿ ಸೆಳೆದು ಹಾಕಿಕೊಳ್ಳಬಾರದು. ಸ್ನಾನಮಾಡಿದನಂತರ ಪುನಃ ಅವಯವಗಳನ್ನು ತೊಳೆಯು ಬಾರದು. ಉಡುವ ಮತ್ತು ಹೊದೆಯುವ ವಸ್ತ್ರಗಳನ್ನು ಅದುಬದಲು ಮಾಡ ಬಾರದು. ಮತ್ತೊಬ್ಬರು ಉಪಯೋಗಿಸಿದ ವಸ್ತ್ರವನ್ನೂ, ಸೆರಗಿಲ್ಲದ ವಸ್ತ್ರವನ್ನೂ ಉಪಯೋಗಿಸಬಾರದು.

೨೪–೨೮. ಹಾಸಿಗೆಗಾಗಿ ಬೇರೆ ವಸ್ತ್ರವನ್ನು ಉಪಯೋಗಿಸಬೇಕು. ಬೀದಿಗಳಲ್ಲಿ ಸಂಚಾರಮಾಡುವಾಗಲೂ ದೇವತೆಗಳ ಪೂಜಾಕಾಲದಲ್ಲಿಯೂ ಬೇರೆ ಬೇರೆ ವಸ್ತ್ರಗಳನ್ನು ಧರಿಸಬೇಕು ಉಪವಾಸ ಮಾಡುವಾಗ ಸ್ನಾನಮಾಡಿ ಶುಚಿಯಾಗಿಯೂ, ಅಲಂಕೃತನಾಗಿಯೂ ಇದ್ದು ಉಪವಾಸ ಮಾಡಬೇಕು. ಪರ್ವಕಾಲದಲ್ಲೆಲ್ಲಾ

ಪಿಪ್ಪಲಂ ಚ ವಟಂ ಚೈವ ಶಾಣಶಾಕಂ ತಥೈವ ಚ ।
ಉದುಂಬರಂ ನ ಖಾದೇತ ಭವ್ಯಾರ್ಥೀ ಪುರುಷಃ ಸದಾ ॥ ೨೬ ॥

ಪುತ್ರಮಾಂಸೋಪಮಂ ಮಾಂಸಂ ಪೃಷ್ಠಮಾಂಸಂ ಚ ವರ್ಜಯೇತ್ ।
ಪಾಣೌ ಚ ಲವಣಂ ರಾತ್ರೌ ದಧಿಸಕ್ತೂಂಸ್ತಥೈವ ಚ ॥ ೨೭ ॥

ಸಾಯಂ ಪ್ರಾತಶ್ಚ ಭುಂಜೀತ ನಾಂತರಾಲೇ ಕದಾಚನ ।
ಸಾಯಂ ಪ್ರಾತರ್ಮನುಷ್ಯಾಣಾಮಶನಂ ದೇವನಿರ್ಮಿತಂ ॥ ೨೮ ॥

ಭೂಮೌ ಸದೈವಚಾಶ್ನೀಯಾನ್ನಚಾಸೀನೋ ನ ಶಬ್ದವತ್ ।
ತೋಯಪೂರ್ಣಂ ಯದಾ ಪಾನಮತಿಥಿಭ್ಯೋ ದ್ವಿಜೋತ್ತಮಾಃ ॥ ೨೯ ॥

ಪಶ್ಚಾದ್ಭುಂಜೀತ ಮೇಧಾವೀ ನ ಚಾಪ್ಯನ್ಯಮನಾ ನರಃ ।
ನ ಧಾವೇದ್ವರ್ಷಮಾಣೇ ತು ನದೀಂ ಮತ್ತಾಂ ನ ಲಂಘಯೇತ್ ॥ ೩೦ ॥

ಗಾಂ ಚರಂತೀಂ ಪಿಬನ್ತೀಂ ಚ ವತ್ಸಕಂ ನ ನಿಷೇಧಯೇತ್ ।
ಸಮಾನಮೇಕಪಙ್ಕ್ತ್ಯಾಂ ತು ದೇಯಮನ್ನಂ ತಥಾ ಭವೇತ್ ॥ ೩೧ ॥

---

ಬ್ರಹ್ಮಚರ್ಯ ಹೊಂದಿರಬೇಕು. ಹಿಪ್ಪಲಿ, ವಟ, ಶಾಣಶಾಕ, ಅತ್ತಿ ಇವನ್ನು ಯಾವಾಗಲೂ ಭಕ್ಷಿಸಬಾರದು. ಇದು ಶ್ರೇಯಃಪ್ರಾಪ್ತಿಗೆ ಸಾಧಕ, ಬಹಳ ಎಳೆಯದಾದ ಪ್ರಾಣಿಗಳ ಮಾಂಸವನ್ನೂ, ಪೃಷ್ಠಭಾಗದ ಮಾಂಸವನ್ನೂ ತ್ಯಜಿಸಬೇಕು. ಪ್ರತ್ಯಕ್ಷಲವಣವನ್ನೂ ರಾತ್ರಿಯಲ್ಲಿ ಮೊಸರು ಹುರುಟ್ಟನ್ನೂ ತ್ಯಜಿಸಬೇಕು. ಪ್ರಾತಃಕಾಲ ಮತ್ತು ಸಾಯಂಕಾಲದಲ್ಲೇ ಊಟಮಾಡಬೇಕು. ಮಧ್ಯದಲ್ಲಿ ಯಾವಾಗಲೂ ಭುಂಜಿಸಬಾರದು. ಈ ಎರಡು ಹೊತ್ತಿನ ಅಶನಗಳು ದೇವನಿರ್ಮಿತವೆಂದು ಹೇಳಲ್ಪಡುತ್ತವೆ. ಊಟಮಾಡುವವನು ಭೂಮಿಯಲ್ಲಿ ಕುಳಿತೇ ಊಟಮಾಡಬೇಕು. ಉನ್ನತವಾದ ಆಸನಾದಿಗಳಲ್ಲಿ ಕುಳಿತು ಮಾಡಬಾರದು. ಶಬ್ದವಿಲ್ಲದೆಯೂ ಭುಂಜಿಸಬೇಕು.

೨೯-೩೩. ತೀರ್ಥೋದಕದಿಂದ ತುಂಬಿದ ಪಾನಪಾತ್ರೆಯನ್ನು ಮೊದಲು ಅತಿಥಿಗಳಿಗೆ ಅರ್ಪಿಸಿ ಅನಂತರ ತಾನು ಅನನ್ಯಮನಸ್ಕನಾಗಿ ಊಟಮಾಡಬೇಕು. ಮಳೆಯು ಸುರಿಯುತ್ತಿರುವಾಗ ದಾಟಿ ನಡೆಯಬಾರದು ಬಹುಮಟ್ಟಿಗೂ ತುಂಬ ಹರಿಯುತ್ತಿರುವ ನದಿಯನ್ನು ದಾಟಲೂ ಬಾರದು. ಮೇಯುತ್ತಿರುವ ಹಸುವನ್ನೂ,

ಪಂಙ್ಕ್ತ್ಯಾಂ ತು ವಿಷಮಂ ದತ್ವಾ ನರಕಂ ಪ್ರತಿಪದ್ಯತೇ ।
ವಿಷಂ ಹಾಲಾಹಲಂ ಭುಙ್ಕ್ತೇ ಯೋಽಪ್ರದಾಯ ಸುಹೃಜ್ಜನೇ ॥ ೩೨ ॥

ಲೋಷ್ಟಮರ್ದೀ ತೃಣಚ್ಛೇದೀ ನಖಖಾದೀ ಚ ಯೋ ನರಃ ।
ನಿತ್ಯೋಚ್ಛಿಷ್ಟೋ ಭವೇದ್ಯಃ ಸ ನೇಹಾಯುರ್ವಿಂದತೇ ಮಹತ್ ॥ ೩೩ ॥

ಪರಂ ಜ್ಞೇಯಮನಾಯುಷ್ಯಂ ಪರದಾರಾಭಿಮರ್ಶನಂ ।
ಉದಕ್ಯಾಗಮನಂ ಜ್ಞೇಯಮಲಂಘ್ಯಂ ಪರಮಂ ಸುಖಂ ॥ ೩೪ ॥

ಪುರೀಷಮೂತ್ರೇ ನೋದೀಕ್ಷೇನ್ನಾಧಿತಿಷ್ಠೇತ್ಕದಾಚನ ।
ಉದಕ್ಯಯಾ ತು ಸಂಭಾಷಾಂ ನ ತು ಕುರ್ವೀತ ಕರ್ಹಿಚಿತ್ ॥ ೩೫ ॥

ನಾಧಿತಿಷ್ಠೇತ್ತುಷಂ ಜಾತು ಕೇಶಭಸ್ಮಕಪಾಲಿಕಾಃ ।
ಅನ್ಯಸ್ಯ ಚಾಪ್ಯುಪಸ್ಥಾನಂ ದೂರತಃ ಪರಿವರ್ಜಯೇತ್ ॥ ೩೬ ॥

---

ಹಾಲು ಕುಡಿಯುತ್ತಿರುವ ಕರುವನ್ನೂ ನಿಷೇಧಿಸಬಾರದು. ಏಕಪಙ್ತ್ತಿಯಲ್ಲಿ ಕುಳಿತಿರುವ ಅತಿಥಿಗಳಿಗೆ ಎಲ್ಲರಿಗೂ ಒಂದೇ ರೀತಿಯಲ್ಲಿ ಅನ್ನಾದಿಗಳನ್ನು ಬಿಡಿಸಬೇಕು. ಒಂದೇ ಪಂಙ್ತ್ತಿಯಲ್ಲಿ ವೈಷಮ್ಯಮಾಡುವವನು ನರಕಭಾಗಿಯಾಗುತ್ತಾನೆ. ಪಙ್ತ್ತಿಯಲ್ಲಿರುವ ಸ್ನೇಹಿತರಿಗೆ ಒಂದೇ ರೀತಿಯಲ್ಲಿ ದಾನಮಾಡದಿರುವವನು ಹಾಲಾಹಲವೆಂಬ ವಿಷವನ್ನೇ ಭುಂಜಿಸಿದಂತಾಗುತ್ತಾನೆ ಯಾವ ಪ್ರಯೋಜನವೂ ಇಲ್ಲದೆ ಮಣ್ಣುಹೆಂಟೆಯನ್ನು ಮರ್ದಿಸುವವನು, ಹುಲ್ಲುಕಡ್ಡಿಯನ್ನು ತುಂಡರಿಸುವವನು, ಉಗುರನ್ನು ಕಚ್ಚುವವನೂ ಯಾವಾಗಲೂ ಉಚ್ಛಿಷ್ಟಭೋಜಿಯೇ ಆಗಿರುವವನೂ ಇವರೆಲ್ಲರೂ ಇಹಲೋಕದಲ್ಲಿ ಹೆಚ್ಚಾದ ಆಯುಸ್ಸನ್ನು ಹೊಂದಿರುವುದಿಲ್ಲ ಪರದಾರಗಮನವು ಬಹುಮಟ್ಟಿಗೂ ಅನಾಯುಷ್ಯಕರವೆಂದು ತಿಳಿಯಬೇಕು

೩೫-೩೬ ಪರದಾರಗಮನಕ್ಕಿಂತಲೂ (ಸ್ವಸ್ತ್ರೀಯ ವಿಷಯದಲ್ಲಿ) ಋತುಮತೀಗಮನವು ಅನಿವಾರ್ಯ ಸಂದರ್ಭದಲ್ಲಿ ಸುಖಕರವೆಂದೇ ಭಾವಿಸಬೇಕು. ವಿಸರ್ಜನ ಕಾಲದಲ್ಲಿ ಮಲಮೂತ್ರಗಳನ್ನು ನೋಡಬಾರದು. ಯಾವಾಗಲೂ ಆಕ್ರಮಿಸಿ ನಿಲ್ಲಲೂ ಬಾರದು. ಋತುಮತಿಯಾದವಳೊಡನೆ ಯಾವಾಗಲೂ ಸಂಭಾಷಣೆ ಮಾಡಬಾರದು. ಹೊಟ್ಟು, ಕೇಶ, ಭಸ್ಮ, ಕಪಾಲ ಇವನ್ನೂ ಇತರ ಅಶುಚಿ

ತ್ರೀಣಿ ತೇಜಾಂಸಿ ನೋಚ್ಛಿಷ್ಟೋ ನಾಲಭೇತ ಕದಾಚನ ।
ಅಗ್ನಿಂ ಗಾಂ ಬ್ರಾಹ್ಮಣಂ ಚೈವ ತಥಾಹ್ಯಾಯುರ್ನರಿಷ್ಯತೇ ॥ ೩೭ ॥

ತ್ರೀಣಿ ತೇಜಾಂಸಿ ಚೋಚ್ಛಿಷ್ಟೋ ನೋದೀಕ್ಷೇತ ಕದಾಚನ ।
ಸೂರ್ಯಾಚಂದ್ರಮಸೌ ಚೈವ ನಕ್ಷತ್ರಾಣಿ ಚ ಸರ್ವಶಃ ॥ ೩೮ ॥

ನಾವಮನ್ಯೇತ ಧರ್ಮಜ್ಞ ತ್ರೀಣಿ ತೇಜಾಂಸಿ ಪಂಡಿತಃ ।
ಅಗ್ನಿಂ ಚ ಕುಲಪುತ್ರಂ ಚ ಬ್ರಾಹ್ಮಣಂ ಚ ದ್ವಿಜೋತ್ತಮಾಃ ॥ ೩೯ ॥

ತ್ರೀನ್ಕೃಶಾನ್ನಾವಜಾನೀಯಾದ್ದೀರ್ಘಮಾಯುರ್ಜಿಜೀವಿಷುಃ ।
ಬ್ರಾಹ್ಮಣಂ ಕ್ಷತ್ರಿಯಂ ಸರ್ಪಂ ಸರ್ವೇಹ್ಯಾಶೀವಿಷಾಸ್ತ್ರಯಃ ॥ ೪೦ ॥

ನಾಧ್ಯಾಪಯೇದಥೋಚ್ಛಿಷ್ಟೋ ನಾಧೀಯೀತ ಕದಾಚನ ।
ಸರ್ವಂ ಚ ತಿಲಸಂಬದ್ಧಂನಾದ್ಯಾದಸ್ತಮಿತೇ ರವೌ ॥ ೪೧ ॥

---

ವಸ್ತುಗಳನ್ನೂ ಪಾದಗಳಿಂದ ಆಕ್ರಮಿಸಬಾರದು. ಇವುಗಳ ಸ್ಪರ್ಶವನ್ನು ದೂರದಲ್ಲಿಯೇ ವರ್ಜಿಸಬೇಕು. ಅಗ್ನಿ, ಗೋವು, ಬ್ರಾಹ್ಮಣರೆಂಬ ಮೂರು ತೇಜಸ್ಸುಗಳನ್ನೂ ಯಾವಾಗಲೂ ಮುಟ್ಟಬಾರದು. ಎಂಜಲಲ್ಲಿರುವಾಗ ಸುತರಾಂ ವರ್ಜಿಸಬೇಕು. ಹಾಗೆ ಸ್ಪರ್ಶಮಾಡುವವನಿಗೆ ಆಯುಸ್ಸು ಕ್ಷೀಣವಾಗುತ್ತದೆ. ಸೂರ್ಯ, ಚಂದ್ರ, ನಕ್ಷತ್ರಗಳೆಂಬ ಮೂರು ತೇಜಸ್ಸನ್ನು ಎಂಜಲಲ್ಲಿರುವಾಗಲೂ ನೋಡಬಾರದು.

೩೯–೪೩. ಅಗ್ನಿ, ಸತ್ಕುಲದಲ್ಲಿ ಜನಿಸಿದ ಪುತ್ರ, ಬ್ರಾಹ್ಮಣ ಈ ಮೂರು ತೇಜಸ್ಸುಗಳನ್ನು ಯಾವಾಗಲೂ ಅನಾದರಿಸಬಾರದು. ಬ್ರಾಹ್ಮಣ, ಕ್ಷತ್ರಿಯ, ಸರ್ಪ ಈ ಮೂವರನ್ನು ಕೃಶರಾಗಿದ್ದಾರೆಂದು ತಿಳಿದು ಅವಜ್ಞೆಮಾಡಬಾರದು. ಈ ಮೂವರೂ ತಿಕ್ಷ್ಣವಿಷವುಳ್ಳ ಸರ್ಪಗಳು. ದೀರ್ಘ ಕಾಲಬದುಕಲು ಆಶೆ ಇರುವವನು ಅನಾದರವಿಲ್ಲದೆ ಇವರ ವಿಷಯದಲ್ಲಿ ಜಾಗರೂಕತೆಯಿಂದಿರಬೇಕು. ಎಂಜಲಲ್ಲಿದ್ದು ಅಧ್ಯಯನ ಮಾಡಿಸಬಾರದು. ಅಧ್ಯಯನ ಮಾಡಲೂಬಾರದು. ಎಳ್ಳಿನಿಂದ ಕೂಡಿರುವ ಯಾವ ಪದಾರ್ಥವನ್ನೂ ಸೂರ್ಯಾಸ್ತವಾದ ನಂತರ ಭಕ್ಷಿಸಬಾರದು. ಪೂಜ್ಯನಾದ ವೃದ್ಧನು ಸಮೀಪಕ್ಕೆ ಬಂದಲ್ಲಿ ಯುವಕನಿಗೆ ಪ್ರಾಣಗಳೇ

ಊರ್ಧ್ವಂ ಪ್ರಾಣಾಹ್ಯುತ್ಕ್ರಾಮಂತಿ ಯೂನಃ ಸ್ಥವಿರ ಆಯತಿ ।
ಪ್ರತ್ಯುತ್ಥಾನಾಭಿವಾದಾಭ್ಯಾಂ ಪುನಸ್ತಾನ್ ಪ್ರತಿಪದ್ಯತೇ ॥ ೪೨ ॥

ಅಭಿವಾದಯೇತ ವೃದ್ಧಾಂಶ್ಚ ಆಸನಂ ಚೈವ ದಾಪಯೇತ್ ।
ಕೃತಾಂಜಲಿರುಪಾಸೀತ ಗಚ್ಛತಃ ಪೃಷ್ಠತೋಽನ್ವಿಯಾತ್ ॥ ೪೩ ॥

ನಾಸೀತಚಾಸನೇ ಭಿನ್ನೇ ಭಿನ್ನಂ ಕಾಸ್ಯಂ ಚ ವರ್ಜಯೇತ್ ।
ನೈಕವಸ್ತ್ರೇಣ ಭೋಕ್ತವ್ಯಂ ನ ನಗ್ನಃ ಸ್ನಾನಮರ್ಹತಿ ॥ ೪೪ ॥

ಗುರುಣಾ ವೈರನಿರ್ಬಂಧೋ ನ ಕರ್ತವ್ಯಂ ಕದಾಚನ ।
ಅನುಮಾನ್ಯಃ ಪ್ರಸಾದ್ಯಶ್ಚ ಗುರುಃ ಕ್ರುದ್ಧೋ ವಿಜಾನತಾ ॥ ೪೫ ॥

ದೂರಾದಾವಸಥಾನ್ಮೂತ್ರಂ ದೂರಾದಾತ್ಮಾವಸೇಚನಂ ।
ಉಚ್ಛಿಷ್ಟೋನ್ಮಾರ್ಜನಂ ಚೈವ ದೂರಾತ್ಕಾರ್ಯಂ ವಿಜಾನತಾ ॥ ೪೬ ॥

ಉಪಾನಹೌ ಚ ವಸ್ತ್ರಂ ಚ ಧೃತಮನ್ಯೈರ್ನಧಾರಯೇತ್ ।
ಪಾದಂ ಪಾದೇನ ನಾಕ್ರಾಮೇನ್ನ ಕಂಡೂಯೆನ್ನಶೌಚಯೇತ್ ॥ ೪೭ ॥

---

ಮೇಲಕ್ಕೆ ಹಾರಿಹೋಗುತ್ತವೆ. ಅವನನ್ನು ಪ್ರತ್ಯುತ್ಥಾನ ಅಭಿವಾದನಗಳಿಂದ ಸಂತೈಸಿದನಂತರ ಪುನಃ ಆ ಪ್ರಾಣಗಳನ್ನು ಅವನು ಹೊಂದುತ್ತಾನೆ. ವೃದ್ಧರನ್ನು ಯಾವಾಗಲೂ ವಂದಿಸಬೇಕು. ಆಸನಾದಿಗಳಿಂದ ಸತ್ಕರಿಸಬೇಕು. ಅಂಜಲಿಬಂಧ ಪೂರ್ವಕವಾಗಿ ಭಕ್ತಿಯಿಂದ ಅವರನ್ನು ಸೇವಿಸಬೇಕು. ಅವರು ಹೊರಟಾಗ ಹಿಂದೆ ಸ್ವಲ್ಪದೂರ ಅನುಗಮನವನ್ನೂ ಮಾಡಬೇಕು.

೪೪-೫೦. ಒಡೆದು ಹೋಗಿರುವ ಆಸನದಲ್ಲಿ ಕೂಡಬಾರದು. ಒಡೆದ ಕಂಚನ್ನೂ ತ್ಯಜಿಸಬೇಕು. ಒಂದೇ ವಸ್ತ್ರವನ್ನುಟ್ಟು ಭುಂಜಿಸಬಾರದು. ವಸ್ತ್ರ ವಿಲ್ಲದೆ (ನಗ್ನವಾಗಿ) ಸ್ನಾನಮಾಡಬಾರದು. ಗುರುವಿನೊಡನೆ ನಿರ್ಬಂಧದಿಂದ ವೈರವನ್ನು ತಾಳಬಾರದು. ಗುರುವು ಕೋಪದಿಂದಿದ್ದರೂ ವಿವೇಕಿಯಾದವನು ಅವನನ್ನು ಸತ್ಕರಿಸಿ ಪ್ರಸನ್ನನನ್ನಾಗಿ ಮಾಡಿಕೊಳ್ಳಬೇಕು. ವಾಸದ ಮನೆಗೆ ದೂರ ದಲ್ಲಿ ತನಗೆ ಸೇಚನವಾಗದಂತೆ ಮೂತ್ರವನ್ನು ವಿಸರ್ಜಿಸಬೇಕು. ಶೌಚಾದಿಗಳನ್ನೂ ಸಹ ಮನೆಗಿಂತ ದೂರದಲ್ಲಿಯೇ ಮಾಡಬೇಕು. ಪಾದರಕ್ಷೆ, ವಸ್ತ್ರ ಇವು ಮತ್ತೊಬ್ಬ ನಿಂದ ಉಪಯೋಗಿಸಲ್ಪಟ್ಟಿದ್ದಲ್ಲಿ ಅವನ್ನು ತಾನು ಉಪಯೋಗಿಸಬಾರದು. ಒಂದು

ಹೀನಾಙ್ಗಾನತಿರಿಕ್ತಾಙ್ಗಾನ್ವಿದ್ಯಾಹೀನಾನ್ವಿಗರ್ಹಿತಾನ್ ।
ರೂಪದ್ರವಿಣಹೀನಾಂಶ್ಚ ಸತ್ವಹೀನಾಂಶ್ಚ ನಾಕ್ಷಿಪೇತ್ || ೪೮ ||

ಭುಂಜಾನೇ ಬ್ರಾಹ್ಮಣಶ್ರೇಷ್ಠೇ ನೈವ ಶಂಕಾಂ ಸಮಾಚರೇತ್ ।
ದಧಿಚಾಪ್ಯನುಪಾನಂ ಚ ನ ಕರ್ತವ್ಯಂ ಭವಾರ್ಥಿನಾ || ೪೯ ||

ಆಚಮ್ಯ ಚೈವ ಹಸ್ತೇನ ಪರಿಸ್ರಾವ್ಯಂ ತಥೋದಕಂ ।
ಅಂಗುಷ್ಠಚರಣಸ್ಯಾಗ್ರೇ ದಕ್ಷಿಣಸ್ಯ ತಥೋಪರಿ || ೫೦ ||

ಪರಾಪವಾದಂ ನ ಬ್ರೂಯನ್ನಾಪ್ರಿಯಂ ಚ ಕದಾಚನ ।
ನ ಮನ್ಯುಃ ಕಸ್ಯಚಿತ್ಕಾರ್ಯಃ ಕದಾಚಿದಪಿ ವೈ ದ್ವಿಜಃ || ೫೧ ||

ಹೋಮಶ್ಚಾನುದಿತೇ ಸೂರ್ಯೇ ದಾತವ್ಯೋ ದ್ವಿಜಪುಂಗವಾಃ ।
ತಾವದ್ಭವತಿ ವಹ್ನಿಸ್ಥೋ ಯಾವನ್ನೋದೇತಿ ಭಾಸ್ಕರಃ || ೫೨ ||

ಪರಿಪ್ಲುತಂ ಚ ವಹ್ನಿಸ್ಥಃ ಸಮ್ಯಗ್ದತ್ತಾಮಥಾಹುತಿಂ ।
ತದಾ ಭಾಸಯತೇ ಸರ್ವಂ ತ್ರೈಲೋಕ್ಯಂ ಸಚರಾಚರಂ || ೫೩ ||

---

ಕಾಲನ್ನು ಮತ್ತೊಂದು ಕಾಲಿನಿಂದ ಆಕ್ರಮಣವನ್ನೂ, ನವೆಗಾಗಿ ಘರ್ಷಣವನ್ನೂ, ಶೌಚವನ್ನೂ ಸಹ ಮಾಡಬಾರದು. ಅಂಗಹೀನರು, ಅಧಿಕಾಂಗರು, ವಿದ್ಯಾಹೀನರು ನಿಂದಿತರು, ರೂಪಹೀನರು, ದ್ರವ್ಯಹೀನರು ಶಕ್ತಿಹೀನರು ಇವರ ವಿಷಯದಲ್ಲಿ ಆಕ್ಷೇಪಮಾಡಬಾರದು. ಬ್ರಾಹ್ಮಣನು ಭೋಜನಮಾಡುವಾಗ ಮೊಸರು, ಮಜ್ಜಿಗೆ ಅನುಪಾನಾದಿ ವಿಷಯದಲ್ಲಿ ಅವನಿಗೆ ಸಂದೇಹ ಉಂಟಾಗುವಂತೆ ಮಾಡಬಾರದು. ತಾನು ಆಚಮನ ಮಾಡಿ ಶುದ್ಧಿ ಹೊಂದಿ ಬ್ರಾಹ್ಮಣನ ಬಲಗಾಲು, ಅಂಗುಷ್ಠ ಇವುಗಳ ಮೇಲೆ ತನ್ನ ಕೈಯ್ಯಿಂದಲೇ ನೀರನ್ನು ಸುರಿಸಿ ತೊಳೆಯಬೇಕು.

೫೧-೫೫. ಇತರರ ನಿಂದೆಗೆ ಕಾರಣವಾಗುವ ಮಾತನ್ನು ಯಾವಾಗಲೂ ಆಡಬಾರದು. ಅಪ್ರೀತಿಕರವಾದ ಮಾತನ್ನೂ ಆಡಬಾರದು. ಬ್ರಾಹ್ಮಣನಾದವನು ಯಾರ ವಿಷಯದಲ್ಲಿಯೂ ಯಾವಾಗಲೂ ಕೋಪಮಾಡಬಾರದು. ಪ್ರಾತಃಕಾಲದ ಹೋಮವನ್ನು ಸೂರ್ಯೋದಯಕ್ಕೆ ಮುಂಚಿತವಾಗಿಯೇ ಮಾಡಬೇಕು. ಉದಯಕ್ಕೆ ಮೊದಲು ಸೂರ್ಯನು ಅಗ್ನಿಯಲ್ಲಿರುತ್ತಾನೆ. ಆವನು ಅಗ್ನಿಯಲ್ಲಿರುವಾಗ

ಪತಿತೈಸ್ತು ಕಥಾಂ ನೇಚ್ಛೇದ್ದರ್ಶನಂ ಚಾಪಿ ವರ್ಜಯೇತ್ ।
ಸಂಸರ್ಗಂ ನ ಚ ಗಚ್ಛೇತ್ತು ತಥಾಸ್ಯಾಯುರ್ನರಿಷ್ಯತೇ ॥ ೫೪ ॥

ವೃದ್ಧೋ ಜ್ಞಾತಿಸ್ತಥಾಮಿತ್ರಂ ದರಿದ್ರಂ ಚ ಕುಲೋದ್ಗತಂ ।
ಗೃಹೇ ವಾಸಯಿತವ್ಯಾನಿ ಧನ್ಯಾನಿ ಮುನಿಸತ್ತಮಾಃ ॥ ೫೫ ॥

ಬ್ರಾಹ್ಮಣಸ್ಯ ಪದಾಭ್ಯಾಂ ತು ವಸೇತ್ಪೂಜಿತಮಾಲಯಂ ।
ಸಂಧ್ಯಾಸ್ವಧ್ಯಯನಂ ವರ್ಜ್ಯಂ ಭೋಜನಂ ಸ್ವಪನಕ್ರಿಯಾ ॥ ೫೬ ॥

ನಕ್ತಂ ನಕುರ್ಯಾತ್ಪಿತ್ರ್ಯಾಣಿ ಭುಕ್ತ್ವಾ ಚೈವ ಪ್ರಸಾಧನಂ ।
ಪಾನೀಯಸ್ಯ ಕ್ರಿಯಾ ನಕ್ತಂ ನ ಕಾರ್ಯಾ ಭೂತಿಮಿಚ್ಛತಾ ॥ ೫೭ ॥

ಅನಿಮಂತ್ರಿತೋ ನ ಗಚ್ಛೇತ್ತು ಯಜ್ಞಂ ಗಚ್ಛೇತ್ತು ದರ್ಶಕಃ ॥ ೫೮ ॥

ಚರಿತಾನಿ ಪುರಾಣಾನಾಂ ಶ್ರೋತವ್ಯಾನಿ ಪುನಃ ಪುನಃ ।
ಶ್ರುತಿಸ್ಮೃತ್ಯುದಿತಂ ಧರ್ಮಂ ತ್ವನುತಿಷ್ಠೇತ್ತಥಾ ಸದಾ ॥ ೫೯ ॥

ಸುಖೀಸ್ಯಾತ್ತತ್ಪ್ರಸಕ್ತಸ್ತು ಇಹಲೋಕೇ ಪರತ್ರ ಚ ॥ ೬೦ ॥

---

ಮಂತ್ರಪೂರ್ವಕವಾಗಿ ಯಥಾವಿಧಿ ಕೊಟ್ಟ ಆಹುತಿಯನ್ನು ಸ್ವೀಕರಿಸಿ ತೇಜಸ್ವಿಯಾಗಿ ಚರಾಚರಗಳಿಂದ ಕೂಡಿದ ಮೂರು ಲೋಕಗಳನ್ನೂ ಪ್ರಕಾಶಗೊಳಿಸುತ್ತಾನೆ. ಪತಿತರೊಡನೆ ಸಂಭಾಷಣೆಯನ್ನು ಅಪೇಕ್ಷಿಸಲೂ ಬಾರದು ಅವರ ದರ್ಶನವನ್ನೂ ತ್ಯಜಿಸಬೇಕು. ಅವರ ಸಂಪರ್ಗವನ್ನೂ ಮಾಡಬಾರದು. ಹಾಗೆ ಮಾಡಿದಲ್ಲಿ ಆಯಸ್ಸಿಗೇ ಹಾನಿಯುಂಟಾಗುತ್ತದೆ. ವೃದ್ಧನಾದ ಜ್ಞಾತಿ, ಮಿತ್ರ, ತನ್ನ ಕುಲದಲ್ಲಿ ಜನಿಸಿದ ದರಿದ್ರ, ಇವರನ್ನು ತನ್ನ ಮನೆಯಲ್ಲಿ ವಾಸಮಾಡಿಸುವುದರಿಂದ ಶ್ರೇಯಸ್ಸುಂಟು. ಬ್ರಾಹ್ಮಣನ ಪಾದಗಳಿಂದ ಪವಿತ್ರ ಹೊಂದಿರುವ ಮನೆಯಲ್ಲಿಯೇ ವಾಸಮಾಡಬೇಕು.

೫೬–೬೨ ಸಂಧ್ಯಾಕಾಲಗಳಲ್ಲಿ ಅಧ್ಯಯನ, ಭೋಜನ, ಶಯನ ಇವನ್ನು ತ್ಯಜಿಸಬೇಕು. ರಾತ್ರಿಯಲ್ಲಿ ಪಿತೃಕರ್ಮಗಳನ್ನು ಮಾಡಬಾರದು. ಊಟಮಾಡಿದ ಮೇಲೆ ಅಲಂಕಾರಾದಿಗಳನ್ನು ಮಾಡಿಕೊಳ್ಳಬಾರದು. ಅಭ್ಯುದಯಾಪೇಕ್ಷಿಯು ನಿಶಾಸಮಯದಲ್ಲಿ ಪಾನೀಯಪಾನವನ್ನೂ ತ್ಯಜಿಸಬೇಕು, ಆಹ್ವಾನವಿಲ್ಲದೆ ಎಲ್ಲಿಗೂ

**ಶ್ರುತಿಸ್ತು ವೇದೋವಿಜ್ಞೇಯೋ ಧರ್ಮಶಾಸ್ತ್ರಂ ತಥಾ ಸ್ಮೃತಿಃ ।**
**ತೇ ಸರ್ವಾರ್ಥೇಷು ಮೀಮಾಂಸ್ಯೇ ತಾಭ್ಯಾಂ ಧರ್ಮೋ ಹಿ ನಿರ್ಬಭೌ॥ ೬೧ ॥**

**ಯೋಽವಮನ್ಯೇತ ಭೂತೇಭ್ಯೋ ಹೇತುಶಾಸ್ತ್ರಾಶ್ರಯಾದ್ದ್ವಿಜಾಃ ।**
**ಸಾಧುಭಿಃ ಸ ಬಹಿಷ್ಕಾರ್ಯೋ ನರಕಾಗ್ನೇಸ್ತು ಭಾಜನಂ ॥ ೬೨ ॥**

**ವೇದಃ ಸ್ಮೃತಿಃ ಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ ।**
**ಏತಚ್ಚತುರ್ವಿಧಂ ಪ್ರಾಹುಃ ಸಾಧೂನಾಂ ಧರ್ಮಲಕ್ಷಣಂ ॥ ೬೩ ॥**

**ಚಾತುರ್ವರ್ಣ್ಯವ್ಯವಸ್ಥಾನಂ ಯಸ್ಮಿಂದೇಶೇ ನ ವಿದ್ಯತೇ ।**
**ಸ ಮ್ಲೇಚ್ಛವಿಷಯೋ ಜ್ಞೇಯಃ ಆರ್ಯಾವರ್ತಮತಃಪರಂ ॥ ೬೪ ॥**

**ಸರಸ್ವತೀದೃಷದ್ವತ್ಯೋರ್ದೇವನದ್ಯೋರ್ಯದಂತರಂ ।**
**ತಂ ದೇವನಿಹಿತಂ ದೇಶಂ ಬ್ರಹ್ಮಾವರ್ತಂ ಪ್ರಚಕ್ಷತೇ ॥ ೬೫ ॥**

---

ಹೋಗಬಾರದು. ಯಜ್ಞಕ್ಕೆ ಮಾತ್ರ ಪ್ರೇಕ್ಷಕನಾಗಿ ಹೋಗಬಹುದು. ಪುರಾಣಗಳಲ್ಲಿರುವ ಮಹಾಪುರುಷರ ಚರಿತ್ರೆಗಳನ್ನು ಆಗಾಗ್ಗೆ ಕೇಳುತ್ತಿರಬೇಕು. ಶ್ರುತಿ ಸ್ಮೃತಿಗಳಲ್ಲಿ ಹೇಳಿರುವ ಧರ್ಮವನ್ನು ಆಯಾಯ ಕಾಲದಲ್ಲಿ ಯಥೋಕ್ತವಾಗಿ ಆಚರಿಸಬೇಕು. ಈ ವಿಧವಾದ ವಿಹಿತಧರ್ಮದಲ್ಲಿ ಪ್ರಸಕ್ತನಾಗಿರುವವನಿಗೆ ಇಹ ಲೋಕದಲ್ಲಿಯೂ, ಪರಲೋಕದಲ್ಲಿಯೂ ಸುಖವುಂಟು. ಶ್ರುತಿಗಳೆಂದರೆ, ವೇದಗಳು. ಸ್ಮೃತಿಗಳೆಂದರೆ, ಧರ್ಮಶಾಸ್ತ್ರಾದಿಗಳು. ಅವುಗಳನ್ನು ಎಲ್ಲಾ ಕಾರ್ಯಗಳಲ್ಲಿಯೂ ವಿಮರ್ಶೆಮಾಡಬೇಕು. ಅವುಗಳಿಂದಲೇ ಧರ್ಮವು ಪ್ರಕಾಶಹೊಂದಿದೆ. ಯಾವನು ಶಬ್ದಾದಿ ಭೋಗಗಳಿಗೆ ಅಧೀನನಾಗಿ ಯುಕ್ತಿಶಾಸ್ತ್ರದ ಆಶ್ರಯದಿಂದ ಸ್ಮೃತಿ ಮತ್ತು ಶ್ರುತಿಗಳನ್ನು ಅನಾದರಿಸುತ್ತಾನೆಯೋ, ಅವನು ಸತ್ಪುರುಷರಿಂದ ಬಹಿಷ್ಕರಿಸಲ್ಪಡತಕ್ಕವನು. ನರಕಾಗ್ನಿಗೆ ಆಹುತಿಯಾಗತಕ್ಕವನು.

೬೩-೬೭. ವೇದ, ಸ್ಮೃತಿ, ಸದಾಚಾರ, ಆತ್ಮತುಷ್ಟಿ (ವಿಕಲ್ಪವಾಗಿ ವಿಹಿತ ವಿಷಯದಲ್ಲಿ) ಈ ನಾಲ್ಕೂ ಸತ್ಪುರುಷರಿಂದ ಆಚರಿಸಲ್ಪಡುವ ಧರ್ಮಗಳಿಗೆ ಮೂಲ ಪ್ರಮಾಣಗಳು ಚಾತುರ್ವರ್ಣ್ಯವ್ಯವಸ್ಥೆಯು ಯಾವ ದೇಶದಲ್ಲಿ ಕಂಡುಬರುವುದಿಲ್ಲವೋ ಅದು ಮ್ಲೇಚ್ಛದೇಶವೆಂದು ತಿಳಿಯಬೇಕು. ಅದಕ್ಕೆ ಮುಂದೆ ಇರುವುದು. ಆರ್ಯಾವರ್ತ, ಸರಸ್ವತೀದೃಷದ್ವತೀ ನದಿಗಳ ಮಧ್ಯದಲ್ಲಿರುವ ದೇವನಿರ್ಮಿತ

**ಯಸ್ಮಿನ್ ದೇಶೇಯ ಆಚಾರಃ ಪಾರಂಪರ್ಯಕ್ರಮಾಗತಃ ।**
**ವರ್ಣಾನಾಂ ಸಾಂತರಾಲಾನಾಂ ಸ ಸದಾಚಾರ ಉಚ್ಯತೇ ॥ ೬೬ ॥**

**ವೈದಿಕೈಃ ಕರ್ಮಭಿಃ ಪುಣ್ಯೈಃ ನಿಷೇಕಾದಿರ್ದ್ವಿಜನ್ಮನಾಂ ।**
**ಕಾರ್ಯಃ ಶರೀರಸಂಸ್ಕಾರಃ ಪಾವನಃ ಪ್ರೇತ್ಯ ಚೇಹ ಚ ॥ ೬೭ ॥**

**ಗಾರ್ಭೈಃ ಕೃತ್ಯೈರ್ಜಾತಕರ್ಮಚೌಲಮೌಂಜೀನಿಬಂಧನೈಃ ।**
**ಬೈಜಿಕಂ ಗಾರ್ಭಿಕಂ ಚೈನೋ ದ್ವಿಜಾನಾಮುಪಹನ್ಯತೇ ॥ ೬೮ ॥**

**ಸ್ವಾಧ್ಯಾಯೇನ ವ್ರತೈರ್ಹೋಮೈಃ ತ್ರೈವಿದ್ಯೇನೇಜ್ಯಯಾ ಸುತೈಃ ।**
**ಮಹಾಯಜ್ಞೈಶ್ಚ ಯಜ್ಞೈಶ್ಚ ಬ್ರಾಹ್ಮೀಯಂ ಕ್ರಿಯತೇ ತನುಃ ॥ ೬೯ ॥**

**ಗರ್ಭಾಷ್ಟಮಾಬ್ದೇ ಕುರ್ವೀತ ಬ್ರಾಹ್ಮಣಸ್ಯೋಪನಾಯನಂ ।**
**ಗರ್ಭಾದೇಕಾದಶೇ ರಾಜ್ಞಃ ಗರ್ಭಾತ್ತು ದ್ವಾದಶೇ ವಿಶಃ ॥ ೭೦ ॥**

**ಆಷೋಡಶಾದ್ಬ್ರಾಹ್ಮಣಸ್ಯ ಸಾವಿತ್ರೀ ನಾತಿವರ್ತತೇ ।**
**ಆದ್ವಾವಿಂಶಾತ್ಕ್ಷತ್ರಬಂಧೋರಾಚತುರ್ವಿಂಶತೇರ್ವಿಶಃ ॥ ೭೧ ॥**

---

ವಾದ ದೇಶವನ್ನು ಬ್ರಹ್ಮಾವರ್ತವೆಂದು ಹೇಳುತ್ತಾರೆ. ಯಾವ ದೇಶದಲ್ಲಿ ಯಾವುದೊಂದು ಆಚಾರವು ಪರಂಪರೆಯಿಂದಲೂ ಆಯಾಯ ವರ್ಣಗಳಲ್ಲಿ ವಿರುದ್ಧಾಭಿಪ್ರಾಯವಿಲ್ಲದೆ ನಡೆದು ಬರುತ್ತಿದೆಯೋ ಅದೇ ಸದಾಚಾರವೆಂದು ಹೇಳಲ್ಪಡುತ್ತದೆ. ಪುಣ್ಯಕರಗಳಾದ ನಿಷೇಕಾದಿ ವೈದಿಕಕರ್ಮಗಳು ದ್ವಿಜರಾದವರಿಗೆ ಶರೀರಸಂಸ್ಕಾರಕಗಳಾದುದರಿಂದ ಅವನ್ನು ಮಾಡಿಯೇ ಮಾಡಬೇಕು. ಇಂತಹ ವಿಹಿತಸಂಸ್ಕಾರಗಳು ಇಹಲೋಕದಲ್ಲಿಯೂ, ಪರಲೋಕದಲ್ಲಿಯೂ, ಶ್ರೇಯಸ್ಕರಗಳಾಗಿಯೂ, ಪವಿತ್ರಗಳಾಗಿಯೂ ಇವೆ.

೬೮–೭೩. ಗರ್ಭದಲ್ಲಿರುವಾಗ ಶುದ್ಧಿಗಾಗಿ ಮಾಡಿದ ಹೋಮಾದಿಗಳಿಂದಲೂ, ಅನಂತರ ಮಾಡುವ ಜಾತಕರ್ಮ, ಚೌಲ, ಉಪನಯನಾದಿ ಸಂಸ್ಕಾರಗಳಿಂದಲೂ, ದ್ವಿಜರಿಗೆ ಬೀಜದಿಂದಲೂ, ಗರ್ಭದಿಂದಲೂ, ಸಂಭವಿಸಬಹುದಾದ ಅಶುದ್ಧಿಯು ಹೋಗಲಾಡಿಸಲ್ಪಡುತ್ತದೆ. ವೇದಾಧ್ಯಯನ, ನಿಯಮಗಳು, ಸಾಯಂಪ್ರಾತಃಕಾಲದ ಹೋಮಗಳು ತ್ರೈವಿದ್ಯವೆಂಬ ವ್ರತವಿಶೇಷ, ದೇವರ್ಷಿಪಿತೃತರ್ಪಣರೂಪವಾದ ಇಜ್ಯೆಗಳು, ಗೃಹಸ್ಥನಾದಾಗ ಮಾಡಬೇಕಾದ ಪುತ್ರೋತ್ಪಾದನೆ,

ಅತ ಊರ್ಧ್ವಂ ತ್ರಯೋಽಪ್ಯೇತೇ ಯಥಾಕಾಲಮಸಂಸ್ಕೃತಾಃ ।
ಸಾವಿತ್ರೀಪತಿತಾ ವ್ರಾತ್ಯಾ ಭವಂತಿ ಚ ವಿಗರ್ಹಿತಾಃ ॥ ೭೨ ॥

ಬ್ರಹ್ಮಣಃ ಪ್ರಣವಂ ಕುರ್ಯಾದಾದಾವಂತೇ ಚ ಸರ್ವದಾ ।
ಸ್ರವತ್ಯನೋಂಕೃತಂ ಪೂರ್ವಂ ಪರಸ್ತಾಚ್ಚ ವಿಶೀರ್ಯತೇ ॥ ೭೩ ॥

ಇಂದ್ರಿಯಾಣಾಂ ವಿಚರತಾಂ ವಿಷಯೇಷ್ವಪಹಾರಿಷು ।
ಸಂಯಮೇ ಯತ್ನಮಾತಿಷ್ಠೇದ್ವಿದ್ವಾನ್ ಯಂತೇವ ವಾಜಿನಾಂ ॥ ೭೪ ॥

ವಶೀಕೃತ್ವೇಂದ್ರಿಯಗ್ರಾಮಂ ಸಂಯಮ್ಯ ಚ ಮನಸ್ತಥಾ ।
ಸರ್ವಾನ್ ಸಂಸಾಧಯೇತ್ಯರ್ಥಾನಾಕ್ಷಿಣ್ವನ್ ಯೋಗತಸ್ತನುಂ ॥ ೭೫ ॥

---

ಪಂಚಮಹಾಯಜ್ಞಗಳು, ಜ್ಯೋತಿಷ್ಟೋಮಾದಿಯಜ್ಞಗಳು, ಇವುಗಳಿಂದ ದ್ವಿಜರ ಶರೀರದಲ್ಲಿರುವ ಆತ್ಮವಸ್ತುವು ಬ್ರಹ್ಮಪ್ರಾಪ್ತಿಗೆ ಅರ್ಹವಾಗುವಂತೆ ಮಾಡಲ್ಪಡುತ್ತದೆ. ಇಂತಹ ಕರ್ಮಾನುಷ್ಠಾನದಿಂದ ಮುಂದಿನ ಪರ್ವಕ್ರಮದಿಂದ ಆತ್ಮನಿಗೆ ಬ್ರಹ್ಮ ಪ್ರಾಪ್ತಿಯುಂಟಾಗುತ್ತದೆ ಎಂದು ತಾತ್ಪರ್ಯ. ಬ್ರಾಹ್ಮಣನು ಉಪನಯನವನ್ನು ಗರ್ಭಾಷ್ಟಮದಲ್ಲಿಯೂ, ಕ್ಷತ್ರಿಯನು ಗರ್ಭೈಕಾದಶವರ್ಷದಲ್ಲಿಯೂ, ವೈಶ್ಯನು ಗರ್ಭಾದ್ದ್ವಾದಶವರ್ಷದಲ್ಲಿಯೂ ಮಾಡಬೇಕು. ಬ್ರಾಹ್ಮಣನಿಗೆ ಹದಿನಾರು ವರ್ಷದವರಿಗೂ, ಸಾವಿತ್ರಿಯ ಉಪದೇಶಾರ್ಹತೆಯುಂಟು. ಕ್ಷತ್ರಿಯನಿಗೆ ಇಪ್ಪತ್ತೆರಡು ವರ್ಷಗಳವರಿಗೂ ವೈಶ್ಯನಿಗೆ ಇಪ್ಪತ್ತನಾಲ್ಕನೆಯ ವರ್ಷದವರಿಗೂ ಅರ್ಹತೆ ಇರುತ್ತದೆ. ಅನಂತರ ಈ ಮೂರು ವರ್ಣದವರೂ ಯಥಾಕಾಲದಲ್ಲಿ ಉಪನಯನಸಂಸ್ಕಾರ ವಿಲ್ಲದುದರಿಂದ ಸಾವಿತ್ರಿಯಿಂದ ಭಗ್ನರಾಗಿ ವ್ರಾತ್ಯರಾಗಿಯೂ, ಧಾರ್ಮಿಕರಿಂದ ಬಹಿಷ್ಕೃತರಾಗಿಯೂ ಆಗುತ್ತಾರೆ. ವೇದಾಧ್ಯಯನಕಾಲದಲ್ಲಿ ಮೊದಲಿನಲ್ಲಿಯೂ, ಕಡೆಯಲ್ಲಿಯೂ ಪ್ರಣವವನ್ನು ಉಚ್ಚರಿಸಬೇಕು ಮೊದಲು ಪ್ರಣವವಿಲ್ಲದಿದ್ದಲ್ಲಿ ಅಧ್ಯಯನವು ಧಾರಣೆಹೊಂದದೆ ಶಿಥಿಲವಾಗುತ್ತದೆ. ಕೊನೆಯಲ್ಲಿ ಇಲ್ಲದಿದ್ದರೆ ಸ್ವೀಕೃತವಾದ ವೇದವು ನಶಿಸಿಹೋಗುತ್ತದೆ.

೭೪–೭೮. ಚಿತ್ತಾಪಹಾರಿಗಳಾದ ಶಬ್ದಾದಿವಿಷಯಗಳಲ್ಲಿ ಇಂದ್ರಿಯಗಳು ವಿಹರಿಸುತ್ತಿರುತ್ತವೆ. ಇಂತಹ ಇಂದ್ರಿಯಗಳನ್ನು ನಿಗ್ರಹಿಸುವ ವಿಷಯದಲ್ಲಿ ಕುದುರೆ ಗಳನ್ನು ಹತೋಟಿಗೆ ತರುವ ಸಾರಥಿಯಂತೆ ಪಂಡಿತನಾದವನು ಯಾವಾಗಲೂ

ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ।
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥ ೭೬ ॥

ಯಾ ದುಸ್ತ್ಯಜಾ ದುರ್ಮತಿಭಿಃ ಯಾ ನ ಜೀರ್ಯತಿ ಜೀರ್ಯತಃ ।
ಯಾಸೌ ಪ್ರಾಣಾಂತಿಕೋ ರೋಗಃ ತಾಂ ತೃಷ್ಣಾಂ ತ್ಯಜತಃ ಸುಖಂ ॥ ೭೭ ॥

ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।
ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ॥ ೭೮ ॥

ಇಂದ್ರಿಯಾಣಾಂ ಪ್ರಸಂಗೇನ ದೋಷಮನ್ವೇತ್ಯಸಂಶಯಂ ।
ಸನ್ನಿಯಮ್ಯ ತು ತಾನ್ಯೇವ ತತಃ ಸಿದ್ಧಿಂ ಸ ಗಚ್ಛತಿ ॥ ೭೯ ॥

ಅಭಿವಾದನಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ ।
ಚತ್ವಾರಿ ಸಂಪ್ರವರ್ಧಂತೇ ಹ್ಯಾಯುರ್ಮೇಧಾ ಯಶೋ ಬಲಂ ॥ ೮೦ ॥

---

ಪ್ರಯತ್ನಿಸುತ್ತಿರಬೇಕು. ಇಂದ್ರಿಯಗಳನ್ನು ಸ್ವಾಧೀನಮಾಡಿಕೊಂಡು ಮನಸ್ಸನ್ನೂ ತಡೆದು ಯೋಗದಿಂದ ಶರೀರವನ್ನು ಶಿಕ್ಷಿಸುತ್ತಾ ಎಲ್ಲಾ ಪುರುಷಾರ್ಥಗಳನ್ನೂ ಹೊಂದುತ್ತಾನೆ. ಮನುಷ್ಯನಾದವನು ಇಷ್ಟವಸ್ತುಗಳ ಯಥೇಷ್ಟಾನುಭವದಿಂದ ಕಾಮವೆಂಬ ವಿಷಯಾಭಿಲಾಷೆಯನ್ನು ಉಪಶಾಂತಿಗೊಳಿಸಲು ಸಾಧ್ಯವೇ ಇಲ್ಲ. ಆ ಅಭಿಲಾಷೆಯು ಪುನಃ ಪುನಃ ವಿಷಯಗಳ ಸಂಬಂಧದಿಂದ ಹವಿಸ್ಸಿನಿಂದ ಅಗ್ನಿಯಂತೆ ಅಭಿವೃದ್ಧಿಯನ್ನೇ ಹೊಂದುತ್ತದೆ. ದುರ್ಬುದ್ಧಿಗಳಿಂದ ಯಾವುದನ್ನು ಬಿಡಲು ಸಾಧ್ಯವೇ ಇಲ್ಲವೋ ಯಾವುದು ದೇಹವು ವಾರ್ಧಕ್ಯದಿಂದ ಜೀರ್ಣವಾದರೂ ಜೀರ್ಣವಾಗುವುದಿಲ್ಲವೋ ಅಂತಹ ಪ್ರಾಣಾಂತಕವಾದ ಮಹಾರೋಗದಂತಿರುವ ಆಶೆಯನ್ನು ಬಿಟ್ಟಲ್ಲಿಯೇ ಮಾನವನು ಸುಖಿಯಾಗುತ್ತಾನೆ. ಕಾಮ, ಕ್ರೋಧ, ಲೋಭ ಇವು ಮೂರು ಬಗೆಯಾದ ನರಕದ್ವಾರಗಳು. ಇವು ಆತ್ಮನಾಶಕವಾಗುತ್ತವೆ. ಆದುದರಿಂದ ಈ ಮೂರನ್ನೂ ಮೊಟ್ಟಮೊದಲು ತ್ಯಜಿಸಬೇಕು

೭೯-೮೦ ಇಂದ್ರಿಯಗಳ ಪ್ರಸಂಗವು ಹೆಚ್ಚಾದಂತೆಲ್ಲಾ ಮನುಷ್ಯನು ದೋಷಹೊಂದುತ್ತಲೇ ಇರುತ್ತಾನೆ. ಅವುಗಳನ್ನೇ ನಿಗ್ರಹಿಸಿದಲ್ಲಿ ಅದರಿಂದಲೇ ಸಿದ್ಧಿಯನ್ನು ಹೊಂದುತ್ತಾನೆ. ವೃದ್ಧರನ್ನು ಅಭಿವಾದನದಿಂದಲೂ, ಸೇವೆಯಿಂದಲೂ ಸಂತೋಷಪಡಿಸುವವನಿಗೆ ಆಯುಸ್ಸು, ಬುದ್ಧಿ, ಶಕ್ತಿ, ಯಶಸ್ಸು, ಬಲ ಈ ನಾಲ್ಕೂ

ಬ್ರಾಹ್ಮಣಂ ಕುಶಲಂ ಪೃಚ್ಛೇತ್ ಕ್ಷತ್ರಬಂಧುಮನಾಮಯಂ ।
ವೈಶ್ಯಂ ಕ್ಷೇಮಂ ಸಮಾಗಮ್ಯ ಶೂದ್ರಂ ಚಾರೋಗ್ಯಮೇವ ಚ　　॥ ೮೧ ॥

ವಿತ್ತಂ ಬಂಧುರ್ವಯಃ ಕರ್ಮ ವಿದ್ಯಾ ಭವತಿ ಪಂಚಮೀ ।
ಏತಾನಿ ಮಾನ್ಯಸ್ಥಾನಾನಿ ಗರಿಯೋ ಯದ್ಯದುತ್ತರಂ　　॥ ೮೨ ॥

ನ ಹಾಯನೈರ್ನ ಪಲಿತೈಃ ನ ವಿತ್ತೇನ ನ ಬಂಧುಭಿಃ ।
ಋಷಯಃ ಚಕ್ರಿರೇ ಧರ್ಮಂ ಯೋಽನೂಚಾನಃ ಸನೋ ಮಹಾನ್ ॥ ೮೩ ॥

ವಿಪ್ರಾಣಾಂ ಜ್ಞಾನತೋ ಜ್ಯೈಷ್ಠ್ಯಂ ಕ್ಷತ್ರಿಯಾಣಾಂ ಚ ವೀರ್ಯತಃ ।
ವೈಶ್ಯಾನಾಂ ಧಾನ್ಯಧನತಃ ಶೂದ್ರಾಣಾಮೇವ ಜನ್ಮತಃ　　॥ ೮೪ ॥

---

ಅಭಿವೃದ್ಧಿ ಹೊಂದುತ್ತದೆ. ಬ್ರಾಹ್ಮಣನನ್ನು ಕುಶಲಶಬ್ದದಿಂದಲೂ, ಕ್ಷತ್ರಿಯನನ್ನು ಅನಾಮಯಶಬ್ದದಿಂದಲೂ, ವೈಶ್ಯನನ್ನು ಕ್ಷೇಮಶಬ್ದದಿಂದಲೂ, ಶೂದ್ರನನ್ನು ಆರೋಗ್ಯಶಬ್ದದಿಂದಲೂ ಕುಶಲಪ್ರಶ್ನೆ ಮಾಡಬೇಕು ಐಶ್ವರ್ಯ, ಬಂಧುವರ್ಗ, ವಯಸ್ಸು, ಕರ್ಮ, ವಿದ್ಯಾ ಇವು ಪ್ರತಿಯೊಬ್ಬನಿಗೂ ಗಣ್ಯತೆಗೆ ಕಾರಣವಾಗುತ್ತದೆ. ಇವುಗಳಲ್ಲಿಯೂ ಉತ್ತರೋತ್ತರಗಳು ಗಣ್ಯತೆಗೆ ಮುಖ್ಯವಾಗುತ್ತವೆ. ವೇದಗಳಲ್ಲಿ ಅಡಗಿರುವ ಪುರಾತನವಾದ ಈ ಧರ್ಮಗಳೇ ಮಹತ್ವವುಳ್ಳವುಗಳು. ಇಂತಹ ಮಹಾ ಧರ್ಮಗಳನ್ನು ಆಚರಿಸಿ ಪ್ರಕಾಶಪಡಿಸಿದುದರಿಂದಲೇ ಋಷಿಗಳಿಗೂ ಮಹತ್ವ ಉಂಟಾಯಿತೇ ಹೊರತು, ಹೆಚ್ಚಾದ ವಯಸ್ಸೇ ಆಗಲಿ, ನೆರತ ಗಡ್ಡಮೀಸೆಗಳೇ ಆಗಲಿ, ಹಣವೇ ಆಗಲಿ, ಬಾಂಧವ್ಯವೇ ಆಗಲಿ ಋಷಿಗಳಿಗೆ ಮಹತ್ವವನ್ನುಂಟು ಮಾಡಲಿಲ್ಲ. ಆದುದರಿಂದ ಹಿಂದೆ ಹೇಳಿರುವ ಮಾನ್ಯಸ್ಥಾನಕ್ಕಿಂತಲೂ ಇಂತಹ ಧರ್ಮಾನುಷ್ಠಾನವೇ ಮಾನ್ಯಸ್ಥಾನವೆಂದು ತಾತ್ಪರ್ಯ.

೮೪–೮೮. ಬ್ರಾಹ್ಮಣರಿಗೆ ಉತ್ಕರ್ಷವು ಜ್ಞಾನದಿಂದ, ಕ್ಷತ್ರಿಯರಿಗೆ ಪರಾಕ್ರಮದಿಂದ, ವೈಶ್ಯರಿಗೆ ಧನಧಾನ್ಯ ಸಮೃದ್ಧಿಯಿಂದ, ಶೂದ್ರರಿಗೆ ಕೇವಲ ವಯಸ್ಸಿನಿಂದಲೆಂದೂ ತಿಳಿಯಬೇಕು. ಯಾವ ಪ್ರಾಣಿಯನ್ನೂ ಹಿಂಸಿಸದೆ ಇದ್ದು ತನ್ನ ಶ್ರೇಯಸ್ಸನ್ನು ಕಾಪಾಡಿಕೊಳ್ಳಬೇಕು. ಧರ್ಮಾಪೇಕ್ಷಿಯಾದವನು ಈ ಅಹಿಂಸಾ ನೀತಿಗೆ ತಕ್ಕಂತೆ ಮಧುರವಾದ ಮಾತನ್ನೇ ಉಪಯೋಗಿಸಬೇಕು. ಯಾವನಿಗೆ ವಾಕ್ಕೂ, ಮನಸ್ಸೂ ಶುದ್ಧವಾಗಿದ್ದು ಚನ್ನಾಗಿ ರಕ್ಷಿಸಲ್ಪಟ್ಟಿರುವುವೋ ಅವನೇ

ಅಹಿಂಸಯೈವ ಭೂತಾನಾಂ ಕಾರ್ಯಂ ಶ್ರೇಯೋನುಪಾಲನಂ ।
ವಾಕ್ಚೈವ ಮಧುರಾ ಹ್ಯಸ್ಯಾಃ ಪ್ರಯೋಜ್ಯಾ ಧರ್ಮಕಾಂಕ್ಷಿಣಾ ॥ ೮೫ ॥

ಯಸ್ಯ ವಾಙ್ಮನಸೀ ಶುದ್ಧೇ ಸಮ್ಯಗ್ಗುಪ್ತೇ ಚ ಸರ್ವದಾ ।
ಸ ವೈ ಸರ್ವಮವಾಪ್ನೋತಿ ವೇದಾಂತಗಮನಾತ್ಫಲಂ ॥ ೮೬ ॥

ವೇದಮೇವ ಸದಾಭ್ಯಸ್ಯೇತ್ತಪಸ್ತಪ್ಸ್ಯಂ ದ್ವಿಜೋತ್ತಮಾಃ ।
ವೇದಾಭ್ಯಾಸೋ ಹಿ ವಿಪ್ರಸ್ಯ ತಪಃ ಪರಮಿಹೋಚ್ಯತೇ ॥ ೮೭ ॥

ಯೋಽನಧೀತ್ಯ ದ್ವಿಜೋ ವೇದಾನನ್ಯತ್ರ ಕುರುತೇ ಶ್ರಮಂ ।
ಸ ಜೀವನ್ನೇವ ಶೂದ್ರತ್ವಮಾಶುಗಚ್ಛತಿ ಸಾನ್ವಯಃ ॥ ೮೮ ॥

ಮಾತುರಗ್ರೇಽಧಿಜನನಂ ದ್ವಿತೀಯಂ ಮೌಂಜಿಬಂಧನಂ ।
ತೃತೀಯಂ ಯಜ್ಞದೀಕ್ಷಾಯಾಂ ದ್ವಿಜಸ್ಯ ಶ್ರುತಿಚೋದನಾತ್ ॥ ೮೯ ॥

ನ ಹ್ಯಸ್ಮಿನ್ ಸಜ್ಜತೇ ಕರ್ಮ ಕಿಂಚಿದಾಮೌಂಜಿಬಂಧನಾತ್ ।
ಸಾಭಿವ್ಯಾಹಾರಯೇದ್ಬ್ರಹ್ಮ ಸ್ವಧಾನಿನಯನಾದೃತೇ ॥ ೯೦ ॥

---

ವೇದಾಂತಶಾಸ್ತ್ರದ ಅಧ್ಯಯನದಿಂದುಂಟಾಗುವ ಎಲ್ಲಾ ಫಲಕ್ಕೂ ಭಾಗಿಯಾಗುತ್ತಾನೆ. ಬ್ರಾಹ್ಮಣನಿಗೆ ವೇದಾಭ್ಯಾಸವೇ ಮುಖ್ಯವಾದ ತಪಸ್ಸೆಂದು ಹೇಳಲ್ಪಟ್ಟಿದೆ. ಆದುದರಿಂದ ಇಂತಹ ತಪಸ್ಸನ್ನು ಹೊಂದಲು ಯಾವಾಗಲೂ ವೇದವನ್ನೇ ಅಭ್ಯಾಸಿಸಬೇಕು. ಯಾವ ದ್ವಿಜನು ವೇದಗಳನ್ನು ಅಭ್ಯಾಸಮಾಡದೆ ಇತರ ಶಾಸ್ತ್ರಾದಿಗಳಲ್ಲಿ ಶ್ರಮಹೊಂದುತ್ತಾನೆಯೋ ಅವನು ಬದುಕಿರುವಾಗಲೇ ತನ್ನ ವಂಶದೊಡನೆ ಶೂದ್ರತ್ವವನ್ನೇ ಹೊಂದುತ್ತಾನೆ.

೮೯-೯೦. ಬ್ರಾಹ್ಮಣನಿಗೆ ಮೊದಲನೆಯ ಜನನವು ತಾಯಿಯಿಂದ, ಎರಡನೆಯ ಜನನವೇ ಉಪನಯನ, ಜ್ಯೋತಿಷ್ಟೋಮಾದಿಯಜ್ಞದೀಕ್ಷೆಯಿಂದ ಮೂರನೆಯ ಜನನವೂ ಉಂಟಾಗುತ್ತದೆ ಎಂಬುದು ವೇದದಲ್ಲಿಯೇ ವಿಹಿತವಾಗಿದೆ ಉಪನಯನಕ್ಕೆ ಮೊದಲು ಇವನಿಗೆ ಯಾವ ಕರ್ಮದಲ್ಲಿಯೂ ಅಧಿಕಾರವಿರುವುದಿಲ್ಲ. ಉಪನಯನಕ್ಕೆ ಮೊದಲು ವೇದವನ್ನು ಉಚ್ಚರಿಸಕೂಡದು. ನವಶ್ರಾದ್ಧಾದಿ

ಶೂದ್ರೇಣ ಹಿ ಸಮಸ್ತಾವದ್ಯಾವದ್ವೇದಂ ನ ಜಾಯತೇ ।
ಕೃತೋಪನಯನಸ್ಯಾಸ್ಯ ವ್ರತಾದೇಶನಮಿಷ್ಯತೇ ॥ ೯೧ ॥

ಗುರೋರ್ಯತ್ರ ಪರೀವಾದೋ ನಿಂದಾ ಚಾಪಿ ಪ್ರವರ್ತತೇ ।
ಕರ್ಣೌ ತತ್ರ ಪಿಧಾತವ್ಯೌ ಗಂತವ್ಯಂ ವಾ ತತೋಽನ್ಯತಃ ॥ ೯೨ ॥

ಖರೋ ಭವೇತ್ಪರೀವಾದೀ ಶ್ವಾ ವೈ ಭವತಿ ನಿಂದಕಃ ।
ಪರಿಭೋಕ್ತಾ ಕ್ರಿಮಿರ್ಭವತಿ ಕೀಟೋ ಭವತಿ ಮತ್ಸರೀ ॥ ೯೩ ॥

ದೂರಸ್ಥೋ ನಾರ್ಚಯೇದೇನಂ ನ ಕ್ರುದ್ಧೋ ನಾಂತಿಕೇ ಸ್ತ್ರಿಯಾಃ ।
ಏಕಾಸನಸ್ಥೋ ನ ಭವೇದಾಪನ್ನೋಽಪಿ ಕದಾಚನ । ॥ ೯೪ ॥

ಗೋಽಶ್ವೋಷ್ಟ್ರಯಾನಪ್ರಾಸಾದಸ್ರಸ್ತರೇಷು ಕಟೇಷು ಚ ।
ನಾಸೀತ ಗುರುಣಾ ಸಾರ್ಧಂ ಶಿಲಾಫಲಕನೌಷು ಚ ॥ ೯೫ ॥

---

ಮಂತ್ರೋಚ್ಚಾರಣೆಯೂ ಇರುವುದಿಲ್ಲ. ವೇದಾಧ್ಯಯನದಿಂದ ವೇದಜ್ಞನಾಗುವುದಕ್ಕೆ ಮುಂಚೆ ಇವನೂ ಶೂದ್ರನೊಡನೆ ಸಮನಾಗುತ್ತಾನೆ. ಉಪನಯನವಾದ ನಂತರ ಅಪೋಶನ, ಕರ್ಮ, ಕುರು ಇತ್ಯಾದಿಗಳಿಂದ ವಿಹಿತವಾದ ವ್ರತಗಳಿಗೆ ಅರ್ಹನಾಗುತ್ತಾನೆ. ತನ್ನ ಗುರುವಿನ ವಿಷಯದಲ್ಲಿ ನಿಂದೆಯಾಗಲಿ, ಅಪವಾದವಾಗಲಿ ನಡೆಯುತ್ತಿದ್ದಲ್ಲಿ ತಾನು ಅದನ್ನು ಕೇಳದೆ ಕಿವಿಗಳನ್ನು ಮುಚ್ಚಿಕೊಳ್ಳಬೇಕು. ಅಥವಾ ಬೇರೆ ಕಡೆಗೆ ಹೊರಟುಹೋಗಬೇಕು. ಗುರುವಿನ ಮೇಲೆ ಅಪವಾದ ಹೊರಿಸುವವನು ಕತ್ತೆಯಾಗಿ ಹುಟ್ಟುತ್ತಾನೆ, ನಿಂದಿಸುವವನು ನಾಯಿಯಾಗಿ ಹುಟ್ಟುತ್ತಾನೆ. ಅನುಚಿತವಾದ ಗುರುವಿನ ದ್ರವ್ಯದಿಂದ ಜೀವಿಸುವವನು ಕ್ರಿಮಿಯಾಗುತ್ತಾನೆ. ಮತ್ಸರವುಳ್ಳವನು ಕೀಟವಾಗುತ್ತಾನೆ. ದೂರದಲ್ಲಿದ್ದು ಗುರುವನ್ನು ಪೂಜಿಸಬಾರದು. ಕೋಪದಿಂದ ಕೂಡಿಯೂ ಪೂಜಿಸಬಾರದು. ಸ್ತ್ರೀಸಮೀಪದಲ್ಲಿಯೂ ಪೂಜಿಸಬಾರದು. ಬಹಳ ತೊಂದರೆಗೆ ಸಿಕ್ಕಿದ್ದರೂ ಗುರುವಿನೊಡನೆ ಏಕಾಸನದಲ್ಲಿ ಯಾವಾಗಲೂ ಕೂಡಬಾರದು.

೯೫-೧೦೦. ಎತ್ತು, ಕುದುರೆ, ಒಂಟೆ ಮುಂತಾದುವುಗಳಿಂದ ಕೂಡಿದ ಯಾನಗಳಲ್ಲಿಯೂ, ಪ್ರಾಸಾದ, ಒಳ್ಳೆಯ ಆಸನ, ಚಾಪೆ ಮುಂತಾದುವುಗಳಲ್ಲಿಯೂ,

ಗುರೋರ್ಗುರೌ ಸನ್ನಿಹಿತೇ ಗುರುವದ್ವೃತ್ತಿಮಾಚರೇತ್ ।
ಅಧ್ಯಾಪಯನ್ಗುರುಸುತೋ ಗುರುವನ್ಮಾನಮರ್ಹತಿ ॥ ೯೬ ॥

ನ ಕುರ್ಯಾದ್ಗುರುಪುತ್ರಸ್ಯ ಪಾದಯೋಶ್ಚಾವನೇಜನಂ ।
ಗುರುವತ್ಪ್ರತಿಪೂಜ್ಯಾಸ್ತು ಸವರ್ಣಾ ಗುರುಯೋಷಿತಃ ॥ ೯೭ ॥

ಅಸವರ್ಣಾಸ್ತು ಸಂಪೂಜ್ಯಾಃ ಪ್ರತ್ಯುತ್ಥಾನಾಭಿವಾದನೈಃ ।
ಅಭ್ಯಂಜನಂ ಸ್ನಾಪನಂ ಚ ಗಾತ್ರೋತ್ಸಾದನಮೇವ ಚ ॥ ೯೮ ॥

ಗುರುಪತ್ನ್ಯಾ ನ ಕಾರ್ಯಾಣಿ ಕೇಶಾನಾಂ ಚ ಪ್ರಸಾಧನಂ ।
ಗುರುಪತ್ನೀ ಚ ಯುವತಿಃ ನಾಭಿವಾದ್ಯೇಹ ಪಾದಯೋಃ ॥ ೯೯ ॥

ಪೂರ್ಣಾ ವಿಂಶತಿವರ್ಷೇಣ ಗುಣದೋಷೌ ವಿಜಾನತಾ ।
ಮಾತ್ರಾ ಸ್ವಸ್ರಾ ದುಹಿತ್ರಾವಾ ನ ವಿವಿಕ್ತಾಸನೋ ಭವೇತ್ ॥ ೧೦೦ ॥

ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ ।
ವಿಪ್ರೋಷ್ಯ ಪಾದಗ್ರಹಣಮನ್ವಹಂಚಾಭಿವಾದನಂ ॥ ೧೦೧ ॥

---

ಕಲ್ಲುಬೆಂಚು, ದೋಣಿ ಮುಂತಾದುವುಗಳಲ್ಲಿಯೂ ಸಹ ಗುರುವಿನೊಡನೆ ಕೂಡ ಬಾರದು. ಗುರುವಿಗೂ ಗುರುವಾದವರು ಬಂದಲ್ಲಿ, ಅವರಲ್ಲಿಯೂ ಗುರುವಿಗೆ ಇರುವ ರೀತಿಯಿಂದಲೇ ವರ್ತಿಸಬೇಕು. ಅಧ್ಯಾಪನಕಾಲದಲ್ಲಿ, ಗುರುಪುತ್ರನೂ ಗುರುವಿನಂತೆ ಸತ್ಕಾರಾರ್ಹನಾಗುತ್ತಾನೆ. ಗುರುಪುತ್ರನ ಪಾದಗಳನ್ನು ತೊಳೆಯಬಾರದು. ಗುರುವಿಗೆ ಸಂಬಂಧಿಸಿದ ಸವರ್ಣ ಸ್ತ್ರೀಯರೂ ಗುರುವಿನಂತೆಯೇ ಸತ್ಕಾರಾರ್ಹರು. ಅಸವರ್ಣಸ್ತ್ರೀಗಳು ಮಾತ್ರ ಪ್ರತ್ಯುತ್ಥಾನಾಭಿವಾದನಗಳಿಂದ ಮಾತ್ರ ಪೂಜಿಸಲು ಅರ್ಹರಾಗುತ್ತಾರೆ ಗುರುಪತ್ನಿಗೆ ಅಭ್ಯಂಗ, ಸ್ನಾನ, ಗಾತ್ರಗಳ ಉಜ್ಜುವಿಕೆ. ಕೇಶಸಂಸ್ಕಾರ ಇತ್ಯಾದಿಗಳನ್ನು ಮಾಡಬಾರದು. ಇಪ್ಪತ್ತು ವರ್ಷದ ವಯಸ್ಸಿನಿಂದ ಕೂಡಿ ಯುವತಿಯಾಗಿರುವ ಗುರುಪತ್ನೀ ವಿಷಯದಲ್ಲಿ ಪಾದಾಭಿವಂದನವನ್ನೂ ಮಾಡಬಾರದು. ಇದು ಗುಣದೋಷಗಳನ್ನು ತಿಳಿದಿರುವ ವಿವೇಕಿಯ ಕೃತ್ಯ. ತಾಯಿ, ತಂಗಿ, ಮಗಳು ಅವರೊಡನೆಯೂ ಏಕಾಂತದಲ್ಲಿ ಸೇರಿರಬಾರದು.

೧೦೧-೧೦೭. ಏಕೆಂದರೆ ಪ್ರಬಲಗಳಾಣದ ಇಂದ್ರಿಯಗಳು ಪಂಡಿತನನ್ನೂ ಸಹ ಅಮಾರ್ಗಕ್ಕೆ ಸೆಳೆಯುತ್ತವೆ. ಗುರುಪತ್ನೀ ವಿಷಯದಲ್ಲಿ ತಾನು ಪ್ರವಾಸ

ಗುರುದಾರೇಷು ಕುರ್ವೀತ ಸತಾಂ ಧರ್ಮಮನುಸ್ಮರನ್ ।
ಸ್ತ್ರಿಯೋ ರತ್ನಾನ್ಯಥೋ ವಿದ್ಯಾ ಧರ್ಮಸ್ಸತ್ಯಂ ಸುಭಾಷಿತಂ ॥ ೧೦೨ ॥

ಶಿಲ್ಪಾನಿ ಚಾಪ್ಯದುಷ್ಟಾನಿ ಸಮಾದೇಯಾನಿ ಸರ್ವತಃ ।
ಅಬ್ರಾಹ್ಮಣಾದಧ್ಯಯನಮಾಪತ್ಕಾಲೇ ವಿಧೀಯತೇ ॥ ೧೦೩ ॥

ಅನುವ್ರಜ್ಯಾ ಚ ಶುಶ್ರೂಷಾ ಯಾವದಧ್ಯಯನಂ ಗುರೌ ।
ನಾಬ್ರಾಹ್ಮಣಗುರೌ ಶಿಷ್ಯೋ ವಾಸಮಾತ್ಯಂತಿಕಂ ವಸೇತ್ ॥ ೧೦೪ ॥

ಬ್ರಾಹ್ಮಣೇ ವಾನನೂಚಾನೇ ಕಾಂಕ್ಷನ್ ಗತಿಮನುತ್ತಮಾಂ ।
ಪಿತೃಭಿರ್ಭ್ರಾತೃಭಿರ್ನಾರ್ಯಃ ಪತಿಭಿರ್ದೇವರೈಸ್ತಥಾ ॥ ೧೦೫ ॥

ಭೂಷ್ಯಾ ಭೂಷಯಿತವ್ಯಾಶ್ಚ ಬಹುಕಲ್ಯಾಣಮೀಪ್ಸುಭಿಃ ।
ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ ॥ ೧೦೬ ॥

---

ಹೋಗಿ ಬಂದ ದಿನ ಮಾತ್ರ ಪಾದಗ್ರಹಣ ಮಾಡಬೇಕು. ಪ್ರತಿನಿತ್ಯವೂ ಅಭಿವಾದನ ಮಾತ್ರ. ಈ ಸದ್ಧರ್ಮವನ್ನು ಮರೆಯಬಾರದು. ಸ್ತ್ರೀ, ರತ್ನಗಳು, ವಿದ್ಯಾ, ಧರ್ಮ, ಸತ್ಯ, ಒಳ್ಳೆಯ ಮಾತು, ಅಗ್ರಾಮ್ಯವಾದ ಶಿಲ್ಪ ಇವನ್ನು ಎಲ್ಲರಿಂದಲೂ ಸ್ವೀಕರಿಸಬಹುದು ಆಪತ್ಕಾಲದಲ್ಲಿ ಅಬ್ರಾಹ್ಮಣನಿಂದಲೂ ಅಧ್ಯಯನವು ವಿಹಿತವಾಗಿದೆ. ಅನುಗಮನ, ಶುಶ್ರೂಷೆಗಳೂ ಅಧ್ಯಯನಮಾಡುವಾಗ, ಆ ಗುರುವಿನಲ್ಲಿಯೂ ಉಂಟು. ಆದರೆ ಅಬ್ರಾಹ್ಮಣನಾದ ಗುರುವಿನಲ್ಲಿ ಶಿಷ್ಯನಿಗೆ ಕೊನೆಯವರೆಗೂ ವಾಸಮಾಡಲು ಅವಕಾಶವಿಲ್ಲ. ಸಾಂಗವೇದಾಧ್ಯಯನ ಹೊಂದದಿರುವ ಬ್ರಾಹ್ಮಣ ಗುರುವಿನಲ್ಲಿಯೂ ತನ್ನ ನೈಷ್ಠಿಕವ್ರತದಿಂದ ಉತ್ತಮಗತಿಯನ್ನು ಅಪೇಕ್ಷಿಸುವ ಶಿಷ್ಯನಿಗೆ ಇದು ಸಮಾನ. ಸ್ತ್ರೀಯರು ತಂದೆತಾಯಿಗಳಿಂದಲೂ, ಪತಿ, ಭಾವಮೈದ ಮುಂತಾದವರಿಂದಲೂ, ತಮ್ಮ ತಮ್ಮ ಕಲ್ಯಾಣಕ್ಕಾಗಿ ಅಲಂಕಾರಾದಿಗಳಿಂದಲೂ, ಪ್ರೀತಿಯಿಂದಲೂ ಸಂತುಷ್ಟರಾಗಿರುವಂತೆ ರಕ್ಷಿಸಲ್ಪಡತಕ್ಕವರು ಯಾವ ಮನೆಯಲ್ಲಿ ಸ್ತ್ರೀಯರು ಸಂತೋಷದಿಂದಿರುತ್ತಾರೆಯೋ ಅಲ್ಲಿ ದೇವತೆಗಳೂ ಪ್ರಸನ್ನ

ಯತ್ರೈತಾಸ್ತು ನ ಪೂಜ್ಯಂತೇ ಸರ್ವಾಸ್ತತ್ರಾಫಲಾಃ ಕ್ರಿಯಾಃ ।
ಸಂತುಷ್ಟೋ ಭಾರ್ಯಯಾ ಭರ್ತಾ ಭಾರ್ಯಾ ಭರ್ತ್ರಾ ತಥೈವ ಚ ॥ ೧೦೭ ॥

ಯಸ್ಮಿನ್ನೇತತ್ಕುಲೇ ನಿತ್ಯಂ ಕಲ್ಯಾಣಂ ತತ್ರ ವೈ ಧ್ರುವಂ ।
ಕುವಿವಾಹೈಃ ಕ್ರಿಯಾಲೋಪೈರ್ವೇದಾನಧ್ಯಯನೇನ ಚ ॥ ೧೦೮ ॥

ಕುಲಾನ್ಯಕುಲತಾಂ ಯಾಂತಿ ಬ್ರಾಹ್ಮಣಾತಿಕ್ರಮೇಣ ಚ ।
ಶಿಲ್ಪೇನ ವ್ಯವಹಾರೇಣ ಶೂದ್ರಾಪುತ್ರೈಶ್ಚ ಕೇವಲೈಃ ॥ ೧೦೯ ॥

ಗೋಭಿರಶ್ವೈಶ್ಚ ಯಾನೈಶ್ಚ ಕೃಷ್ಯಾ ರಾಜೋಪಸೇವಯಾ ।
ಅಯಾಜ್ಯಯಾಜನೈಶ್ಚೈವ ನಾಸ್ತಿಕ್ಯೇನ ಚ ಕರ್ಮಣಾ ॥ ೧೧೦ ॥

ಕುಲಾನ್ಯಕುಲತಾಂಯಾಂತಿಯಾನಿ ಹೀನಾನಿ ಮಂತ್ರತಃ ।
ಮಂತ್ರತಸ್ತು ಸಮೃದ್ಧಾನಿ ಕುಲಾನ್ಯಲ್ಪಧನಾನ್ಯಪಿ ॥ ೧೧೧ ॥

---

ರಾಗಿರುತ್ತಾರೆ. ಎಲ್ಲಿ ಸ್ತ್ರೀಯರು ಸಂತೋಷದಿಂದಿರುವುದಿಲ್ಲವೋ, ಅಲ್ಲಿ ಎಲ್ಲಾ ವಿಧಿಗಳೂ ನಿಷ್ಫಲವಾಗುತ್ತವೆ. ಯಾವ ಗ್ರಹಸ್ಥನ ಮನೆಯಲ್ಲಿ ಪತ್ನಿಯಿಂದ ಕೂಡಿದ ಪತಿಯೂ, ಪತಿಯಿಂದ ಕೂಡಿದ ಪತ್ನಿಯೂ ಪರಸ್ಪರ ಪ್ರೀತಿಯಿಂದ ಸಂತುಷ್ಟರಾಗಿರುವರೋ, ಅಂತಹ ಮನೆಯಲ್ಲಿ ಯಾವಾಗಲೂ ಮಂಗಲಪರಂಪರೆಯೇ ತುಂಬಿರುತ್ತದೆ ಇದು ನಿಶ್ಚಯ.

೧೦೮-೧೧೧ ಶಾಸ್ತ್ರನಿಷಿದ್ಧವಾದ ವಿವಾಹಗಳಿಂದಲೂ, ಶಾಸ್ತ್ರೀಯ ಕ್ರಿಯಾಲೋಪದಿಂದಲೂ, ವೇದಾಧ್ಯಯನವಿಲ್ಲದಿರುವುದರಿಂದಲೂ, ಬ್ರಾಹ್ಮಣಾತಿಕ್ರಮದಿಂದಲೂ ಸತ್ಕುಲಗಳೂ ದುಷ್ಕುಲಗಳಾಗುತ್ತವೆ. ಕೇವಲ ಶೂದ್ರ ಸ್ತ್ರೀಪುತ್ರರೊಡನೆ ಉಂಟಾಗುವ ಶಿಲ್ಪ ಮತ್ತು ವ್ಯವಹಾರಗಳಿಂದಲೂ, ಅವರೊಡನೆ ಸೇವಿಸಬಹುದಾದ ಗವಾಶ್ವಾದಿಯಾನಗಳಿಂದಲೂ, ಕೃಷಿಯಿಂದಲೂ, ರಾಜೋಪಸೇವೆಯಿಂದಲೂ, ಅನರ್ಹನಿಂದ ಯಜ್ಞಾದಿಗಳನ್ನು ಮಾಡಿಸುವುದರಿಂದಲೂ, ನಾಸ್ತಿಕ್ಯದಿಂದಲೂ, ನಿಷಿದ್ಧಕರ್ಮಗಳಿಂದಲೂ, ಮಂತ್ರಹೀನತೆಯಿಂದಲೂ, ಸತ್ಕುಲಗಳು ದುಷ್ಕುಲಗಳಾಗಿ ಪರಿಣಮಿಸುತ್ತವೆ. ಮಂತ್ರಶಕ್ತಿಯಿಂದ ಕೂಡಿದ ಸತ್ಕುಲಗಳು ಅತ್ಯಲ್ಪ ಧನಾದಿಗಳನ್ನು ಹೊಂದಿದ್ದರೂ ಸತ್ಕುಲಗಳಲ್ಲಿ ಪರಿಗಣನೆ ಹೊಂದುತ್ತವೆ.

ಕುಲಸಂಖ್ಯಾಂ ತು ಗಚ್ಛಂತಿ ಕರ್ಷಂತಿ ಚ ಮಹದ್ಯಶಃ ।
ಋಷಯಃ ಪಿತರೋ ದೇವಾಃ ಭೂತಾನ್ಯತಿಥಯಸ್ತಥಾ		॥ ೧೧೨ ॥

ಆಶಾಸತೇ ಕುಟುಂಬಿಭ್ಯಃ ತೇಭ್ಯಃ ಕಾರ್ಯಂ ವಿಜಾನತಾ ।
ಸ್ವಾಧ್ಯಾಯೇನಾರ್ಚಯೇತರ್ಷೀನ್ ಹೋಮೈರ್ದೇವಾನ್ಯಥಾವಿಧಿ ॥ ೧೧೩ ॥

ಪಿತೄನ್ ಶ್ರಾದ್ಧೇನ ನ್ಯಾನನ್ನೈಃ ಭೂತಾನಿ ಬಲಿಕರ್ಮಣಾ ।
ದದ್ಯಾದಹರಹಃ ಶ್ರಾದ್ಧಮನ್ನಾದ್ಯೇನೋದಕೇನ ಚ		॥ ೧೧೪ ॥

ಪಯೋಮೂಲಫಲೈರ್ವಾಪಿ ಪಿತೃಭ್ಯಃ ಪ್ರೀತಿಮಾಹರನ್ ।
ಏಕಮಪ್ಯಾಶಯೇದ್ವಿಪ್ರಂ ಪಿತ್ರರ್ಥೇ ಪಾಂಚಯಜ್ಞಿಕೇ		॥ ೧೧೫ ॥

ನ ಚೈವಾತ್ರಾಶಯೇತ್ಕಂಚಿದ್ವೈಶ್ವದೇವಂ ಪ್ರತಿ ದ್ವಿಜಂ ।
ವೈಶ್ವದೇವಸ್ಯ ಸಿದ್ಧಸ್ಯ ಗೃಹ್ಯೆಗ್ನೌ ವಿಧಿಪೂರ್ವಕಂ		॥ ೧೧೬ ॥

---

ಹೆಚ್ಚಾದ ಯಶಸ್ಸನ್ನೂ ಹೊಂದುತ್ತವೆ. ಋಷಿಗಳು, ಪಿತೃಗಳು, ದೇವತೆಗಳು, ಭೂತಗಳು, ಅತಿಥಿಗಳು ಇವರೆಲ್ಲರೂ ಕುಟುಂಬಿಯಾದ ಗೃಹಸ್ಥನನ್ನು ಯಾವಾಗಲೂ ಶುಭವನ್ನು ಕೋರಿ ಹರಸುತ್ತಾರೆ. ವಿವೇಕಿಯಾದ ಗೃಹಸ್ಥನು ಇವರ ವಿಷಯದಲ್ಲಿ ಗೌರವಬುದ್ಧಿಯಿಂದ ವರ್ತಿಸಬೇಕು.

೧೧೩–೧೧೬. ವೇದಾಧ್ಯಯನದಿಂದ ಋಷಿಗಳನ್ನು ಸಂತೋಷಪಡಿಸಬೇಕು. ಯಥಾವಿಧಿಯಾದ ಹೋಮಗಳಿಂದ ದೇವತೆಗಳನ್ನೂ ಶ್ರಾದ್ಧದಿಂದ ಪಿತೃಗಳನ್ನೂ, ಅನ್ನದಾನದಿಂದ ಮನುಷ್ಯರನ್ನೂ ಬಲಿಹರಣದಿಂದ ಭೂತಗಳನ್ನೂ ತೃಪ್ತಿಪಡಿಸಬೇಕು. ಪಿತೃಗಳ ಪ್ರೀತಿಗಾಗಿ ಪ್ರತಿದಿನದಲ್ಲಿಯೂ, ಅನ್ನಾದಿಗಳಿಂದ ಅಥವಾ ಜಲದಿಂದ ಹಾಲು, ಫಲ, ಮೂಲಾದಿಗಳಿಂದಲೇ ಆಗಲಿ ಶ್ರಾದ್ಧವನ್ನು ಮಾಡಿಯೇ ಮಾಡಬೇಕು. ಪಂಚಯಜ್ಞಾನುಬಂಧಿಯಾದ ಪಿತೃಪ್ರೀತಿಗಾಗಿ ಒಬ್ಬನನ್ನಾದರೂ ಭೋಜನ ಮಾಡಿಸಬೇಕು ಈ ಸಂದರ್ಭದಲ್ಲಿ ವೈಶ್ವದೇವಾಂಗವಾಗಿ ಬೇರೊಬ್ಬನನ್ನು ಊಟ ಮಾಡಿಸಬೇಕಾದ್ದಿಲ್ಲ. ಪ್ರತಿದಿನದಲ್ಲಿಯೂ ಸಿದ್ಧವಾದ ವೈಶ್ವದೇವಾನ್ನದಿಂದ ಗೃಹ್ಯಾಗ್ನಿಯಲ್ಲಿ ತನ್ನ ಸೂತ್ರದಂತೆ ವಿಧಿಪೂರ್ವಕವಾಗಿ ವೈಶ್ವದೇವವನ್ನು ಮಾಡಿಯೇ

ಸ್ವಸೂತ್ರವಿಹಿತಂ ಕುರ್ಯಾದ್ವೈಶ್ವದೇವಮತಂದ್ರಿತಃ ।
ಪ್ರಣೀತೇ ವಾ ಪ್ರಣೀತೇ ವಾ ಹುತೋಽಪ್ಸ್ವಪ್ಸ್ವೇ ಜಲೇಽಪಿ ವಾ ॥ ೧೧೭ ॥

ವೈಶ್ವದೇವಂ ಧ್ರುವಂ ಕಾರ್ಯಂ ಬ್ರಾಹ್ಮಣೇನ ವಿಪಶ್ಚಿತಾ ।
ಪರಂ ಸ್ಥಾನಮವಾಪ್ನೋತಿ ಕೃತ್ವೈವಂ ಸಂತತಂ ಗೃಹೀ ।
ಭೋಜಯೇದತಿಥಿಂಪಶ್ಚಾದ್ಭಿಕ್ಷಾಂ ದದ್ಯಾಚ್ಚ ಭಿಕ್ಷವೇ ॥ ೧೧೮ ॥

ಯತ್ಪುಣ್ಯಫಲಮಾಪ್ನೋತಿ ಗಾ ದತ್ವಾ ವಿಧಿವದ್ಗುರೌ ।
ತತ್ಪುಣ್ಯಫಲಮಾಪ್ನೋತಿ ಭಿಕ್ಷಾಂ ದತ್ವಾ ಯಥಾರ್ಚಿತಾಂ ॥ ೧೧೯ ॥

ವಿದ್ಯಾತಪಃ ಸಮೃದ್ಧೇಷು ಹುತಂ ವಿಪ್ರಮುಖಾಗ್ನಿಷು ।
ನಿಸ್ತಾರಯತಿ ದುರ್ಗೇಷು ಭವತ್ಯಕ್ಷಯಮೇವ ಚ ॥ ೧೨೦ ॥

ಸಂಪ್ರಾಪ್ತಾಯತ್ವತಿಥಯೇ ಪ್ರದದ್ಯಾದಾಸನೋದಕಂ ।
ಅನ್ನಂ ಚೈವ ಯಥಾಶಕ್ತಿ ಸತ್ಕೃತ್ಯ ವಿಧಿಪೂರ್ವಕಂ ॥ ೧೨೧ ॥

---

ಮಾಡಬೇಕು. ಸಿದ್ಧವಾದ ಅನ್ನದಿಂದ ಹೋಮಪೂರ್ವಕವಾಗಲಿ ಅಸಿದ್ಧವಾಗಿದ್ದಲ್ಲಿ ಜಲದಿಂದಾಗಲಿ ಜ್ಞಾನಿಯಾದ ಬ್ರಾಹ್ಮಣನು ವೈಶ್ವದೇವವನ್ನು ಮಾಡಿಯೇ ಮಾಡಬೇಕು.

೧೧೮-೧೨೨. ಗೃಹಸ್ಥನಾದವನು ಈ ವಿಧವಾದ ಧರ್ಮಾನುಷ್ಠಾನದಿಂದ ಉತ್ತಮಸ್ಥಾನವನ್ನು ಹೊಂದುತ್ತಾನೆ. ವೈಶ್ವದೇವವಾದಮೇಲೆ ಅತಿಥಿಗೆ ಭೋಜನ ಮಾಡಿಸಬೇಕು. ಭಿಕ್ಷುಗಳಿಗೆ ಭಿಕ್ಷೆಯನ್ನು ನೀಡಬೇಕು ಗುರುವಿಗೆ ಯಥಾವಿಧಿ ಗೋದಾನಮಾಡಿದಲ್ಲಿ ಯಾವ ಪುಣ್ಯಫಲವುಂಟಾಗುತ್ತದೆಯೋ ಭಿಕ್ಷುಕರಿಗೆ ಸತ್ಕಾರ ಪೂರ್ವಕವಾಗಿ ಭಿಕ್ಷೆನೀಡಿದವನೂ ಅಂತಹ ಪುಣ್ಯಫಲವನ್ನೇ ಹೊಂದುತ್ತಾನೆ. ವಿದ್ಯೆ, ತಪಸ್ಸು ಇತ್ಯಾದಿಗಳಿಂದ ಉತ್ಕೃಷ್ಟರಾದ ಬ್ರಾಹ್ಮಣರ ಮುಖವೆಂಬ ಅಗ್ನಿಯಲ್ಲಿ ಮಾಡಿದ ಇಂತಹ ಹೋಮವು ಎಂತಹ ಕಷ್ಟಪರಿಸ್ಥಿತಿಯಲ್ಲಿಯೂ ಇವನನ್ನು ಕಾಪಾಡುತ್ತದೆ. ಅಕ್ಷಯಫಲಪ್ರದವೂ ಆಗುತ್ತದೆ. ಅತಿಥಿಯಾಗಿ ಬಂದವನಿಗೆ ಆಸನವನ್ನೂ, ಉದಕವನ್ನೂ ಕೊಡಬೇಕು. ಯಥಾಶಕ್ತಿ ಅನ್ನವನ್ನೂ ಯಥಾವಿಧಿಯಾಗಿ ಪ್ರೀತಿಯಿಂದ ಕೊಡಬೇಕು. ಶಿಲಾ, ಉಂಛ ಮೊದಲಾದ ವೈರಾಗ್ಯವೃತ್ತಿ

ಶಿಲಾನ್ಯಪ್ಯುಂಛತೋ ನಿತ್ಯಂ ಪಂಚಾಗ್ನೀನಪಿ ಜುಹ್ವತಃ ।
ಸರ್ವಂ ಸುಕೃತಮಾದತ್ತೇ ಬ್ರಾಹ್ಮಣೋಽನರ್ಚಿತೋ ವಸನ್ ॥ ೧೨೨ ॥

ತೃಣಾನಿ ಭೂಮಿರುದಕಂ ವಾಕ್ಚತುರ್ಥೀ ಚ ಸೂನೃತಾ ।
ಏತಾನ್ಯಪಿ ಸತಾಂ ಗೇಹೇ ನೋಚ್ಛಿದ್ಯಂತೇ ಕದಾಚನ ॥ ೧೨೩ ॥

ಏಕರಾತ್ರಂ ತು ನಿವಸನ್ನತಿಥಿಃ ಬ್ರಾಹ್ಮಣಃ ಸ್ಮೃತಃ ।
ನೈಕಗ್ರಾಮೀಣಮತಿಥಿಂ ವಿಪ್ರಂ ಸಾಂಗತಿಕಂ ತಥಾ ॥ ೧೨೪ ॥

ಉಪಾಸತೇ ಯೇ ಗೃಹಸ್ಥಾಃ ಪರಪಾಕಮಬುದ್ಧಯಃ ।
ತೇನ ತೇ ಪ್ರೇತ್ಯ ಪಶುತಾಂ ವ್ರಜನ್ತ್ಯನ್ನಾದ್ಯದಾಯಿನಾಂ ॥ ೧೨೫ ॥

ಅಪ್ರೀಣನ್ ಯೋಽತಿಥಿಃ ಸಾಯಂ ಸೂರ್ಯೋಢೋ ಗೃಹಮೇಧಿನಾ ।
ಕಾಲೇ ಪ್ರಾಪ್ತಸ್ತ್ವಕಾಲೇ ವಾ ನಾಸ್ಯಾನ್ನಶ್ನನ್ ಗೃಹೇ ವಸೇತ್ ॥ ೧೨೬ ॥

---

ಯನ್ನವಲಂಭಿಸಿ ಪಂಚಾಗ್ನಿಹೋಮದಲ್ಲಿ ನಿರತನಾದ ಉತ್ಕೃಷ್ಟಧಾರ್ಮಿಕನ ಪುಣ್ಯ ಫಲವೂ ಸಹ ಮನೆಗೆಬಂದು ಸತ್ಕಾರಹೊಂದದೆ ದುಃಖದಿಂದ ವಾಸಿಸಿದ ಒಬ್ಬ ಬ್ರಾಹ್ಮಣನಿಂದ ಅಪಹರಿಸಲ್ಪಡುತ್ತದೆ.

೧೨೩-೧೨೬. ಆಸನಕ್ಕೆ ಉಪಯೋಗವಾಗುವ ತೃಣಾದಿಗಳು, ವಾಸಾರ್ಹ ವಾದ ಸ್ಥಳ, ಜಲ, ಒಳ್ಳೆಯಮಾತು. ಈ ನಾಲ್ಕುವಸ್ತುಗಳು ಸತ್ಪುರುಷರ ಮನೆಯಲ್ಲಿ ಯಾವಾಗಲೂ ಇಲ್ಲದೆ ಇರುವುದಿಲ್ಲ, ಒಂದುರಾತ್ರಿ ಮಾತ್ರ ವಾಸಮಾಡುವವನು ಅತಿಥಿಯಾಗುತ್ತಾನೆ ಒಂದೇ ಗ್ರಾಮದಲ್ಲಿದ್ದುಕೊಂಡು, ಪರಿಹಾಸಾದಿಗಳಿಂದ ಜೀವನವೃತ್ತಿಯುಳ್ಳ ಬ್ರಾಹ್ಮಣನು ಅತಿಥಿಯಾಗುವುದಿಲ್ಲ. ಯಾವ ಗೃಹಸ್ಥರು ಪರಾನ್ನದಿಂದಲೇ ಜೀವಿಸುತ್ತಾರೆಯೋ ಅಂತಹ ದುರ್ಬುದ್ಧಿಗಳು ದೇಹವಿಯೋಗವಾದ ನಂತರ ಅನ್ನದಾಯಿಗಳಾದ ಸತ್ಪುರುಷರಿಗೆ ಪಶುಗಳಾಗಿ ಆಗುತ್ತಾರೆ. ಅಸ್ತಮಯ ವಾದ ನಂತರ ಕಾಲದಲ್ಲಾಗಲಿ ಅಕಾಲದಲ್ಲಿಯಾಗಲಿ ಮನೆಗೆ ಬಂದ ಯಾವ ಅತಿಥಿಯು ಗೃಹಸ್ಥನಿಂದ ಸತ್ಕಾರಹೊಂದದೆ ಊಟವನ್ನೂ ಮಾಡದೆ ವಾಸಮಾಡಿ ಹೋಗುತ್ತಾನೆಯೋ ಅಂತಹ ಅತಿಥಿಗೂ ಉಪಯೋಗವಾಗದಿರುವ ಅನ್ನಾದಿಭೋಜ್ಯ

ನೈವ ಸ್ವಯಂ ತದಶ್ನೀಯಾದತಿಥಿಂ ಯನ್ನ ಭೋಜಯೇತ್ ।
ಧನ್ಯಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ಚಾತಿಥಿಪೂಜನಂ ॥ ೧೨೭ ॥

ವೈಶ್ವದೇವೇ ತು ನಿರ್ವೃತ್ತೇ ಯದ್ಯನ್ಯೋಽತಿಥಿರಾವ್ರಜೇತ್ ।
ತಸ್ಯಾಪ್ಯನ್ನಂ ಯಥಾಶಕ್ತಿ ಪ್ರದದ್ಯಾನ್ನ ಬಲಿಂಹರೇತ್ ॥ ೧೨೮ ।

ನ ಭೋಜನಾರ್ಥೇ ಸ್ವೇ ವಿಪ್ರಃ ಕುಲಗೋತ್ರೇ ನಿವೇದಯೇತ್ ।
ಭೋಜನಾರ್ಥೇ ತು ಶಂಸನ್ವಾ ವಾಂತಾಶೀತ್ಯುಚ್ಯತೇ ಬುಧೈಃ ॥ ೧೨೯ ॥

ಯದಿತ್ವತಿಥಿಧರ್ಮೇಣ ಕ್ಷತ್ರಿಯೋ ಗೃಹಮಾವ್ರಜೇತ್ ।
ಭುಕ್ತವತ್ಸು ಚ ವಿಪ್ರೇಷು ಕಾಮಂ ತಮಪಿ ಪೂಜಯೇತ್ ॥ ೧೩೦ ॥

ವೈಶ್ಯಶೂದ್ರಾವಪಿ ಪ್ರಾಪ್ತೌ ಕುಟುಂಬೇಽತಿಥಿಧರ್ಮಿಣೌ ।
ಭೋಜಯೇತ್ಸಹ ಭೃತ್ಯೈಸ್ತಾನಾನೃಶಂಸ್ಯಂ ಪ್ರಯೋಜಯನ್ ॥ ೧೩೧ ॥

---

ವಸ್ತುಗಳನ್ನು ಗೃಹಸ್ಥನೂ ಊಟಮಾಡಬಾರದು. ಯಥಾವಿಧಿಯಾದ ಈ ಅತಿಥಿ ಪೂಜನವು ಧನಪ್ರಾಪ್ತಿಗೂ ಸಾಧನವಾಗುತ್ತದೆ. ಯಶಸ್ಕರವೂ, ಆಯುಃಪ್ರದವೂ ದೇಹವಿಯೋಗಾನಂತರ ಸ್ವರ್ಗಪ್ರಾಪ್ತಿಸಾಧಕವೂ ಆಗುತ್ತದೆ.

೧೨೮-೧೩೩. ವೈಶ್ವದೇವವು ಮುಗಿದ ಮೇಲೆಯೂ ಮತ್ತೊಬ್ಬ ಅತಿಥಿಯು ಬಂದಲ್ಲಿ ಅವನಿಗೂ ಯಥಾಶಕ್ತಿ ಅನ್ನದಾನ ಮಾಡಬೇಕು. ಬಲಿಹರಣಮಾಡಿ ಸಮಾಪ್ತಿಮಾಡಬಾರದು. ಅತಿಥಿಯಾಗಿ ಬಂದ ಬ್ರಾಹ್ಮಣನು ಭೋಜನಲಾಭಕ್ಕಾಗಿ ತನ್ನ ಕುಲಗೋತ್ರಗಳನ್ನು ಪ್ರಶಂಸಿಸಬಾರದು. ಊಟಕ್ಕಾಗಿ ತನ್ನ ಕುಲವನ್ನು ಹೊಗಳಿಕೊಳ್ಳುವವನು ವಾಂತಾಶೀ ಎಂದು ಹೇಳಲ್ಪಡುತ್ತಾನೆ. ಅತಿಥಿಧರ್ಮದಿಂದ ಕ್ಷತ್ರಿಯನು ಮನೆಗೆ ಬಂದದ್ದಾದರೆ ಬ್ರಾಹ್ಮಣಭೋಜನವಾದನಂತರ ಅವನನ್ನೂ ಭೋಜನಾದಿಗಳಿಂದ ಸತ್ಕರಿಸಬೇಕು. ವೈಶ್ಯಶೂದ್ರರೂ ಅತಿಥಿಧರ್ಮದಿಂದ ಬಂದಲ್ಲಿ ತನ್ನ ಭೃತ್ಯರೊಡನೆ, ಅವರಿಗೂ ಪ್ರೀತಿಯಿಂದ ಭೋಜನಮಾಡಿಸಬೇಕು. ಸ್ನೇಹಿತರು ಮನೆಗೆ ಬಂದಲ್ಲಿ ಪತ್ನ್ಯಾದಿಗಳೊಡನೆ ಅವರನ್ನೂ ಭೋಜನಮಾಡಿಸ

ಸಖ್ಯಾದೀನ್ಭಾರ್ಯಯಾ ಸಾರ್ಧಂ ಭೋಜಯೇದ್ಗೃಹಮಾಗತಾನ್ ।
ಪತಿತಶ್ವಪಚೇಭ್ಯಸ್ತು ಶ್ವಭ್ಯಸ್ತು ಭುವಿ ನಿರ್ವಪೇತ್ ॥ ೧೩೨ ॥

ಸುವಾಸಿನೀಃ ಕುಮಾರಾಂಶ್ಚ ರೋಗಿಣೋ ಗರ್ಭಿಣೀಸ್ತಥಾ ।
ಅತಿಥಿಭ್ಯೋಽಗ್ರ ಏವೈತಾನ್ಭೋಜಯೇದವಿಚಾರಯನ್ ॥ ೧೩೩ ॥

ಅದತ್ವಾ ತು ಯ ಏತೇಭ್ಯಃ ಪೂರ್ವಂ ಭುಙ್ಕ್ತೇಽವಿಚಕ್ಷಣಃ ।
ಸಭುಂಜಾನೋ ನಜಾನಾತಿ ಶ್ವಗೃಧ್ರೈರ್ಜಗ್ಧಿಮಾತ್ಮನಃ ॥ ೧೩೪ ॥

ಭುಕ್ತವತ್ಸು ಚ ವಿಪ್ರೇಷು ಸ್ವೇಷು ಭೃತ್ಯೇಷು ಚೈವ ಹಿ ।
ಭುಂಜೀಯಾತಾಂ ತತಃ ಪಶ್ಚಾದವಶಿಷ್ಟಂ ತು ದಂಪತೀ ॥ ೧೩೫ ॥

ಗೃಹಸ್ಥೈರ್ಧಾರ್ಯತೇ ವಿಪ್ರಾಃ ತ್ರೈಲೋಕ್ಯಂ ಸ ಚರಾಚರಂ ।
ಪಾಕಃ ಕಾರ್ಯೋ ಗೃಹಸ್ಥೇನ ಭೂತೋದ್ಧರಣಕಾಮ್ಯಯಾ ॥ ೧೩೬ ॥

ಅಘಂ ಸ ಕೇವಲಂ ಭುಙ್ಕ್ತೇ ಯಃ ಪಚತ್ಯಾತ್ಮಕಾರಣಾತ್ ।
ವಿಘಸಾಶೀ ಭವೇನ್ನಿತ್ಯಂ ನಿತ್ಯಂ ಚಾಮೃತಭೋಜನಃ ॥ ೧೩೭ ॥

---

ಬೇಕು. ಪತಿತರು, ಶ್ವಪಚರು ಅನ್ನಕ್ಕಾಗಿ ಬಂದಲ್ಲಿ ನಾಯಿಗಳಿಗೂ ಅವರಿಗೂ ಭೂಮಿಯಲ್ಲಿ ಅನ್ನವನ್ನು ಹಾಕಬೇಕು. ಸುವಾಸಿನಿಗಳು, ಸಣ್ಣಹುಡುಗರು ರೋಗಿಗಳು, ಗರ್ಭಿಣಿಸ್ತ್ರೀಯರು ಇವರಿಗೆ ಮಾತ್ರ ಯಾವ ವಿಚಾರವನ್ನೂ ಮಾಡದೆ ಅತಿಥಿಗಳಿಗಿಂತ ಮೊದಲೇ ಭೋಜನಮಾಡಿಸಬೇಕು.

೧೩೪-೧೩೭. ಇವರಿಗೆ ಮೊದಲು ಭೋಜನಮಾಡಿಸದೆ ಯಾವ ಗೃಹಸ್ಥನು ಮೊದಲು ಭೋಜನಮಾಡುತ್ತಾನೆಯೋ ಅವನು ಪಂಡಿತನಾಗಿದ್ದರೂ ನಾಯಿ, ಹದ್ದು ಮುಂತಾದುವು ತನ್ನನ್ನೇ ತಿನ್ನುವುದನ್ನು ತಿಳಿಯುವುದಿಲ್ಲ. ಬ್ರಾಹ್ಮಣರೂ ತನ್ನ ಭೃತ್ಯವರ್ಗವೂ ಎಲ್ಲರೂ ಊಟಮಾಡಿದನಂತರ ಉಳಿದಿರುವ ಅನ್ನಾದಿಗಳನ್ನು ದಂಪತಿಗಳು ಊಟಮಾಡಬೇಕು. ಈ ವಿಧವಾದ ಉಪಕಾರದಿಂದ ಗೃಹಸ್ಥರು ಚರಾಚರಗಳಿಂದ ಕೂಡಿದ ಮೂರು ಲೋಕವನ್ನೂ ಧರಿಸುತ್ತಾರೆ. ಗೃಹಸ್ಥನಾದವನು ಭೂತೋದ್ಧಾರ ದೃಷ್ಟಿಯಿಂದಲೇ ನಿತ್ಯವೂ ಪಾಕಮಾಡಬೇಕು. ತನಗಾಗಿಯೇ

ವಿಘಸಂ ಭುಕ್ತಶೇಷಂ ತು ಯಜ್ಞಶೇಷಂ ತಥಾಮೃತಂ ।
ರಾಜರ್ಷಿಸ್ನಾತಕಾಚಾರ್ಯಪ್ರಿಯಶ್ವಶುರಮಾತುಲಾನ್ ॥ ೧೩೮ ॥

ಅರ್ಹಯೇನ್ಮಧುಪರ್ಕೇಣ ಪರಿಸಂವತ್ಸರೋಷಿತಾನ್ ।
ದ್ವೌ ಕಾಲೌ ಗೃಹಿಣಃ ಪಾಕೋ ವೈಶ್ವದೇವಶ್ಚ ಕೀರ್ತ್ಯತೇ ॥ ೧೩೯ ॥

ವೇದೋದಿತಂ ಸ್ವಕಂ ಕರ್ಮ ನಿತ್ಯಂ ಕುರ್ಯಾದತಂದ್ರಿತಃ ।
ಸರ್ವಾನ್ಸಮುತ್ಸೃಜೇದರ್ಥಾನ್ ಸ್ವಾಧ್ಯಾಯಸ್ಯ ವಿರೋಧಿನಃ ॥ ೧೪೦ ॥

ಬುದ್ಧಿವೃದ್ಧಿಕರಾಣ್ಯಾಶು ಧನ್ಯಾನಿ ಚ ಹಿತಾನಿ ಚ ।
ನಿತ್ಯಂ ಶಾಸ್ತ್ರಾಣ್ಯವೇಕ್ಷೇತ ನಿಗಮಾಂಶ್ಚೈವ ವೈದಿಕಾನ್ ॥ ೧೪೧ ॥

ಋಷಿಯಜ್ಞಂ ದೇವಯಜ್ಞಂ ಭೂತಯಜ್ಞಂ ತಥೈವ ಚ ।
ನೃಯಜ್ಞಂ ಪಿತೃಯಜ್ಞಂ ಚ ಪಂಚಯಜ್ಞಾನ್ನಹಾಪಯೇತ್ ॥ ೧೪೨ ॥

ಅಗ್ನಿಹೋತ್ರಂ ಚ ಜುಹುಯಾದಾದ್ಯಂತೇ ದ್ಯುನಿಶೋಸ್ಸದಾ ।
ದರ್ಶೇನ ಚಾರ್ಧಮಾಸಾಂತೇ ಪೌರ್ಣಮಾಸೇ ತಥೈವ ಚ ॥ ೧೪೩ ॥

---

ಪಾಕಮಾಡುವ ಗೃಹಸ್ಥನು ಕೇವಲ ಪಾಪಫಲವನ್ನೇ ಅನುಭವಿಸುತ್ತಾನೆ. ವಿಘಸ ವೆಂದರೆ ಭೋಜನ ಮಾಡಿದನಂತರ ಪಾತ್ರೆಯಲ್ಲಿ ಉಳಿಯುವಶೇಷ ಅಮೃತ ವೆಂದರೆ ಯಜ್ಞವಿಶೇಷ. ಗೃಹಸ್ಥನಾದವನು ನಿತ್ಯವೂ ವಿಘಸಾಶಿಯಾಗಿಯೂ, ಅಮೃತಾಶಿಯಾಗಿಯೂ ಆಗಿರಬೇಕು. ರಾಜರ್ಷಿ, ಸ್ನಾತಕ, ಆಚಾರ್ಯ, ಇಷ್ಟ ನಾದವನು, ಮಾವ, ಸೋದರಮಾವ ಇವರು ವರ್ಷ ಕಳೆದಮೇಲೆ ಪುನಃ ಬಂದಲ್ಲಿ ಇವರನ್ನು ಮಧುಪರ್ಕದಿಂದ ಸತ್ಕರಿಸಬೇಕು. ಗೃಹಸ್ಥನಿಗೆ ಎರಡು ಕಾಲಗಳಲ್ಲಿಯೂ ಪಾಕ ಮತ್ತು ವೈಶ್ವದೇವತೆಗಳು ವಿಹಿತವಾಗಿವೆ.

೧೪೦–೧೪೫. ವೇದವಿಹಿತಗಳಾದ ಎಲ್ಲಾ ಕರ್ಮಗಳನ್ನೂ ನಿತ್ಯವೂ ಆಲಸ್ಯ ವಿಲ್ಲದೆ ಮಾಡುತ್ತಿರಬೇಕು ವೇದಾಧ್ಯಯನಕ್ಕೆ ವಿರೋಧಿಗಳಾದ ಎಲ್ಲಾ ವ್ಯಾಪಾರ ವನ್ನೂ ತ್ಯಜಿಸಬೇಕು. ಬುದ್ಧಿಯ ವಿಕಾಸಕ್ಕೆ ಕಾರಣಗಳಾದ, ಹಿತಕರಗಳಾದ ಶಾಸ್ತ್ರಗಳನ್ನೂ, ವೈದಿಕ ಗ್ರಂಥಗಳನ್ನೂ ನಿತ್ಯವೂ ವಿಚಾರಮಾಡುತ್ತಿರಬೇಕು. ಋಷಿಯಜ್ಞ, ದೇವಯಜ್ಞ, ಭೂತಯಜ್ಞ, ಮನುಷ್ಯಯಜ್ಞ, ಪಿತೃಯಜ್ಞ ಈ

ತಯೋಃ ಕಾಲಃ ಸ್ಮೃತಃ ಕ್ಷೀಣೇ ಪೂರ್ಣೇ ಚ ಶಶಲಕ್ಷಣೇ ।
ಪಶುನಾಪ್ಯಯನಾಂತೇ ಚ ಮಾ[1]ಸಾಂತೇ ಸೌಮಿಕೈರ್ಮಖೈಃ ॥ ೧೪೪ ॥

ನಾನಿಷ್ಟ್ವಾ ನವಸಸ್ಯೇಷ್ಟ್ಯಾ ಪಶುನಾ ವಾಗ್ನಿಮಾನ್ ದ್ವಿಜಃ ।
ನ ಚಾನ್ನಮದ್ಯಾನ್ಮಾಂಸಂ ವಾ ದೀರ್ಘಮಾಯುರ್ಜಿಜೀವಿಷುಃ ॥ ೧೪೫ ॥

ನವೇನಾನರ್ಚಿತಾಹ್ಯಸ್ಯ ಪಶುಹವ್ಯೇನ ಚಾಗ್ನಯಃ ।
ಪ್ರಾಣಾನೇವಾತ್ತುಮಿಚ್ಛಂತಿ ನವಾನ್ನಾಮಿಷಗರ್ಧಿನಃ ॥ ೧೪೬ ॥

ಆಸನಾಶನ ಶಯ್ಯಾಭಿರದ್ಭಿರ್ಮೂಲಫಲೇನ ವಾ ।
ನಾಸ್ಯ ಕಶ್ಚಿದ್ವಸೇದ್ಗೇಹೇ ಶಕ್ತಿತೋಽನರ್ಚಿತೋಽತಿಥಿಃ ॥ ೧೪೭ ॥

ಪಾಷಂಡಿನೋ ವಿಕರ್ಮಸ್ಥಾನ್ ಬೈಡಾಲವ್ರತಿಕಾನ್ ಶಠಾನ್ ।
ಹೈತುಕಾನ್ಬಕವೃತ್ತೀಂಶ್ಚ ವಾಙ್ಮಾತ್ರೇಣಾಪಿ ನಾರ್ಚಯೇತ್ ॥ ೧೪೮ ॥

---

ಪಂಚ ಯಜ್ಞಗಳನ್ನು ಯಾವಾಗಲೂ ಬಿಡಬಾರದು. ಅಗ್ನಿಹೋತ್ರವನ್ನೂ ಸಹ ದಿನ ರಾತ್ರಿಗಳ ಆದ್ಯಂತ[2]ದಲ್ಲಿ ಮಾಡಬೇಕು. ಕೃಷ್ಣಪಕ್ಷದ ಅರ್ಧಮಾಸದ ಕೊನೆಯಾದ ಅಮಾವಾಸ್ಯೆಯಲ್ಲಿಯೂ, ಶುಕ್ಲಪಕ್ಷದ ಕೊನೆಯಾದ ಪೂರ್ಣಿಮೆಯಲ್ಲಿಯೂ ಮಾಡಬೇಕು. ಅಯನದ ಕೊನೆಯಲ್ಲಿ ಪಶುಯಾಗವನ್ನೂ, ಋತುಗಳ ಕೊನೆಯಲ್ಲಿ ಸೋಮಯಾಗವನ್ನೂ ಮಾಡಬೇಕು. ದೀರ್ಘಕಾಲ ಜೀವಿಸುವ ಆಶೆ ಇರುವ ದ್ವಿಜನು ಅಗ್ನಿಯಿಂದ ಕೂಡಿದ್ದಲ್ಲಿ ನವಾಗ್ರಯಣವನ್ನೂ, ಪಶುಯಾಗವನ್ನೂ ಮಾಡಿಯೇ ಹೊಸ ಧಾನ್ಯವನ್ನೂ, ಮಾಂಸವನ್ನೂ ತಿನ್ನಬೇಕು.

೧೪೬-೧೪೮. ಹೊಸದಾದ ಹವ್ಯ ಮತ್ತು ಪಶುಗಳಿಂದ ಪೂಜಿಸಲ್ಪಡದಿರುವ ಗೃಹಸ್ಥನ ಅಗ್ನಿಗಳು ಅದರ ಆಶೆಯಿಂದ ಗೃಹಸ್ಥನ ಪ್ರಾಣಗಳನ್ನೇ ತಿನ್ನಲು ಆಶಪಡುತ್ತವೆ. ಆಸನ, ಅನ್ನ, ಶಯ್ಯಾ, ಜಲ, ಮೂಲ, ಫಲಾದಿಗಳಿಂದ ಯಥಾಶಕ್ತಿ ಪೂಜಿಸಲ್ಪಡದ ಯಾವ ಅತಿಥಿಯೂ ಇವನ ಮನೆಯಲ್ಲಿರಬಾರದು. ವೇದಬಾಹ್ಯರು, ನಿಂದಿತಕರ್ಮರು. ಬೈಡಾಲವೃತ್ತಿಗಳೆಂಬ ಡಾಂಭಿಕರು, ಮೂರ್ಖರು, ಲೌಕಿಕಯುಕ್ತಿಮಾತ್ರದಿಂದ ವೇದದಲ್ಲಿ ವಿಶ್ವಾಸವಿಲ್ಲದವರು, ಬಕವೃತ್ತಿಗಳು ಇವರುಗಳನ್ನು ಒಳ್ಳೆಯ ಮಾತಿನಿಂದಲೂ ಸತ್ಕರಿಸಬಾರದು.

---

1 ಇಲ್ಲಿಯ ಮಾಸಪದವು ಋತುಪರ. 2 ಇದನ್ನು ಉದಿತಾನುದಿತ ಹೋಮಪಕ್ಷಗಳಿಗೆ ಅನುಸಾರವಾಗಿ ಅನ್ವಯಿಸಬೇಕು.

ನ ದಾನಂ ಯಶಸೇ ದದ್ಯಾನ್ನೋಭಯಾನ್ನೋಪಕಾರಿಣೇ ।
ನ ನೃತ್ತಗೀತಶೀಲೇಭ್ಯೋ ಹಾಸಕೇಭ್ಯಶ್ಚ ಧಾರ್ಮಿಕಃ ॥ ೧೪೯ ॥

ವೇದವಿದ್ಯಾವ್ರತಸ್ನಾತಾನ್ ಶ್ರೋತ್ರಿಯಾನ್ ಗೃಹಮೇಧಿನಃ ।
ಪೂಜಯೇದ್ಧವ್ಯಕವ್ಯೇಷು ವಿಪರೀತಾಂಸ್ತು ವರ್ಜಯೇತ್ ॥ ೧೫೦ ॥

ಶಕ್ತಿತೋ ಯಜಮಾನಸ್ಯ ದಾತ್ಯವ್ಯೋ ಗೃಹಮೇಧಿನಃ ।
ಸಂವಿಭಾಗಶ್ಚ ಭೂತೇಭ್ಯಃ ಕರ್ತವ್ಯೋಽನುಪರೋಧತಃ ॥ ೧೫೧ ॥

ರಾಜತೋ ಧನಮನ್ವಿಚ್ಛೇತ್ಸಂಸೀದನ್ ಸ್ನಾತಕಃ ಕ್ಷುಧಾ ।
ಯಾಜ್ಯಾಂತೇವಾಸಿನೋವಾಪಿ ನ ತ್ವನ್ಯತ ಇತಿ ಸ್ಥಿತಿಃ ॥ ೧೫೨ ॥

ನ ಜೀರ್ಣಮಲವದ್ವಾಸಾ ಭವೇಚ್ಚ ವಿಭವೇ ಸತಿ ।
ಸ್ವಾಧ್ಯಾಯೇ ನಿತ್ಯಯುಕ್ತಃ ಸ್ಯಾನ್ನಿತ್ಯಮಾತ್ಮಹಿತೇಷು ಚ ॥ ೧೫೩ ॥

---

೧೪೯–೧೫೩. ಯಶಸ್ಸಿಗಾಗಿ ದಾನಮಾಡಬಾರದು. ಭಯದಿಂದಲೂ ದಾನ ಮಾಡಬಾರದು. ಉಪಕಾರಮಾಡಿದವನಿಗೆ ಪ್ರತ್ಯುಪಕಾರರೂಪವಾಗಿಯೂ ದಾನ ಮಾಡಬಾರದು. ನೃತ್ತಗೀತ ಜೀವಿಗಳಿಗೂ ಹಾಸ್ಯಜೀವಿಗಳಿಗೂ ದಾನಮಾಡ ಬಾರದು. ಹವ್ಯಕವ್ಯಾದಿಗಳಲ್ಲಿ ವೇದವಿದ್ಯೆಗಳಿಂದ ವ್ರತಸ್ನಾನಮಾಡಿರುವವರಿಗೂ ಶ್ರೋತ್ರಿಯರಾಗಿರುವ ಗೃಹಸ್ಥರಿಗೂ ಆಹ್ವಾನ ಕೊಟ್ಟು ಯಥಾಶಕ್ತಿ ಸತ್ಕರಿಸಬೇಕು. ಇದಕ್ಕೆ ವ್ಯತಿರಿಕ್ತರಾದವರನ್ನು ತ್ಯಜಿಸಬೇಕು. ಯಜ್ಞಶೀಲನಾಗಿರುವ ಗೃಹಸ್ಥನಿಗೆ ಯಥಾಶಕ್ತಿ ದಾನಮಾಡಬೇಕು. ಇತರರಿಗೆ ತೊಂದರೆಮಾಡದೆ ಆರ್ಜಿಸಿದ ವಸ್ತುಗಳನ್ನು ಎಲ್ಲರಿಗೂ ಯಥಾಶಕ್ತಿ ದಾನಾದಿಗಳಿಂದ ವಿಭಾಜಿಸಬೇಕು. ಸ್ನಾತಕ ನಾದವನು ಹಸಿವಿನಿಂದ ದುಃಖಪಡುವ ಸಂದರ್ಭದಲ್ಲಿ ರಾಜನಿಂದ ಧನಾದಿಗಳನ್ನು ಅಪೇಕ್ಷಿಸಬಹುದು. ಯಾಜ್ಯ ಮತ್ತು ಶಿಷ್ಯರಿಂದಲೂ ಅಪೇಕ್ಷಿಸಬಹುದು. ಇತರರಿಂದ ಅಪೇಕ್ಷಿಸಬಾರದು ಎಂಬುದು ಶಾಸ್ತ್ರಮರ್ಯಾದೆ. ತನಗೆ ತಕ್ಕಷ್ಟು ಧನಸಂಪತ್ತು ಇದ್ದಲ್ಲಿ ಕೇವಲ ಲೋಭದಿಂದ ಜೀರ್ಣವಾಗಿಯೂ, ಕೊಳಕಾಗಿಯೂ ಇರುವ ವಸ್ತ್ರವನ್ನು ಉಪಯೋಗಿಸಬಾರದು. ವೇದಾಧ್ಯಯನದಲ್ಲಿಯೂ ತನಗೆ ಹಿತಕರವಾದ ವೈದಿಕಕರ್ಮಗಳಲ್ಲಿಯೂ ಯಾವಾಗಲೂ ಆಸಕ್ತಿಹೊಂದಿರಬೇಕು.

ವೈಣವೀಂ ಧಾರಯೇದ್ಯಷ್ಟಿಂ ಸೋದಕಂ ಚ ಕಮಂಡಲುಂ ।
ಯಜ್ಞೋಪವೀತಂ ವೇದಂ ಚ ಶುಭೇ ರೌಕ್ಮೇ ಚ ಕುಂಡಲೇ ॥ ೧೫೪ ॥

ಶುಕ್ಲವಾಸಾ ಭವೇನ್ನಿತ್ಯಂ ಪರಿಮೃಷ್ಟಪರಿಚ್ಛದಃ ।
ನ ಚೈವ ಪ್ರಲಿಖೇದ್ಭೂಮಿಂ ನಾತ್ಮನೋಪಹರೇತ್ಸ್ರಜಂ ॥ ೧೫೫ ॥

ನಾಪ್ಸುಮೂತ್ರಂ ಪುರೀಷಂ ವಾ ಷ್ಠೀವನಂ ವಾ ಸಮುತ್ಸೃಜೇತ್ ।
ಅಮೇಧ್ಯಲಿಪ್ತಮನ್ಯದ್ವಾ ಲೋಹಿತಂ ವಾ ವಿಷಾಣಿ ವಾ ॥ ೧೫೬ ॥

ಏತಾನ್ಯೇವ ತಥಾ ವಹ್ನೌ ನಿಕ್ಷಿಪೇನ್ನೈವ ಚ ದ್ವಿಜಃ ।
ನೈಕಃ ಶೂನ್ಯಗೃಹೇ ಸ್ವಪ್ಯಾಚ್ಛಯಾನಂ ನೈವ ಬೋಧಯೇತ್ ॥ ೧೫೭ ॥

ನ ದಿವೀಂದ್ರಾಯುಧಂ ದೃಷ್ಟ್ವಾ ಕಸ್ಯಚಿದ್ದರ್ಶಯೇದ್ಬುಧಃ ।
ನ ಶೂದ್ರರಾಜ್ಯೇ ನಿವಸೇನ್ನಾಧಾರ್ಮಿಕಜನಾವೃತೇ ॥ ೧೫೮ ॥

ನ ಪಾಷಂಡಿಜನಾಕೀರ್ಣೇ ನೋಪಸೃಷ್ಟೇ ನ ಪರ್ವತೇ ।
ನೈದ್ಯಸಾಂವತ್ಸರೈರ್ಹೀನೇ ತಥಾ ಪ್ರಬಲನಾಯಕೇ ॥ ೧೫೯ ॥

---

೧೫೪–೧೬೦. ಬಿದಿರು ದಂಡವನ್ನು ಧರಿಸಬೇಕು. ಹಾಗೆಯೇ ಜಲದಿಂದ ಕೂಡಿದ ಕಮಂಡಲು, (ತಂಬಿಗೆ) ಯಜ್ಞೋಪವೀತ, ಚಿನ್ನದ ಕರ್ಣಾಭರಣ ಇವನ್ನೂ ಗೃಹಸ್ಥನು ಧರಿಸಬೇಕು. ಉಪವಸ್ತ್ರಗಳನ್ನೂ ಶುದ್ಧವಾಗಿಟ್ಟುಕೊಂಡು ತಾನೂ ಬಿಳುಪಾದ ವಸ್ತ್ರಗಳನ್ನೇ ಧರಿಸಬೇಕು. ಭೂಮಿಯಲ್ಲಿ ವ್ಯರ್ಥವಾದ ಲೇಖನವಾವುದನ್ನೂ ಮಾಡಬಾರದು. ತಾನು ಧರಿಸಿರುವ ಮಾಲಿಕೆಯನ್ನು ತಾನೇ ತೆಗೆಯಬಾರದು. ನೀರಿನಲ್ಲಿ ಮೂತ್ರ, ಮಲ, ನಿಷ್ಠೀವನ (ಉಗುಳು) ಇವನ್ನು ಮಾಡಬಾರದು. ಅಶುಚಿ ವಸ್ತ್ರಗಳು, ರಕ್ತ, ವಿಷ ಇವನ್ನೂ ನೀರಿನಲ್ಲಿ ಹಾಕಬಾರದು. ಇವುಗಳನ್ನು ಅಗ್ನಿಯಲ್ಲಿಯೂ ಹಾಕಬಾರದು. ಶೂನ್ಯಗೃಹದಲ್ಲಿ ಒಬ್ಬನೇ ಮಲಗಬಾರದು. ಮಲಗಿರುವವನನ್ನು ಎಬ್ಬಿಸಲೂ ಬಾರದು. ಆಕಾಶದಲ್ಲಿ ಕಾಮನ ಬಿಲ್ಲನ್ನು ನೋಡಿ, ಮತ್ತೊಬ್ಬನಿಗೆ ತೋರಿಸಬಾರದು. ಶೂದ್ರನ ರಾಜ್ಯದಲ್ಲಿಯೂ, ಅಧಾರ್ಮಿಕರಿರುವ ರಾಜ್ಯದಲ್ಲಿಯೂ, ಪಾಷಂಡಿ ಪ್ರಚುರವಾದ ರಾಜ್ಯದಲ್ಲಿಯೂ, ಚಂಡಾಲಾದಿಗಳಿಂದ ಆಕ್ರಾಂತವಾಗಿರುವ ರಾಜ್ಯದಲ್ಲಿಯೂ, ಪರ್ವತದಲ್ಲಿಯೂ

ನ ಕುರ್ವೀತ ವೃಥಾ ಚೇಷ್ಟಾಂ ನ ವಾರ್ಯಂಜಲಿನಾ ಪಿಬೇತ್ |
ನೋತ್ಸಂಗೇ ಭಕ್ಷಯೇದ್ಭಕ್ಷ್ಯಾನ್ ನ ಜಾತು ಸ್ಯಾತ್ಕುತೂಹಲೀ || ೧೬೦ ||

ನ ನೃತ್ಯೇದಥವಾ ಗಾಯೇದ್ವಾದಿತ್ರಾಣಿ ನ ವಾದಯೇತ್ |
ನಾಸ್ಫೋಟಯೇನ್ನ ಚಕ್ಷ್ವೇಡ್ವೇನ್ನ ಚ ರಕ್ತಾಂ ವಿರಾಗಯೇತ್ || ೧೬೧ ||

ನ ಪಾದೌ ಧಾವಯೇತ್ಕಾಂಸ್ಯೇ ನ ಚ ಪಾದೌ ಪ್ರತಾಪಯೇತ್ |
ನ ಛಿಂದ್ಯಾನ್ನಖರೋಮಾಣಿ ದಂತೈರ್ನೋತ್ಪಾಟಯೇನ್ನಖಾನ್ || ೧೬೨ ||

ಪಾದಯೋರ್ನೈವ ಕುರ್ವೀತ ದರ್ಭೇಷು ಪರಿಮಾರ್ಜನಂ |
ಪಾಲಾಶಮಾಸನಂ ವರ್ಜ್ಯಂ ಪಾದುಕೇ ದಂತಧಾವನಂ || ೧೬೩ ||

ನ ಕರ್ಮ ವಿಫಲಂ ಕುರ್ಯಾದಾಯತ್ಯಾಂ ವಾ ಸುಖೋದಯಂ |
[1]ನ ವಿಗರ್ಹ್ಯ ಕಥಾಃ ಕುರ್ಯಾದ್ಬಹಿರ್ಮಾಲ್ಯಂ ನ ಧಾರಯೇತ್ || ೧೬೪ ||

---

ವಾಸಮಾಡಬಾರದು. ಹಾಗೆಯೇ ವೈದ್ಯ, ಜ್ಯೋತಿಷ ಇವರಿಲ್ಲದ ದೇಶದಲ್ಲಿಯೂ, ಬಹುಬಲಶಾಲಿಯಾದ ನಾಯಕನಿರುವ ದೇಶದಲ್ಲಿಯೂ ವಾಸಮಾಡಬಾರದು. ವ್ಯರ್ಥವಾದ ಚೇಷ್ಟೆಯನ್ನು ಮಾಡಬಾರದು. ಕೈಯಿಂದ ಜಲಪಾನವನ್ನೂ ಮಾಡಬಾರದು ಭಕ್ಷ್ಯಾದಿಗಳನ್ನು ತೊಡೆಯ ಮೇಲಿಟ್ಟುಕೊಂಡು ಭಕ್ಷಿಸಬಾರದು. ಇಂದ್ರಿಯಾರ್ಥ ವಿಷಯಗಳಲ್ಲಿ ಅತ್ಯಂತ ಕುತೂಹಲಶಾಲಿಯೂ ಆಗಿರಬಾರದು.

೧೬೧-೧೬೬, ವ್ಯರ್ಥವಾದ ನರ್ತನ, ಗಾಯನ, ವಾದ್ಯವಾದನ ಇವನ್ನು ಮಾಡಬಾರದು. ಚಪ್ಪಾಳೆ, ಕೇಕೆ ಹಾಕುವುದು ಇವನ್ನೂ ಮಾಡಬಾರದು. ಅನುರಕ್ತಿಯನ್ನು ವಿರಕ್ತಿಯನ್ನಾಗಿಯೂ ಮಾಡಬಾರದು. ಕಂಚಿನ ಪಾತ್ರೆಯಲ್ಲಿ ಕಾಲುಗಳನ್ನು ತೊಳೆಯಬಾರದು. ಕಾಲುಗಳನ್ನು ಬೆಂಕಿಯಲ್ಲಿ ಕಾಯಿಸಲೂ ಬಾರದು. ಉಗುರು, ರೋಮ ಇವನ್ನು ಛೇದಿಸಬಾರದು. ಹಲ್ಲುಗಳಿಂದ ಉಗುರುಗಳನ್ನು ಕೀಳಬಾರದು. ಪಾದಗಳಲ್ಲಿ ದರ್ಭೆಗಳನ್ನಿಟ್ಟು ಉಜ್ಜಬಾರದು. ಮುತ್ತುಗದಿಂದ ಮಾಡಿದ ಆಸನ, ಪಾದುಕೆ, ದಂತಧಾವನ ಇವನ್ನು ತ್ಯಜಿಸಬೇಕು. ಮುಂದೆ ಸುಖಕರವಾಗುವುದೆಂದು ತೋರಿದರೂ ವ್ಯರ್ಥವಾದ ಆ ಕೆಲಸವನ್ನು ಆಗ ಮಾಡಬಾರದು. ಇತರ ನಿಂದೆಗೆ ಕಾರಣವಾಗುವ ಯಾವ ಕಥೆಯನ್ನೂ ಹೇಳಬಾರದು. ಹೂಮಾಲೆ

---

1 ಅಭಿನಿವೇಶದಿಂದ ವಾದ ಕಥೆಯನ್ನು ಮಾಡಬಾರದೆಂದೂ ಇದರ ಅರ್ಥವಾಗುತ್ತದೆ.

ಆದ್ವಾರೇಣ ನ ಚಾತೀಯಾದ್ಗ್ರಾಮಂ ವಾ ವೇಶ್ಮ ಚೈವ ವಾ ।
ರಾತ್ರೌ ಚ ವೃಕ್ಷಮೂಲಾನಿ ದೂರತಃ ಪರಿವರ್ಜಯೇತ್ ॥ ೧೬೫ ॥

ಆರ್ದ್ರಪಾದಸ್ತು ಭುಂಜೀತ ನಾರ್ದ್ರಪಾದಸ್ತು ಸಂವಿಶೇತ್ ।
ನ ಶೂದ್ರಾಯ ಮತಿಂ ದದ್ಯಾನ್ನೋಚ್ಛಿಷ್ಟಂ ನ ಹವಿಷ್ಕೃತಂ ॥ ೧೬೬ ॥

ನ ಚಾಸ್ಯೋಪದಿಶೇದ್ಧರ್ಮಂ ನ ಚಾಸ್ಯ ವ್ರತಮಾದಿಶೇತ್ ।
ನ ರಾಜ್ಞಃ ಪ್ರತಿಗೃಹ್ಣೀಯಾಲ್ಲುಬ್ಧಸ್ಯೋಚ್ಛಾಸ್ತ್ರವರ್ತಿನಃ ॥ ೧೬೭ ॥

ನರಕಾಣಿ ಚ ಸರ್ವಾಣಿ ದದ್ಯಾದ್ರಾಜಪ್ರತಿಗ್ರಹಃ ।
ದಶಸೂನಾಸಮಶ್ಚಕ್ರೀ ದಶಚಕ್ರಸಮೋ ಧ್ವಜೀ ॥ ೧೬೮ ॥

---

ಯನ್ನು ಕೇಶಗಳಲ್ಲಿ ಧರಿಸುವಾಗ ಹೊರಗೆ ಕಾಣುವಂತೆ ಧರಿಸಬಾರದು. ಮನೆಯನ್ನಾಗಲಿ, ಗ್ರಾಮವನ್ನಾಗಲಿ ದಾರಿ ಇಲ್ಲದ ಕಡೆಯಿಂದ ಪ್ರವೇಶಿಸಬಾರದು. ರಾತ್ರಿಯ ಕಾಲದಲ್ಲಿ ಮರದ ಬುಡದಲ್ಲಿರದೇ ದೂರದಲ್ಲಿರಬೇಕು. ತೊಳೆದ ಕಾಲು ಆರ್ದ್ರವಾಗಿರುವಾಗಲೇ ಊಟಮಾಡಬೇಕು. ತೊಳೆದು ಕಾಲುಗಳನ್ನು ಒರಸಿಕೊಂಡೇ ಮಲಗಬೇಕು. ಶೂದ್ರನಿಗೆ ವೇದಾಂತ ವಿಷಯತತ್ತ್ವಾರ್ಥವನ್ನು ಸಾಕ್ಷಾತ್ತಾಗಿ ಹೇಳಬಾರದು. ಉಚ್ಛಿಷ್ಟವನ್ನೂ ಕೊಡಬಾರದು. (ಇದು ಉದಾಸೀನ ಶೂದ್ರವಿಷಯ) ಹೋಮಮಾಡಿದ ನಂತರ ಉಳಿದಿರುವ ಹವಿರ್ಭಾಗವನ್ನೂ ಶೂದ್ರನಿಗೆ ಕೊಡಬಾರದು.

೧೬೭-೧೭೦. ವೇದೋಕ್ತವಾದ ಪ್ರಾಯಶ್ಚಿತ್ತಾದಿ ಧರ್ಮಗಳನ್ನೂ ಸಹ ಶೂದ್ರನಿಗೆ ಉಪದೇಶಮಾಡಬಾರದು ಉಪವಾಸಾದಿ ಸಾಧ್ಯವಾದ ಕೃಚ್ಛ್ರಚಾಂದ್ರಾಯಣಾದಿ ವ್ರತಗಳನ್ನೂ ಇವನಿಗೆ ಆಜ್ಞೆಮಾಡಬಾರದು. ಲೋಭಿಯಾಗಿಯೂ, ಶಾಸ್ತ್ರಾತಿವರ್ತಿಯಾಗಿಯೂ ಇರುವ ರಾಜನಿಂದ ಯಾವ ದಾನವನ್ನೂ ಸ್ವೀಕರಿಸಬಾರದು. ರಾಜನಿಂದ ಸ್ವೀಕರಿಸಬಹುದಾದ ದಾನವು ಸರ್ವನರಕಗಳಿಗೂ ದ್ವಾರವಾಗುತ್ತದೆ. ಹತ್ತು ಪ್ರಾಣಿಹಿಂಸೆ ಮಾಡಿದ ಕಟುಕನ ಪಾಪಕ್ಕೆ ಸಮವಾದ ಪಾಪವು ತೈಲಿಕ (ಗಾಣಿಗ)ನಲ್ಲಿರುತ್ತದೆ. ಅಂತಹ ತೈಲಿಕನ ಪಾಪದ ಹತ್ತರಷ್ಟು ಪಾಪವು ಧ್ವಜಿಯಲ್ಲಿರುತ್ತದೆ. (ಧ್ವಜಿ ಎಂದರೆ ಈಚಲಗರಿಯನ್ನು ಧ್ವಜದಂತೆ ಹೊತ್ತಿರುವ

**ದಶಧ್ವಜಸಮಾ ವೇಶ್ಯಾ ದಶವೇಶ್ಯಾಸಮೋ ನೃಪಃ |**
**ಏತದ್ವಿಜ್ಞಾಯ ವೈ ರಾಜ್ಞಾಂ ನ ಪ್ರಗೃಹ್ಣಂತಿ ಸಾಧವಃ || ೧೬೯ ||**

**ಉಪಾಕರ್ಮಣಿ ಚೋತ್ಸರ್ಗೇ ತ್ರಿರಾತ್ರಂ ನ ಪಠೇದ್ದ್ವಿಜಃ |**
**ವೇದಾಙ್ಗಾನಿ ಪಠೇತ್ಕೃಷ್ಣೇ ಶುಕ್ಲೇ ವೇದಮತಂದ್ರಿತಃ || ೧೭೦ ||**

**ನಾವಿಸ್ಪಷ್ಟಮಧೀಯೀತ ನ ಶೂದ್ರಜನಸನ್ನಿಧೌ |**
**ನ ನಿಶಾಂತೇ ಪರಿಶ್ರಾಂತೋ ಬ್ರಹ್ಮಾಧೀತ್ಯ ಪುನಃ ಸ್ವಪೇತ್ || ೧೭೧ ||**

**ಸಾಯಂ ನಿಶೀಥೇ ನಾಧ್ಯಯನಂ ವಾದಿತ್ರೇ ನ ಚ ವಾದ್ಯತಿ |**
**ಅತಿಥಿಂ ಚಾನನುಜ್ಞಾಪ್ಯ ಮಾರುತೇ ವಾತಿ ವಾ ಭೃಶಂ || ೧೭೨ ||**

**ಪಶುಮಂಡೂಕಮಾರ್ಜಾರಶ್ವಸರ್ಪನಕುಲಾದಿಭಿಃ |**
**ಕೃತೇಂತರಾಲಗಮನೇ ರುಧಿರೇ ಚ ತಥಾ ಸ್ರುತೇ || ೧೭೩ ||**

---

ಭಾಂಡದಿಂದ ಮದ್ಯವಿಕ್ರಯಮಾಡಿ ಜೀವಿಸುವವನು) ಧ್ವಜಿಯ ಪಾಪಕ್ಕೆ ಹತ್ತರಷ್ಟು ಪಾಪವು ವೇಶ್ಯಾವೃತ್ತಿಯನ್ನು ಹೊಂದಿರುವವರಲ್ಲಿರುತ್ತದೆ. ಇಂತಹ ವೇಶ್ಯಾಪಾಪದ ಹತ್ತರಷ್ಟು ಪಾಪವು ರಾಜನಲ್ಲಿರುತ್ತದೆ. ಇದನ್ನು ತಿಳಿದೇ ಸಾಧುಗಳಾದ ಮಹಾತ್ಮರು ರಾಜನಿಂದ ಪ್ರತಿಗ್ರಹವನ್ನು ಸ್ವೀಕರಿಸುವುದಿಲ್ಲ. ವೇದದ ಪ್ರಾರಂಭ ಮತ್ತು ಉತ್ಸರ್ಜನಗಳಲ್ಲಿ ಮೂರು ರಾತ್ರಿ ಅಧ್ಯಯನಮಾಡಬಾರದು. ಕೃಷ್ಣಪಕ್ಷದಲ್ಲಿ ವೇದಾಙ್ಗಗಳನ್ನೂ ಶುಕ್ಲಪಕ್ಷದಲ್ಲಿ ವೇದವನ್ನೂ ಅಧ್ಯಯನ ಮಾಡಬೇಕು.

೧೭೧-೧೭೩. ಅಸ್ಪಷ್ಟವಾಗಿ ಅಧ್ಯಯನ ಮಾಡಬಾರದು. ಶೂದ್ರಸನ್ನಿಧಾನದಲ್ಲಿಯೂ ಮಾಡಬಾರದು. ರಾತ್ರಿಯ ಕೊನೆಯಲ್ಲಿ ಅಧ್ಯಯನಮಾಡಿ ಶ್ರಮಪಟ್ಟು ಪುನಃ ಮಲಗಬಾರದು. ಸಾಯಂಕಾಲದಲ್ಲಿಯೂ, ಅರ್ಧರಾತ್ರಿಯಲ್ಲಿಯೂ ವಾದ್ಯವಾದನವಾಗುತ್ತಿರುವಾಗಲೂ ಅಧ್ಯಯನಮಾಡಕೂಡದು. ಅತಿಥಿಗಳು ಬಂದಾಗ ಅವರ ಅನುಮತಿ ಇಲ್ಲದೆಯೂ ಹೆಚ್ಚಾಗಿ ಗಾಳಿ ಬೀಸುವಾಗಲೂ ಸಹ ಅಧ್ಯಯನ ಮಾಡಬಾರದು. ಪಶು, ಕಪ್ಪೆ, ಮಾರ್ಜಾಲ, ನಾಯಿ, ಸರ್ಪ, ಮುಂಗಸಿ ಇವು ಅಧ್ಯಯನಕಾಲದಲ್ಲಿ ಮಧ್ಯದಲ್ಲಿ ಪ್ರವೇಶಿಸಿದರೂ ಸುರಿಯುವ ರಕ್ತವನ್ನು ಕಂಡರೂ ಸಹ ಅಧ್ಯಯನಮಾಡಬಾರದು. ಅಧ್ಯಯನಮಾಡುವ

ದ್ಯಾನೇತೌ ವರ್ಜಯೇನ್ನಿತ್ಯಮನಧ್ಯಾಯೌ ದ್ವಿಜೋತ್ತಮಃ ।
ಸ್ವಾಧ್ಯಾಯಭೂಮಿಂ ಚಾಶುದ್ಧಾಂ ಚಾತ್ಮಾನಮಶುಚಿಂ ದ್ವಿಜಾಃ ॥ ೧೭೪ ॥

ದೇವತಾನಾಂ ಗುರೋರಾಜ್ಞಃ ಸ್ನಾತಕಾಚಾರ್ಯಯೋಸ್ತಥಾ ।
ನಾಕ್ರಮೇತ್ಕಾಮತಶ್ಛಾಯಾಂ ಬಭ್ರುಣೋ ದೀಕ್ಷಿತಸ್ಯ ವಾ ॥ ೧೭೫ ॥

ನಾತ್ಮಾನಮವಮನ್ಯೇತ ಪೂರ್ವಾಭಿರಸಮೃದ್ಧಿಭಿಃ ।
ಆಮೃತ್ಯೋಃ ಶ್ರಿಯಮನ್ವಿಚ್ಛೇನ್ನತಾಂ ಮನ್ಯೇತ ದುರ್ಲಭಾಂ ॥ ೧೭೬ ॥

ಸತ್ಯಂ ಬ್ರೂಯಾತ್ಪ್ರಿಯಂ ಬ್ರೂಯಾನ್ನಬ್ರೂಯಾತ್ಸತ್ಯಮಪ್ರಿಯಂ ।
ಪ್ರಿಯಂ ಚ ನಾನೃತಂ ಬ್ರೂಯಾದೇಷಧರ್ಮಃ ಸನಾತನಃ ॥ ೧೭೭ ॥

ಭದ್ರಂ ಭದ್ರಮಿತಿ ಬ್ರೂಯಾದ್ಭದ್ರಮಿತ್ಯೇವ ವಾ ವದೇತ್ ।
ಶುಷ್ಕವೈರಂ ವಿವಾದಂ ಚ ನ ಕುರ್ಯಾತ್ಕೇನಚಿತ್ಸಹ ॥ ೧೭೮ ॥

---

ಬ್ರಾಹ್ಮಣನು ಅಧ್ಯಯನಸ್ಥಾನವು ಅಶುದ್ಧವಾಗಿದ್ದರೂ ಮತ್ತು ತಾನು ಅಶುದ್ಧಿಯಿಂದಿದ್ದರೂ ಈ ಎರಡು ನಿಮಿತ್ತಗಳನ್ನೂ ಅನಧ್ಯಯನವೆಂದೇ ತಿಳಿಯಬೇಕು. ದೇವತೆಗಳ, ಗುರುವಿನ, ರಾಜನ, ಸ್ನಾತಕನ, ಆಚಾರ್ಯನ ನೆರಳುಗಳನ್ನು ಬುದ್ಧಿಪೂರ್ವಕವಾಗಿ ಆಕ್ರಮಿಸಬಾರದು. ಹಾಗೆಯೇ ಮುಂಗಸಿ, ಯಜ್ಞದೀಕ್ಷಿತ ಇವರ ಛಾಯೆಯನ್ನೂ ಆಕ್ರಮಿಸಬಾರದು.

೧೭೬–೧೭೮. ತನಗೆ ಹಿಂದಿನಿಂದಲೂ ಬಂದಿರುವ ದಾರಿದ್ರ್ಯಾದಿದೋಷದಿಂದ ತನ್ನನ್ನು ತಾನೇ ಅವಮತಿಗೊಳಿಸಿಕೊಳ್ಳಬಾರದು. ಮರಣಪರ್ಯಂತವೂ ಲಕ್ಷ್ಮೀಕಟಾಕ್ಷವನ್ನು ನಿರೀಕ್ಷಿಸುತ್ತಲೇ ಇರಬೇಕು. ಅದೂ ಅಷ್ಟು ದುರ್ಲಭವಲ್ಲವೆಂದೇ ನನ್ನ ಭಾವನೆ. ಸತ್ಯವನ್ನೇ ನುಡಿಯಬೇಕು. ಅದನ್ನೂ ಪ್ರಿಯವಾಗಿರುವುದನ್ನೇ ನುಡಿಯಬೇಕು. ಸತ್ಯವಾಗಿದ್ದರೂ ಅಪ್ರಿಯಕರವಾಗಿದ್ದಲ್ಲಿ ಅದನ್ನು ನುಡಿಯಲೇ ಬಾರದು. ಪ್ರಿಯವಾಗಿದ್ದರೂ ಅದು ಅನೃತವಾಗಿದ್ದಲ್ಲಿ ಅದನ್ನೂ ನುಡಿಯಬಾರದು. ಇದು ಶಾಶ್ವತವಾಗಿ ಅನುಸರಿಸಿಬಂದ ಮುಖ್ಯಧರ್ಮ. ಯಾವಾಗಲೂ ಭದ್ರ, ಭದ್ರ (ಮಂಗಳ ಮಂಗಳ) ಎಂದೇ ಹೇಳುತ್ತಿರಬೇಕು. ಮಂಗಳವೇ ಎಂದೂ ಹೇಳುತ್ತಿರಬೇಕು. ಯಾರೊಬ್ಬರೊಡನೆಯೂ ವ್ಯರ್ಥವಾದ ವೈರವನ್ನಾಗಲಿ ವಿವಾದವನ್ನಾಗಲಿ ಮಾಡಬಾರದು. ರೋಗಾದಿಗಳಿಲ್ಲದಿರುವಾಗ ನಿರ್ನಿಮಿತ್ತವಾಗಿ ಚಕ್ಷುರಾದಿ ಇಂದ್ರಿಯ

ಅನಾತುರಃ ಸ್ವಾನಿ ಖಾನಿ ನ ಸ್ಪೃಶೇದನಿಮಿತ್ತತಃ ।
ಗಣಾನ್ನಂ ಗಣಿಕಾನ್ನಂ ಚ ಸೂತಕಾನ್ನಂ ಚ ವರ್ಜಯೇತ್ ।
ಸರ್ವಂ ಪರವಶಂ ದುಃಖಂ ಸರ್ವಮಾತ್ಮವಶಂ ಸುಖಂ ॥ ೧೭೯ ॥

ಸಾವಿತ್ರಶಾಂತಿಹೋಮಾಂಶ್ಚ ಕುರ್ಯಾತ್ಸರ್ವತ್ರ ನಿತ್ಯಶಃ ।
ಪಿತೄಂಶ್ಚೈವಾಷ್ಟಕಾಸ್ವರ್ಚೇನ್ನಿತ್ಯಮನ್ವಷ್ಟಕಾಸು ಚ ॥ ೧೮೦ ॥

ಮಂಗಲಾಚಾರಯುಕ್ತಾನಾಂ ನಿತ್ಯಂ ಚ ಪ್ರಯತಾತ್ಮನಾಂ ।
ಜಪತಾಂ ಜುಹ್ವತಾಂ ಚೈವ ವಿನಿಪಾತೋ ನ ವಿದ್ಯತೇ ॥ ೧೮೧

ನ ಪಾಣಿ ಪಾದಚಪಲೋ ನ ನೇತ್ರ ಚಪಲೋ ದ್ವಿಜಃ ।
ನ ಸ್ಯಾದ್ವಾಕ್ಚಪಲಶ್ಚೈವ ನ ಪರದ್ರೋಹಕರ್ಮಧೀಃ ॥ ೧೮೨ ॥

ಯೇನಾಸ್ಯ ಪಿತರೋ ಯಾತಾ ಯೇನ ಯಾತಾಃ ಪಿತಾಮಹಾಃ ।
ತೇನ ಯಾಯಾತ್ಸತಾಂ ಮಾರ್ಗಂ ತೇನ ಗಚ್ಛನ್ನರಿಷ್ಯತೇ ॥ ೧೮೩ ॥

ಋತ್ವಿಕ್ಪುರೋಹಿತಾಚಾರ್ಯಮಾತುಲಾತಿಥಿಸಂಶ್ರಿತೈಃ ।
ಬಾಲವೃದ್ಧಾತುರೈರ್ವೈದ್ಯೈಃ ಜ್ಞಾತಿಸಂಬಂಧಿಬಾಂಧವೈಃ ॥ ೧೮೪ ॥

---

ಸ್ಥಾನಗಳನ್ನು ಮುಟ್ಟಬಾರದು. ಸಂಘಾನ್ನವನ್ನೂ, ವೇಶ್ಯಾನ್ನವನ್ನೂ, ಸೂತಕಾನ್ನವನ್ನೂ ತ್ಯಜಿಸಬೇಕು. ಪರಾಧೀನವಾದ ಎಲ್ಲವಸ್ತುವೂ ದುಃಖಕರವೇ ಆಗುತ್ತದೆ. ಸ್ವಾಧೀನವಾದ ಎಲ್ಲವಸ್ತುವೂ ಸುಖಕರವೇ ಆಗುತ್ತದೆ. ಸಾವಿತ್ರಹೋಮ, ಶಾಂತಿ ಹೋಮಾದಿಗಳನ್ನು ಎಲ್ಲಾ ಕಾರ್ಯಗಳಲ್ಲಿಯೂ ನಿತ್ಯವೂ ಮಾಡುತ್ತಿರಬೇಕು.

೧೮೦-೧೮೫. ಅಷ್ಟಕಾನ್ವಷ್ಟಕಾಶ್ರಾದ್ಧಗಳಿಂದ ಪಿತೃಗಳನ್ನು ಸಂತೋಷಪಡಿಸಬೇಕು. ಮಂಗಲಕರವಾದ ಸದಾಚಾರಗಳಿಂದ ಕೂಡಿ ನಿತ್ಯವೂ ಶುದ್ಧಾತ್ಮರಾಗಿರುವ ಜಪಹೋಮಾದಿ ತತ್ಪರರಾದ ಮಹಾತ್ಮರಿಗೆ ಎಂದೆಂದಿಗೂ ಭ್ರಂಶವುಂಟಾಗುವುದಿಲ್ಲ. ಹಸ್ತಪಾದನೇತ್ರಾದಿಗಳಿಂದ ಚಪಲವ್ಯಾಪಾರ ಹೊಂದಬಾರದು. ವಾಕ್ಚಪಲನೂ, ಪರದ್ರೋಹಕಬುದ್ಧಿಯೂ ಆಗಿರಬಾರದು. ತನ್ನ ಪಿತೃವೂ, ಪಿತಾಮಹಾದಿಗಳೂ ಯಾವ ಸನ್ಮಾರ್ಗದಿಂದ ನಡೆದರೋ ಅಂತಹ ಸನ್ಮಾರ್ಗವನ್ನೇ

ಮಾತಾಪಿತೃಭ್ಯಾಂ ಜಾಮೀಭಿರ್ಭ್ರಾತ್ರಾ ಪುತ್ರೇಣ ಭಾರ್ಯಯಾ ।
ದುಹಿತ್ರಾ ದಾಸವರ್ಗೇಣ ವಿವಾದಂ ನ ಸಮಾಚರೇತ್ || ೧೮೫ ||

ಏತೈರ್ವಿವಾದಂ ಸಂತ್ಯಜ್ಯ ಸರ್ವಾನ್ ಲೋಕಾನ್ ಜಯೇದ್ಗೃಹೀ ।
ತಸ್ಮಾದೇತೈರಧಿಕ್ಷಿಪ್ತಃ ಸಹೇತಾಸಂಜ್ವರಂ ಸದಾ || ೧೮೬ ||

ಪ್ರತಿಗ್ರಹಸಮರ್ಥೋಽಪಿ ಪ್ರಸಂಗಂ ತತ್ರ ವರ್ಜಯೇತ್ ।
ಪ್ರತಿಗ್ರಹೇಣ ವಿಪ್ರಾಣಾಂ ಬ್ರಾಹ್ಮಂ ತೇಜೋ ವಿನಶ್ಯತಿ || ೧೮೭ ||

ನ ಚ ದ್ರವ್ಯಮವಿಜ್ಞಾಯ ವಿಧಿಂ ಧರ್ಮ್ಯಂ ಪ್ರತಿಗ್ರಹೇ ।
ಪ್ರಾಜ್ಞಃ ಪ್ರತಿಗ್ರಹಂ ಕುರ್ಯಾದವಸೀದನ್ನಪಿ ಕ್ಷುಧಾ || ೧೮೮ ||

ಅತಪಾಸ್ತ್ವನಧೀಯಾನಃ ಪ್ರತಿಗ್ರಹರುಚಿರ್ದ್ವಿಜಃ ।
ಅಂಭಸ್ಯ ಸಂಪ್ಲವೇನೈವ ಸಹ ತೇನೈವ ಮಜ್ಜತಿ || ೧೮೯ ||

---

ಹೊಂದಿರುವವನು ಯಾವಾಗಲೂ ಕ್ಷೀಣನಾಗುವುದಿಲ್ಲ. ಋತ್ವಿಕ್ಕು, ಪುರೋಹಿತ, ಆಚಾರ್ಯ, ಮಾವ, ಅತಿಥಿ, ಆಶ್ರಯವರ್ಗ, ಬಾಲ, ವೃದ್ಧ, ರೋಗಿ, ವೈದ್ಯ, ಜ್ಞಾತಿ, ಬಂಧುವರ್ಗ, ಮಾತಾಪಿತೃಗಳು, ಸ್ತ್ರೀಯರು, ಅಣ್ಣತಮ್ಮಂದಿರು, ಪುತ್ರ, ಭಾರ್ಯೆ, ಮಗಳು, ಭೃತ್ಯರು ಇವರೊಡನೆ ವಿವಾದಮಾಡಬಾರದು.

೧೮೬–೧೮೯. ಇವರೊಡನೆ ವಿವಾದವಿಲ್ಲದ ಗೃಹಸ್ಥನು ಎಲ್ಲಾ ಲೋಕಗಳನ್ನೂ ಜಯಿಸುತ್ತಾನೆ. ಆದುದರಿಂದ ಇವರಿಂದ ನಿಂದಿಸಲ್ಪಟ್ಟರೂ ಗೃಹಸ್ಥಧರ್ಮದಲ್ಲಿರುವವನು ಅನುತಾಪ ಖೇದಾದಿಗಳನ್ನು ಸಹಿಸಬೇಕು. ದಾನವನ್ನು ಸ್ವೀಕರಿಸಲು ತನಗೆ ಸಾಮರ್ಥ್ಯವಿದ್ದರೂ ಅದರ ಆಸಕ್ತಿಯನ್ನು ತ್ಯಜಿಸಬೇಕು. ದಾನಗಳನ್ನು ಸ್ವೀಕರಿಸುವುದರಿಂದ ಬ್ರಾಹ್ಮಣನ ತೇಜಸ್ಸು ನಾಶಹೊಂದುತ್ತದೆ. ಪ್ರಾಜ್ಞನಾದವನು ಹಸಿವಿನಿಂದ ಬಳಲುತ್ತಿದ್ದರೂ ದಾನಮಾಡಲ್ಪಡುವ ದ್ರವ್ಯದ ಸ್ವರೂಪವನ್ನೂ, ವಿಧಿಯನ್ನೂ ಅದರ ಧರ್ಮಾನುಬಂಧಿತ್ವವನ್ನೂ ವಿಚಾರಮಾಡದೆ ದಾನವನ್ನು ಸ್ವೀಕರಿಸಬಾರದು. ತಪಸ್ಸು, ಅಧ್ಯಯನ ಯಾವುದೂ ಇಲ್ಲದೆ ಕೇವಲ ದಾನಸ್ವೀಕಾರದಲ್ಲಿ ಆಶೆಯುಳ್ಳವನು ನೀರಿನಲ್ಲಿ ಶಿಥಿಲವಾದ ತೆಪ್ಪದೊಡನೆ ದಾಟುವವನು ಮುಳುಗುವಂತೆ ತಾನೂ ಆ ಅಭಿಲಾಷೆಯೊಡನೆ ಮುಳುಗಿ ಹೋಗುತ್ತಾನೆ. ಆದುದರಿಂದ ಪಂಡಿತನಾದವನು ಯಾರಿಂದಲೂ ದಾನವನ್ನು ಸ್ವೀಕರಿಸಲೇ ಬಾರದು.

ತಸ್ಮಾನ್ನವಿದ್ವಾನ್ಗೃಹ್ಣೀಯಾದ್ಯಸ್ಮಾತ್ತಸ್ಮಾತ್ಪ್ರತಿಗ್ರಹಂ ।
ಅಲ್ಪಕೇನಾಪ್ಯವಿದ್ವಾಂಸ್ತು ಪಂಕೇ ಗೌರಿವ ಸೀದತಿ ॥ ೧೯೦ ॥

ಪ್ರತಿಗ್ರಹಸಮರ್ಥೋಽಪಿ ನಾದತ್ತೇ ಯಃ ಪ್ರತಿಗ್ರಹಂ ।
ಯೇ ಲೋಕಾ ದಾನಶೀಲಾನಾಂ ಸ ತಾನಾಪ್ನೋತಿ ಶಾಶ್ವತಾನ್ ॥ ೧೯೧ ॥

ಗುರೂನ್ ಭೃತ್ಯಾನುಜ್ಜಿಹೀರ್ಷುರರ್ಚಿಷ್ಯನ್ ದೇವತಾತಿಥೀನ್ ।
ಸರ್ವತಃ ಪ್ರತಿಗೃಹ್ಣೀಯಾನ್ನತು ತೃಪ್ಯೇತ್ಸ್ವಯಂ ತತಃ ॥ ೧೯೨ ॥

ಗುರುಷ್ವಭ್ಯವತೀತೇಷು ವಿನಾ ವಾ ತೈಃ ಗೃಹೇ ವಸನ್ ।
ಆತ್ಮನೋ ವೃತ್ತಿಮನ್ವಿಚ್ಛನ್ ಗೃಹ್ಣೀಯಾತ್ಸಾಧುತಃ ಸದಾ ॥ ೧೯೩ ॥

ಧರ್ಮಧ್ವಜೋಽಥವಾ ಲುಬ್ಧಃ ಛದ್ಮಸ್ಥೋ ಲೋಕನಿಂದಕಃ ।
ಬೈಡಾಲವ್ರತಿಕೋ ಜ್ಞೇಯಃ ಹಿಂಸ್ರಃ ಸರ್ವಾತಿಸಾಧಕಃ ॥ ೧೯೪ ॥

ಅಧೋದೃಷ್ಟಿರ್ನೈಷ್ಕೃತಿಕಃ ಸ್ವಾರ್ಥಸಾಧನತತ್ಪರಃ ।
ಶಠೋ ಮಿಥ್ಯಾವಿನೀತಶ್ಚ ಬಕವ್ರತಚರೋ ದ್ವಿಜಃ ॥ ೧೯೫ ॥

---

೧೯೦-೧೯೩. ಅಜ್ಞಾನಿಯಾದವನು ಅಲ್ಪವಿಷಯದಲ್ಲಿಯೂ ಪ್ರತಿಗ್ರಹ ಮಾಡಿ ಕೆಸರಿನಲ್ಲಿ ಗೋವಿನಂತೆ ಸಿಕ್ಕಿಕೊಂಡು ನರಳುತ್ತಾನೆ. ಯಾವನು ಪ್ರತಿಗ್ರಹದಲ್ಲಿ ಸಮರ್ಥನಾಗಿದ್ದರೂ ಸ್ವೀಕರಿಸದೆ ತಟಸ್ಥನಾಗಿರುವನೋ ಅವನು ದಾನಶೀಲರ ಶಾಶ್ವತವಾದ ಲೋಕಗಳನ್ನೇ ಹೊಂದುತ್ತಾನೆ. ಗುರುವನ್ನೂ ಭೃತ್ಯರನ್ನೂ ಉದ್ಧರಿಸುವುದಕ್ಕಾದರೂ ದೇವತಾತಿಥಿಗಳನ್ನು ಪೂಜಿಸುವುದಕ್ಕಾದರೂ ಅರ್ಥಾರ್ಜನೆಯ ಆವಶ್ಯಕತೆ ಇದ್ದಲ್ಲಿ ಅವನು ಎಲ್ಲರಿಂದಲೂ ತೃಪ್ತಿಪಡದೆ ದಾನವನ್ನು ಸ್ವೀಕರಿಸಬಹುದು. ಪಿತ್ರಾದಿಗುರುಜನಗಳು ಮರಣಹೊಂದಿದ್ದು ಅಥವಾ ಯೋಗಾದಿಗಳಿಂದ ಅಂತರ್ಮುಖರಾದ ಅವರನ್ನು ಬಿಟ್ಟು ತಾನು ಬೇರೆ ಮನೆಯಲ್ಲಿರುವಾಗ ತನ್ನ ಜೀವನಕ್ಕೆ ಸಾಧಕವಾಗುವ ದಾನವನ್ನು ಸತ್ಪುರುಷರಿಂದ ಸ್ವೀಕರಿಸಬಹುದು.

೧೯೪-೧೯೫. ಇತರರ ಮೆಚ್ಚಿಗೆಗಾಗಿ ಧರ್ಮಾಚರಣೆ ಮಾಡುತ್ತಾ ಲುಬ್ಧನಾಗಿಯೂ ವಂಚಕನಾಗಿಯೂ ಇರುವ ಮತ್ತು ಹಿಂಸಾವೃತ್ತಿಯಿಂದ ಎಲ್ಲರನ್ನೂ ಧಿಕ್ಕರಿಸುವ ಲೋಕನಿಂದಾಶೀಲನಾದವನು ಬೈಡಾಲವೃತ್ತಿಕನೆನಿಸುತ್ತಾನೆ. ಅಧೋ

ಯೇ ಬಕವ್ರತಿನೋ ವಿಪ್ರಾ ಯೇ ಚ ಮಾರ್ಜಾರಲಿಂಗಿನಃ ।
ತೇ ಪತನ್ತ್ಯಂಧತಾಮಿಸ್ರಂ ಸಹ ಪಾಪೇನ ಕರ್ಮಣಾ ॥ ೧೯೬ ॥

ನ ಧರ್ಮಸ್ಯಾಪದೇಶೇನ ಪಾಪಂ ಕೃತ್ವಾ ವ್ರತಂ ಚರೇತ್ ।
ವ್ರತೇನ ಪಾಪಂ ಪ್ರಚ್ಛಾದ್ಯ ಕುರ್ವನ್ ಸ್ತ್ರೀಶೂದ್ರದಂಭನಂ ।
ಪ್ರೇತ್ಯೇಹ ತಾದೃಶೋ ವಿಪ್ರೋ ಗೃಹ್ಯತೇ ಬ್ರಹ್ಮವಾದಿಭಿಃ ॥ ೧೯೭ ॥

ಛದ್ಮನಾ ಚರಿತಂ ತಚ್ಚ ವ್ರತಂ ರಕ್ಷಾಂಸಿ ಗಚ್ಛತಿ ।
ಅಲಿಂಗೋ ಲಿಂಗಿವೇಶೇನ ಯೋವೃತ್ತಿಮುಪಜೀವತಿ ॥ ೧೯೮ ॥

ಸ ಲಿಂಗಿನಾಂ ಹರತ್ಯೇನಃ ತಿರ್ಯಗ್ಯೋನೌ ಚ ಜಾಯತೇ ।
ಪರಕೀಯನಿಪಾನೇಷು ನಸ್ನಾಯಾದ್ಧಿ ಕದಾಚನ ।
ನಿಪಾನಕರ್ತುಃ ಸ್ನಾತ್ವಾ ತು ದುಷ್ಕೃತಾಂಶೇನ ಲಿಪ್ಯತೇ ॥ ೧೯೯ ॥

ಯಾನಂ ಶಯ್ಯಾಸನಂ ವಸ್ತ್ರಂ ಕೂಪೋದ್ಯಾನಗೃಹಾಣಿ ತು ।
ಅದತ್ತಾನ್ಯುಪಭುಂಜಾನೋ ಹ್ಯೇನಸಃ ಸ್ಯಾತ್ತುರೀಯಭಾಕ್ ॥ ೨೦೦ ॥

---

ದೃಷ್ಟಿಯಿಂದ ಕೂಡಿ ವಂಚಕತನದಿಂದ ಸ್ವಾರ್ಥಸಾಧನೆಯಲ್ಲಿ ತತ್ಪರನಾಗಿ ಮಿಥ್ಯಾ ವಿನಯದಿಂದ ಕೂಡಿ ಮೂರ್ಖನಾಗಿರುವ ದ್ವಿಜನು ಬಕವೃತ್ತಿ ಎನಿಸುತ್ತಾನೆ. ಇಂತಹ ಬಕವೃತ್ತಿಗಳೂ ಮಾರ್ಜಾರವ್ರತಿಗಳೂ ತಮ್ಮ ಪಾಪಕರ್ಮಗಳೊಡನೆ ಅಂಧತಾಮಿಸ್ರವೆಂಬ ನರಕವನ್ನು ಹೊಂದುತ್ತಾರೆ. ಧರ್ಮದ ನೆಪದಿಂದ ಪಾಪಮಾಡಿ ಅದರ ಆಚ್ಛಾದನಕ್ಕಾಗಿ ವ್ರತವನ್ನೂ ಮಾಡಬಾರದು. ವ್ರತದಿಂದ ಪಾಪವನ್ನು ಮುಚ್ಚಿ ಸ್ತ್ರೀಶೂದ್ರರನ್ನು ಮೋಸಪಡಿಸಿದವನು ಲೋಕಾಂತರದಲ್ಲಿ ಬ್ರಹ್ಮವಾದಿಗಳಿಂದ ನಿಗ್ರಹಿಸಲ್ಪಡುತ್ತಾನೆ. ವಂಚನೆಗಾಗಿ ಮಾಡಿದ ಆ ವ್ರತವು ರಾಕ್ಷಸರನ್ನು ಸೇರುತ್ತದೆ. ಯಾವಚಿಹ್ನೆಯೂ ಇಲ್ಲದಿರುವವನು ಚಿಹ್ನೆಯ ಆಶ್ರಯದಿಂದ ಜೀವಿಸುವನೋ.

೧೯೯-೨೦೨. ಅಂತಹವನು ಲಿಂಗಿಗಳ ಪಾಪಕ್ಕೆ ತಾನೇ ಭಾಗಿಯಾಗುತ್ತಾನೆ. ತಿರ್ಯಗ್ಜಾತಿಯಲ್ಲಿಯೂ ಹುಟ್ಟುತ್ತಾನೆ. ಮತ್ತೊಬ್ಬನಿಂದ ನಿರ್ಮಿಸಲ್ಪಟ್ಟ ಜಲಾಶಯಗಳಲ್ಲಿ ಯಾವಾಗಲೂ ಸ್ನಾನಮಾಡಬಾರದು. ಹಾಗೆ ಸ್ನಾನಮಾಡಿದವನು ಜಲಾಶಯವನ್ನು ನಿರ್ಮಾಣಮಾಡಿದವನ ಪಾಪಾಂಶಕ್ಕೆ ಭಾಗಿಯಾಗುತ್ತಾನೆ.

ಯಮಾನ್ ಸೇವೇತ ಸತತಂ ನ ನಿತ್ಯಂ ನಿಯಮಾನ್ಬುಧಃ ।
ಯಮಾನ್ಸಂತ್ಯಜ್ಯ ಕುರ್ವಾಣೋ ನಿಯಮಾನ್ಕೇವಲಾನ್ಪತನ್ ॥ ೨೦೧ ॥

ಶೌಚಮಿಜ್ಯಾ ತಪೋ ದಾನಂ ಸ್ವಾಧ್ಯಾಯೋಪಸ್ಥನಿಗ್ರಹಃ ।
ವ್ರತೋಪವಾಸೌ ಮೌನಂ ಚ ಸ್ನಾನಂ ಚ ನಿಯಮಾ ದಶ ॥ ೨೦೨ ॥

ಆನೃಶಂಸ್ಯಂ ಕ್ಷಮಾ ಸತ್ಯಮಹಿಂಸಾ ಚ ದಮಃ ಸ್ಪೃಹಾ ।
ಧ್ಯಾನಂ ಪ್ರಸಾದೋ ಮಾಧುರ್ಯಂ ಚಾರ್ಜವಂ ಚ ಯಮಾ ದಶ ॥ ೨೦೩ ॥

ನಾಶ್ರೋತ್ರಿಯತತೇ ಯಜ್ಞೇ ಗ್ರಾಮಯಾಜಿಹುತೇ ತಥಾ ।
ಸ್ತ್ರೀಯಾ ಕ್ಲೀಬೇನ ಚ ಹುತೇ ಭುಂಜೀಯಾದ್ಬ್ರಾಹ್ಮಣಃ ಕ್ವಚಿತ್ ॥೨೦೪॥

ಯಜ್ಞೋಽನೃತೇನ ಕ್ಷರತಿ ತಪಃ ಕ್ಷರತಿ ವಿಸ್ಮಯಾತ್ ॥ ೨೦೫ ॥

---

ಯಾನ, ಶಯನ, ಆಸನ, ವಸ್ತ್ರ, ಭಾವಿ, ಉದ್ಯಾನ, ಗೃಹ ಇವುಗಳನ್ನು ಮತ್ತೊಬ್ಬನಿಂದ ಕೊಡಲ್ಪಡದಿದ್ದಲ್ಲಿ ಇವನ್ನು ಅನುಭವಿಸುವವನು, ಸ್ವಾಮಿಯ ಪಾಪದ ನಾಲ್ಕನೆಯ ಒಂದು ಭಾಗಕ್ಕೆ ಭಾಗಿಯಾಗುತ್ತಾನೆ ಮುಂದೆ ಹೇಳುವ ಆನೃಶಂಸ್ಯವೇ ಮೊದಲಾಗಿ ಉಳ್ಳ ಯಮಗಳನ್ನೇ ಯಾವಾಗಲೂ ಆಚರಣೆಯಲ್ಲಿಡಬೇಕು. ನಿಯಮಗಳನ್ನು ನಿತ್ಯವಾಗಿ ಅಚರಿಸಬಾರದು. ಯಮಗಳನ್ನು ತ್ಯಜಿಸಿ ಕೇವಲ ನಿಯಮಗಳನ್ನೇ ಆಚರಿಸುವವನು ಪಾಪಭಾಗಿಯಾಗುತ್ತಾನೆ. ಶೌಚ, ಪೂಜಾ, ತಪಸ್ಸು, ದಾನ, ಅಧ್ಯಯನ, ಜನನೇಂದ್ರಿಯನಿಗ್ರಹ, ವ್ರತೋಪವಾಸಗಳು ಮೌನ, ಸ್ನಾನ ಈ ಹತ್ತು ನಿಯಮಗಳೆನಿಸುತ್ತವೆ.

೨೦೩-೨೦೬. ಅಕ್ರೂರಸ್ವಭಾವ, ಕ್ಷಮೆ, ಸತ್ಯ, ಅಹಿಂಸಾ, ದಮ, ಸ್ಪೃಹೆ, ಧ್ಯಾನ, ಪ್ರಸನ್ನತೆ, ಸಂತುಷ್ಟತೆ, ಋಜುಸ್ವಭಾವ ಈ ಹತ್ತು ಯಮಗಳೆನಿಸುತ್ತವೆ. ಅಶ್ರೋತ್ರಿಯನಿಂದ ಮಾಡಲ್ಪಡುತ್ತಿರುವ ಯಜ್ಞದಲ್ಲಿಯೂ ಗ್ರಾಮಯಾಜಿಯಿಂದ ಹೋಮಮಾಡಲಾದ ಯಜ್ಞದಲ್ಲಿಯೂ, ಸ್ತ್ರೀ ಮತ್ತು ನಪುಂಸಕ ಇವರಿಂದ ಹೋಮಿಸಲಾದ ಯಜ್ಞದಲ್ಲಿಯೂ ಸಹ ಬ್ರಾಹ್ಮಣನು ಯಾವಾಗಲೂ ಭುಂಜಿಸಬಾರದು. ಅನೃತಭಾಷಣದಿಂದ ಯಜ್ಞವು ಕ್ಷಯಿಸುತ್ತದೆ. ಆಶ್ಚರ್ಯಾವೇಶದಿಂದ

**ಅಯುರ್ವಿಪ್ರಾಪವಾದೇನ ದಾನಂ ಚ ಪರಿಕೀರ್ತನಾತ್ ।**
**ಧರ್ಮಂ ಶನೈಃ ಸಂಚಿನುಯಾದ್ವಲ್ಮೀಕಮಿವ ಪುತ್ತಿಕಾಃ ॥ ೨೦೬ ॥**

**ಪರಲೋಕಸಹಾಯಾರ್ಥಂ ಪರಪೀಡಾಂ ವಿವರ್ಜಯೇತ್ ।**
**ಉತ್ತಮೈರುತ್ತಮೈರ್ನಿತ್ಯಂ ಸಂಬಂಧಾನಾಚರೇತ್ಸಹ ॥ ೨೦೭ ॥**

**ನಿನೀಷುಃ ಕುಲಮುತ್ಕರ್ಷಮಧಮಾನಧಮಾನ್ ತ್ಯಜೇತ್ ।**
**ಏಧೋದಕಂ ಮೂಲಫಲಮನ್ನಮಭ್ಯುದ್ಯತಂ ಚ ಯತ್ ॥ ೨೦೮ ॥**

**ಸರ್ವತಃ ಪ್ರತಿಗೃಹ್ಣೀಯಾನ್ಮಧ್ವಥಾಭಯದಕ್ಷಿಣಾಂ ।**
**ಅಹೃತ್ಯಾಭ್ಯುದ್ಯತಾಂ ಭಿಕ್ಷಾಂ ಗೃಹ್ಣೀಯಾದಪ್ರಚೋದಿತಾಂ ।**
**ಅನ್ಯತ್ರ ಕುಲಟಾಷಂಡಪತಿತಸ್ತೇನ ವಿದ್ವಿಷಃ ॥ ೨೦೯ ॥**

**ಶಯ್ಯಾಂ ಗೃಹಾನ್ ಶುಭಾನ್ಗಂಧಾನಾಪಃ ಪುಷ್ಪಮಣೀರ್ದಧಿ ।**
**ಧಾನಾ ಮತ್ಸ್ಯಃ ಪಯೋ ಮಾಸಂ ಶಾಕಂ ಚೈವ ತು ನಿರ್ಣುದೇತ್ ॥ ೨೧೦ ॥**

---

ತಪಸ್ಸು ಕ್ಷಯಿಸುತ್ತದೆ. ಬ್ರಾಹ್ಮಣಾಪವಾದದಿಂದ ಆಯುಸ್ಸು ಕ್ಷಯಿಸುತ್ತದೆ. ಇತರರಲ್ಲಿ ಹೇಳಿಕೊಳ್ಳುವುದರಿಂದ ದಾನವೂ ನಿಷ್ಫಲವಾಗುತ್ತದೆ. ಗೆದ್ದಲು ಹುಳುಗಳು ಹುತ್ತವನ್ನು ಕಟ್ಟುವಂತೆ ಮನುಷ್ಯನು ತನ್ನ ಪರಲೋಕಕ್ಕೆ ಸಹಾಯಕವಾದ ಧರ್ಮವನ್ನು ಪರಹಿಂಸಾದಿಗಳನ್ನು ಮಾಡದೆ ವಿಹಿತವೃತ್ತಿಯಿಂದ ಮೆಲ್ಲಮೆಲ್ಲಗೆ ಕೊಂಚಕೊಂಚವಾಗಿ ಸಂಗ್ರಹಿಸುತ್ತಿರಬೇಕು.

೨೦೭-೨೧೧. ತನ್ನ ಕುಲದ ಉತ್ಕರ್ಷವನ್ನು ಅಪೇಕ್ಷಿಸುವವನು ಮೇಲೆ ಮೇಲೆ ಉತ್ತಮರೊಡನೆಯೇ ಸಂಬಂಧವನ್ನು ಮಾಡಬೇಕು. ಅಧಮರನ್ನು ತ್ಯಜಿಸಬೇಕು. ಸೌದೆ, ಜಲ, ಫಲಮೂಲಗಳು ಪರರಿಗಾಗಿಯೇ ಸಿದ್ಧವಾಗಿರುವ ಅನ್ನ, ಮಧು, ಅಭಯ ದಕ್ಷಿಣೆ ಇವನ್ನು ಎಲ್ಲರಿಂದಲೂ ಹೊಂದಬಹುದು. ತಾನಾಗಿಯೇ ತಂದು ಸಿದ್ಧಪಡಿಸಿರುವ ಭಿಕ್ಷೆಯನ್ನು ಸ್ವೈರಿಣಿ, ಷಂಡ, ಪತಿತ, ಚೋರ, ಶತ್ರು, ಇವರನ್ನು ಹೊರತು. ಇತರರಿಂದ ಸ್ವೀಕರಿಸಬಹುದು. ಶಯನ, ಗೃಹ, ಒಳ್ಳೆಯ ಸುಗಂಧಿವಸ್ತು. ಜಲ, ಪುಷ್ಪ, ರತ್ನ, ಮೊಸರು, ಅರಳು, ಮತ್ಸ್ಯ, ಹಾಲು, ಮಾಂಸ, ಶಾಕ ಇವನ್ನು ಶುದ್ಧಿಮಾಡಬೇಕು. ಯಾವನು ಬೇರೆ ರೀತಿಯಲ್ಲಿರುವ ಸ್ವಸ್ವರೂಪವನ್ನು ಸತ್ಪುರುಷರಲ್ಲಿ ಮರೆಮಾಚಿ ಬೇರೆಯ ರೀತಿಯಲ್ಲಿ ಹೇಳಿಕೊಳ್ಳು

ಯೋಽನ್ಯಥಾ ಸಂತಮಾತ್ಮಾನಮನ್ಯಥಾ ಸತ್ಸು ಭಾಷತೇ ।
ಕಿಂತೇನ ನಕೃತಂ ಪಾಪಂ ಚೌರೇಣಾತ್ಮಾಪಹಾರಿಣಾ ॥ ೨೧೧ ॥

ವಾಚ್ಯರ್ಥಾ ನಿಯತಾಸ್ಸರ್ವೇ ವಾಙ್ಮೂಲಾ ವಾಗ್ವಿನಿಸ್ಸೃತಾಃ ।
ತಾಂ ತು ಯಸ್ತೇನಯೇದ್ವಾಚಂ ಸ ಸರ್ವಸ್ತೇಯಕೃನ್ನರಃ ॥ ೨೧೨ ॥

ಸಂತಾನಿಕಂ ಯಕ್ಷ್ಯಮಾಣಮಧ್ವಗಂ ಸರ್ವವೇದಗಂ ।
ಗುರ್ವರ್ಥಂ ಪಿತೃಮಾತ್ರರ್ಥಂ ಸ್ವಾಧ್ಯಾಯಾರ್ಥಮುಪತಾಪಿನಃ ॥ ೨೧೩ ॥

ನ ಚೈತಾನ್ ಸ್ನಾತಕಾನ್ ವಿಂದ್ಯಾದ್ಬ್ರಾಹ್ಮಣಾನ್ ಧರ್ಮಭಿಕ್ಷುಕಾನ್ ।
ನಿಸ್ವೇಭ್ಯೋ ದೇಯಮೇತೇಭ್ಯೋ ದಾನಂ ವಿದ್ಯಾವಿಶೇಷತಃ ॥ ೨೧೪ ॥

ಏತೇಭ್ಯೋ ಹಿ ದ್ವಿಜಾಗ್ರ್ಯೇಭ್ಯೋ ದೇಯಮನ್ನಂ ಸದಕ್ಷಿಣಂ ।
ಇತರೇಭ್ಯೋ ಬಹಿರ್ವೇದ್ಯಾಂ ಕೃತಾನ್ನಂ ದೇಯಮುಚ್ಯತೇ ॥ ೨೧೫ ॥

---

ತ್ತಾನೆಯೋ ಆತ್ಮಾಪಹಾರಿಯಾದ ಆ ಚೋರನಿಂದ ಯಾವ ಪಾಪವು ತಾನೇ ಮಾಡಲ್ಪಡುವುದಿಲ್ಲ.

೨೧೨-೨೧೬. ಯಾವಾಗಲೂ ವಾಕ್ಕಿನಲ್ಲಿ ಸತ್ಯವಾದ ಅರ್ಥವೇ ಇರುತ್ತದೆ. ವಾಙ್ಮೂಲವಾದ ಸರ್ವವ್ಯವಹಾರಕ್ಕೂ ವಾಕ್ಕೇ ಮೂಲ ಕಾರಣವಾಗುತ್ತದೆ. ಅಂತಹ ವಾಕ್ಕಿನ ನಿಯತವಾದ ಅರ್ಥವನ್ನು ಅಪಹರಿಸಿ ಯಾವನು ಅನೃತಭಾಷಣದಿಂದ ಚೌರ್ಯವನ್ನಾಚರಿಸುತ್ತಾನೆಯೋ, ಅವನು ಎಲ್ಲಾ ವಿಧವಾದ ಚೌರ್ಯವನ್ನೂ ಮಾಡಿದಂತೆಯೇ ಆಗುತ್ತದೆ. ದೀರ್ಘಕಾಲ ಅನುವರ್ತಿಸುವ ಯಜ್ಞವನ್ನು ಮಾಡುವವನೂ, ಮಾರ್ಗಸ್ಥ, ಸರ್ವವೇದಾಧ್ಯಾಯೀ, ಗುರುವಿಗಾಗಿ, ಮಾತಾಪಿತೃಗಳಿಗಾಗಿ, ಅಥವಾ ಅಧ್ಯಯನಕ್ಕಾಗಿಯಾಗಲಿ ಯಾಚಿಸುವವನು ಇವರು ಇತರರನ್ನು ತೊಂದರೆ ಪಡಿಸದೆ ಇದ್ದಲ್ಲಿ ಇವರು ಧರ್ಮ ಭಿಕ್ಷುಕರೆನಿಸುತ್ತಾರೆ. ಕೇವಲ ಸ್ನಾತಕರಲ್ಲ. ಇವರು ದರಿದ್ರರಾಗಿದ್ದಲ್ಲಿ ವಿದ್ಯಾತಾರತಮ್ಯಕ್ಕೆ ತಕ್ಕಂತೆ ದಾನಮಾಡಲು ಅರ್ಹರಾಗಿರುತ್ತಾರೆ. ಇವರಿಗೆ ಬ್ರಾಹ್ಮಣಾಗ್ರೇಸರರೆಂಬ ಭಾವನೆಯಿಂದ ಯಜ್ಞದಲ್ಲಿ ವಿಹಿತವಾದ ಅನ್ನ ದಕ್ಷಿಣೆಗಳನ್ನು ಕೊಡಬಹುದು. ಇತರರಿಗೆ ಮಾತ್ರ ವೇದಿಯಿಂದ ಹೊರಗೆ ಸಿದ್ಧವಾದ ಅನ್ನವನ್ನು ಕೊಡಬಹುದೆಂದೂ ಶಾಸ್ತ್ರವು ಹೇಳುತ್ತದೆ. ವಿವಾಹ ಹೊಂದಿರು

ಕೃತದಾರೋಽಪರಾನ್ದಾರಾನ್ ಭಿಕ್ಷಿತ್ವಾ ಯೋಽಧಿಗಚ್ಛತಿ ।
ರತಿಮಾತ್ರಂ ಫಲಂ ತಸ್ಯ ದ್ರವ್ಯದಾತುಸ್ತು ಸಂತತಿಃ　　　॥ ೨೧೬ ॥

ಯಸ್ಯ ತ್ರೈವಾರ್ಷಿಕಂ ಭಕ್ತಂ ಪರ್ಯಾಪ್ತಂ ಭೃತ್ಯವೃತ್ತಯೇ ।
ಅಧಿಕಂ ವಾಪಿ ವಿದ್ಯೇತ ಸ ಸೋಮಂ ಪಾತುಮರ್ಹತಿ　　　॥ ೨೧೭ ॥

ಅತಃ ಸ್ವಲ್ಪೀಯಸಿ ದ್ರವ್ಯೇ ಯಃ ಸೋಮಂ ಪಿಬತಿ ದ್ವಿಜಃ ।
ಸಪೀತಸೋಮಪೂರ್ವೋಽಪಿ ತಸ್ಯ ನಾಪ್ನೋತಿ ತತ್ಫಲಂ　　　॥ ೨೧೮ ॥

ಶಕ್ತಃ ಪರಜನೇ ದಾತಾ ಸ್ವಜನೇ ದುಃಖಜೀವಿನಿ ।
ಮಧ್ವಾಪಾತೌ ವಿಷಾಸ್ವಾದಃ ಸ ಧರ್ಮಪ್ರತಿರೂಪಕಃ　　　॥ ೨೧೯ ॥

ಭೃತ್ಯಾನಾಮುಪರೋಧೇನ ಯಃ ಕರೋತ್ಯೌರ್ಧ್ವದೈಹಿಕಂ ।
ತದ್ಭವತ್ಯಸುಖೋದರ್ಕಂ ಜೀವತೋಽಸ್ಯ ಮೃತಸ್ಯವಾ　　　॥ ೨೨೦ ॥

---

ವವನು ಇತರ ಸ್ತ್ರೀಯರನ್ನು ರತಿಗಾಗಿ ಭಿಕ್ಷೆಮಾಡಿದಲ್ಲಿ ಅವನು ಹೊಂದುವ ಫಲವು ರತಿಮಾತ್ರ, ಅದರಿಂದಾಗಬಹುದಾದ ಸಂತತಿಯು ಮಾತ್ರ ದ್ರವ್ಯದಾನಮಾಡಿದ ಸ್ವಾಮಿಗೇ ಸೇರುತ್ತದೆ. ಯಾವನಿಗೆ ಮೂರು ವರ್ಷಕಾಲ ತನಗೂ ತನ್ನ ಭೃತ್ಯ ವರ್ಗಕ್ಕೂ ಆಗುವಷ್ಟು ಅನ್ನವು ಅಥವಾ ಇನ್ನೂ ಹೆಚ್ಚಾದಷ್ಟು ಮನೆಯಲ್ಲಿ ಸಿದ್ಧ ವಾಗಿರುತ್ತದೆಯೋ ಆಗ ಅವನು ಸೋಮಯಾಗಮಾಡಿ ಸೋಮಪಾನವನ್ನು ಮಾಡಬೇಕು.

೨೧೮-೨೨೨. ಆದುದರಿಂದ ಅತ್ಯಲ್ಪ ದ್ರವ್ಯವಿರುವಾಗ ಯಾವ ಬ್ರಾಹ್ಮಣನು ಸೋಮಯಾಗಮಾಡಿ ,ಸೋಮಪಾನಮಾಡುವನೋ ಅವನು ತಾನು ಹಿಂದೆ ಮಾಡಿದ್ದ ಸೋಮಯಾಗದ ಫಲವನ್ನೂ ನಾಶಪಡಿಸಿಕೊಳ್ಳುತ್ತಾನೆ. ಯಾವನು ಸ್ವಜನವು ದಾರಿದ್ರ್ಯದಿಂದ ದುಃಖಜೀವಿಯಾಗಿದ್ದರೂ ಅವರನ್ನು ಅನಾದರಿಸಿ ಇತರ ರಲ್ಲಿಯೇ ತನ್ನ ದಾನಶೀಲತೆಯನ್ನು ತೋರ್ಪಡಿಸಿಕೊಳ್ಳುತ್ತಾನೆಯೋ ಅವನು ಜೇನಿಗೆ ಬದಲಾಗಿ ವಿಷವನ್ನು ಸೇವಿಸುತ್ತಾನೆ ಏತಕ್ಕೆಂದರೆ ಅವನ ದಾನವು ಧರ್ಮತಃ ದಾನವಾದರೂ, ವಸ್ತುತಃ ಅದು ಅವಿಹಿತವಾದುದರಿಂದ ದಾನಾಭಾಸ, ಯಾವನು ಔರ್ಧ್ವದೈಹಿಕವನ್ನು (ಪ್ರೇತಕ್ರಿಯೆ) ಮಾಡುವಾಗ ಭೃತ್ಯರ ಜೀವನಕ್ಕೆ ತೊಂದರೆ ಮಾಡಿ ಸ್ವಕಾರ್ಯವನ್ನು ಸಾಧಿಸಿಕೊಳ್ಳುವನೋ ಅಂತಹ ಕಾರ್ಯವು ಅವನು

ನ ಯಜ್ಞಾರ್ಥೇ ದ್ವಿಜಃ ಶೂದ್ರಾದ್ಭಿಕ್ಷಾಂ ಲಿಪ್ಸೇತ ಧರ್ಮವಿತ್ ।
ಯಜಮಾನೋ ಹಿ ಭಿಕ್ಷಿತ್ವಾ ಚಂಡಾಲಃ ಪ್ರೇತ್ಯ ಜಾಯತೇ ॥ ೨೨೧ ॥

ಯಜ್ಞಾರ್ಥಮರ್ಥಂ ಭಿಕ್ಷಿತ್ವಾ ಯೋ ನ ಸರ್ವಂ ಪ್ರಯಚ್ಛತಿ ।
ಸ ಯಾತಿ ಭಾಸತಾಂ ವಿಪ್ರಃ ಕಾಕತಾಂ ವಾ ಶತಂಸಮಾಃ ॥ ೨೨೨ ॥

ದೇವಸ್ವಂ ಬ್ರಾಹ್ಮಣಸ್ವಂ ಚ ಯೋ ಲೋಭಾದುಪಜೀವತಿ ।
ಸ ಪಾಪಾತ್ಮಾ ಪರೇ ಲೋಕೇ ಗೃಧ್ರೋಚ್ಛಿಷ್ಟೇನ ಜೀವತಿ ॥ ೨೨೩ ॥

ಇಷ್ಟಿಂ ವೈಶ್ವಾನರೀಂ ವಿಪ್ರೋ ನಿರ್ವಪೇದಬ್ದಪರ್ಯಯೇ ।
ಕೃತಾನಾಂ ಪಶುಸೋಮಾನಾಂ ನಿಷ್ಕೃತ್ಯರ್ಥಮಸಂಭವೇ ॥ ೨೨೪ ॥

ಆಪತ್ಕಲ್ಪೇನ ಯೋ ಧರ್ಮಂ ಕುರುತೇऽನಾಪದಿ ದ್ವಿಜಃ ।
ಸಮಾಪ್ನೋತಿ ಫಲಂ ತಸ್ಯ ಪರತ್ರೇತಿ ವಿಚಾರಿತಂ ॥ ೨೨೫ ॥

---

ಬದುಕಿರುವಾಗಲೂ, ಮೃತನಾದ ಮೇಲೆಯೂ ಸಹ ದುಃಖವನ್ನೇ ಮುಂದೆ ಉಂಟು ಮಾಡತಕ್ಕದ್ದಾಗುತ್ತದೆ. ಧರ್ಮಜ್ಞನಾದ ಬ್ರಾಹ್ಮಣನು ಯಜ್ಞಕ್ಕಾಗಿ ಶೂದ್ರನಲ್ಲಿ ಭಿಕ್ಷೆಯನ್ನು ಅಪೇಕ್ಷಿಸಬಾರದು. ಯಜಮಾನನಾದವನು ಹೀಗೆ ಭಿಕ್ಷೆಮಾಡಿದ್ದಲ್ಲಿ ಅವನು ಮೃತನಾದ ಮೇಲೆ ಚಂಡಾಲನಾಗಿ ಹುಟ್ಟುತ್ತಾನೆ. ಯಾವನು ಯಜ್ಞಕ್ಕಾಗಿ ಭಿಕ್ಷೆಮಾಡಿ ಎಲ್ಲ ದ್ರವ್ಯವನ್ನೂ ಯಜ್ಞದಲ್ಲಿ ದಾನಮಾಡುವುದಿಲ್ಲವೋ ಅಂತಹ ಬ್ರಾಹ್ಮಣನು ಮುಂದಿನ ಜನ್ಮದಲ್ಲಿ ಭಾಸವಾಗಿಯೋ, ಕಾಗೆಯಾಗಿಯೋ ಹುಟ್ಟಿ ನೂರು ವರ್ಷ ಪರ್ಯಂತ ಅದೇ ದೇಹದಲ್ಲಿ ಜೀವಿಸುತ್ತಾನೆ.

೨೨೩-೨೨೭. ಯಾವನು ದೇವದ್ರವ್ಯವನ್ನೂ, ಬ್ರಾಹ್ಮಣ ದ್ರವ್ಯವನ್ನೂ ಆಶೆಯಿಂದ ಅಪಹರಿಸಿ ಜೀವಿಸುತ್ತಾನೆಯೋ ಅಂಹಹ ಪಾಪಿಯು ಪರಲೋಕದಲ್ಲಿ ಹದ್ದಿನ ಉಚ್ಛಿಷ್ಟದಿಂದ ಜೀವಿಸುತ್ತಾನೆ. ಬ್ರಾಹ್ಮಣನಾದವನು ತಾನು ಮಾಡಿದ ಪಶುಸೋಮಾದಿ ಯಜ್ಞಗಳಲ್ಲಿ ಅಬುದ್ಧಿಪೂರ್ವಕವಾಗಿ ಉಂಟಾದ ದೋಷಪರಿಹಾರಕ್ಕಾಗಿ ಪ್ರಾಯಶ್ಚಿತ್ತಾದಿಗಳನ್ನು ಮಾಡಿಕೊಳ್ಳಲು ಅವಕಾಶವಿಲ್ಲದಿದ್ದರೆ, ಅವನು ಆ ವರ್ಷದ ಕೊನೆಯಲ್ಲಿ ವೈಶ್ವಾನರೇಷ್ಟಿಯನ್ನು ಮಾಡಬೇಕು. ಯಾವ ಬ್ರಾಹ್ಮಣನು ಆಪತ್ಕಾಲದಲ್ಲಿ ವಿಹಿತವಾಗಿರುವ ಗೌಣಧರ್ಮವನ್ನು ಅನಾಪತ್ಕಾಲದಲ್ಲಿಯೂ ಆಚ

ಪ್ರಭುಃ ಪ್ರಥಮಕಲ್ಪಸ್ಯ ಯೋऽನುಕಲ್ಪೇಷು ವರ್ತತೇ ।
ಧರ್ಮೇಣ ಯೋಗಂ ನಾಪ್ನೋತಿ ನರಕಂ ಚೈವ ಗಚ್ಛತಿ || ೨೨೬ ||

ಕ್ಷತ್ರಿಯೋ ಬಾಹುವೀರ್ಯೇಣ ತರೇದಾಪದಮಾತ್ಮನಃ ।
ಧನೇನ ವೈಶ್ಯಶೂದ್ರೌ ತು ಜಪಹೋಮೈರ್ದ್ವಿಜಾತಯಃ || ೨೨೭ ||

ನವೈ ಕನ್ಯಾ ನ ಯುವತಿರ್ನಾಲ್ಪವಿದ್ಯೋ ನ ಬಾಲಿಶಃ ।
ಹೋತಾ ಸ್ಯಾದಗ್ನಿಹೋತ್ರೇಷು ನಾರ್ತೋ ನಾಸಂಸ್ಕೃತಸ್ತಥಾ || ೨೨೮ ||

ಪ್ರಾಜಾಪತ್ಯಮದತ್ವಾಶ್ವಮಗ್ನ್ಯಾಧೇಯಸ್ಯ ದಕ್ಷಿಣಾಂ ।
ಅನಾಹಿತಾಗ್ನಿರ್ಭವತಿ ಬ್ರಾಹ್ಮಣೋ ವಿಭವೇ ಸತಿ || ೨೨೯ ||

ಪುಣ್ಯಾನ್ಯನ್ಯಾನಿ ಕುರ್ವೀತ ಶ್ರದ್ಧಧಾನೋ ಜಿತೇಂದ್ರಿಯಃ ।
ನತ್ವಲ್ಪದಕ್ಷಿಣೈರ್ಯಜ್ಞೈರ್ಯಜೇತೇಹ ಕಥಂಚನ || ೨೩೦ ||

---

ರಿಸುತ್ತಾನೆಯೋ ಅವನು ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಸಹ ಅಂತಹ ಧರ್ಮದ ಫಲವನ್ನು ಹೊಂದುವುದೇ ಇಲ್ಲವೆಂಬುದು ಶಾಸ್ತ್ರದಲ್ಲಿಯೇ ನಿರ್ಧರಿಸಲ್ಪಟ್ಟಿದೆ. ಮುಖ್ಯ ಕಲ್ಪಕ್ಕೆ ಅಧಿಕಾರಿಯಾಗಿರುವವನು ಅನುಕಲ್ಪಗಳನ್ನು ಆಚರಿಸಿದ್ದೇ ಆದರೆ, ಆ ಧರ್ಮದ ಫಲವೂ ಅವನನ್ನು ಹೊಂದುವುದಿಲ್ಲ ನರಕಪ್ರಾಪ್ತಿಯೂ ಉಂಟಾಗುತ್ತದೆ. ಕ್ಷತ್ರಿಯನಾದವನು ತನಗೆ ಬಂದ ವಿಪತ್ತನ್ನು ಬಾಹುಬಲದಿಂದಲೇ ಹೋಗಲಾಡಿಸಿಕೊಳ್ಳಬೇಕು. ವೈಶ್ಯ, ಶೂದ್ರರು ಧನದಿಂದಲೂ, ಬ್ರಾಹ್ಮಣರು ಜಪ ಹೋಮಾದಿಗಳಿಂದಲೂ ಹೋಗಲಾಡಿಸಿಕೊಳ್ಳಬೇಕು.

೨೨೮-೨೩೧ ಅಗ್ನಿ ಹೋತ್ರಗಳಲ್ಲಿ ಕನ್ಯೆ, ಯುವತಿಯಾದ ಸ್ತ್ರೀ. ಅಲ್ಪ ವಿದ್ಯ, ಹುಡುಗ, ದುಃಖಿತ, ಅಸಂಸ್ಕೃತ ಇವರು ಹೋತೃಗಳಾಗಿರಬಾರದು. ಅಗ್ನ್ಯಾಧಾನಕಾಲದಲ್ಲಿ ಉಚಿತವಾದ ದ್ರವ್ಯಸಮೃದ್ಧಿಯುಳ್ಳವನು. ಪ್ರಾಜಾಪತ್ಯವೆಂಬ ಅಶ್ವವನ್ನು ದಾನಮಾಡದೆ ಇದ್ದಲ್ಲಿ ಅನಾಹಿತಾಗ್ನಿಯೇ ಆಗುತ್ತಾನೆ. ಆಹಿತಾಗ್ನಿಯಾಗುವುದಿಲ್ಲ). ಜಿತೇಂದ್ರಿಯನಾಗಿದ್ದು ಪುಣ್ಯಕರವಾದ ಇತರ ಶಾಸ್ತ್ರೀಯ ಕರ್ಮಗಳನ್ನೂ ಶ್ರದ್ಧೆಯಿಂದ ಆಚರಿಸಬೇಕು. ಅಲ್ಪ ದಕ್ಷಿಣೆಯಿಂದ ಕೂಡಿದ ಯಜ್ಞವನ್ನು ಮಾತ್ರ ಮಾಡಲೇಬಾರದು. ಇಂತಹ ಅಲ್ಪದಕ್ಷಿಣೆಯ ಯಜ್ಞವು

ಹಂತ್ಯಲ್ಪದಕ್ಷಿಣೋ ಯಜ್ಞಸ್ತಸ್ಮಾನ್ನಾಲ್ಪಧನೋ ಯಜೇತ್ ।
ಬಾಲಾತಪಂ ನ ಸೇವೇತ ನ ದಿವಾ ಮೈಥುನಂ ವ್ರಜೇತ್ ॥ ೨೩೦ ॥

ಪ್ರಾಯಶ್ಚಿತ್ತೀಯತಾಂ ಪ್ರಾಪ್ಯ ಪ್ರಾಯಶ್ಚಿತ್ತಂ ಸಮಾಚರೇತ್ ।
ಮಾತುಃ ಸ್ವಸಾರಂ ವಾ ಪುತ್ರೀಂ ಪರಭಾರ್ಯಾಂ ಪ್ರಕೀರ್ತಯೇತ್ ॥ ೨೩೨ ॥

ನದೀಂ ತರೇನ್ನ ಬಾಹುಭ್ಯಾಂ ವರ್ಜಯೇತ್ಕೂಪಲಂಘನಂ ।
ಯಥಾಕಥಂಚಿನ್ನೋದೀಕ್ಷೇದಾದಿತ್ಯಂ ತೇಜಸಾಂ ನಿಧಿಂ ॥ ೨೩೩ ॥

ನ ಕ್ರುದ್ಧಸ್ಯ ಗುರೋರ್ವಕ್ತ್ರಂ ನೈವಾದರ್ಶಮಮಾರ್ಜಿತಂ ।
ಸ್ನಾನಭೋಜನಪಾನಾನಿ ವಾಹೇಭ್ಯೋ ನಾಚರೇತ್ಪುನಃ ॥ ೨೩೪ ॥

ಯತ್ನೇನ ಬಿಭೃಯಾದ್ದಾರಾನ್ ವಾಗ್ಮಿನೋಽಕೃಪಣಾನ್ ದ್ವಿಜಾನ್ ॥ ೨೩೫ ॥

ಬದ್ಧಂ ಗವಾದಿಕಂ ಯಸ್ತು ಯವಸೇನೋದಕೇನ ಚ ।
ಪ್ರತಿಜಾಗರ್ತಿ ನೋ ವಿಪ್ರಃ ಸ ಯಾತಿ ನರಕಂ ಮಹತ್ ॥ ೨೩೬ ॥

---

ತನಗೆ ನಾಶವಾಗುತ್ತದೆಯಾಗಿ ಅಲ್ಪ ಧನವುಳ್ಳವನು ಯಜ್ಞವನ್ನು ಮಾಡಲೇ ಬಾರದು. ಎಳೆಯ ಬಿಸಿಲನ್ನು ಸೇವಿಸಬಾರದು. ಹಗಲಿನಲ್ಲಿ ಮೈಥುನವನ್ನು ಮಾಡಬಾರದು.

೨೩೨–೨೩೬. ತಾನು ಪ್ರಾಯಶ್ಚಿತ್ತ ಮಾಡಿಕೊಳ್ಳಲು ಅರ್ಹನಾಗಿದ್ದಲ್ಲಿ ಅಂತಹ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ತಾಯಿಯ ತಂಗಿಯನ್ನೂ, ಅವಳ ಮಗಳನ್ನೂ ಇತರರ ಪತ್ನಿಯರಂತೆ ಭಾವಿಸಬೇಕು. ಬಾಹುಗಳಿಂದಲೇ ನದಿಯನ್ನು ದಾಟಬಾರದು. ಭಾವಿಯನ್ನು ದಾಟಬಾರದು. ತೇಜಸ್ವಿಯಾಗಿ ಬೆಳಗುವ ಸೂರ್ಯನನ್ನು ಯಾವ ಪ್ರಕಾರದಿಂದಲೂ ನೋಡಬಾರದು. ಗುರುವು ಕೋಪ ಗೊಂಡಾಗ ಅವನ ಮುಖವನ್ನೂ ನೋಡಕೂಡದು. ಕನ್ನಡಿಯನ್ನು ನಿರ್ಮಲ ವನ್ನಾಗಿಮಾಡದೆ ಅದನ್ನು ನೋಡಬಾರದು. ಸ್ನಾನ, ಭೋಜನ, ಪಾನ ಇವನ್ನು ವಾಹನಾರೂಢನಾಗಿ ಮಾಡಬಾರದು. ತನ್ನ ಭಾರ್ಯೆಯನ್ನೂ ವಾಗ್ಮಿಗಳಾದ

ನಾರೋಹೇದ್ವಿಷಮಂ ಸಾಲಂ ನಾವಂ ಸಂಶಯಿತಾಂಸ್ತರೂನ್ ।
ನ ಪಾತಯೇತ ಲೋಷ್ಟೇನ ನ ಕಾಷ್ಠೇನ ಫಲಂ ದ್ರುಮಾತ್ ॥ ೨೩೭ ॥

ಶಿರಃಸ್ನಾತಸ್ತು ತೈಲೇನ ನಾಂಗಂ ಕಿಂಚಿದಪಿ ಸ್ಪೃಶೇತ್ ।
ವಹೇನ್ನ ಭಾರಂ ಶಿರಸಾ ಯುಗಪನ್ನಾಗ್ನಿವಾರಿಣೀ ॥ ೨೩೮ ॥

ನ ತೋಯಂ ಪ್ರಕ್ಷಿಪೇದ್ವಹ್ನೌ ವಹ್ನಿಂ ತೋಯೇ ತಥೈವ ಚ ।
ವರ್ಜಯೇದತಿಸೌಹಾರ್ದಂ ಭೋಜ್ಯಾನ್ನಸ್ಯ ಚ ಕುತ್ಸನಂ ॥ ೨೩೯ ॥

ರಾಜದ್ವಿಷ್ಟಂ ಗಣದ್ವಿಷ್ಟಂ ಲೋಕದ್ವಿಷ್ಟಂ ವಿವರ್ಜಯೇತ್ ।
ಸಾಯಂಪ್ರಾತಶ್ಚ ವಿದುಷಾಂ ಶೃಣುಯಾತ್ಪುಷ್ಕಲಾ ಗಿರಃ ॥ ೨೪೦ ॥

ಸಂಸ್ಕೃತಂ ಪಾಯಸಂ ನಿತ್ಯಂ ಯವಾಗ್ವಾಂ ಕೃಸರಂ ವದೇತ್ ।
ತ್ಯಕ್ತ್ವಾ ಕರ್ಮಾಣಿ ಚಾಯುಷ್ಯಂ ಜೀವಿತೇನ ತಥಾಕೃತಿಃ ॥ ೨೪೧ ॥

ಉದಾರಬುದ್ಧಿಯುಳ್ಳ ಬ್ರಾಹ್ಮಣರನ್ನೂ, ಪ್ರಯತ್ನಪೂರ್ವಕವಾಗಿ ಭರಿಸಬೇಕು. ಕಟ್ಟಿರುವ ಹಸು ಮೊದಲಾದುವನ್ನು ಹುಲ್ಲು, ನೀರು ಇವುಗಳಿಂದ ಉಪಕರಿಸದಿರುವ ಬ್ರಾಹ್ಮಣನು ಮಹಾನರಕವನ್ನೇ ಹೊಂದುತ್ತಾನೆ. ಅಪಾಯಕರವಾದ ಮರವನ್ನೂ, ದೋಣಿಯನ್ನೂ ಹತ್ತಬಾರದು. ಸಂಶಯಾರ್ಹವಾದ ಮರಗಳನ್ನೂ ಹತ್ತಬಾರದು. ಮರಕ್ಕೆ ಮಣ್ಣಿನ ಹೆಂಟೆಯಿಂದ ಅಥವಾ ತುಂಡು ದೊಣ್ಣೆಯಿಂದ ಹೊಡೆದು ಫಲಾದಿಗಳನ್ನು ಕೆಡಹಬಾರದು.

೨೩೮–೨೪೩. ತೈಲದಿಂದ ಶಿರಸ್ನಾನಮಾಡಿದವನು ಪುನಃ ತೈಲದಿಂದ ಯಾವ ಅವಯವವನ್ನೂ ಮುಟ್ಟಬಾರದು. ಅಗ್ನಿ, ಜಲ ಇವನ್ನು ಒಂದೇ ಬಾರಿ ತಲೆಯ ಮೇಲೆ ಹೊರಬಾರದು. ಅಗ್ನಿಯ ಮೇಲೆ ನೀರನ್ನೂ, ನೀರಿನಲ್ಲಿ ಅಗ್ನಿಯನ್ನೂ ಹಾಕಬಾರದು. ಹೆಚ್ಚಾದ ಸೌಹಾರ್ದವನ್ನೂ ಮಾಡಬಾರದು. ಊಟಮಾಡುವ ಅನ್ನವನ್ನು ನಿಂದಿಸಲೂ ಬಾರದು. ರಾಜದ್ವೇಷಿಯನ್ನೂ, ಒಂದು ಗುಂಪಿನಲ್ಲಿ ದ್ವೇಷಿಯಾಗಿರುವವನನ್ನೂ, ಲೋಕದ್ವೇಷಿಯನ್ನೂ ತ್ಯಜಿಸಬೇಕು. ಸಾಯಂಕಾಲದಲ್ಲಿ ಮತ್ತು ಪ್ರಾತಃಕಾಲದಲ್ಲಿಯೂ ಪಂಡಿತರಿಂದ ಅರ್ಥಗರ್ಭಿತಗಳಾದ ಮಾತುಗಳನ್ನು ಕೇಳಬೇಕು. ಗಂಜಿಯಲ್ಲಿ ಸಂಸ್ಕರಿಸಲ್ಪಟ್ಟ ಪಾಯಸವನ್ನು ಕೃಸರವೆಂದು

ವ್ಯಾಧಿತಾನಾಂ ತು ಸರ್ವೇಷಾಮಾಯುಷಃ ಪ್ರತಿನಂದನಂ ।
ಶ್ರಾಂತಸ್ಯ ವಿಶ್ರಮಸ್ಯೇತಿ ಚಾಢ್ಯತಾಂ ಸೀರಿಣಸ್ತಥಾ ॥ ೨೪೨ ॥

ಆಸೀನಸ್ಯ ಸುಖಂ ಚಾಪಿ ಪುಣ್ಯಾಹಮಪಿ ಗಚ್ಛತಃ ।
ದೇವಕರ್ಮಪ್ರವೃತ್ತಸ್ಯ ಪ್ರಾಸಾದಂ ಪರಿಕೀರ್ತಯೇತ್ ॥ ೨೪೩ ॥

ನ ಜಾತು ತ್ವಮಿತಿ ಬ್ರೂಯಾದಾಪನ್ನೋಪಿ ಮಹತ್ತರಂ ।
ತ್ವಂಕಾರೋ ವಾ ವಧೋವೇತಿ ವಿದ್ವತ್ಸು ನ ವಿಶಿಷ್ಯತೇ ॥ ೨೪೪ ॥

ಅವರಾಣಾಂ ಸಮಾನಾನಾಂ ಶಿಷ್ಯಾಣಾಂ ಚೈತದಿಷ್ಯತೇ ।
ಏಕ ಏವ ಚರೇದ್ಧರ್ಮಂ ನ ಧರ್ಮಧ್ವಜಿಕೋ ಭವೇತ್ ॥ ೨೪೫ ॥

ಅರ್ಚೇದ್ದೇವಾನ್ನ ದಂಭೇನ ಸೇವೇತಾಮಾಯಯಾ ಗುರೂನ್ ।
ನಿಧಿಂ ವಿದಧ್ಯಾತ್ಪಾರಕ್ಯಂ ಯತ್ರಾರ್ಥಃ ಶಬ್ದವಾನಿತಿ ॥ ೨೪೬ ॥

---

ವ್ಯವಹರಿಸಬೇಕು. ಕ್ಷೌರದಿಂದ ಆಯುಷ್ಯಾಭಿವೃದ್ಧಿಯುಂಟಾಗುವುದೆಂದೂ ಬದುಕಿರುವವನು ಯಾವುದಾದರೊಂದು ಕೆಲಸವನ್ನು ಮಾಡುತ್ತಿರಬೇಕೆಂಬುದನ್ನೂ ಇತರರಿಗೆ ಹೇಳುತ್ತಿರಬೇಕು. ವ್ಯಾಧಿಗ್ರಸ್ತರಾಗಿರುವವರ ವಿಷಯದಲ್ಲಿ ಆಯುರಭಿವೃದ್ಧಿಯನ್ನೇ ಕೋರಬೇಕು ಶ್ರಮಪಟ್ಟವರಲ್ಲಿ ವಿಶ್ರಾಂತಿಯನ್ನೂ, ವ್ಯವಸಾಯಗಾರನಲ್ಲಿ ಸಮೃದ್ಧಿಯನ್ನೂ ಹರಸಬೇಕು. ಕುಳಿತಿರುವವನಲ್ಲಿ ಸುಖವನ್ನೂ ಪ್ರಯಾಣ ಮಾಡುವವನಲ್ಲಿ ದಿನಶುದ್ಧಿಯನ್ನೂ ಆಶಿಸಬೇಕು. ದೇವತಾಕಾರ್ಯದಲ್ಲಿ ಹೊರಟಿರುವವನಿಗೆ ಪ್ರಾಸಾದದ ವಿಧಾನಕ್ರಮವನ್ನು ಬೋಧಿಸಬೇಕು.

೨೪೪-೨೪೬. ದೊಡ್ಡವರನ್ನು ಯಾವಾಗಲೂ ನೀನು ಎಂದು ವ್ಯವಹರಿಸಬಾರದು. ವಿದ್ವದ್ಗೋಷ್ಠಿಯಲ್ಲಿ ನೀನು ಎಂಬ ಪದಕ್ಕೂ ವಧವೆಂಬ ಪದಕ್ಕೂ ಅರ್ಥದಲ್ಲಿ ವೈಷಮ್ಯವಿಲ್ಲ. ತನಗಿಂತ ಕಿರಿಯವರ ಮತ್ತು ಸಮಾನರ ಮತ್ತು ಶಿಷ್ಯರ ವಿಷಯದಲ್ಲಿ ನೀನು ಎಂಬ ಈ ವ್ಯವಹಾರವು ಹೊಂದುತ್ತದೆ. ಧರ್ಮಾನುಷ್ಠಾನವನ್ನು ಒಬ್ಬನೇ ಏಕಾಂತದಲ್ಲಿ ನಡೆಸಬೇಕು. ಇತರರ ಮೆಚ್ಚಿಗೆಗಾಗಿ ಮತ್ತೊಬ್ಬರೊಡಗೂಡಿ ನಡೆಸಬಾರದು. ದೇವತಾರ್ಚನೆಯನ್ನು ಇತರರ ಪ್ರೀತಿಗಾಗಿ ಬೂಟಾಟಿಕೆಯಿಂದ ಮಾಡಬಾರದು. ಗುರುಗಳನ್ನು ನಿಷ್ಕಪಟವೃತ್ತಿಯಿಂದ ಸೇವಿಸಬೇಕು. ಇತರರ ನಿಧಿಯನ್ನು ರಕ್ಷಿಸುವವನು ಎಲ್ಲಿ ರಕ್ಷಿಸಿದಲ್ಲಿ ಅರ್ಥವು ಇತರರ ವ್ಯವಹಾರಕ್ಕೆ

ಕರ್ಮ ವೈ ಸಫಲಂ ಕೃತ್ವಾ ಗುರೂಣಾಂ ಪ್ರತಿಪಾದಯೇತ್ ।
ವೃದ್ಧಾನ್ನಾತಿವದೇಜ್ಜಾತು ನ ತು ಸಂಪ್ರೇಷಯೇತ್ಕ್ವಚಿತ್ ॥ ೨೪೭ ॥

ನ ವೇಗಿತೋಽನ್ಯಕಾರ್ಯಃ ಸ್ಯಾನ್ನಾದ್ಯಾನ್ನಾನಿ ಕುತ್ಸಯೇತ್ ।
ಮುಕ್ತಕೇಶೋ ನ ಗಚ್ಛೇತ್ತು ಸ್ವಪ್ನಾಹಾರಸಭಾಸ್ತ್ರಿಯಃ ॥ ೨೪೮ ॥

ಪಾಣಿನಾಲಭ್ಯ ನಿಷ್ಕ್ರಾಮೇದ್ರತ್ನಪೂಜ್ಯಾಜ್ಯಮಂಡಲಂ ।
ಪ್ರದಕ್ಷಿಣಂ ತು ಕುರ್ವೀತ ಮಂಗಲ್ಯಂ ಸರ್ವದಾ ಯತಿಃ ॥ ೨೪೯ ॥

ಸೂನಾಂ ಚ ಬಂಧನಾಗಾರಂ ನೃಪನೃತ್ಯಗೃಹೇ ತಥಾ ।
ಅಂತಃಪುರಂ ಚ ಋಷಿಭಿಃ ವರ್ಜನೀಯಂ ಚ ದೂರತಃ ॥ ೨೫೦ ॥

ತ್ರಿಃ ಪಕ್ಷಸ್ಯ ಕೃತಶ್ಮಶ್ರುರ್ನಖಲೋಮಾನಿ ಕಲ್ಪಯೇತ್ ।
ನ ಪ್ರತಿಸ್ಫಾಲಯೇದಂಬು ಪಾಣಿನಾ ಚರಣೇನ ವಾ ॥ ೨೫೧ ॥

---

ಗೋಚರವಾಗುವುದಿಲ್ಲವೋ ಹಾಗೆ ರಕ್ಷಿಸಬೇಕು. ಕೆಲಸವನ್ನು ಫಲಪರ್ಯಂತ ಪೂರ್ತಿಮಾಡಿ ಅನಂತರ ಗುರುವಿಗೆ ತಿಳಿಯಪಡಿಸಬೇಕು. ವೃದ್ಧರೊಡನೆ ಯಾವಾಗಲೂ ಅತಿ ವಾದಮಾಡಬಾರದು. ಅವರನ್ನು ಇತ್ತೊಂದು ಕಡೆ ಪ್ರೇರಿಸಲೂ ಬಾರದು. ಮತ್ತೊಬ್ಬರ ಕಾರ್ಯವನ್ನು ತ್ವರೆಯಿಂದ ಮಾಡಬಾರದು. ಊಟಮಾಡಿದ ನಂತರ ಅನ್ನವನ್ನು ನಿಂದಿಸಬಾರದು. ಕೇಶಗಳನ್ನು ಬಿಚ್ಚಿಕೊಂಡು ಶಯನ, ಆಹಾರ, ಸಭೆ, ಸ್ತ್ರೀ ಇವರನ್ನು ಸೇವಿಸಬಾರದು. ಪ್ರಯಾಣ ಕಾಲದಲ್ಲಿ ರತ್ನ ಪೂಜ್ಯವಸ್ತು. ಆಜ್ಯಮಂಡಲ ಇವನ್ನು ಸ್ಪರ್ಶಮಾಡಿ ಹೊರಡಬೇಕು. ಯತಿಯಾದವನು ಮಂಗಲ ವಸ್ತುವನ್ನು ಕಂಡಲ್ಲಿ ಪ್ರದಕ್ಷಿಣಮಾಡಿ ಹೋಗಬೇಕು.

೨೫೦–೨೫೫. ಪ್ರಾಣಿಗಳ ವಧಸ್ಥಾನ, ಬಂಧನಗೃಹ (ಕಾರಾಗೃಹ), ರಾಜಗೃಹ, ನೃತ್ಯಗೃಹ, ಅಂತಃಪುರ ಇವನ್ನು ಋಷಿಗಳು ದೂರದಲ್ಲಿಯೇ ತ್ಯಜಿಸಬೇಕು. ಪಕ್ಷಕ್ಕೆ ಮೂರಾವರ್ತಿ ಗಡ್ಡಮಿಾಸೆಗಳನ್ನೂ, ಉಗುರು ರೋಮಗಳನ್ನೂ ಸರಿಪಡಿಸಿಕೊಳ್ಳಬೇಕು. ನೀರಿನಲ್ಲಿ ಪ್ರವಾಹಕ್ಕೆ ಎದುರಾಗಿ ಕೈಯಿಂದ ಅಥವಾ ಕಾಲಿನಿಂದ ಅಪ್ಪಳಿಸಬಾರದು. ಮುಖವನ್ನು ಮುಚ್ಚಿಕೊಳ್ಳದೆ ಶೀನು, ಆಕಳಿಕೆ ಇವನ್ನು ಮಾಡಬಾರದು. ಸ್ನೇಹಿತನ ಮನೆಗೆ ದಾರಿಇಲ್ಲದ ಕಡೆಯಿಂದ ಹೋಗಬಾರದು. ಶತ್ರುಗೃಹಕ್ಕೆ ದ್ವಾರದಿಂದ ಹೋಗಬಾರದು, ಸರ್ಪ, ಶಸ್ತ್ರಗಳೊಡನೆ ಕ್ರೀಡಿಸಬಾರದು.

ನಾಸಂವೃತಮುಖಃ ಕುರ್ಯಾತ್ಕ್ಷುತಮಂಗವಿಜೃಂಭಣಂ ।
ನಾದ್ವಾರೇಣ ಸುಹೃದ್ವೇಶ್ಮ ನ ದ್ವಾರೇಣ ರಿಪೋರ್ವಿಶೇತ್ ॥ ೨೫೨ ॥

ನ ಸರ್ಪಶಸ್ತ್ರೈಃ ಕ್ರೀಡೇತ್ತು ನದೀವೇಗಂ ವಿವರ್ಜಯೇತ್ ।
ವಿದ್ಯಾತ್ಪ್ರತಿಕ್ಷಣಂ ಮೃತ್ಯೋರಯಥಾತಥಚೇಷ್ಟಿತಂ ॥ ೨೫೩ ॥

ಅರ್ಜಯೇಜ್ಜ್ಞಾನಮರ್ಥಾಂಶ್ಚ ನರೋ ಹ್ಯಮರವತ್ಸದಾ।
ಕೇಶೈರಿವ ಗೃಹೀತಸ್ತು ಮೃತ್ಯುನಾ ಧರ್ಮಮಾಚರೇತ್ ॥ ೨೫೪ ॥

ಪ್ರವಿಶೇಜ್ಜನಸಂಬಾಧಂ ತಥಾತಿಗಹನಂ ನ ಚ ।
ಹೇಮ ನಾಸಂಸ್ಕೃತಂ ಧಾರ್ಯಂ ನಿಶಿ ಲೋಷ್ಟಂ ನ ಚ ಕ್ಷಿಪೇತ್ ॥ ೨೫೫ ॥

ಆದೌ ಪಂಕ್ತ್ಯಾಂ ನಚಾಶ್ನೀಯಾದ್ವರ್ಜಯೇದ್ಭೂಮಿತಾಡನಂ ।
ವರ್ಜಯೇಚ್ಛಾಪ್ರಶಸ್ತಂ ದಿವಾನಿದ್ರಾಂ ತಥೈವ ಚ ॥ ೨೫೬ ॥

---

ನದೀ ವೇಗಕ್ಕೆ ಎದುರಾಗಬಾರದು. ಪ್ರತಿಕ್ಷಣದಲ್ಲಿಯೂ ಮೃತ್ಯುವಿನಿಂದ ಉಂಟಾಗುವ ಅವ್ಯವಸ್ಥೆಯ ಚೇಷ್ಟೆಗಳನ್ನು ನಿರೀಕ್ಷಿಸಿ ತಿಳಿಯಬೇಕು. ಮನುಷ್ಯನಾದವನು ತಾನು ಅಮರನಂತಿರುವೆನೆಂದು ತಿಳಿದು ಜ್ಞಾನವನ್ನೂ, ಅರ್ಥವನ್ನೂ ಆರ್ಜನೆಮಾಡು ತ್ತಿರಬೇಕು. (ದೇಹವು ನಶ್ವರವೆಂದು ತಿಳಿದು ವಿರಕ್ತಿಯಿಂದ ಇವುಗಳಲ್ಲಿ ಅನಾದರ ತೋರಬಾರದು)|ಮೃತ್ಯುವಿನಿಂದ ಕೇಶಗಳಲ್ಲಿ ಹಿಡಿಯಲ್ಪಟ್ಟಂತೆ ಭಾವಿಸಿ ಧರ್ಮವನ್ನು ಮಾಡುತ್ತಲೇ ಇರಬೇಕು. ಬಹಳ ಗಾಢವಾದ ಜನಸಂದಣಿಯಲ್ಲಿ ಪ್ರವೇಶಿಸ ಬಾರದು. ಚಿನ್ನವನ್ನು ಸಂಸ್ಕರಿಸದೆ ಧರಿಸಬಾರದು. ರಾತ್ರಿಯಲ್ಲಿ ಕಲ್ಲು, ಮಣ್ಣು ಮುಂತಾದುವನ್ನು ಎಸೆಯಬಾರದು.

೨೫೬-೨೬೧. ಮೊದಲು ಪಂಕ್ತಿಯಲ್ಲಿ ಕುಳಿತು ಊಟಮಾಡಬಾರದು. ಭೂಮಿಯನ್ನು ಬಡಿಯಬಾರದು. ಅನೇಕ ವಿದ್ಯಾರ್ಥಿಗಳಿಂದ ಅವ್ಯವಸ್ಥಿತವಾದ ಸ್ಥಲವನ್ನು ಬಿಡಬೇಕು. ಹಗಲಿನಲ್ಲಿ ನಿದ್ರೆಯನ್ನೂ ಬಿಡಬೇಕು. ಕಾಮ, ಕ್ರೋಧ, ಭಯ, ಹರ್ಷ, ಲೋಭ, ದರ್ಪ (ಅಹಂಕಾರ) ಇವು ಶತ್ರುಗಳು. ಪಂಡಿತನಾದ ಮನುಷ್ಯನು ಈ ಆರು ಶತ್ರುಗಳನ್ನೂ ಜಯಿಸಬೇಕು. ಈ ಅರಿಷಡ್ವರ್ಗವನ್ನು ತ್ಯಾಗಮಾಡಿ ಇಂದ್ರಿಯನಿಗ್ರಹ ಹೊಂದಬೇಕು. ಯಾವಾಗಲೂ ಉತ್ಸಾಹಶಾಲಿ

ಕಾಮಃ ಕ್ರೋಧೋ ಭಯಂ ಹರ್ಷಃ ಲೋಭೋ ದರ್ಪಸ್ತಥೈವ ಚ ।
ರಿಪವಃ ಷಡ್ವಿಜೇತವ್ಯಾಃ ಪುರುಷೇಣ ವಿಪಶ್ಚಿತಾ　　॥ ೨೫೭ ॥

ಅರಿಷಡ್ವರ್ಗಸನ್ನ್ಯಾಸಾತ್ಕುರ್ಯಾದಿಂದ್ರಿಯನಿಗ್ರಹಂ ।
ಯೋಗಕ್ಷೇಮಂ ಸದೋತ್ಥಾನಾತ್ಪ್ರಜ್ಞಾಂ ವೃದ್ಧೋಪಸೇವನಾತ್ ॥ ೨೫೮ ॥

ಪ್ರಶ್ರಯೇಣ ಜಯೇನ್ಮಾನಂ ದೈನ್ಯಂ ದೃಷ್ಟಾಂತಸಂಶ್ರಯಾತ್ ।
ಅಕ್ರೋಧೇನ ಜಯೇತ್ಕ್ರೋಧಂ ವಿನಯೇನ ತ್ವನಾರ್ಯತಾಂ　　॥ ೨೫೯ ॥

ಶೀಘ್ರತ್ವಾದ್ಧಸ್ತಪಾದಂ ಚ ವಾಚಮುಚ್ಚಾರಣಾಜ್ಜಯೇತ್ ।
ಅಜ್ಞಾನಂ ಜ್ಞಾನಸಂಯೋಗಾತ್ ಕಾಮಂ ಕಾಮಾಂಗವರ್ಜನಾತ್ ॥ ೨೬೦ ॥

ಧರ್ಮಿಷ್ಠೈರಾಗಮೈರ್ಲೋಭಂ ಕ್ರೋಧಂ ಮೈತ್ರ್ಯಾದ್ವಿವರ್ಜಯೇತ್ ।
ಕಾರುಣ್ಯೇನ ಜಯೇನ್ಮಾನಂ ಕಾಲಂ ಕಾರ್ಯೋಪಪತ್ತಿಭಿಃ　　॥ ೨೬೧ ॥

ಆತ್ಮಾನಂ ಸುಖದುಃಖಾದ್ಯಂ ತ್ವನಭಿಜ್ಞಾಯ ಯೋಜಯೇತ್ ।
ಧೃತ್ಯಾ ಶಿಶ್ನೋದರಂ ರಕ್ಷೇತ್ಪಾಣಿಪಾದಂ ಚ ಚಕ್ಷುಷಾ　　॥ ೨೬೨ ॥

---

ಯಾಗಿದ್ದು ಯೋಗಕ್ಷೇಮಗಳನ್ನು ಜಯಿಸಬೇಕು (ರಕ್ಷಿಸಿಕೊಳ್ಳಬೇಕು) ವೃದ್ಧರ ಸೇವೆಯಿಂದ ಪ್ರಜ್ಞೆಯನ್ನು ಕಾಪಾಡಿಕೊಳ್ಳಬೇಕು. ನಮ್ರತೆಯಿಂದಿದ್ದು ಮಾನವನ್ನು (ಆತ್ಮೋತ್ಕರ್ಷಬುದ್ಧಿ) ಜಯಿಸಬೇಕು. ಸದೃಶರಾಗಿರುವವರನ್ನು ನೋಡಿ ಅಥವಾ ಅದೃಷ್ಟವನ್ನು ಅವಲಂಬಿಸಿ ದೀನತೆಯನ್ನು ಹೋಗಲಾಡಿಸಿಕೊಳ್ಳಬೇಕು. ಕೋಪವಿಲ್ಲದೆಯೇ ಇದ್ದು ಕ್ರೋಧವನ್ನು ಜಯಿಸಬೇಕು. ತನ್ನ ವಿಯನಂದಿದ ಮೂರ್ಖತೆಯನ್ನು ಹೋಗಲಾಡಿಸಿಕೊಳ್ಳಬೇಕು. ಆಲಸ್ಯವನ್ನು ಬಿಟ್ಟು ಶೀಘ್ರತೆಯಿಂದ ಹಸ್ತಪಾದಾದಿಗಳನ್ನೂ ಜಯಿಸಬೇಕು. ವಿಹಿತವಾದ ಉಚ್ಚಾರಣೆಯಿಂದ ವಾಕ್ಕನ್ನು ಜಯಿಸಬೇಕು. ಅಜ್ಞಾನವನ್ನು ಜ್ಞಾನದಿಂದಲೂ, ಕಾಮವನ್ನು ಲಿಂಗನಿಗ್ರಹದಿಂದಲೂ ಜಯಿಸಬೇಕು. ಧರ್ಮಪರವಾದ ಶಾಸ್ತ್ರಗಳಿಂದ ಲೋಭವನ್ನೂ, ಮೈತ್ರೀಭಾವದಿಂದ ಕ್ರೋಧವನ್ನೂ ಜಯಿಸಬೇಕು. ನಿರ್ವೇದದಿಂದ ಆತ್ಮಾಹಂಕಾರವನ್ನೂ, ಕರ್ತವ್ಯಕಾರ್ಯನಿರ್ವಹಣೆಯಿಂದ ಕಾಲವನ್ನೂ ಜಯಿಸಬೇಕು.

೨೬೨-೨೬೮. ಯಾವ ಕಾರ್ಯದಲ್ಲಿಯೂ ಸುಖ ಮತ್ತು ದುಃಖಗಳಿಗೆ ಅದು ಕಾರಣವೆಂದು ತಿಳಿಯದಿರುವಾಗ ಅಲ್ಲಿ ಸ್ವಪ್ರಯತ್ನವನ್ನು ಯೋಜಿಸಬೇಕು.

**ಚಕ್ಷುಃಶ್ರೋತ್ರೇ ಚ ಮನಸಾ ಮನೋವಾಚಂ ಚ ಕರ್ಮಣಾ ।**
**ದೇಶಕಾಲಾನುಬಂಧಾರ್ಥಂ ಧರ್ಮಾಣಾಮವಿರೋಧಿ ಯತ್ ॥ ೨೬೩ ॥**

**ತತ್ತತ್ಸುಖಂ ನಿಷೇವೇತ ನಾತಸ್ಮಾನ್ನಿಃಸುಖೀ ಭವೇತ್ ।**
**ರೂಪಸಂದರ್ಶನಶ್ರವ್ಯರಸಗಂಧಾನ್ ಸದಾ ಜಯೇತ್ ॥ ೨೬೪ ॥**

**ವಸನ್ನಪಿ ಸದೋಮಧ್ಯೇ ಹ್ಯಸಕ್ತೋ ಮನಸಾ ಭವೇತ್ ।**
**ಪರೇಷಾಂ ತನ್ನ ಸಂದಧ್ಯಾತ್ಪ್ರತಿಕೂಲಂ ಯದಾತ್ಮನಃ ॥ ೨೬೫ ॥**

**ಕೃಚ್ಛ್ರೇಷ್ವಪಿ ನ ತತ್ಕುರ್ಯಾತ್ಸಾಧೂನಾಂ ಯದಸಮ್ಮತಂ ।**
**ಜೀರ್ಣಾಶೀ ಚ ಮಿತಾಶೀ ಚ ಹಿತಾಶೀ ಚ ತಥಾ ಭವೇತ್ ॥ ೨೬೬ ॥**

---

ಮನಃಸ್ಥೈರ್ಯದಿಂದ ಶಿಶ್ನ ಮತ್ತು ಉದರಗಳನ್ನು ಪಾಪದಲ್ಲಿ ಬೀಳದಂತೆ ರಕ್ಷಿಸಬೇಕು. ಕೈಕಾಲುಗಳನ್ನು ಅನುಚಿತವಿಷಯಗಳಲ್ಲಿ ವರ್ತಿಸದಂತೆ ಕಣ್ಣಿನಿಂದ ವಿಮರ್ಶಮಾಡಿ ರಕ್ಷಿಸಬೇಕು. (ದೃಷ್ಟಿಪೂತಂ ನ್ಯಸೇತ್ಪಾದಂ ಎಂಬುದರ ತಾತ್ಪರ್ಯವಿದು) ಕಣ್ಣು, ಕಿವಿ, ಇವುಗಳನ್ನು ಮನಸ್ಸಿನಿಂದ ರಕ್ಷಿಸಬೇಕು. ಮನಸ್ಸಿಗೆ ಅಹಿತವಾದ ಅಥವಾ ಅನಿಷ್ಟವಾದ ವಿಷಯಗಳಲ್ಲಿ ಕಣ್ಣು, ಕಿವಿಗಳು ಹೋಗದಂತೆ ತಡೆಯಬೇಕು. (ಅವುಗಳ ವ್ಯಾಪೃತಿಯು ಅನುಚಿತವಿಷಯದಲ್ಲಿ ಮನಃಪೂರ್ವಕವಾಗಿರಬಾರದೆಂದು ತಾತ್ಪರ್ಯ) ಮನಸ್ಸನ್ನೂ ವಾಕ್ಕನ್ನೂ ಕರ್ಮದಿಂದ ರಕ್ಷಿಸಬೇಕು. ಮನೋವಾಕ್ಕುಗಳು ಕರ್ಮಕ್ಕೆ ಅನನುರೂಪವಾಗಿರದೆ ಅನುರೂಪವಾಗಿದ್ದಲ್ಲಿ ಅದೇ ಅವುಗಳ ರಕ್ಷಣವೆಂದು ತಾತ್ಪರ್ಯ. ಆಯಾಯ ದೇಶಕಾಲಪರಿಸ್ಥಿತಿಗೆ ತಕ್ಕಂತೆ ಧರ್ಮವಿರೋಧಿಯಾಗದಿರುವ ಆಯಾಯ ಸುಖವನ್ನು ಸೇವಿಸಲೇಬೇಕು. ಹಠಾತ್ತಾಗಿ ಆದ ಬದಲಾವಣೆಯಿಂದ ನಿಃಸ್ಸುಖಿಯಾಗಿ ನಿಲ್ಲಬಾರದು. ಸಭಾಮಧ್ಯದಲ್ಲಿದ್ದರೂ ಶಬ್ದಸ್ಪರ್ಶ ರೂಪರಸಗಂಧಾದಿಗಳಲ್ಲಿ ಅತ್ಯಂತಾಸಕ್ತಿಹೊಂದದೆ ಮನೋವೃತ್ತಿಯಿಂದಲೇ ಇಂದ್ರಿಯಗಳನ್ನು ತಡೆದು ವಿಷಯಗಳನ್ನು ಜಯಿಸಬೇಕು ಯಾವುದು ತನಗೆ ಪ್ರತಿಕೂಲವೆಂದು ತೋರಿಬರುವುದೋ ಅದನ್ನು ಇತರರಲ್ಲಿ ಯೋಚಿಸಬಾರದು. ಯಾವುದು ಸಾಧುಜನರಿಗೆ ಸಮ್ಮತವಲ್ಲವೋ ಅಂತಹ್ಯಕಾರ್ಯವನ್ನು ಬಹುಕಷ್ಟಕಾಲದಲ್ಲಿಯೂ ಮಾಡಬಾರದು. ಮಿತವಾದ ಮತ್ತು ಹಿತವಾದ ಮತ್ತು ಜೀರ್ಣವಾಗುವ ಅಶನದಲ್ಲಿಯೇ ಇರಬೇಕು. ತಾನು ಉಂಛವೃತ್ತಿಯಲ್ಲಿದ್ದರೂ ಯಾವ ಇತರ ಗುಣ

**ತಸ್ಯತೇ ಯೈರ್ಗುಣೈರನ್ಯೈಃ ಯೈರನ್ಯೈರರ್ಜಿತಂ ಯಶಃ ।**
**ಉಂಛವೃತ್ತಿರ್ಭವತ್ಯೇವಂ ವಿಪರೀತಮತಸ್ತ್ಯಜೇತ್ ॥ ೨೬೭ ॥**

**ಸುಕಾರುಣಿಕಮಾತ್ಮಾನಂ ಖ್ಯಾಪಯೇನ್ನಾಪಿ ನಿರ್ಘೃಣಂ ।**
**ದೇಶಕಾಲೌ ಚ ಶಕ್ತಿಂ ಚ ಜನತಾಂ ಚಾವಲೋಕಯೇತ್ ॥ ೨೬೮ ॥**

**ನ ಮೃದುಃ ಸ್ಯಾನ್ನ ಚ ಕ್ರೂರೋ ಹ್ಯುಭಾವೇವ ಸಮಾಶ್ರಯೇತ್ ।**
**ಮೃದುರ್ಭವತ್ಯವಜ್ಞಾತಃ ತೀಕ್ಷ್ಣಾದುದ್ವಿಜತೇ ಜನಃ ॥ ೨೬೯ ॥**

**ಅನಾಲಕ್ಷಿತಚಿತ್ತಃ ಸ್ಯಾನ್ನೈಕಾಂತೇ ಕಿಂಚಿದಾಚರೇತ್ ।**
**ವಿದ್ಯಾತ್ಪರಸ್ಯ ರಂಧ್ರಾಣಿ ಸ್ವರಂಧ್ರಂ ಛಾದಯೇತ್ಪುನಃ ॥ ೨೭೦ ॥**

**ಗೂಹೇತ್ಕೂರ್ಮ ಇವಾಂಗಾನಿ ರಕ್ಷೇದಾತ್ಮಾನಮಾತ್ಮನಾ ।**
**ವಾಗಾದೀನಿ ಸಹಾಯಾನಿ ಕೃತ್ವಾ ಪ್ರಜ್ಞಾಂ ಚ ಮಂತ್ರಿಣಂ ॥ ೨೭೧ ॥**

---

ಗಳಿಂದ ತನಗೆ ಪ್ರಶಸ್ತಿ ಬರಬಹುದೋ ಯಾವ ಇತರ ಗುಣಗಳಿಂದ ಇತರರು ಯಶಸ್ಸನ್ನು ಸಂಪಾದಿಸಿದರೋ ಅಂತಹ ಗುಣಗಳನ್ನು ಆದರಿಸಿ ವಿಪರೀತವಾದ ಗುಣಗಳನ್ನು ತ್ಯಜಿಸಬೇಕು. ಆಯಾಯ ದೇಶಕಾಲಗಳನ್ನೂ ತನ್ನ ಶಕ್ತಿಯನ್ನೂ ಜನತೆಯ ಸ್ವಭಾವವನ್ನೂ, ವಿಮರ್ಶೆಮಾಡಿ ಅದಕ್ಕೆ ತಕ್ಕಂತೆ ನಡೆಯಬೇಕು. ತಾನು ಕಾರುಣಿಕನೆಂದೂ ತೋರ್ಪಡಿಸಿಕೊಳ್ಳಬಾರದು. ನಿರ್ಘೃಣನೆಂದೂ ತೋರ್ಪಡಿಸಿಕೊಳ್ಳಬಾರದು.

೨೬೯-೨೭೧. ಕೇವಲ ಮೃದುವಾಗಿಯೂ ಇರಬಾರದು, ಕೇವಲ ಕ್ರೂರನಾಗಿಯೂ ಇರಬಾರದು. ಕಾಲಾನುಸಾರ ಎರಡನ್ನೂ ಹೊಂದಿರಬೇಕು. ಕೇವಲ ಮೃದು ಪ್ರಕೃತಿಯು ಇತರರಿಂದ ತಿರಸ್ಕರಿಸಲ್ಪಡುತ್ತಾನೆ. ಕೇವಲ ತೀಕ್ಷ್ಣನಿಂದ ಜನವು ಭಯಪಡುತ್ತದೆ. ತನ್ನ ಮನೋವೃತ್ತಿಯುಮತ್ತೊಬ್ಬನಿಗೆ ತಿಳಿಯದಂತೆ ವರ್ತಿಸಬೇಕು. ರಹಸ್ಯದಲ್ಲಿ ಯಾವುದನ್ನೂ ಮಾಡಬಾರದು. ಇತರರ ರಂಧ್ರಗಳನ್ನು ತಿಳಿಯಬೇಕು. ತನ್ನ ರಂಧ್ರಗಳನ್ನು ತಿಳಿಯದಂತೆ ಆಚ್ಛಾದಿಸಿಕೊಳ್ಳಬೇಕು. ಆಮೆಯಂತೆ ಸಂಕುಚಿತಾವಯವನಾಗಿರಬೇಕು. ತನ್ನ ಮನೋವೃತ್ತಿಯಿಂದಲೇ ತನ್ನನ್ನು ರಕ್ಷಿಸಿಕೊಳ್ಳಬೇಕು. ಈ ವಿಷಯದಲ್ಲಿ ವಾಗಾದಿಗಳನ್ನು ಸಹಾಯಕಾರಿಗಳನ್ನಾಗಿಯೂ, ಪ್ರಜ್ಞೆಯನ್ನೇ ಮಂತ್ರಿಯನ್ನಾಗಿಯೂ ಮಾಡಿಕೊಳ್ಳಬೇಕು.

ಧರ್ಮಕಾಮಸಮೃದ್ಧ್ಯರ್ಥಂ ದಾಸಾದ್ಯರ್ಥಃ ಪುಮಾನ್ ಭವೇತ್ ।
ಅರ್ಥಾನರ್ಥೌ ಸಮಾಸಾದ್ಯ ಹರ್ಷದೈನ್ಯೇ ವಿವರ್ಜಯೇತ್ ॥ ೨೭೨ ॥

ದುಃಖೇ ದುಃಖಾಧಿಕಾನ್ ಪಶ್ಯೇತ್ಸುಖೇ ಪಶ್ಯೇತ್ಸುಖಾಧಿಕಾನ್ ।
ನ ತ್ವೇವಂ ಮೂಢವದ್ಧದ್ಯಾದಾತ್ಮಾನಂ ಸುಖದುಃಖಯೋಃ ॥ ೨೭೩ ॥

ಹರ್ಷಸ್ಥಾನಸಹಸ್ರಾಣಿ ಶೋಕಸ್ಥಾನಶತಾನಿ ಚ ।
ದಿವಸೇದಿವಸೇ ಮೂಢಮಾವಿಶಂತಿ ನ ಪಂಡಿತಂ ॥ ೨೭೪ ॥

ನ ತತ್ಕುರ್ವೀತ ಯಸ್ಮಾಂತೇ ಹರ್ಷೋಪಾಲಂಭಮಾಪ್ನುಯಾತ್ ।
ಅಜ್ಞಾನಪ್ರಭವೋ ಮೋಹಸ್ತಸ್ಮಾದ್ರಾಗಃ ಪ್ರವರ್ತತೇ ॥ ೨೭೫ ॥

ರಾಗಾದ್ದ್ವೇಷಸ್ತತಃ ಕ್ರೋಧಃ ಕ್ರೋಧಾನ್ಮಾನೋಽಭಿಜಾಯತೇ ।
ಮಾನಾದಪಾರ್ಥಕಂ ಕರ್ಮ ಕರ್ಮತೋಽಶುಭಲಕ್ಷಣಂ ॥ ೨೭೬ ॥

---

ಮನುಷ್ಯನು ಧರ್ಮಕಾಮಗಳೆಂಬ ಪುರುಷಾರ್ಥಸಮೃದ್ಧಿಗಾಗಿ ದಾಸ್ಯಾದಿ ಭಾವದಲ್ಲಿಯೂ ಪ್ರವೇಶಿಸುತ್ತಾನೆ. ಅರ್ಥಸಿದ್ಧಿಯೂ, ಅನರ್ಥವೂ ಕರ್ಮವಶದಿಂದ ಉಂಟಾದಲ್ಲಿ ಆದಕ್ಕಾಗಿ ಹರ್ಷವನ್ನಾಗಲಿ, ದೈನ್ಯವನ್ನಾಗಲಿ ಹೊಂದಬಾರದು. ದುಃಖ ಉಂಟಾದಾಗ ತನಗಿಂತಲೂ ಹೆಚ್ಚು ದುಃಖಿಯಾಗಿರುವವರನ್ನು ನೋಡಬೇಕು. ಇವರೇ ಹೀಗಿರುವಾಗ ನಾನು ಏಕೆ ಇಷ್ಟು ದೈನ್ಯ ಹೊಂದಬೇಕೆಂಬ ಸಮಾಧಾನದಿಂದ ಮನಃಸ್ಥೈರ್ಯ ಹೊಂದಬೇಕೆಂದು ತಾತ್ಪರ್ಯ ಹೀಗೆಯೇ ಸುಖ ಉಂಟಾದಲ್ಲಿ ಹೆಚ್ಚು ಸುಖವುಳ್ಳವರನ್ನು ನೋಡಬೇಕು. ಅವರಂತೆ ತಾನೂ ಸಂತೋಷದಿಂದ ಉಬ್ಬಿಹೋಗದೆ ಆತ್ಮಧಾರಣೆ ಹೊಂದಬೇಕು. ಹಾಗಿಲ್ಲದೆ ಕೇವಲ ಮೂಢನಂತೆ ಆತ್ಮನನ್ನು ಸುಖದುಃಖಗಳಲ್ಲಿ ಪುನಃಪುನಃ ಕೆಡಹಬಾರದು.

೨೭೪–೨೭೮. ಪ್ರತಿದಿನದಲ್ಲಿಯೂ ಸಹಸ್ರಾರು ಹರ್ಷ ಸ್ಥಾನಗಳೂ ನೂರಾರು ಶೋಕಸ್ಥಾನಗಳೂ ಸಹ ಮೂಢನಲ್ಲಿಯೇ ಬಂದು ಸೇರುತ್ತವೆ. ಪಂಡಿತನಲ್ಲಿ ಸೇರುವುದೇ ಇಲ್ಲ. ಏಕೆಂದರೆ ವಿವೇಕಿಯಾದ ಪಂಡಿತನು ಹರ್ಷಶೋಕಗಳಿಂದ ವಿಕಾರಹೊಂದುವುದೇ ಇಲ್ಲ. ಯಾವ ಕಾರ್ಯವನ್ನು ಮಾಡಿದ ನಂತರ ಬರುವ ಹರ್ಷವು ಇತರರ ನಿಂದೆಗೆ ಪಾತ್ರವಾಗಬಹುದೋ ಅಂತಹ ಕಾರ್ಯವನ್ನು ಮಾಡಲೇ ಬಾರದು. ಜ್ಞಾನವಿಲ್ಲದಿರುವುದರಿಂದ (ಕಾರ್ಯಾಕಾರ್ಯ ವಿವೇಕರಾಹಿತ್ಯರೂಪ

ಜನ್ಮಮೃತ್ಯುಜರಾವ್ಯಾಧಿದುಃಖಶೋಕಪ್ರವರ್ತನಂ ।
ಅಪ್ರಮಾದೋ ವೃದ್ಧಸೇವಾ ತತ್ಪ್ರಜ್ಞಾಮೂಲಮಿಷ್ಯತೇ ॥ ೧೨೭ ॥

ಜ್ಞಾನಾದ್ಧರ್ಮಃ ಸುಖಂ ಧರ್ಮಾನ್ನಿಃಶ್ರೇಯೋಭ್ಯುದಯಾತ್ಮಕಂ ।
ಇಷ್ಟೇಂದ್ರಿಯಾರ್ಥಸಂಯೋಗಃ ಭವೇದುದಯಲಕ್ಷಣಂ ॥ ೧೨೮ ॥

ನಾರುಂತುದಃ ಸ್ಯಾದನೃಶಂಸವಾದೀ
ನಹೀನತಃ ಪರಮಭ್ಯಾದದೀತ ।
ಯಯಾಸ್ಯ ವಾಚಃ ಪರ ಉದ್ವಿಜೇತ
ನ ತಾಂ ವದೇದುಷತೀಂ ಪಾಪಲೋಕಾಂ ॥ ೧೨೯ ॥

ವಾಕ್ಸಾಯಕಾ ವದನಾನ್ನಿಷ್ಪತಂತಿ
ಯೈರಾಹತಃ ಶೋಚತಿ ರಾತ್ರ್ಯಹಾನಿ ।
ಪರಸ್ಯ ನುಮರ್ಮಸು ತೇ ಪತಂತಿ
ನ ತಾನ್ ಧೀರೋ ವಿಸೃಜೇದ್ವೈ ಪರೇಷು ॥ ೧೩೦ ॥

---

ವಾದ)ಃ ಮೋಹವುಂಟಾಗುತ್ತದೆ. ಅದರಿಂದ ಪ್ರೀತಿರೂಪವಾದ ರಾಗವುಂಟಾಗುತ್ತದೆ. ಆ ರಾಗವು ಅದಕ್ಕೆ ವಿರೋಧಿಯಾದವರ ವಿಷಯದಲ್ಲಿ ದ್ವೇಷವುಂಟುಮಾಡುತ್ತದೆ. ಆ ದ್ವೇಷವೇ ಕ್ರೋಧಕ್ಕೆ ಕಾರಣವಾಗುತ್ತದೆ, ಕ್ರೋಧದಿಂದ (ಆತ್ಮೋತ್ಕರ್ಷ ಬುದ್ಧಿರೂಪವಾದ) ಮಾನವುಂಟಾಗುತ್ತದೆ. ಇಂತಹ ಅಹಂಕಾರಾನ್ವಿತನಿಂದ ಮಾಡಲಾಗುವ ಕರ್ಮವು ನಿಷ್ಫಲವಾಗುತ್ತದೆ. ಅದು ನಿಷ್ಫಲವಾದಲ್ಲಿ ಜನ್ಮ, ಮೃತ್ಯು, ಜರಾ, ವ್ಯಾಧಿ, ದುಃಖ, ಶೋಕ ರೂಪವಾದ ಅಶುಭಗಳಲ್ಲಿ ಇಳಿಯುತ್ತಾನೆ ಆದುದರಿಂದ ಅಜ್ಞಾನನಾಶಕವಾದ ಪ್ರಜ್ಞೆಯನ್ನು ಹೊಂದಲು ವೃದ್ಧ ಸೇವೆಯೇ ಮೂಲ ಕಾರಣ, ಇದು ನಿಷ್ಪ್ರಮಾದವಾದ ಮಾರ್ಗ, ಇಂತಹ ಜ್ಞಾನದಿಂದ ಸುಖ ಹೇತುವಾದ ಧರ್ಮಸಿದ್ಧಿಯೂ, ಧರ್ಮದಿಂದ ಅಭ್ಯುದಯರೂಪವಾದ ನಿಶ್ರೇಯಸವೂ ಉಂಟಾಗುತ್ತದೆ. ಇಷ್ಟವಸ್ತುಗಳಲ್ಲಿ ವಿಹಿತವಾದ ಇಂದ್ರಿಯಸಂಯೋಗವೇ ಅಭ್ಯುದಯಕ್ಕೆ ಕಾರಣವಾಗುತ್ತದೆ,

೧೨೯-೧೩೧. ಮತ್ತೊಬ್ಬನಿಗೆ ಮರ್ಮಚ್ಛೇದ ಉಂಟಾಗುವಂತಹ ಕ್ರೂರ ವಚನಗಳನ್ನು ಬಿಡಬೇಕು. ಹಿತಕರವಾದ ಮೃದುವಾಣಿಯಿಂದ ಇತರರನ್ನು ವಶಪಡಿಸಿಕೊಳ್ಳಬೇಕು. ಇವನ ಎಂತಹ ಮಾತಿನಿಂದ ಮತ್ತೊಬ್ಬನು ದುಃಖಪಡ

ಪ್ರಿಯಾಣಿ ಲೋಕೇ ಶೃಣುತೇ ಪ್ರಿಯಂವದಃ
ಪ್ರಿಯಾಣಿ ಚಾಪ್ನೋತಿ ಪ್ರಿಯಾಣಿ ಚಾಶ್ನುತೇ ।
ಪ್ರಿಯಶ್ಚ ಸರ್ವಸ್ಯ ಜನಸ್ಯ ಜಾಯತೇ
ಜನಾನುರಾಗಪ್ರಭವಾ ಹಿ ಸಂಪದಃ ॥ ೨೮೧ ॥

ಆಚಾರಯುಕ್ತಃ ತ್ರಿದಿವಂ ಪ್ರಯಾತಿ
ಆಚಾರವಾನೇವ ಭವತ್ಯರೋಗಃ ।
ಆಚಾರವಾನೇವ ಚಿರಂ ತು ಜೀವೇ-
ದಾಚಾರವಾನೇವ ಭುನಕ್ತಿ ಲಕ್ಷಣಂ ॥ ೨೮೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಹಂಸಗೀತಾಸು ಆಚಾರವರ್ಣನೋ ನಾಮ ತ್ರಯಸ್ತ್ರಿಂಶದುತ್ತರದ್ವಿಶತತಮೋಽಧ್ಯಾಯಃ

---

ಬಹುದೋ ಲೋಕವನ್ನೆಲ್ಲಾ ಪಾಪಿಯನ್ನಾಗಿ ಮಾಡುವ ಅಂತಹ ಅಮಂಗಲ ವಚನವನ್ನು ಯಾವಾಗಲೂ ಆಡಬಾರದು ಎಂತಹ ವಾಗ್ಬಾಣಗಳು ಬಾಯಿನಿಂದ ಹೊರಟು ಮತ್ತೊಬ್ಬನನ್ನು ಹೊಡೆದಲ್ಲಿ, ಅವನು ಹಗಲು ರಾತ್ರಿಯೂ ವ್ಯಥೆಪಡ ಬೇಕಾಗುವುದೋ ಅವನ ಮರ್ಮಪ್ರದೇಶದಲ್ಲೇ ಬಿದ್ದು ಸಂತಾಪಪಡಿಸಬಹುದೋ ಅಂತಹ ಮಾತುಗಳೆಂಬ ಬಾಣಗಳನ್ನು ಮತ್ತೊಬ್ಬರ ಮೇಲೆ ಪ್ರಯೋಗಿಸಲ್ಪ ಬಾರದು. ಲೋಕದಲ್ಲಿ ಪ್ರಿಯವಾದ ವಾಣಿಯುಳ್ಳವನು, ತಾನೂ ಪ್ರಿಯವಾದ ಮಾತುಗಳನ್ನೇ ಕೇಳುತ್ತಾನೆ ಪ್ರಿಯವಸ್ತುಗಳನ್ನೇ ಹೊಂದುತ್ತಾನೆ. ಪ್ರಿಯ ವಾದ ಗತಿಯನ್ನೂ ಹೊಂದುತ್ತಾನೆ. ಎಲ್ಲಾ ಜನರಿಗೂ ಪ್ರಿಯನಾಗಿಯೇ ಆಗು ತ್ತಾನೆ. ಲೋಕದಲ್ಲಿ ಎಲ್ಲಾ ಸಂಪತ್ತುಗಳೂ ಜನಾನುರಾಗದಿಂದಲೇ ಉಂಟಾಗು ತ್ತವೆಯಲ್ಲವೇ. ಲೋಕಪ್ರಿಯವಾದ ಇಂತಹ ಆಚಾರ ಹೊಂದಿರುವವನು ಸ್ವರ್ಗ ವನ್ನೂ ಹೊಂದುತ್ತಾನೆ. ಆಚಾರವಂತನು ಅರೋಗನಾಗಿಯೂ ಇರುತ್ತಾನೆ. ಆಚಾರವಂತನೇ ಬಹುಕಾಲ ಬದುಕತಕ್ಕವನು. ಆಚಾರವಂತನೇ ಸಲ್ಲಕ್ಷಣವುಳ್ಳ ವಸ್ತುಗಳನ್ನೂ ಅನುಭವಿಸುತ್ತಾನೆ.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದ ದಲ್ಲಿ ಹಂಸಗೀತೆಯ ಆಚಾರವರ್ಣನವೆಂಬ ಇನ್ನೂರ ಮೂವತ್ತಮೂರನೆಯ ಅಧ್ಯಾಯ ಮುಗಿದಿದೆ.

|| ಓಂ ||

|| ಶ್ರೀ ಹಯಗ್ರೀವಾಯ ನಮಃ ||

# ಶ್ರೀ ವಿಷ್ಣುಧರ್ಮೋತ್ತರೇ ಮಹಾಪುರಾಣೇ

## ತೃತೀಯಖಂಡೇ

---

### || ಚತುಸ್ತ್ರಿಂಶದುತ್ತರದ್ವಿಶತತಮೋಽಧ್ಯಾಯಃ ||

**|| ಹಂಸ ಉವಾಚ ||**

**ಪ್ರಾಯಶ್ಚಿತ್ತೀಯತಾಂ ಪ್ರಾಪ್ಯ ದೈವಾತ್ಪೂರ್ವಕೃತೇನ ವಾ |**
**ನ ಸಂಸರ್ಗಂ ವ್ರಜೇತ್ಸದ್ಭಿಃ ಪ್ರಾಯಶ್ಚಿತ್ತೇಽಕೃತೇ ನರಃ || ೧ ||**

**ಬ್ರಹ್ಮಹತ್ಯಾ ಸುರಾಪಾನಂ ಸ್ತೇಯಂ ಗುರ್ವಂಗನಾಗಮಃ |**
**ಮಹಾಂತಿ ಪಾತಕಾನ್ಯಾಹುಃ ಸಂಯೋಗಮಪಿ ತೈಃ ಸಹ || ೨ ||**

**ಅನೃತಂ ಚ ಸಮುತ್ಕರ್ಷೇ ರಾಜಗಾಮಿ ಚ ಪೈಶುನಂ |**
**ಗುರೋಶ್ಚಾಲೀಕನಿರ್ಬಂಧಃ ಸಮಾನಿ ಬ್ರಹ್ಮಹತ್ಯಯಾ || ೩ ||**

---

### ಇನ್ನೂರ ಮೂವತ್ತನಾಲ್ಕನೆಯ ಅಧ್ಯಾಯ.

೧-೬ ಪೂರ್ವಾರ್ಜಿತವಾದ ಪಾಪದಿಂದಾಗಲಿ. ಆಕಸ್ಮಿಕವಾದ ದೈವ ದ್ರೋಹದಿಂದಾಗಲಿ ನಿಷಿದ್ಧಾಚರಣೆಯಿಂದುಂಟಾದ ಪಾಪದಿಂದಾಗಲಿ ಪ್ರಾಯಶ್ಚಿತಾರ್ಹತೆಯುಂಟಾಗುತ್ತದೆ. ಅಂತಹ ಪ್ರಾಯಶ್ಚಿತ್ತವನ್ನು ಯಥಾವಿಧಿಯಾಗಿ ಮಾಡಿಕೊಳ್ಳದೆ, ಸತ್ಪುರುಷರ ಸಂಗವನ್ನೇ ಮಾಡಬಾರದು. ಬ್ರಹ್ಮಹತ್ಯೆ, ಸುರಾಪಾನ, ಚೌರ್ಯ, ಗುರುತಲ್ಪಗಮನ ಇವು ಮಹಾಪಾತಕಗಳೆಂದು ಹೇಳುತ್ತಾರೆ. ಇವುಗಳುಳ್ಳವರ ಸಂಯೋಗವೂ ಮಹಾಪಾತಕಗಳಾಗುತ್ತವೆ. ಮತ್ತೊಬ್ಬರ ಉತ್ಕರ್ಷ ಸಮಯದಲ್ಲಿ ಅದಕ್ಕೆ ಬಾಧಕವಾಗುವ ಅನೃತಭಾಷಣ ರಾಜನವರಿಗೂ ಪ್ರಸರಿಸಿ ಅನರ್ಥವಹವಾದ ಪೈಶೂನ್ಯ (ಕಟಪಟ) ಗುರುವನ್ನು ಕಪಟಮಾರ್ಗದಲ್ಲಿ ಎಳೆ

ಬ್ರಹ್ಮೋಜ್ಝಿತಾ ವೇದನಿಂದಾ ಕೌಟಸಾಕ್ಷ್ಯಂ ಸುಹೃದ್ವಧಃ ।
ಗರ್ಹಿತಾನ್ನಾದ್ಯಯೋರ್ಜಗ್ಧಿಃ ಸುರಾಪಾನಸಮಾನಿ ಷಟ್ ॥ ೪ ॥

ನಿಕ್ಷೇಪಸ್ಯಾಪಹರಣಂ ನರಾಶ್ವರಜತಸ್ಯ ಚ ।
ಭೂಮಿವಜ್ರಮಣೀನಾಂ ಚ ರುಕ್ಮಸ್ತೇಯಸಮಂ ಸ್ಮೃತಂ ॥ ೫ ॥

ರೇತಸ್ಸೇಕಃ ಸಯೋನೀಷು ಕುಮಾರೀಷ್ವನ್ತ್ಯಜಾಸು ಚ ।
ಸಖ್ಯುಃ ಪುತ್ರಸ್ಯ ಚ ಸ್ತ್ರೀಷು ಗುರುತಲ್ಪಸಮಂ ವಿದುಃ ॥ ೬ ॥

ಗೋವಧೋಽಯಾಜ್ಯಸಂಯಾಜ್ಯಂ ಪಾರದಾರ್ಯಾತ್ಮವಿಕ್ರಯಃ ।
ಗುರುಮಾತೃಪರಿತ್ಯಾಗಃ ಸ್ವಾಧ್ಯಾಯಾಗ್ನ್ಯೋಃ ಸುತಸ್ಯ ಚ ॥ ೭ ॥

ಪರಿವಿತ್ತಿತಾನುಜೇನೂಢೇ ಪರಿವೇದನಮೇವ ಚ ।
ತಯೋರ್ದಾನಂ ಚ ಕನ್ಯಾಯಾಸ್ತಯೋರೇವ ಚ ಯಾಜನಂ ॥ ೮ ॥

---

ಯಲು ಮಾಡುವ ನಿರ್ಬಂಧ ಇವೂ ಬ್ರಹ್ಮಹತ್ಯೆಗೆ ಸಮವಾದ ಪಾತಕಗಳು. ನಿಷ್ಕಾರಣವಾಗಿ ವೇದಗಳನ್ನು ತ್ಯಜಿಸುವಿಕೆ, ಮತ್ತು ವೇದನಿಂದೆ, ಸುಳ್ಳು ಸಾಕ್ಷ್ಯ, ಸ್ನೇಹಿತನ ವಧ, ನಿಂದಿತವಾದ ಅನ್ನಾದಿ ಭಕ್ಷಣ. ಈ ಆರು ಸುರಾಪಾನಕ್ಕೆ ಸಮವಾದ ಪಾತಕಗಳು. ಮತ್ತೊಬ್ಬನಿಂದ ರಕ್ಷಣಕ್ಕಾಗಿ ಇಟ್ಟಿದ್ದ ಧನಾದಿರೂಪವಾದ ನಿಕ್ಷೇಪವನ್ನು ಅಪಹರಿಸುವಿಕೆ. ಜನರು, ಅಶ್ವಗಳು, ಬೆಳ್ಳಿ ಮುಂತಾದುವುಗಳ ಅಪಹರಣ, ಭೂಮಿ, ವಜ್ರ, ವೈಡೂರ್ಯಾದಿಗಳ ಅಪಹರಣ. ಇವು ಸ್ವರ್ಣಸ್ತೇಯಕ್ಕೆ ಸಮಾನವಾದ ಪಾತಕಗಳು. ಸಗೋತ್ರ ಅಥವಾ ಒಂದೇ ವಂಶಕ್ಕೆ ಸೇರಿದ ಸ್ತ್ರೀಯರಲ್ಲಿ ಅಥವಾ ಅಪ್ರೌಢರಾದ ಸ್ತ್ರೀಯರಲ್ಲಿ ಅಥವಾ ಅಂತ್ಯವರ್ಣದ ಸ್ತ್ರೀಯರಲ್ಲಿ ಮತ್ತು ಸ್ನೇಹಿತನ ಅಥವಾ ಮಗನ, ಸ್ತ್ರೀಯಲ್ಲಿ ಮಾಡುವ ವೀರ್ಯಸೇಕ ಇವೆಲ್ಲವೂ ಗುರತಲ್ಪ ಗಮನಕ್ಕೆ ಸಮಾನವಾದ ಪಾತಕಗಳಾಗುತ್ತವೆ.

೭-೧೪. ಗೋವಧ, ಅಯಾಜ್ಯಯಾಜನ, ಪರಸ್ತ್ರೀಗಮನ, ಆತ್ಮವಿಕ್ರಯ, ಗುರು ಮತ್ತು ತಾಯಿ ಇವರ ತ್ಯಾಗ, ವೇದ, ಅಗ್ನಿ, ಪುತ್ರ ಇವರ ತ್ಯಾಗ, ಜ್ಯೇಷ್ಠ ಭ್ರಾತೃವು ವಿವಾಹವಿಲ್ಲದೆ ಇರುವಾಗ ಕನಿಷ್ಠನು ವಿವಾಹವಾಗುವಿಕೆ, ಅಂತಹ ವಿವಾಹಿತನ ಪತ್ನಿಯಾಗಿರುವಿಕೆ, ಅಂತಹವರಿಗೆ ಕನ್ಯಾದಾನ, ಅಂತಹವರಿಂದ ಯಾಗಮಾಡಿಸುವಿಕೆ, ಕನ್ಯಾದೂಷಣ, ಬಡ್ಡಿಯಿಂದ ಜೀವಿಸುವಿಕೆ, ವ್ರತಲೋಪ,

ಕನ್ಯಾಯಾ ದೂಷಣಂ ಚೈವ ವಾರ್ಧುಷ್ಯಂ ವ್ರತಲೋಪನಂ ।
ತಟಾಗಾರಾಮದಾರಾಣಾಮಪತ್ಯಸ್ಯ ಚ ವಿಕ್ರಯಃ || ೯ ||

ವ್ರಾತ್ಯತಾ ಬಾಂಧವತ್ಯಾಗೋ ಭೃತಾಧ್ಯಾಪನಮೇವ ಚ ।
ಭೃತಾಚ್ಚಾಧ್ಯಯನಾದಾನಮಪಣ್ಯಾನಾಂ ಚ ವಿಕ್ರಯಃ || ೧೦ ||

ಸರ್ವಕಾರ್ಯೇಷ್ವಧೀಕಾರಃ ಮಹಾಯನ್ತ್ರಪ್ರವರ್ತನಂ ।
ಹಿಂಸ್ರೌಷಧಿಸ್ತ್ರಿಯಾಜೀವೋಽಭಿಚಾರೋ ಮೂಲಕರ್ಮ ಚ || ೧೧ ||

ಇಂಧನಾರ್ಥಮಶುಷ್ಕಾಣಾಂ ದ್ರುಮಾಣಾಮವಪಾತನಂ ।
ಆತ್ಮಾರ್ಥಂ ಚ ಕ್ರಿಯಾರಮ್ಭೋ ನಿಂದಿತಾನ್ನಾದನಂ ತಥಾ || ೧೨ ||

ಅನಾಹಿತಾಗ್ನಿತಾ ಸ್ತೇಯಮೃಣಾನಾಂ ಚಾನಪಕ್ರಿಯಾ ।
ಅಸಚ್ಛಾಸ್ತ್ರಾಭಿಗಮನಂ ಕೌಶೀಲವ್ಯಸ್ಯ ಚ ಕ್ರಿಯಾ || ೧೩ ||

ಧಾನ್ಯಕುಪ್ಯಪಶುಸ್ತೇಯಂ ಮದ್ಯಪಸ್ತ್ರೀನಿಷೇವಣಂ ।
ಸ್ತ್ರೀಶೂದ್ರವಿಟ್ ಕ್ಷತ್ರವಧೋ ನಾಸ್ತಿಕ್ಯಂ ಚೋಪಪಾತಕಂ || ೧೪ ||

---

ಕೆರೆ, ತೋಪು, ಭಾರ್ಯೆ, ಪುತ್ರ ಇವರ ವಿಕ್ರಿಯೆ, ವ್ರಾತ್ಯವೃತ್ತಿ, ಬಂಧುತ್ಯಾಗ ದ್ರವ್ಯಕ್ಕಾಗಿ, ಅಧ್ಯಾಪನಮಾಡಿಸುವಿಕೆ, ದ್ರವ್ಯಕ್ಕಾಗಿಯೇ ಇರುವ ಉಪಾಧ್ಯಾಯ ನಿಂದ ಅಧ್ಯಯನ ಸ್ವೀಕಾರ, ನಿಷಿದ್ಧವಸ್ತುಗಳ ವಿಕ್ರಯ, ಎಲ್ಲಾ ಕಾರ್ಯಗಳಲ್ಲೂ ಪ್ರಧಾನಾಧಿಕಾರ ಹೊಂದುವಿಕೆ, ಸರ್ವನಾಶಕವಾದ ಮಹಾಯಂತ್ರಗಳ ನಿರ್ಮಾಣ ಅಥವಾ ಪ್ರೇರಕೆ, ಹಿಂಸ್ರಗಳಾದ ಸಿಂಹಾದಿ ಮೃಗಗಳಿಂದಲೂ, ಓಷಧಿಗಳಿಂದಲೂ, ಸ್ತ್ರೀಯರಿಂದಲೂ ಜೀವಿಸುವಿಕೆ, ಅಭಿಚಾರ, ಮೂಲಿಕಾದಿಗಳಿಂದ ಮಾಡುವ ಸ್ತಂಭ ನಾದಿ ಪ್ರಯೋಗ ಜೀವವೃಕ್ಷಗಳನ್ನು ಸೌದೆಗಾಗಿ ಛೇದಿಸುವಿಕೆ, ತನಗಾಗಿ ಮಾಡುವ ವಿಶೇಷಪಾಕ, ನಿಂದಿತಾನ್ನ ಭಕ್ಷಣ, ಅನಾಹಿತಾಗ್ನಿಯಾಗಿರುವಿಕೆ, ಚೌರ್ಯ, ಋಣತ್ರಯಗಳನ್ನು ತೀರಿಸದಿರುವಿಕೆ. ಅಸಚ್ಛಾಸ್ತ್ರಾಭಿನಿವೇಶ, ಗಾಯಕವೃತ್ತಿ, ಧಾನ್ಯ, ಚಿನ್ನ, ಬೆಳ್ಳಿ, ಪಶ್ವಾದಿಗಳ ಚೌರ್ಯ, ಮದ್ಯಪಾಯಿನಿಯಾದ ಸ್ತ್ರೀ ಸಂಭೋಗ, ಸ್ತ್ರೀ, ಶೂದ್ರ, ವೈಶ್ಯ, ಕ್ಷತ್ರಿಯರ ವಧ, ನಾಸ್ತಿಕತೆ, ಇವೆಲ್ಲವೂ ಉಪಪಾತಕಗಳೆನಿಸುತ್ತವೆ.

ಬ್ರಾಹ್ಮಣಸ್ಯ ರುಜಃಕೃತ್ಯಂ ಘ್ರಾತಿರಘ್ರೇಯಮದ್ಯಯೋಃ ।
ಜೈಹ್ಮ್ಯಂ ಪುಂಸಿ ಚ ಮೈಥುನ್ಯಂ ಜಾತಿಭ್ರಂಶಕರಂ ಸ್ಮೃತಂ ॥ ೧೫ ॥

ಖರಾಶ್ವೋಷ್ಟ್ರಮೃಗೇಭಾನಾಮಜಾವಿಕವಧಸ್ತಥಾ ।
ಸಂಕರೀಕರಣಂ ಜ್ಞೇಯಂ ಮೀನಾಹಿಮಹಿಷಸ್ಯ ಚ ॥ ೧೬ ॥

ನಿಂದಿತೇಭ್ಯೋ ಧನಾದಾನಂ ವಾಣಿಜ್ಯಂ ಶೂದ್ರಸೇವನಂ ।
ಅಪಾತ್ರೀಕರಣಂ ಜ್ಞೇಯಮಸತ್ಯಸ್ಯ ಚ ಭಾಷಣಂ ॥ ೧೭ ॥

ಕ್ರಿಮಿಕೀಟವಯೋಹತ್ಯಾ ಮದ್ಯಾನುಗತಭೋಜನಂ ।
ಫಲೈಧಃಕುಸುಮಸ್ತೇಯಮಧೈರ್ಯಂ ಚ ಮಲಾಪಹಂ ॥ ೧೮ ॥

ಏತಾನ್ಯನ್ಯಾನಿ ಸರ್ವಾಣಿ ಯಥೋಕ್ತಾನಿ ಪೃಥಕ್ಪೃಥಕ್ ।
ಧೈರ್ಯವ್ರತೈರಪೋಹ್ಯನ್ತೇ ತಾನಿ ಮೇ ಸನ್ನಿಬೋಧತ ॥ ೧೯ ॥

ಬ್ರಹ್ಮಹಾ ದ್ವಾದಶಸಮಾಃ ಕುಟಿಂ ಕೃತ್ವಾ ವನೇ ವಸೇತ್ ।
ಭೈಕ್ಷ್ಯಾಶ್ಯಾತ್ಮವಿಶುದ್ಧ್ಯರ್ಥಂ ಕೃತ್ವಾ ಶವಶಿರೋ ಧ್ವಜಂ ॥ ೨೦ ॥

---

೧೫–೧೯. ಬ್ರಾಹ್ಮಣನನ್ನು ಗಾಯಗೊಳಿಸುವಿಕೆ, ಮದ್ಯಾದಿನಿಷಿದ್ಧ ವಸ್ತುಗಳ ಆಘ್ರಾಣ, ಕೌಟಿಲ್ಯ, ಪುರುಷನಲ್ಲಿ ಮೈಥುನಹೊಂದುವಿಕೆ, ಇವು ಜಾತಿಭ್ರಂಶಕ್ಕೆ ಕಾರಣವಾಗುತ್ತವೆ. ಕತ್ತೆ, ಕುದುರೆ, ಒಂಟೆ, ಜಿಂಕೆ, ಆನೆ, ಆಡು, ಕುರಿ ಮುಂತಾದವುಗಳಲ್ಲಿ ವಿಜಾತೀಯ ಸಂಪರ್ಕದಿಂದ ಸಂಕರಮಾಡುವಿಕೆ, ನಿಂದಿತರಾದವರಿಂದ ಧನಸ್ವೀಕಾರ. ವ್ಯಾಪಾರ, ಶೂದ್ರಸೇವಾ, ಯೋಗ್ಯನನ್ನು ಅಯೋಗ್ಯನನ್ನಾಗಿ ಮಾಡುವಿಕೆ, ಅಸತ್ಯ ಭಾಷಣ, ಕ್ರಿಮಿ, ಕೀಟ, ಪಕ್ಷಿ ಇತ್ಯಾದಿಗಳ ಹತ್ಯೆ, ಮದ್ಯದೊಗೂಡಿದ ಭೋಜನ, ಹೂವು, ಕಾಯಿ, ಸೌದೆ ಇವುಗಳ ಚೌರ್ಯ, ಅಧೈರ್ಯ, ಮಲನಾಶನ ಇವೂ ಇನ್ನೂ ಕೆಲವು ಬೇರೆಬೇರೆಯಾಗಿ ಹೇಳಲ್ಪಟ್ಟಿರುವ ಪಾತಕಗಳಿವೆ. ಅವನ್ನೂ ಧೈರ್ಯ ವ್ರತಗಳಿಂದ ಹೋಗಲಾಡಿಸಬಹುದು. ಅವೆಲ್ಲವನ್ನೂ ಹೇಳುತ್ತೇನೆ ಕೇಳಿರಿ.

೨೦-೨೬. ಬ್ರಹ್ಮಹತ್ಯೆ ಮಾಡಿದವನು ಹನ್ನೆರಡು ವರ್ಷ ಪರ್ಯಂತ ಕಾಡಿನಲ್ಲಿ ಗುಡಿಸಲು ಹಾಕಿಕೊಂಡು ವಾಸಮಾಡಬೇಕು. ಶವದ ತಲೆಯನ್ನು ಧ್ವಜ ಮಾಡಿಕೊಂಡು ಆತ್ಮಶುದ್ಧಿಗಾಗಿ ದೀಕ್ಷೆಯಿಂದ ಜೀವಿಸಬೇಕು ಅಥವಾ ಶಸ್ತ್ರಧಾರಿಗಳ

ಲಕ್ಷಂ ಶಸ್ತ್ರಭೃತಾಂ ವಾಸ್ಯಾದ್ವಿದುಷಾಮಿಚ್ಛಯಾತ್ಮನಃ ।
ಪ್ರಾಸ್ಯೇದಾತ್ಮಾನಮಗ್ನೌ ವಾ ಸಮೃದ್ಧೇ ತ್ರಿರವಾಕ್ಶಿರಾಃ ॥ ೨೧ ॥

ಯಜೇತ ವಾಶ್ವಮೇಧೇನ ಸ್ವರ್ಜಿತಾ ಗೋಸವೇನ ವಾ ।
ಅಭಿಜಿದ್ವಿಶ್ವಜಿದ್ಭ್ಯಾಂ ವಾ ತ್ರಿವೃತಾಗ್ನಿಷ್ಟುತಾಪಿ ವಾ ॥ ೨೨ ॥

ಜಪನ್ ವಾನ್ಯತಮಂ ವೇದಂ ಯೋಜನಾನಾಂ ಶತಂ ವ್ರಜೇತ್ ।
ಬ್ರಹ್ಮಹತ್ಯಾಪನೋದಾಯ ಮಿತಭುಙ್ನಿಯತೇಂದ್ರಿಯಃ ॥ ೨೩ ॥

ಸರ್ವಸ್ವಂ ವಾ ವೇದವಿದೇ ಬ್ರಾಹ್ಮಣಾಯೋಪಪಾದಯೇತ್ ।
ಧನಂ ಹಿ ಜೀವನಾಯಾಲಂ ಗೃಹಂ ವಾಸಪರಿಚ್ಛದಂ ॥ ೨೪ ॥

ಹವಿಷ್ಯಭುಗ್ವಾನುಸರೇತ್ಪ್ರತಿಸ್ರೋತಃ ಸರಸ್ವತೀಂ ।
ಜಪೇದ್ವಾ ನಿಯತಾಹಾರಸ್ತ್ರಿರ್ವೈ ವೇದಸ್ಯ ಸಂಹಿತಾಂ ॥ ೨೫ ॥

ಕೃತವಾಪನೋ ನಿವಸೇದ್ಗ್ರಾಮಾಂತೇ ಗೋವ್ರಜೇಽಪಿ ವಾ ।
ಆಶ್ರಮೇ ವೃಕ್ಷಮೂಲೇ ವಾ ಗೋಬ್ರಾಹ್ಮಣಹಿತೇ ರತಃ ॥ ೨೬ ॥

---

ಅಥವಾ ಪಂಡಿತರ ಎದುರಿಗೆ ತಾನೇ ತನ್ನ ಇಚ್ಛೆಯಿಂದ ತಲೆಕೆಳಗೆ ಮಾಡಿ ಮೂರು ಬಾರಿ ಅಗ್ನಿಯನ್ನು ಪ್ರವೇಶಿಸಬೇಕು. ಅಶ್ವಮೇಧ ಯಾಗವನ್ನಾಗಲಿ, ಸ್ವರ್ಗ ಸಾಧನವಾದ ಗೋಮೇಧವನ್ನಾಗಲಿ ಮಾಡಬೇಕು. ಅಭಿಜಿತ್, ವಿಶ್ವಜಿತ್ ಎಂಬ ಯಾಗಗಳನ್ನಾಗಲಿ, ತ್ರಿವೃರ್ ಅಥವಾ ಅಗ್ನಿಷ್ಟೋಮವನ್ನಾಗಲಿ ಮಾಡಬೇಕು. ಅಥವಾ ಯಾವುದಾದರೊಂದು ವೇದವನ್ನು ಜಪಿಸುತ್ತಾ ನೂರು ಯೋಜನ ದೂರ ನಡೆಯಬೇಕು ಅಥವಾ ಮಿತಾಶಿಯಾಗಿಯೂ, ಜಿತೇಂದ್ರಿಯನಾಗಿಯೂ ಇದ್ದು ತನ್ನ ಸರ್ವಸ್ವವನ್ನೂ, ವೇದಜ್ಞನಾದ ಬ್ರಾಹ್ಮಣನಿಗೆ ದಾನಮಾಡಬೇಕು ಅಥವಾ ಜೀವ ನಕ್ಕೆ ಸಾಕಾಗುವಷ್ಟು ಧನ ಮತ್ತು ವಾಸಕ್ಕೆ ಅನುಕೂಲವಾದ ಸಪರಿಕರವಾದ ಮನೆ ಇವನ್ನಾದರೂ ದಾನಮಾಡಬೇಕು. ಹವಿಷ್ಯವಾದ ಅನ್ನ ಭಕ್ಷಣದಿಂದಿದ್ದು ನದಿಯ ಪ್ರವಾಹಕ್ಕೆದುರಾಗಿ ನಿಲ್ಲಬೇಕು ಅಥವಾ ಆಹಾರ ನಿಯಮದಿಂದ ಕೂಡಿ, ವೇದದ ಸಂಹಿತೆಯನ್ನು ಮೂರಾವರ್ತಿ ಜಪಿಸಬೇಕು ಅಥವಾ ವಪನಮಾಡಿಕೊಂಡು ಗ್ರಾಮದ ಕೊನೆಯಲ್ಲಾಗಲಿ, ಗೋವಿನ ಕೊಟ್ಟಿಗೆಯಲ್ಲಾಗಲಿ ವಾಸಮಾಡಬೇಕು. ಗೋ ಬ್ರಾಹ್ಮಣರಿಗೆ ಹಿತಕರವಾದ ಕಾರ್ಯದಲ್ಲಿ ನಿರತನಾಗಿ ಆಶ್ರಮದಲ್ಲಿಯಾಗಲಿ, ಮರದ ಬುಡದಲ್ಲಿಯಾಗಲಿ ವಾಸಿಸಬೇಕು.

ಬ್ರಾಹ್ಮಣಾರ್ಥೇ ಗವಾರ್ಥೇ ವಾ ಸಮ್ಯಕ್ ಪ್ರಾಣಾನ್ಪರಿತ್ಯಜೇತ್ ।
ಮುಚ್ಯತೇ ಬ್ರಹ್ಮಹತ್ಯಾಯಾ ಗೋಬ್ರಾಹ್ಮಣಹಿತೇ ರತಃ ॥ ೨೭ ॥

ತ್ರಿವಾರಂ ಪ್ರತಿರೋದ್ಧಾ ವಾ ಸರ್ವಸ್ವಮವಜಿತ್ಯ ವಾ ।
ವಿಪ್ರಸ್ಯ ತನ್ನಿಮಿತ್ತೇ ವಾ ಪ್ರಾಣಾಲಾಭೇ ವಿಮುಚ್ಯತೇ ॥ ೨೮ ।

ಏವಂ ದೃಢವ್ರತೋ ನಿತ್ಯಂ ಬ್ರಹ್ಮಚಾರೀ ಸಮಾಹಿತಃ ।
ಸಮಾಪ್ತೇ ದ್ವಾದಶೇ ವರ್ಷೇ ಬ್ರಹ್ಮಹತ್ಯಾಂ ವಿಮುಂಚತಿ ॥ ೨೯ ॥

ಶಿಷ್ಟ್ವಾ ವಾ ಭೂಮಿದೇವಾನಾಂ ನರದೇವಸಮಾಗಮೇ ।
ಸ್ವಮೇನೋಽವಭೃಥಸ್ನಾತೋ ಹಯಮೇಧೇ ವಿಮುಚ್ಯತೇ ॥ ೩೦ ॥

ಧರ್ಮಸ್ಯ ಬ್ರಾಹ್ಮಣೋಮೂಲಮಗ್ರಂ ರಾಜನ್ಯ ಉಚ್ಯತೇ ।
ತಸ್ಮಾತ್ಸಮಾಗಮೇ ತೇಷಾಮೇನೋ ವಿಖ್ಯಾಪ್ಯ ಶುದ್ಧ್ಯತಿ ॥ ೩೧ ॥

---

೨೭-೩೧. ಬ್ರಾಹ್ಮಣನ ಅಥವಾ ಗೋವಿನ ಹಿತಕ್ಕಾಗಿ ಪ್ರಯತ್ನಿಸಿ ಪ್ರಾಣಗಳನ್ನು ತ್ಯಜಿಸಬೇಕು. ಈ ರೀತಿ ಗೋಬ್ರಾಹ್ಮಣ ಹಿತಕ್ಕಾಗಿ ಪ್ರಾಣಬಿಟ್ಟವನು ಬ್ರಹ್ಮಹತ್ಯಾ ದೋಷದಿಂದ ಮುಕ್ತನಾಗುತ್ತಾನೆ. ಈ ವಿಧಾನಗಳಲ್ಲಿ ಮೊದಲು ಹೇಳಿರುವಂತೆ ಮೂರಾವರ್ತಿ ಅಗ್ನಿಯಲ್ಲಿ ಪ್ರಾಣರೋಧನಮಾಡಿಯಾಗಲಿ, ಸರ್ವಸ್ವವನ್ನೂ ದಾನಮಾಡಿಯಾಗಲಿ ವಿಪ್ರನಿಗಾಗಿ ಪ್ರಯತ್ನಿಸಿ, ಪ್ರಾಣ ನೀಗಿದಲ್ಲಾಗಲಿ ಬ್ರಹ್ಮಹತ್ಯೆಯಿಂದ ಮುಕ್ತನಾಗುತ್ತಾನೆ. ಈ ರೀತಿ ಬ್ರಹ್ಮಚರ್ಯದಿಂದಲೂ, ವ್ರತ ನಿಯಮಗಳಿಂದಲೂ ಇದ್ದು ಹನ್ನೆರಡು ವರ್ಷ ಕಳೆದಲ್ಲಿ ಬ್ರಹ್ಮಹತ್ಯಾ ದೋಷವು ಬಿಡುಗಡೆ ಹೊಂದುತ್ತದೆ ಅಥವಾ ಬ್ರಾಹ್ಮಣರ ಮತ್ತು ರಾಜರ ಸಮಾಗಮ ಉಂಟು ಮಾಡಿ, ತನ್ನ ಪಾಪವನ್ನು ತಾನಾಗಿಯೇ ಒಪ್ಪಿಕೊಂಡು, ಅನಂತರ ಅಶ್ವಮೇಧ ಯಾಗದಲ್ಲಿ ಅವಭೃಥ ಸ್ನಾನಮಾಡಿದಲ್ಲಿ ಈ ದೋಷದಿಂದ ಮುಕ್ತನಾಗುತ್ತಾನೆ. ಧರ್ಮಕ್ಕೆ ಬ್ರಾಹ್ಮಣನು ಬುಡದಂತಿರುವನು. ಧೊರೆಯು ಅಗ್ರಭಾಗದಂತಿರುವನು. ಆದುದರಿಂದ ಇವರ ಸಮಾಗಮದಲ್ಲಿ ತನ್ನ ಪಾಪವನ್ನು ಪ್ರಕಾಶಗೊಳಿಸುವುದೂ ಶುದ್ಧಿಗೆ ಕಾರಣವಾಗುತ್ತದೆ.

ಬ್ರಾಹ್ಮಣಃ ಸಂಭವೇನೈವ ದೇವಾನಾಮಪಿ ದೈವತಂ ।
ಪ್ರಮಾಣಂ ಚೈವ ಲೋಕಸ್ಯ ಬ್ರಹ್ಮಾತ್ರೈವ ಹಿ ಕಾರಣಂ ॥ ೩೨ ॥

ತೇಷಾಂ ವೇದವಿದೋ ಬ್ರೂಯುಃ ತ್ರಯೋಽಪ್ಯೇನಸ್ಸು ನಿಷ್ಕೃತಿಂ ।
ಸ ತೇಷಾಂ ಪಾವನಾಯ ಸ್ಯಾತ್ಪವಿತ್ರಾ ವಿದುಷಾಂ ಹಿ ವಾಕ್ ॥ ೩೩ ॥

ಅತೋಽನ್ಯತಮಮಾಸ್ಥಾಯ ವಿಧಿಂ ವಿಪ್ರಃ ಸಮಾಹಿತಃ ।
ಬ್ರಹ್ಮಹತ್ಯಾಕೃತಂ ಪಾಪಂ ವ್ಯಪೋಹತ್ಯಾತ್ಮವತ್ತಯಾ ॥ ೩೪ ॥

ಹತ್ವಾ ಗರ್ಭಮವಿಜ್ಞಾತಂ ಚೈತದೇವ ವ್ರತಂ ಚರೇತ್ ।
ರಾಜನ್ಯವೈಶ್ಯೌ ಚೇಶ್ ಜ್ಞಾನಾದಾತ್ರೇಯೀಮೇವ ಚ ಸ್ತ್ರಿಯಂ ॥ ೩೫ ॥

ಉಕ್ತ್ವಾ ಚೈವಾನೃತಂ ಸಾಕ್ಷ್ಯೇ ಪ್ರತಿರುಧ್ಯ ಗುರೂಂಸ್ತಥಾ ।
ಅಪಹೃತ್ಯ ಚ ನಿಕ್ಷೇಪಂ ಕೃತ್ವಾ ಚ ಸ್ತ್ರೀಸುಹೃದ್ವಧಂ ॥ ೩೬ ॥

---

೩೨-೩೪. ಬ್ರಾಹ್ಮಣನು ಬ್ರಾಹ್ಮಣನಾಗಿ ಹುಟ್ಟಿರುವುದರಿಂದಲೇ ದೇವತೆಗಳಿಗೂ ದೇವತೆಯಾಗಿ ಮಾನ್ಯನಾಗುತ್ತಾನೆ. ಲೋಕಕ್ಕೆಲ್ಲಾ ಪ್ರಮಾಣಭೂತವಾದ ಮತ್ತು ಕಾರಣವಾದ ವೇದವು ಇವನಲ್ಲೇ ಇರುತ್ತದೆ. ಆದುದರಿಂದ ವೇದಜ್ಞರಾದ ಮೂವರೂ ಪಾಪಗಳಿಗೆ ತಕ್ಕ ಪ್ರಾಯಶ್ಚಿತ್ತವನ್ನೂ ಇವರಿಗೆ ಹೇಳುತ್ತಾರೆ. ಅಂತಹವರ ನಿರ್ಣಯವೇ ಈ ಪಾಪಿಗಳನ್ನು ಪವಿತ್ರಗೊಳಿಸಲು ಸಮರ್ಥವಾಗುತ್ತದೆ. ವಿದ್ಯಾವಂತರ ವಾಕ್ಕು ಬಹು ಪವಿತ್ರಕರವಾದುದಷ್ಟೆ, ಆದ್ದರಿಂದ ಈ ಕ್ರಮಗಳಲ್ಲಿ ಯಾವುದಾದರೊಂದು ವಿಧಿಯನ್ನಾಶ್ರಯಿಸಿ ಜಿತೇಂದ್ರಿಯತೆಯಿಂದ ಜಾಗರೂಕನಾಗಿದ್ದು ಬ್ರಹ್ಮಹತ್ಯೆಯಿಂದುಂಟಾದ ಪಾಪವನ್ನು ಹೋಗಲಾಡಿಸಿಕೊಳ್ಳಬೇಕು.

೩೫-೪೦. ಅಜ್ಞಾನದಿಂದ ಭ್ರೂಣಹತ್ಯೆ ಮಾಡಿದವನೂ ಈ ವ್ರತವನ್ನೇ ಪ್ರಾಯಶ್ಚಿತ್ತವಾಗಿ ಆಚರಿಸಬೇಕು. ಕ್ಷತ್ರಿಯ ವೈಶ್ಯರನ್ನೂ, ಆತ್ರೇಯಿಯನ್ನೂ, ಜ್ಞಾನಪೂರ್ವಕವಾಗಿ ಹನನಮಾಡಿದವನೂ, ಅನೃತವಾದ ಸಾಕ್ಷ್ಯ ನುಡಿದವನೂ, ಗುರುವನ್ನು ತಡೆದು ಅಕಾರ್ಯದಲ್ಲಿ ಪ್ರೇರಿಸಿದವನೂ, ನಿಕ್ಷೇಪವನ್ನು ಅಪಹರಿಸಿದವನೂ, ಸ್ತ್ರೀ ಮತ್ತು ಸ್ನೇಹಿತನನ್ನು ವಧಮಾಡಿದವನೂ, ಅಜ್ಞಾನದಿಂದ ದ್ವಿಜನಾದವನನ್ನು ಕೊಂದವನೂ ಈ ಪ್ರಾಯಶ್ಚಿತ್ತದಿಂದಲೇ ಶುದ್ಧಿಹೊಂದಬೇಕು. ಬುದ್ಧಿಪೂರ್ವಕವಾಗಿ ಬ್ರಾಹ್ಮಣ ವಧೆಮಾಡಿದವನಿಗೆ ಪ್ರಾಯಶ್ಚಿತ್ತವೇ ಇಲ್ಲ. ಅಜ್ಞಾನ

ಇಯಂ ಇಶುದ್ಧಿರುದಿತಾ ಪ್ರಮಾಪ್ಯಾಕಾಮತೋ ದ್ವಿಜಂ ।
ಕಾಮತೋ ಬ್ರಾಹ್ಮಣವಧೇ ನಿಷ್ಕೃತಿರ್ನ ವಿಧೀಯತೇ ॥ ೩೭ ॥

ಸುರಾಂ ಪೀತ್ವಾ ದ್ವಿಜೋ ಮೋಹಾದಗ್ನಿವರ್ಣಾಂ ಸುರಾಂ ಪಿಬೇತ್ ।
ತಯಾ ಸಕಾಯೇ ನಿರ್ದಗ್ಧೇ ಮುಚ್ಯತೇ ಕಿಲ್ಬಿಷಾತ್ತತಃ ॥ ೩೮ ॥

ಗೋಮೂತ್ರಮಗ್ನಿವರ್ಣಂ ವಾ ಪಿಬೇದುದಕಮೇವ ವಾ ।
ಪಯೋ ಘೃತಂ ವಾ ಮರಣಾದ್ಗೋಶಕೃದ್ರಸಮೇವ ವಾ ॥ ೩೯ ॥

ಕಣಾನ್ವಾ ಭಕ್ಷಯೇದಬ್ದಂ ಪಿಣ್ಯಾಕಂ ವಾ ಸಕೃನ್ನಿಶಿ ।
ಸುರಾಪಾನಾಪನೋದಾರ್ಥಂ ವಾಲವಾಸಾ ಜಟೀ ಧ್ವಜೀ ॥ ೪೦ ॥

ಸುರಾ ವೈ ಮಲಮನ್ನಾನಾಂ ಪಾಪ್ಮಾ ಚ ಮಲಮುಚ್ಯತೇ ।
ತಸ್ಮಾದ್ಬ್ರಾಹ್ಮಣರಾಜನ್ಯೌ ವೈಶ್ಯಸ್ತು ನ ಸುರಾಂ ಪಿಬೇತ್ ॥ ೪೧ ॥

ಗೌಡೀ ಮಾಧ್ವೀ ಚ ಪೈಷ್ಟೀ ಚ ವಿಜ್ಞೇಯಾ ತ್ರಿವಿಧಾ ಸುರಾ ।
ಯಥೈವೈಕಾ ತಥೈವಾನ್ಯಾ ನ ಪಾತವ್ಯಾ ದ್ವಿಜಾತಿಭಿಃ ॥ ೪೨ ॥

---

ದಿಂದ ಸುರಾಪಾನಮಾಡಿದ ಬ್ರಾಹ್ಮಣನು ಅಗ್ನಿವರ್ಣದ ಸುರೆಯನ್ನು ಪಾನಮಾಡ ಬೇಕು. ಅದರಿಂದ ದೇಹವೆಲ್ಲವೂ ದಗ್ಧವಾದಲ್ಲಿ, ಆ ಪಾಪದಿಂದ ಮುಕ್ತನಾಗು ತ್ತಾನೆ. ಗೋಮೂತ್ರ ಅಥವಾ ಅಗ್ನಿವರ್ಣದ ಜಲ, ಹಾಲು, ಘೃತ, ಸಗಣಿಯು ರಸ ಇವನ್ನು ಮರಣಪರ್ಯಂತ ಸೇವಿಸಬೇಕು. ವರ್ಷಪರ್ಯಂತ ಧಾನ್ಯ ಕಣಗಳ ನ್ನಾಗಲಿ, ರಾತ್ರಿಯಲ್ಲಿ ಒಂದು ಸಲ ಮಾತ್ರ ಹಿಂಡಿಯನ್ನಾಗಲಿ ತಿನ್ನಬೇಕು. ಸುರಾ ಪಾನದಿಂದುಂಟಾದ ಪಾಪನಾಶಕ್ಕಾಗಿ ಗೋವಾಲವಸ್ತ್ರೇ ವಸ್ತ್ರವನ್ನಾಗಿ ಹೊಂದಿ, ಜಟಾಧಾರಿಯಾಗಿಯೂ, ಧ್ವಜಧಾರಿಯಾಗಿಯೂ ಈ ವ್ರತಗಳನ್ನಾಚರಿಸಬೇಕು.

೪೧-೪೬. ಸುರೆ ಎಂದರೆ ಅನ್ನದ ಮಲ, ಪಾಪವೆಂಬುದು ಅಶುದ್ಧವಾದ ಮಲ, ಆದುದರಿಂದ ಪಾಪವೆಂಬ ಅಶುದ್ಧಿಗೆ ಕಾರಣವಾದ, ಮಲರೂಪವಾದ ಸುರೆ ಯನ್ನು ಬ್ರಾಹ್ಮಣ ಕ್ಷತ್ರಿಯರೂ, ವೈಶ್ಯನೂ ಸಹ ಪಾನಮಾಡಬಾರದು. ಸುರೆಯು ಗೌಡಿ (ಮರದಿಂದ ಮಾಡಿದ್ದು), ಪೈಷ್ಟೀ (ಹಿಟ್ಟನಿಂದ ಮಾಡಿದ್ದು), ಮಾಧ್ವೀ (ದ್ರಾಕ್ಷಾಫಲದಿಂದ ಮಾಡಿದ್ದು) ಎಂದು ಮೂರು ವಿಧವಾಗಿರುತ್ತದೆ. ಇವುಗಳಲ್ಲಿ

ಯಕ್ಷರಕ್ಷಃಪಿಶಾಚಾನ್ನಂ ಮದ್ಯಂ ಮಾಂಸಂ ಸುರಾಸವಮ್ |
ತದ್ಬ್ರಾಹ್ಮಣೇನ ನಾತ್ತವ್ಯಂ ದೇವಾನಾಮಶ್ನತಾ ಹವಿಃ || ೪೩ ||

ಅಮೇಧ್ಯೇ ವಾ ಪತೇನ್ಮತ್ತೋಽವೈದಿಕಂ ವಾಪ್ಯುದಾಹರೇತ್ |
ಅಕಾರ್ಯಮನ್ಯತ್ಕುರ್ಯಾದ್ವಾ ಬ್ರಾಹ್ಮಣೋ ಮದಮೋಹಿತಃ || ೪೪ ||

ಯಸ್ಯ ಕಾಯಗತಂ ಬ್ರಹ್ಮ ಮದ್ಯೇನಾಪ್ಲಾವ್ಯತೇ ಸಕೃತ್ |
ತಸ್ಯ ವ್ಯಪೈತಿ ಬ್ರಾಹ್ಮಣ್ಯಂ ಶೂದ್ರತ್ವಂ ಚ ಸ ಗಚ್ಛತಿ || ೪೫ ||

ಏಷಾ ವಿಚಿತ್ರಾಭಿಹಿತಾ ಸುರಾಪಾನಸ್ಯ ನಿಷ್ಕೃತಿಃ |
ಅತ ಊರ್ಧ್ವಂ ಪ್ರವಕ್ಷ್ಯಾಮಿ ಸುವರ್ಣಸ್ತೇಯ ನಿಷ್ಕೃತಿಂ || ೪೬ ||

ಸುವರ್ಣಸ್ತೇಯವಾನ್ವಿಪ್ರೋ ರಾಜಾನಮಭಿಗಮ್ಯ ತು |
ಸ್ವಕರ್ಮ ಖ್ಯಾಪಯನ್ ಬ್ರೂಯಾದ್ಭವಾನ್ಮಾಮನುಶಾಸ್ತ್ವಿತಿ || ೪೭ ||

ಗೃಹೀತ್ವಾ ಮುಸಲಂ ರಾಜಾ ಸಕೃದ್ಧನ್ಯಾತ್ತು ತಂ ಸ್ವಯಂ |
ವಧೇನ ಶುಧ್ಯತಿಸ್ತೇನೋ ಬ್ರಾಹ್ಮಣಸ್ತಪಸೈವ ವಾ || ೪೮ ||

---

ಯಾವುದೊಂದನ್ನೂ ದ್ವಿಜರು ಪಾನಮಾಡಬಾರದು. ಮದ್ಯ, ಮಾಂಸ, ಸುರಾಸವ ಇವು ಯಕ್ಷ, ರಾಕ್ಷಸ, ಪಿಶಾಚಾದಿಗಳ, ಅನ್ನ, ದೇವತೆಗಳ ಹವಿಶ್ಶೇಷವನ್ನು ತಿನ್ನುವ ಬ್ರಾಹ್ಮಣನು ಇವನ್ನು ತಿನ್ನಬಾರದು. ಬ್ರಾಹ್ಮಣನಾದವನು ಇಂತಹ ಮಾದಕ ವಸ್ತು ಸೇವನೆಯಿಂದ ಮತ್ತನಾಗಿ ಅಮೇಧ್ಯದಲ್ಲಿಯೂ ಬೀಳಬಹುದು. ಅವೈದಿಕವಾಗಿಯೂ ವ್ಯವಹರಿಸಬಹುದು ಇತರ ಅಕಾರ್ಯಗಳನ್ನೂ ಮಾಡಬಹುದು. ಯಾವ ಬ್ರಾಹ್ಮಣನ ದೇಹದಲ್ಲಿರುವ ವೇದವು ಒಂದಾವರ್ತಿ ಮದ್ಯದಿಂದ ನೆನಸಲ್ಪಟ್ಟದ್ದೇ ಆದರೆ, ಅವನ ಬ್ರಾಹ್ಮಣ್ಯವೇ ಹೊರಹೊರಡುತ್ತದೆ. ಅವನು ಶೂದ್ರನೂ ಆಗುತ್ತಾನೆ. ಸುರಾಪಾನದ ಪ್ರಾಯಶ್ಚಿತ್ತವನ್ನು ವಿಚಿತ್ರ ಕ್ರಮದಿಂದ ಹೇಳಿ ಆಯಿತು. ಇನ್ನು ಮುಂದೆ ಸುವರ್ಣ ಚೌರ್ಯಕ್ಕೆ ಪ್ರಾಯಶ್ಚಿತ್ತವನ್ನು ಹೇಳುತ್ತೇನೆ.

೪೭-೫೪. ಸುವರ್ಣ ಚೌರ್ಯವನ್ನು ಮಾಡಿದ ಬ್ರಾಹ್ಮಣನು ರಾಜನ ಸಮೀಪಕ್ಕೆಹೋಗಿ ತನ್ನ ದುಷ್ಕರ್ಮವನ್ನು ಹೇಳಿ ನನ್ನನ್ನು ಶಿಕ್ಷಿಸಿ ಎಂದು ಕೇಳಬೇಕು. ರಾಜನು ಮುಸಲಾಯುಧದಿಂದ ಒಂದೇ ತಾಡನದಿಂದ ಅವನನ್ನು ಕೊಲ್ಲಬೇಕು.

ತಪಸಾಪನುನುತ್ಸುಸ್ತು ಸುವರ್ಣಸ್ತೇಯಜಂ ಮಲಂ ।
ಚೀರವಾಸಾದ್ವಿಜೋಽರಣ್ಯೇ ಚರೇದ್ಬ್ರಹ್ಮಹಣೋ ವ್ರತಂ ॥ ೪೯ ॥

ಏತೈರ್ವ್ರತೈರಪೋಹೇತ ಪಾಪಂ ಸ್ತೇಯಕೃತಂ ದ್ವಿಜಃ ।
ಗುರುಸ್ತ್ರೀಗಮನೀಯಂ ತು ವ್ರತೈರೇತೈರಪಾನುದೇತ್ ॥ ೫೦ ॥

ಗುರುತಲ್ಪ್ಯಭಿಭಾಷ್ಯೈನಃ ಕುಂಭೇ ಸ್ವಪ್ಯಾದಯೋಮಯೇ ।
ಸೂರ್ಮಿಂ ಜ್ವಲಂತೀಂ ವಾಶ್ಲಿಷ್ಯ ಮೃತ್ಯುನಾ ಸ ವಿಶುಧ್ಯತಿ ॥ ೫೧ ॥

ಸ್ವಯಂ ವಾ ಶಿಶ್ನವೃಷಣಾವುತ್ಕೃತ್ಯಾಧಾಯ ಚಾಂಜಲೌ ।
ನೈಋತೀಂ ದಿಶಮಾತಿಷ್ಠೇದಾನಿಪಾತಾದಜಿಹ್ಮಗಃ ॥ ೫೨ ॥

ಖಟ್ವಾಂಗೀ ಚೀರವಾಸಾ ವಾ ಶ್ಮಶ್ರುಲೋ ವಿಜನೇ ವನೇ ।
ಪ್ರಾಜಾಪತ್ಯಂ ಚರೇತ್ಕೃಚ್ಛ್ರಂ ತ್ವಬ್ದಮೇಕಂ ಸಮಾಹಿತಃ ॥ ೫೩ ॥

---

ಈ ರೀತಿಯಾದ ವಧದಿಂದ ಅವನು ಶುದ್ಧನಾಗುತ್ತಾನೆ. ಅಥವಾ ತಪಸ್ಸಿನಿಂದಲೂ ಶುದ್ಧಿಹೊಂದಬಹುದು. ತಪಸ್ಸಿನಿಂದ ಪಾಪನಾಶವನ್ನು ಅಪೇಕ್ಷಿಸುವವನು ನಾರು ಮಡಿಯನ್ನುಟ್ಟು ಕಾಡಿನಲ್ಲಿ ಬ್ರಹ್ಮಹತ್ಯೆಗೆ ಹೇಳಿರುವ ವ್ರತವನ್ನೇ ಆಚರಿಸಬೇಕು. ಈ ವ್ರತಗಳಿಂದ ಚೌರ್ಯಪಾಪವನ್ನು ಬ್ರಾಹ್ಮಣನು ಹೋಡಲಾಡಿಸಕೊಳ್ಳಬೇಕು. ಗುರುಸ್ತ್ರೀಗಮನದಿಂದುಂಟಾದ ಪಾಪಗಳನ್ನು ಈ ವ್ರತಗಳಿಂದ ಹೋಗಲಾಡಿಸಿಕೊಳ್ಳಬೇಕು. ಗುರುತಲ್ಪಗಾಮಿಯು ತನ್ನ ಕಾರ್ಯವನ್ನು ಹೇಳಿಕೊಂಡು ಕಬ್ಬಿಣದ ಕುಂಭಗಳಲ್ಲಿ ಮಲಗಬೇಕು. ಕಾದ ಕಬ್ಬಿಣದ ಪ್ರತಿಮೆಯನ್ನು ಆಲಿಂಗಿಸಿ ಮರಣದಿಂದ ಶುದ್ಧನಾಗುತ್ತಾನೆ. ಅಥವಾ ತನ್ನ ಶಿಶ್ನವೃಷಣವನ್ನು ತಾನೇ ಛೇದಿಸಿ ಬೊಗಸಯಲ್ಲಿಟ್ಟುಕೊಂಡು ನೈಋತ್ಯದಿಕ್ಕಿಗೆ ಅಭಿಮುಖನಾಗಿ ನೆಲಕ್ಕೆ ಬೀಳುವವರಿಗೂ ನೆಟ್ಟಗೆ ಓಡಬೇಕು. ಅಥವಾ ಖಟ್ವಾಙ್ಗವೆಂಬ ಮುನಿಚಿಹ್ನೆಯನ್ನು ಧರಿಸಿ ನಾರುವಸ್ತ್ರಧಾರಿಯಾಗಿ ಗಡ್ಡಮೀಸೆಗಳನ್ನು ತೆಗೆಯದೆ ನಿರ್ಜನವಾದ ವನದಲ್ಲಿದ್ದು ಪ್ರಾಜಾಪತ್ಯಕೃಚ್ಛ್ರವನ್ನು ಒಂದು ವರ್ಷಪೂರ್ತಿ ಜಾಗರೂಕತೆಯಿಂದ ಆಚರಿಸಬೇಕು. ಅಥವಾ ನಿಯಮದೊಡನೆ ಮೂರುತಿಂಗಳು ಪೂರ್ತಿ ಚಾಂದ್ರಾಯಣ

ಚಾನ್ದ್ರಾಯಣಂ ವಾ ತ್ರೀನ್ಮಾಸಾನಭ್ಯಸೇನ್ನಿಯತೇಂದ್ರಿಯಃ ।
ಹವಿಷ್ಯೇಣ ಯವಾಗ್ವಾ ವಾ ಗುರುತಲ್ಪಾಪನುತ್ತಯೇ ॥ ೫೪ ॥

ಏಭಿರ್ವ್ರತೈರಪೋಹೇಯುರ್ಮಹಾಪಾತಕಿನೋ ಮಲಾನ್ ।
ಉಪಪಾತಕಿನಸ್ತ್ವೇವಂ ವಿವಿಧೈರ್ನಿಯಮೈರಪಿ ॥ ೫೫ ॥

ಉಪಪಾತಕಸಂಯುಕ್ತೋ ಗೋಘ್ನೋ ಮಾಸಂ ಯವಾನ್ ಪಿಬೇತ್ ।
ಕೃತವಾಪೋ ವಸೇದ್ಗೋಷ್ಠೇ ಚರ್ಮಣಾ ತೇನ ಸಂವೃತಃ ॥ ೫೬ ॥

ಚತುರ್ಥಕಾಲಮಶ್ನೀಯಾದಕ್ಷಾರಲವಣಂ ಮಿತಂ ।
ಗೋಮೂತ್ರೇಣಾಚರೇತ್ಸ್ನಾನಂ ದ್ವೌ ಮಾಸೌ ನಿಯತೇಂದ್ರಿಯಃ ॥ ೫೭ ॥

ದಿವಾನುಗಚ್ಛೇತ್ತಾ ಗಾಸ್ತು ತಿಷ್ಠನ್ನೂರ್ಧ್ವಂ ರಜಃ ಪಿಬೇತ್ ।
ಶುಶ್ರೂಷಿತ್ವಾ ನಮಸ್ಕೃತ್ಯ ರಾತ್ರೌ ವೀರಾಸನಂ ವಸೇತ್ ॥ ೫೮ ॥

ತಿಷ್ಠನ್ತೀಷ್ವೇವ ತಿಷ್ಠೇತ ಚರನ್ತೀಷ್ವಪ್ಯನುವ್ರಜೇತ್ ।
ಆಸೀನಾಸು ತಥಾಸೀತ ನಿಯತೋ ವೀತಮತ್ಸರಃ ॥ ೫೯ ॥

---

ವನ್ನಾಚರಿಸಬೇಕು. ಹವಿಸ್ಯ, ಅಥವಾ ಗಂಜಿ ಇವುಗಳಿಂದಲೇ ಬದುಕಿದ್ದು ಗುರು ತಲ್ಪಗಮನದಿಂದಾದ ಪಾಪವನ್ನು ಇವುಗಳಲ್ಲಿ ಯಾವುದಾದರೊಂದು ವ್ರತದಿಂದ ಹೋಗಲಾಡಿಸಿಕೊಳ್ಳಬೇಕು.

೫೫-೬೦. ಉಪಪಾತಕಗಳಿಂದ ಕೂಡಿದವರೂ ಸಹ ನಾನಾವಿಧಗಳಾದ ಈ ನಿಯಮಗಳಿಂದಲೇ ಪಾಪವನ್ನು ಹೋಗಲಾಡಿಸಿಕೊಳ್ಳಬೇಕು. ಉಪಪಾತಕಗಳಲ್ಲಿ ಗೋಹತ್ಯೆ ಮಾಡಿದವನು ಒಂದುಮಾಸ ಯವ (ಯಾವಕ)ವೆಂದು ಹೇಳಲಾಗಿರುವ ಪೇಯವನ್ನು ಕುಡಿಯಬೇಕು. ವಪನಮಾಡಿಕೊಂಡು, ಗೋಚರ್ಮ ಹೋದ್ದು ಗೋಷ್ಠದಲ್ಲಿಯೇ ವಾಸಿಸಬೇಕು ಮಿತವಾಗಿಯೂ, ಕ್ಷಾರಲವಣವಿಲ್ಲದೆಯೂ ಇರುವ ಆಹಾರವನ್ನು ದಿನದ ನಾಲ್ಕನೆಯ ಭಾಗದಲ್ಲಿ ಭುಂಜಿಸಬೇಕು ಎರಡು ತಿಂಗಳು ಜಿತೇಂದ್ರಿಯತೆಯಿಂದ ಕೂಡಿದ್ದು ಗೋಮೂತ್ರದಿಂದಲೇ ಸ್ನಾನಮಾಡಬೇಕು ಹಗಲು ಗೋವುಗಳನ್ನೇ ಅನುಸರಿಸುತ್ತಾ ಗೋ ಧೂಳಿಯನ್ನೇ ನಿಂತು

**ಆತುರಾಮಭಿಶಸ್ತಾಂ ವಾ ಸಿಹ್ಮವ್ಯಾಘ್ರಾದಿಭಿರ್ಭಯೈಃ ।**
**ಪತಿತಾಂ ಪಂಕಮಗ್ನಾಂ ಚ ಸರ್ವಪ್ರಾಣೈರ್ವಿಮೋಚಯೇತ್ ॥ ೬೦ ॥**

**ಉಷ್ಣೇ ವರ್ಷತಿ ಶೀತೇ ವಾ ಮಾರುತೇ ವಾತಿ ವಾ ಭೃಶಂ ।**
**ನ ಕುರ್ವೀತಾತ್ಮನಃ ತ್ರಾಣಂ ಗೋರಕೃತ್ವಾ ತು ಶಕ್ತಿತಃ ॥ ೬೧ ॥**

**ಆತ್ಮನೋ ಯದಿ ವಾನ್ಯೇಷಾಂ ಗೇಹೇ ಕ್ಷೇತ್ರೇಽಥವಾ ಖಲೇ ।**
**ಭಕ್ಷಯಂತೀಂ ನ ಕಥಯೇತ್ಪಿಬನ್ತೀಂ ಚೈವ ವತ್ಸಕಂ ॥ ೬೨ ॥**

**ಅನೇನ ವಿಧಿನಾ ಯಸ್ತು ಗೋಘ್ನೋ ಗಾ ಅನುಗಚ್ಛತಿ ।**
**ಸ ಗೋಹತ್ಯಾಕೃತಂ ಪಾಪಂ ತ್ರಿಭಿರ್ಮಾಸೈರ್ವ್ಯಪೋಹತಿ ॥ ೬೩ ॥**

**ವೃಷಭೈಕಾದಶಾ ಗಾಶ್ಚ ದದ್ಯಾತ್ಸುಚರಿತವ್ರತಃ ।**
**ಅವಿದ್ಯಮಾನೇ ಸರ್ವಸ್ವಂ ವೇದವಿದ್ಭ್ಯೋ ನಿವೇದಯೇತ್ ॥ ೬೪ ॥**

---

ಪಾನಮಾಡುತ್ತಿರಬೇಕು. ಶುಶ್ರೂಷ ಮಾಡಿ ನಮಸ್ಕರಿಸುತ್ತಾ ರಾತ್ರಿಯಲ್ಲಿ ವೀರಾಸನ ಹೊಂದಿ ಜಾಗರಣೆಯಿಂದಿರಬೇಕು. ಗೋವುಗಳು ನಿಂತಿರುವಾಗ ತಾನೂ ನಿಲ್ಲುತ್ತಲೂ, ಸಂಚರಿಸುವಾಗ ತಾನೂ ಸಂಚರಿಸುತ್ತಲೂ, ಮಲಗಿರುವಾಗ ಕುಳಿತೂ ಇದ್ದು ಮತ್ಸರವಿಲ್ಲದೆ ಸೇವಿಸಬೇಕು. ರೋಗಗ್ರಸ್ತಳಾಗಲಿ, ಸಿಂಹ, ಹುಲಿ ಮುಂತಾದವುಗಳಿಂದ ಭಯಹೊಂದಿ ಅಸ್ವಸ್ಥಗಳಾಗಲಿ ಅಥವಾ ಬಿದ್ದಾಗಲಿ, ಕೆಸರಿನಲ್ಲಿ ಸಿಕ್ಕಿಕೊಂಡಾಗಲಿ ಅವು ದುಃಖಪಟ್ಟಲ್ಲಿ ಸರ್ವಪ್ರಯತ್ನದಿಂದಲೂ ಅವನ್ನು ಬಿಡಿಸಬೇಕು.

೬೧-೬೬. ಬಿಸಿಯಾದ ಅಥವಾ ತಂಡಿಯಾದ ಗಾಳಿಯು ಹೆಚ್ಚಾಗಿ ಬೀಸಿ ತೊಂದರೆಯಾದಲ್ಲಿ ಗೋವಿಗೆ ಯಥಾಶಕ್ತಿ ರಕ್ಷಣೆ ಮಾಡದೆ ತಾನೇ ತನ್ನನ್ನು ರಕ್ಷಿಸಿಕೊಳ್ಳಕೂಡದು. ತನ್ನ ಅಥವಾ ಇತರರ ಮನೆಯಲ್ಲಾಗಲಿ, ಕಣದಲ್ಲಾಗಲಿ, ಹೊಲಗದ್ದೆಗಳಲ್ಲಾಗಲಿ ಮೇಯುತ್ತಿರುವ ಹಸುವನ್ನು ಹೇಳಬಾರದು ಹಾಲು ಕುಡಿಯುತ್ತಿರುವ ಕರುವನ್ನೂ ಹೇಳಬಾರದು. ಈ ವಿಧಾನದಿಂದ ಗೋಹತ್ಯೆ ಮಾಡಿದವನು ಗೋವುಗಳನ್ನು ಸೇವಿಸಿದಲ್ಲಿ ಮೂರು ತಿಂಗಳ ಕಾಲದಲ್ಲಿ ಅವನು ಗೋಹತ್ಯಾದೋಷವನ್ನು ಹೋಗಲಾಡಿಸಿಕೊಳ್ಳುತ್ತಾನೆ. ಹೀಗೆ ಸಾವಧಾನದಿಂದ ವ್ರತವನ್ನು ಆಚರಿಸಿದ ನಂತರ ಹತ್ತು ಗೋವುಗಳನ್ನೂ, ಒಂದು ವೃಷಭವನ್ನೂ

ಏತದೇವವ್ರತಂ ಕುರ್ಯುರುಪಪಾತಕಿನೋ ದ್ವಿಜಾಃ ।
ಅವಕೀರ್ಣವಿಶುದ್ಧ್ಯರ್ಥಂ ಚಾಂದ್ರಾಯಣಮಥಾಪಿ ವಾ ॥ ೬೫ ॥

ಅವಕೀರ್ಣೀ ತು ಕಾಣೇನ ಗರ್ದಭೇನ ಚತುಷ್ಪಥೇ ।
ಪಾಕಯಜ್ಞವಿಧಾನೇನ ಯಜೇತ ನಿರ್‍ಋತಿಂ ನಿಶಿ ॥ ೬೬ ॥

ಹುತ್ವಾಗ್ನೌ ವಿಧಿವದ್ಧೋಮಾನಂತತಶ್ಚ ಸಮೇತ್ಯೃಚಾ ।
ವಾತೇಂದ್ರಗುರುವಹ್ನೀನಾಂ ಜುಹುಯಾತ್ಸರ್ಪಿಷಾಹುತೀಃ ॥ ೬೭ ॥

ಕಾಮತೋ ರೇತಸಸ್ಸೇಕಂ ವ್ರತಸ್ಥಸ್ಯ ದ್ವಿಜನ್ಮನಃ ।
ಅತಿಕ್ರಮಂ ವ್ರತಸ್ಯಾಹುಃ ಧರ್ಮಜ್ಞಾ ಬ್ರಹ್ಮವಾದಿನಃ ॥ ೬೮ ॥

ಮಾರುತಃ ಪುರುಹೂತಂ ಚ ಗುರುಂ ಪಾವಕಮೇವ ಚ ।
ಚತುರೋ ವ್ರತಿನೋಽಭ್ಯೇತಿ ಬ್ರಾಹ್ಮಂ ತೇಜೋಽವಕೀರ್ಣಿನಃ ॥ ೬೯ ॥

ದಾನಮಾಡಬೇಕು. ಅದಕ್ಕೆ ಶಕ್ತಿ ಇಲ್ಲದಿದ್ದಲ್ಲಿ ತನ್ನಲ್ಲಿರುವ ಸರ್ವಧನವನ್ನೂ ವೇದಾಧ್ಯಾಯಿಗಳಿಗೆ ದಾನಮಾಡಬೇಕು. ಇತರ ಉಪಪಾತಕಗಳಿಗೂ ಸರ್ವಸ್ವ ದಾನರೂಪವಾದ ಪ್ರಾಯಶ್ಚಿತ್ತವನ್ನೇ ಬ್ರಾಹ್ಮಣನು ಮಾಡಬೇಕು. (ಬ್ರಹ್ಮಚರ್ಯ ಲೋಪದಿಂದ) ಅವಕೀರ್ಣಿಯಾದವನು ಶುದ್ಧಿಗಾಗಿ ಚಾಂದ್ರಾಯಣವನ್ನು ಆಚರಿಸಬೇಕು. ಅಥವಾ ಅವಕೀರ್ಣಿಯಾದವನು ನಾಲ್ಕು ಬೀದಿಗಳು ಸೇರುವ ಸ್ಥಳದಲ್ಲಿ ಪಾಕಯಜ್ಞವಿಧಾನದಂತೆ ನಿರ್‍ಋತಿಯನ್ನುದ್ದೇಶಿಸಿ ಕುರುಡಾದ ಕತ್ತೆ ಯಿಂದ ರಾತ್ರಿಯಲ್ಲಿ ಯಾಗಮಾಡಬೇಕು.

೬೭-೬೯. ಅಗ್ನಿಯಲ್ಲಿ ಯಥಾವಿಧಿಯಾಗಿ ಹೋಮಮಾಡಿ ಕೊನೆಯಲ್ಲಿ ಸಮಾ ಎಂಬ ಋಕ್ಕಿನಿಂದ ವಾಯು, ಇಂದ್ರ, ಗುರು, ಅಗ್ನಿ ಇವರುಗಳಿಗೆ ಆಜ್ಯಾಹುತಿ ಯನ್ನು ಮಾಡಬೇಕು. ವ್ರತದಲ್ಲಿರುವ ಬ್ರಾಹ್ಮಣನು ಇಚ್ಛೆಯಿಂದ ರೇತಸ್ಸೇಕ ಹೊಂದಿದಲ್ಲಿ ಇದು ವ್ರತಭಂಗಕಾರಿಯೇ ಆಗುತ್ತದೆಂದು ಧಾರ್ಮಿಕರಾದ ಬ್ರಹ್ಮಜ್ಞರು ಹೇಳುತ್ತಾರೆ. ಇಂತಹ ಅವಕೀರ್ಣಿಯ ಬ್ರಾಹ್ಮ ತೇಜಸ್ಸು, ಮರುತ್ತುಗಳು ಇಂದ್ರ, ಬೃಹಸ್ಪತಿ, ಅಗ್ನಿ ಈ ನಾಲ್ಕು ಜನರನ್ನೂ ಹೋಗಿ ಸೇರುತ್ತದೆ. ಇಂತಹ ಪಾಪವು ಉಂಟಾದಲ್ಲಿ ಕತ್ತೆಯ ಚರ್ಮವನ್ನು ಉಟ್ಟು ಏಳು ಮನೆಗಳಿಗೆ ಹೋಗಿ

ಏತಸ್ಮಿನ್ನೇನಸಿ ಪ್ರಾಪ್ತೇ ವಸಿತ್ವಾ ಗರ್ದಭಾಜಿನಂ ।
ಸಪ್ತಾಗಾರಾಂಶ್ಚರೇದ್ಭೈಕ್ಷ್ಯಂ ಸ್ವಕರ್ಮ ಪರಿಕೀರ್ತಯೇತ್ ॥ ೭೦ ॥

ತೇಭ್ಯೋ ಲಬ್ಧೇನ ಭೈಕ್ಷೇಣ ವರ್ತಯನ್ನೇಕಕಾಲಿಕಂ ।
ಉಪಸ್ಪೃಶಂಸ್ತ್ರಿಷವಣಂ ಚಾಬ್ದೇನ ಸ ವಿಶುಧ್ಯತಿ ॥ ೭೧ ॥

ಜಾತಿಭ್ರಂಶಕರಂ ಕರ್ಮ ಕೃತ್ವಾ ನ್ಯತಮಮಿಚ್ಛಯಾ ।
ಚರೇತ್ಸಾಂತಪನಂ ಕೃಚ್ಛ್ರಂ ಪ್ರಾಜಾಪತ್ಯಮನಿಚ್ಛಯಾ ॥ ೭೨ ॥

ಸಂಕರಾಪಾತ್ರಕೃತ್ಯಾಸು ಮಾಸಂ ಶೋಧನಮೈಂದವಂ ।
ಮಲಿನೀಕರಣೀಯೇಷು ತಪ್ತಃ ಸ್ಯಾದ್ಯಾವಕಂ ತ್ರ್ಯಹಂ ॥ ೭೩ ॥

ತುರೀಯಂ ಬ್ರಹ್ಮಹತ್ಯಾಯಾಃ ಕ್ಷತ್ರಿಯಸ್ಯ ವಧೇ ಸ್ಮೃತಂ ।
ವೈಶ್ಯೇಽಷ್ಟಮಾಂಶಂ ವೃತ್ತಸ್ಥೇ ಶೂದ್ರೇ ಜ್ಞೇಯಂ ತು ಷೋಡಶಂ ॥ ೭೪ ॥

---

ಭಿಕ್ಷೆಮಾಡಬೇಕು. ತನ್ನ ಅಕಾರ್ಯವನ್ನೂ ಘೋಷಣೆ ಮಾಡಬೇಕು. ಅವರಿಂದ ಲಭಿಸಿದ ಭಿಕ್ಷೆಯಿಂದ ಒಂದೇ ಕಾಲ ಊಟಮಾಡುತ್ತಾ ಇದ್ದು ಮೂರು ಕಾಲದಲ್ಲಿಯೂ ಸ್ನಾನಮಾಡುತ್ತಾ ಇದ್ದು ಒಂದು ವರ್ಷದಲ್ಲಿ ಶುದ್ಧಿಹೊಂದುತ್ತಾನೆ. ಜಾತಿಭ್ರಂಶಕಾರಿಗಳಾದ ಕರ್ಮಗಳಲ್ಲಿ ಯಾವುದಾದರೊಂದನ್ನು ಮಾಡಿದರೂ ಬುದ್ಧಿಪೂರ್ವಕವಾಗಿ ಮಾಡಿದ್ದಲ್ಲಿ ಸಾಂತಪನವೆಂಬ ಕೃಚ್ಛ್ರವನ್ನೂ ಅಬುದ್ಧಿಪೂರ್ವಕವಾಗಿ ಮಾಡಿದ್ದಲ್ಲಿ ಪ್ರಾಜಾಪತ್ಯ ಕೃಚ್ಛ್ರವನ್ನೂ ಆಚರಿಸಬೇಕು. ಸಂಕರಾಪಾದಕ ಮತ್ತು ಅಪಾತ್ರೀಕರಣವೆಂಬ ಪಾಪಕರ್ಮ ಮಾಡಿದವನು ಒಂದು ತಿಂಗಳು ಚಾಂದ್ರಾಯಣವನ್ನೂ ಮಲಿನೀಕರಣವೆಂಬ ಪಾಪಕರ್ಮ ಮಾಡಿದವನು ಮೂರು ದಿನ ಕುದಿದಗಂಜಿಯನ್ನೂ ಸೇವಿಸಬೇಕು.

೭೪–೭೮. ಕ್ಷತ್ರಿಯರನ್ನು ವಧಮಾಡಿದ ಬ್ರಾಹ್ಮಣನು ಬ್ರಹ್ಮಹತ್ಯೆಗೆ ಹೇಳಿರುವ ಪ್ರಾಯಶ್ಚಿತ್ತದಲ್ಲಿ ನಾಲ್ಕನೆಯೊಂದು ಭಾಗವನ್ನೂ, ವೈಶ್ಯನನ್ನು ವಧಮಾಡಿದಲ್ಲಿ, ಎಂಟನೆಯ ಒಂದು ಭಾಗವನ್ನೂ, ಸದ್ವೃತ್ತದಲ್ಲಿರುವ ಶೂದ್ರನನ್ನು ವಧಮಾಡಿದವನು, ಹದಿನಾರನೆಯ ಒಂದು ಭಾಗವನ್ನೂ ಆಚರಿಸಬೇಕು, ಬ್ರಾಹ್ಮಣನಾದವನು ಅಬುದ್ಧಿಪೂರ್ವಕವಾಗಿ ಕ್ಷತ್ರಿಯನನ್ನು ಕೊಂದದ್ದೇ ಆದರೆ, ಒಂದು ವೃಷಭದೊಡನೆ

ಅಕಾಮತಸ್ತು ರಾಜನ್ಯಂ ವಿನಿಪಾತ್ಯ ದ್ವಿಜೋತ್ತಮಃ ।
ವೃಷಭೈಕಂ ಸಹಸ್ರಂ ಗಾಃ ದದ್ಯಾಚ್ಛುದ್ಧ್ಯರ್ಥಮಾತ್ಮನಃ ॥ ೭೫ ॥

ತ್ರ್ಯಬ್ದಂ ಚರೇದ್ವಾ ನಿಯತೋ ಜಟೀ ಬ್ರಹ್ಮಹಣೋ ವ್ರತಂ ।
ವಸನ್ ದೂರತರೇ ಗ್ರಾಮೇ ವೃಕ್ಷಮೂಲನಿಕೇತನಃ ॥ ೭೬ ॥

ಏತದೇವ ಚರೇದಬ್ದಂ ಪ್ರಾಯಶ್ಚಿತ್ತಂ ದ್ವಿಜೋತ್ತಮಃ ।
ಪ್ರಮಾಪ್ಯ ವೈಶ್ಯಂ ವೃತ್ತಸ್ಥಂ ದದ್ಯಾದ್ವೈ ಶತಕಂ ಗವಾಂ ॥ ೭೭ ॥

ಏತದೇವ ವ್ರತಂ ಕೃತ್ಸ್ನಂ ಷಣ್ಮಾಸಾನ್ ಶೂದ್ರಹಾ ಚರೇತ್ ।
ವೃಷಭೈಕಾದಶಾ ವಾಪಿ ದದ್ಯಾದ್ವಿಪ್ರಾಯ ಗಾಃ ಸಿತಾಃ ॥ ೭೮ ॥

ಮಾರ್ಜಾರನಕುಲಂ ಹತ್ವಾ ಚಾಷಂ ಮಂಡೂಕಮೇವ ಚ ।
ಶ್ವಗೋಧೋಲೂಕಕಾಕಾಂಶ್ಚ ಶೂದ್ರಹತ್ಯಾವ್ರತಂ ಚರೇತ್ ॥ ೭೯ ॥

ಪಯಃ ಪಿಬೇತ್ತ್ರಿರಾತ್ರಂ ವಾ ಯೋಜನಂ ವಾಧ್ವನೋ ವ್ರಜೇತ್ ।
ಉಪಸ್ಪೃಶೇತ್ ಸ್ರವಂತ್ಯಾಂ ವಾ ಸೂಕ್ತಂ ವಾಬ್ದೈವತಂ ಜಪೇತ್ ॥ ೮೦ ॥

---

ಸಹಸ್ರ ಗೋವುಗಳನ್ನು ಶುದ್ಧಿಗಾಗಿ ದಾನಮಾಡಬೇಕು ಅಥವಾ ಜಟಾಧಾರಿಯಾಗಿ ನಿಯಮದಿಂದಿದ್ದು ಮೂರು ವರ್ಷಕಾಲ ಬ್ರಹ್ಮಹತ್ಯೆಯ ಪ್ರಾಯಶ್ಚಿತ್ತವನ್ನೇ ಆಚರಿಸಬೇಕು ಗ್ರಾಮಕ್ಕೆ ದೂರದಲ್ಲಿ ಮರದ ಕೆಳಗೆ ವಾಸಿಸಬೇಕು. ಸದ್ವೃತ್ತಿಯಲ್ಲಿರುವ ವೈಶ್ಯನನ್ನು ಕೊಂದರೂ ಈ ವ್ರತವನ್ನೇ ಒಂದು ವರ್ಷ ಪೂರ್ತಿ ಆಚರಿಸಬೇಕು. ಅಥವಾ ನೂರು ಗೋವುಗಳನ್ನು ದಾನಮಾಡಬೇಕು. ಶೂದ್ರನನ್ನು ಕೊಂದಲ್ಲಿ ಈ ವ್ರತವನ್ನೇ ಆರು ತಿಂಗಳು ಪೂರ್ತಿ ಮಾಡಬೇಕು ಅಥವಾ ಒಂದು ವೃಷಭದೊಡನೆ ಬಿಳುಪಾದ ಹತ್ತು ಗೋವುಗಳನ್ನು ಬ್ರಾಹ್ಮಣನಿಗೆ ದಾನಮಾಡಬೇಕು.

೭೯-೮೩. ಬೆಕ್ಕು, ಮುಂಗಸಿ, ಕಿಕೀದಿವಿ ಎಂಬ ಪಕ್ಷಿ, ಕಪ್ಪೆ, ನಾಯಿ, ಉಡು, ಗೂಬೆ, ಕಾಗೆ ಇವನ್ನು ಕೊಂದವನೂ ಶೂದ್ರ ಹತ್ಯೆಗೆ ಹೇಳಿರುವ ಪ್ರಾಯಶ್ಚಿತ್ತವನ್ನೇ ಆಚರಿಸಬೇಕು ಅಥವಾ ಮೂರು ರಾತ್ರಿ ಕೇವಲ ಕ್ಷೀರಪಾನದಲ್ಲಿಯೇ ಇರಬೇಕು ಅಥವಾ ಒಂದು ಯೋಜನದ ದಾರಿಯನ್ನಾದರೂ ನಡೆಯಬೇಕು ಅಥವಾ ಮಹಾನದಿಯಲ್ಲಿ ಸ್ನಾನಮಾಡಬೇಕು ಅಥವಾ ವರುಣ ಸೂಕ್ತವನ್ನು ಜಪಿಸಬೇಕು.

ಅಭ್ರಿಂ ಕಾರ್ಷ್ಣಾಯಸೀಂ ದದ್ಯಾತ್ಸರ್ಪಂ ಹತ್ವಾ ದ್ವಿಜೋತ್ತಮಃ ।
ಪಲಾಲಭಾರಕಂ ಷಂಡೇ ಸೈಸಕಂ ಚೈಕಮಾಷಕಂ || ೮೧ ||

ಘೃತಕುಂಭಂ ವರಾಹೇ ತು ತಿಲದ್ರೋಣಂ ತು ತಿತ್ತಿರೌ ।
ಶುಕೇ ದ್ವಿಹಾಯನಂ ವತ್ಸಂ ಕ್ರೌಂಚಂ ಹತ್ವಾ ತ್ರಿಹಾಯಣಂ | ೮೨ ||

ಹತ್ವಾ ಹಂಸಂ ಬಲಾಕಾಂ ಚ ಬಕಂ ಬರ್ಹಿಣಮೇವ ಚ ।
ವಾನರಂ ಶ್ಯೇನಭಾಸೌ ಚ ಸ್ಪರ್ಶಯೇದ್ಬ್ರಾಹ್ಮಣಾಯ ಗಾಂ || ೮೩ ||

ವಾಸೋ ದದ್ಯಾದ್ಧಯಂ ಹತ್ವಾ ಪಂಚನೀಲಾನ್ ವೃಷಾಂಶ್ಚ ವಾ ।
ಅಜಮೇಷಾವನಡ್ವಾಹಂ ಖರಂ ಹತ್ವೈಕಹಾಯನಂ || ೮೪ ||

ಕ್ರವ್ಯಾದಂ ತು ಮೃಗಂ ಹತ್ವಾ ಧೇನುಂ ದದ್ಯಾತ್ಪಯಸ್ವಿನೀಂ ।
ಅಕ್ರವ್ಯಾದಂ ವತ್ಸತರೀಮುಷ್ಟ್ರಂ ಹತ್ವಾ ತು ಕೃಷ್ಣಲಂ || ೮೫ ||

---

ಬ್ರಾಹ್ಮಣನು ಸರ್ಪವನ್ನು ಹವನಮಾಡಿದ್ದಲ್ಲಿ, ಕಬ್ಬಿಣದ ಗುದ್ದಲಿಯನ್ನು ದಾನ ಮಾಡಬೇಕು. ಷಂಡನನ್ನು ಕೊಂದಲ್ಲಿ ಮಾಂಸ ಭಾರವನ್ನಾಗಲಿ, ಮಾಷಪರಿಮಿತ ವಾದ ಸೀಸವನ್ನಾಗಲಿ ದಾನಮಾಡಬೇಕು. ಹಂದಿಯನ್ನು ಕೊಂದಲ್ಲಿ, ಆಜ್ಯದಿಂದ ತುಂಬಿದ ಕುಂಭವನ್ನೂ ತಿತ್ತಿರಿ ಪಕ್ಷಿಯನ್ನು ಕೊಂದಲ್ಲಿ, ಒಂದು ಕೊಳಗ ಎಳ್ಳನ್ನೂ. ಗಿಣಿಯನ್ನು ಕೊಂದಲ್ಲಿ, ಎರಡು ವರ್ಷದ ಕರುವನ್ನೂ, ಬಕಪಕ್ಷಿಯನ್ನು ಕೊಂದಲ್ಲಿ, ಮೂರು ವರ್ಷದ ಕರುವನ್ನೂ, ಹಂಸ, ಕೊಕ್ಕರೆ ಆದರ ಜಾತಿಗಳು. ನವಿಲು, ಕಪಿ, ಗಿಡುಗ, ಭಾಸ ಇವನ್ನು ಕೊಂದಲ್ಲಿ, ಗೋವನ್ನೂ ಸಹ ಬ್ರಾಹ್ಮಣನಿಗೆ ದಾನ ಮಾಡಬೇಕು. ಕುದುರೆಯನ್ನು ಕೊಂದಲ್ಲಿ, ವಸ್ತ್ರವನ್ನಾಗಲಿ, ಕಪ್ಪಾದ ಐದು ಎತ್ತು ಗಳನ್ನಾಗಲಿ ದಾನಮಾಡಬೇಕು.

೮೪-೮೮. ಆಡು, ಕುರಿ, ಎತ್ತು, ಕತ್ತೆ ಇವು ಒಂದು ವರ್ಷ ತುಂಬಿರುವಾಗ ಹನನ ಹೊಂದಿದಲ್ಲಿ ಮತ್ತು ಮಾಂಸಾಹಾರಿಯಾದ ಮೃಗವನ್ನು ಕೊಂದಲ್ಲಿಯೂ, ಕರೆಯುವ ಹಸುವನ್ನು ದಾನಮಾಡಬೇಕು. ಮಾಂಸಾಹಾರಿಯಲ್ಲದ ಮೃಗವು ಹತ ವಾದಲ್ಲಿ, ಕರುವನ್ನೂ. ಒಂಟೆಯು ಹತವಾದಲ್ಲಿ, ಗುಲಗಂಜಿಯನ್ನೂ ದಾನಮಾಡ ಬೇಕು ವಾನಪ್ರಸ್ಥಾಶ್ರಮದಲ್ಲಿರುವ ನಾಲ್ಕು ವರ್ಣದಲ್ಲಿಯೂ ಇರುವ ಸ್ತ್ರೀಯನ್ನು ವಧಮಾಡಿದಲ್ಲಿ, ಕ್ರಮವಾಗಿ ಕೃಷ್ಣಾಜಿನ, ಧನುಸ್ಸು, ಆಡು, ಕುರಿ ಇವನ್ನು ದಾನ

ಚೇನಾಕಾರ್ಮುಕಬಸ್ತಾವೀನ್ಪೃಥಗ್ದದ್ಯಾದ್ವಿಶುದ್ಧಯೇ ।
ಚತುರ್ಣಾಮಪಿ ವರ್ಣಾನಾಂ ನಾರೀಂ ಹತ್ವಾ ವನಸ್ಥಿತಾಂ ॥ ೮೬ ॥

ದಾನೇನ ವಧನಿರ್ಣೇಕಂ ಸರ್ಪಾದೀನಾಮಶಕ್ನುವನ್ ।
ಏಕೈಕಶಶ್ಚರೇತ್ಕೃಚ್ಛ್ರಂ ದ್ವಿಜಃ ಪಾಪಾಪನುತ್ತಯೇ ॥ ೮೭ ॥

ಅಸ್ಥಿಮತಾಂ ತು ಸತ್ವಾನಾಂ ಸಹಸ್ರಸ್ಯ ಪ್ರಮಾಪಣೇ ।
ಪೂರ್ಣೇ ಚೇನಸ್ಯ ನಸ್ಥ್ನಾಂ ತು ಶೂದ್ರಹತ್ಯಾವ್ರತಂ ಚರೇತ್ ॥ ೮೮ ॥

ಕಿಂಚಿದೇವ ತು ವಿಪ್ರಾಯ ದದ್ಯಾದಸ್ಥಿಮತಾಂ ವಧೇ ।
ಅನಸ್ಥ್ನಾಂ ಚೈವ ಸತ್ವಾನಾಂ ಪ್ರಾಣಾಯಾಮೋ ವಿಶೋಧನಂ ॥ ೮೯ ॥

ಫಲದಾನಾಂ ತು ವೃಕ್ಷಾಣಾಂ ಛೇದನೇ ಜಪ್ಯಮೃಕ್ಶತಂ ।
ಗುಲ್ಮವಲ್ಲೀಲತಾನಾಂ ಚ ಪುಷ್ಪಿತಾನಾಂ ಚ ವೀರುಧಾಂ ॥ ೯೦ ॥

---

ಪಡೆದು ಶುದ್ಧಿ ಹೊಂದಬೇಕು. ಸರ್ಪಾದಿಗಳನ್ನು ಹನನಮಾಡಿದವನು ವಿಹಿತವಾದ ದಾನದಿಂದ ಶುದ್ಧಿಹೊಂದಲು ಅಸಮರ್ಥನಾಗಿದ್ದಲ್ಲಿ ಅಂತಹ ಬ್ರಾಹ್ಮಣನು ತನ್ನ ಪಾಪಶಮನಕ್ಕಾಗಿ ಬೇರೆ ಬೇರೆಯಾಗಿ ಒಂದೊಂದಕ್ಕೂ ಕೃಚ್ಛ್ರವನ್ನು ಆಚರಿಸಬೇಕು. ಮೂಳೆಗಳುಳ್ಳ ಪ್ರಾಣಿಗಳನ್ನು ಸಹಸ್ರಸಂಖ್ಯೆಯಲ್ಲಿ ನಾಶಮಾಡಿದಲ್ಲಿ ಅಸ್ಥಿ ಇಲ್ಲದ ಪ್ರಾಣಿಗಳನ್ನೂ ಸಹ ಮಾರಣಮಾಡಿ ಪೂರ್ಣವಾದ ಪಾಪಹೊಂದಿದ್ದಲ್ಲಿಯೂ ಶೂದ್ರ ಹತ್ಯಾ ಪ್ರಾಯಶ್ಚಿತ್ತವನ್ನೇ ಆಚರಿಸಬೇಕು.

೮೯-೯೩. ಅಸ್ಥಿಯುಳ್ಳ ಪ್ರಾಣಿಯ ಅಲ್ಪಸ್ವಲ್ಪ ವಧ ಉಂಟಾದಲ್ಲಿ ಬ್ರಾಹ್ಮಣನಿಗೆ ಅಲ್ಪಸ್ವಲ್ಪ ದಾನಮಾಡಬಹುದು ಅಸ್ಥಿ ಇಲ್ಲದಿರುವ ಪ್ರಾಣಿಗಳ ವಧವಾದಲ್ಲಿ ಪ್ರಾಣಾಯಾಮದಿಂದಲೇ ಶುದ್ಧಿಯುಂಟಾಗುತ್ತದೆ. ಫಲಪ್ರದವಾದ ವೃಕ್ಷಗಳನ್ನು ಕಡಿದು ಹಾಕಿದಲ್ಲಿ ನೂರು ಋಕ್ಕುಗಳನ್ನು ಜಪಿಸಬೇಕು. ಪೊದರು, ಬಳ್ಳಿ, ಲತೆ, ಹೂಬಿಟ್ಟಿರುವ ಲತೆಗಳು, ಅನ್ನಾದಿಗಳಿಂದ ಹೊರತಾಗಿ ಹುಟ್ಟಿ ಬೆಳೆಯುವ ಕ್ರಿಮಿಕೀಟಾದಿಗಳು ರಸಜವಾದ ಪ್ರಾಣಿಗಳು, ಫಲಪುಷ್ಪಗಳಿಗೆ ಕಾರಣವಾಗಿರುವ ವೃಕ್ಷಾದಿಗಳು ಇವನ್ನು ಛೇದಿಸಿದಲ್ಲಿ ಘೃತಪ್ರಾಶನದಿಂದ ಶುದ್ಧಿಯುಂಟಾಗುತ್ತದೆ. ವ್ಯವಸಾಯ

ಅನ್ನಾದ್ಯಜಾತಸತ್ವಾನಾಂ ರಸಜಾನಾಂ ಚ ಸರ್ವಶಃ ।
ಫಲಪುಷ್ಪೋದ್ಭವಾನಾಂ ಚ ಘೃತಪ್ರಾಶೋ ವಿಶೋಧನಂ ॥ ೯೧ ॥

ವೃಷ್ಟಜಾನಾಮೌಷಧಾನಾಂ ಜಾತಾನಾಂ ಚ ಸ್ವಯಂ ವನೆ ।
ವೃಥಾಲಂಭೇಽನುಗಚ್ಛೇದ್ಗಾ ದಿನಮೇಕಂ ಪಯೋವ್ರತಂ ॥ ೯೨ ॥

ಏತೈರ್ವ್ರತೈರಪೋಹ್ಯಂ ಸ್ಯಾದೇನೋ ಹಿಂಸಾಸಮುದ್ಭವಂ ।
ಜ್ಞಾನಾಜ್ಞಾನಾಕೃತಂ ಕೃತ್ಸ್ನಂ ಶೃಣುತಾನ್ನಾದ್ಯಭಕ್ಷಣೇ ॥ ೯೩ ॥

ಅಜ್ಞಾನಾದ್ವಾರುಣೀಂ ಪೀತ್ವಾ ಸಂಸ್ಕಾರೇಣೈವ ಶುಧ್ಯತಿ ।
ಮತಿಪೂರ್ವಮನಿರ್ದೇಶ್ಯಂ ಪ್ರಾಣಾಂತಿಕಮಿತಿ ಸ್ಥಿತಿಃ ॥ ೯೪ ॥

ಅಪಃ ಸುರಾಭಾಜನಸ್ಥಾ ಮದ್ಯಭಾಂಡಸ್ಥಿತಾಸ್ತಥಾ ।
ಪಂಚರಾತ್ರಂ ವಸೇತ್ಪೀತ್ವಾ ಶಂಖಪುಷ್ಪೀಶ್ರಿತಂ ಪಯಃ ॥ ೯೫ ॥

ಸ್ಪೃಷ್ಟ್ವಾ ದತ್ವಾ ಚ ಮದಿರಾಂ ವಿಧಿವತ್ಪ್ರತಿಗೃಹ್ಯ ಚ ।
ಶೂದ್ರೋಚ್ಛಿಷ್ಟಾಶ್ಚ ಪೀತ್ವಾಪಃ ಕುಶವಾರಿ ಪಿಬೇತ್ತ್ರ್ಯಹಂ ॥ ೯೬ ॥

---

ದಿಂದ ಹುಟ್ಟಿದ ಮತ್ತು ಕಾಡಿನಲ್ಲಿ ತಾನಾಗಿ ಹುಟ್ಟಿದ ಓಷಧಿವಿಶೇಷಗಳನ್ನೂ ವ್ಯರ್ಥವಾಗಿ ನಾಶಮಾಡಿದಲ್ಲಿ ಒಂದು ದಿನ ಕ್ಷೀರಪಾನವ್ರತದಿಂದಿದ್ದು ಗೋಸೇವೆ ಮಾಡಬೇಕು. ಹಿಂಸೆಗಳಿಂದುಂಟಾದ ಪಾಪಗಳನ್ನು ಈ ವ್ರತಗಳಿಂದ ಹೋಗಲಾಡಿಸಿಕೊಳ್ಳಬೇಕು. ಜ್ಞಾನಪೂರ್ವಕವಾದ ಅಥವಾ ಅಜ್ಞಾನಪೂರ್ವಕವಾದ ಎಲ್ಲಾ ಪಾಪಗಳಿಗೂ ಇದು ಅನ್ವಯಿಸುತ್ತದೆ. ದುಷ್ಟವಾದ ಅನ್ನಾದಿ ಭಕ್ಷಣದಿಂದುಂಟಾಗುವ ಪಾಪಗಳ ನಾಶಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಹೇಳುತ್ತೇನೆ ಕೇಳಿರಿ.

೯೪-೯೯. ಅಜ್ಞಾನದಿಂದ ಮಧ್ಯವನ್ನು ಪಾನಮಾಡಿದ್ದೇ ಆದರೆ ಉಪನಯನ ಸಂಸ್ಕಾರದಿಂದ ಶುದ್ಧಿಯುಂಟಾಗುತ್ತದೆ. ಬುದ್ಧಿಪೂರ್ವಕವಾಗಿ ಪಾನಮಾಡಿದ್ದೇ ಆದರೆ ದೇಹವಿರುವವರಿಗೂ ಅದಕ್ಕೆ ಶುದ್ಧಿಯನ್ನು ನಿರ್ದೇಶಿಸಲು ಸಾಧ್ಯವಿಲ್ಲ ಇದು ವಸ್ತುಸ್ಥಿತಿ, ಸುರಾಪಾತ್ರದಲ್ಲಿ ಅಥವಾ ಮಧ್ಯ ಪಾತ್ರದಲ್ಲಿದ್ದ ಜಲವನ್ನು ಪಾನಮಾಡಿದ್ದೇ ಆದರೆ ಶಂಖಪುಷ್ಪೀ ಎಂಬ ಓಷಧಿ ರಸದಿಂದ ಕೂಡಿದ ಹಾಲನ್ನು ಐದು ರಾತ್ರಿ ಸೇವಿಸಬೇಕು. ಮಧ್ಯವನ್ನು ಮುಟ್ಟಿದರಾಗಲಿ, ದಾನಮಾಡಿದಲ್ಲಿ

ಬ್ರಾಹ್ಮಣಸ್ತು ಸುರಾಪಸ್ಯ ಗಂಧಮಾಘ್ರಾಯ ಸೋಮಪಃ ।
ಪ್ರಾಣಾನಪ್ಸು ತ್ರಿರಾಚಮ್ಯ ಘೃತಂ ಪ್ರಾಶ್ಯ ವಿಶುಧ್ಯತಿ ॥ ೯೭ ॥

ಅಜ್ಞಾನಾತ್ಪ್ರಾಶ್ಯ ವಿಣ್ಮೂತ್ರಂ ಸುರಾಸಂಸ್ಪೃಷ್ಟಮೇವ ಚ ।
ಪುನಃ ಸಂಸ್ಕಾರಮರ್ಹಂತಿ ತ್ರಯೋವರ್ಣಾ ದ್ವಿಜಾತಯಃ ॥ ೯೮ ॥

ವಸನಂ ಮೇಖಲಾದಂಡಂ ಭೈಕ್ಷ್ಯಚರ್ಯಾ ವ್ರತಾನಿ ಚ ।
ನಿವರ್ತಂತೇ ದ್ವಿಜಾತೀನಾಂ ಪುನಃ ಸಂಸ್ಕಾರಕರ್ಮಣಿ ॥ ೯೯ ॥

ಅಭೋಜ್ಯಾನಾಂ ತು ಭುಕ್ತ್ವಾನ್ನಂ ಸ್ತ್ರೀಶೂದ್ರೋಚ್ಛಿಷ್ಟಮೇವ ಚ ।
ಜಗ್ಧ್ವಾ ಮಾಂಸಮಭೋಜ್ಯಂ ಚ ಸಪ್ತರಾತ್ರಂ ಪಯಃ ಪಿಬೇತ್ ॥ ೧೦೦ ॥

ಶುಕ್ತಾನಿ ಚ ಕಷಾಯಾಂಶ್ಚ ಪೀತ್ವಾ ಮೇಧ್ಯಾನಪಿ ದ್ವಿಜಃ ।
ತಾವದ್ಭವತ್ಯಪ್ರಯತೋ ಯಾವತ್ತನ್ನವ್ರಜತ್ಯಧಃ ॥ ೧೦೧ ॥

ವಿಡ್ವರಾಹಖರೋಷ್ಟ್ರಾಣಾಂ ಗೋಮಯೋಃ ಕಪಿಕಾಕಯೋಃ ।
ಪ್ರಾಶ್ಯ ಮೂತ್ರಪುರೀಷಾಣಿ ದ್ವಿತ್ರಿಶ್ಚಾಂದ್ರಾಯಣಂ ಚರೇತ್ ॥ ೧೦೨ ॥

---

ಯಾಗಲಿ, ಯಥಾವಿಧಿಯಾಗಿ ಸ್ವೀಕರಿಸಿದಲ್ಲಿಯಾಗಲಿ, ಶೂದ್ರನ ಉಚ್ಛಿಷ್ಟ ಜಲವನ್ನು ಪಾನಮಾಡಿದ್ದರಾಗಲಿ ಮೂರು ದಿನ ದರ್ಭೋದಕಪಾನದಿಂದ ಶುದ್ಧಿ ಹೊಂದಬೇಕು. ಸೋಮಪಾನಮಾಡಿದ ಬ್ರಾಹ್ಮಣನು ಸುರಾಪಾನ ಮಾಡಿದವನ ದುರ್ಗಂಧವನ್ನು ಸೇವಿಸಿದಲ್ಲಿ ಪ್ರಾಣಾಯಾಮಮಾಡಿ ಮೂರಾವರ್ತಿ ಆಚಮನ ಮಾಡಿ ಘೃತಪ್ರಾಶನದಿಂದ ಶುದ್ಧಿಹೊಂದುತ್ತಾನೆ. ಅಜ್ಞಾನದಿಂದ ಮೂತ್ರಪುರೀಷ ಗಳನ್ನೂ ಸುರಾಸ್ಪರ್ಶವುಳ್ಳ ಆಹಾರವನ್ನೂ ಸೇವಿಸಿದಲ್ಲಿ ಮೂರು ವರ್ಣದವರೂ ಉಪನಯನದಿಂದ ಪುನಃ ಸಂಸ್ಕಾರ ಹೊಂದಬೇಕು. ಅಂತಹ ಸಂಸ್ಕಾರದಲ್ಲಿ ವಸ್ತ್ರ, ದಂಡ, ಮೌಂಜಿ, ಭಿಕ್ಷಾಚರಣ ಇವು ಅನ್ವಯಿಸುವುದಿಲ್ಲ.

೧೦೦-೧೦೪. ಅಭೋಜ್ಯಾನ್ನರ ಅನ್ನವನ್ನೂ ಸ್ತ್ರೀಶೂದ್ರರ ಉಚ್ಛಿಷ್ಟವನ್ನೂ ಅಭೋಜ್ಯವಾದ ಮಾಂಸವನ್ನೂ ಸೇವಿಸಿದವನು ಏಳುರಾತ್ರಿ ಪರ್ಯಂತ ಕ್ಷೀರಪಾನ ವ್ರತದಲ್ಲಿರಬೇಕು. ಕಾಲಪಾಕದಿಂದ ಹಳಸಿಹೋದ ಅನ್ನಾದಿಗಳನ್ನೂ ಕಷಾಯ ಗಳನ್ನೂ ಅಶುದ್ಧವಾದ ಆಹಾರವನ್ನೂ ಭಕ್ಷಿಸಿದ ಬ್ರಾಹ್ಮಣನು ಆ ಆಹಾರವು ಜೀರ್ಣವಾಗುವಪರ್ಯಂತವೂ ಅಶುಚಿಯಾಗುತ್ತಾನೆ. ಊರುಹಂದಿ, ಕತ್ತೆ, ಒಂಟೆ,

ಶುಷ್ಕಾಣಿ ಭುಕ್ತ್ವಾ ಮಾಂಸಾನಿ ಭೌಮಾನಿ ಕವಕಾನಿ ವಾ ।
ಅಜ್ಞಾತಂ ಚೈವ ಸೂಪಸ್ಥಂ ಚೈತದೇವ ವ್ರತಂ ಚರೇತ್ ॥ ೧೦೩ ॥

ಕ್ರವ್ಯಾದಸೂಕರಾಣಾಂ ಚ ಕುಕ್ಕುಟಾನಾಂ ಚ ಭಕ್ಷಣೇ ।
ನರಕಾಕಖರಾಣಾಂ ಚ ತಪ್ತಕೃಚ್ಛ್ರಂ ವಿಶೋಧನಂ ॥ ೧೦೪ ॥

ಮಾಸಿಕಾನ್ನಂ ಚ ಯೋಽಶ್ನೀಯಾದವೃತ್ಯಾ ಕರ್ಷಿತೋ ದ್ವಿಜಃ ।
ಸತ್ರೀಣ್ಯಹಾನ್ಯುಪವಸೇದೇಕಾಹಂ ಚೋದಕೇ ವಸೇತ್ ॥ ೧೦೫ ॥

ವ್ರತಚಾರೀ ತು ಯೋಽಶ್ನೀಯಾನ್ಮಧುಮಾಂಸೇ ಕಥಂಚನ ।
ಸ ಕೃತ್ವಾ ಪ್ರಾಕೃತಂ ಕೃಚ್ಛ್ರಂ ವ್ರತಶೇಷಂ ಸಮಾಪಯೇತ್ ॥ ೧೦೬ ॥

ಬಿಡಾಲಕಾಕಾಖೂಚ್ಛಿಷ್ಟಂ ಜಗ್ಧ್ವಾ ಶ್ವನಕುಲಸ್ಯ ಚ ।
ಕೇಶಕೀಟಾವಪನ್ನಂ ಚ ಪಿಬೇದ್ಬ್ರಾಹ್ಮಸುವರ್ಚಲಂ ॥ ೧೦೭ ॥

---

ನರಿ, ಕಪಿ, ಕಾಗೆ ಇವುಗಳ ಮಲಮೂತ್ರವನ್ನು ಸೇವಿಸಿದವನು ಎರಡು ಅಥವಾ ಮೂರು ಚಾಂದ್ರಾಯಣವನ್ನು ಆಚರಿಸಬೇಕು. ಒಣಗಿದ ಮಾಂಸವನ್ನೂ ಭೂಮಿಯಲ್ಲಿ ಹುಟ್ಟಿರುವ ಅಣಬೆ ಮುಂತಾದವನ್ನೂ ಇವುಗಳಿಂದ ಕೂಡಿರುವ ತೊವ್ವೆ ಮೊದಲಾದ ವ್ಯಂಜನಗಳನ್ನೂ ಸಹ ಅಜ್ಞಾನದಿಂದ ಭುಜಿಸಿದಲ್ಲಿಯೂ ಈ ವ್ರತವನ್ನೇ ಆಚರಿಸಬೇಕು. ಮಾಂಸಾಹಾರಿಗಳಾದ ಪ್ರಾಣಿಗಳನ್ನೂ ಮತ್ತು ಕಾಡುಹಂದಿ, ಕೋಳಿ, ಮನುಷ್ಯ, ಕಾಗೆ, ಕತ್ತೆ ಇವನ್ನೂ ಭಕ್ಷಿಸಿದವನು ತಪ್ತಕೃಚ್ಛ್ರದಿಂದ ಶುದ್ಧಿಹೊಂದಬೇಕು.

೧೦೫–೧೦೭. ಬೇರೆ ಜೀವಿಕೆ ಇಲ್ಲದ ಬ್ರಾಹ್ಮಣನು ಮಾಸಿಕಶ್ರಾದ್ಧಾನ್ನವನ್ನು ಭುಂಜಿಸಿದಲ್ಲಿ ಅವನು ಮೂರುದಿನಗಳ ಉಪವಾಸಮಾಡಿ ಒಂದು ದಿನ ಜಲಪಾನದಲ್ಲಿರಬೇಕು. ಯಾವನು ವ್ರತಾಚರಣೆಮಾಡುವಾಗ ಮಧ್ಯದಲ್ಲಿ ಮಧುಮಾಂಸಗಳನ್ನು ಭುಂಜಿಸುತ್ತಾನೆಯೋ ಅವನು ಪ್ರಾಕೃತಕೃಚ್ಛ್ರಮಾಡಿದ ನಂತರ ವ್ರತವನ್ನು ಮುಗಿಸಬೇಕು. ಬೆಕ್ಕು, ಕಾಗೆ, ಇಲಿ ಇವುಗಳ ಮತ್ತು ನಾಯಿ, ಮುಂಗಸಿ ಇವುಗಳ ಉಚ್ಛಿಷ್ಟವನ್ನೂ ಕೂದಲು, ಕ್ರಿಮಿ ಮುಂತಾದವುಗಳಿಂದ ದುಷ್ಟವಾದ ಅನ್ನವನ್ನೂ ಭಕ್ಷಿಸಿದಲ್ಲಿ ಬ್ರಾಹ್ಮಸುವರ್ಚಲವೆಂಬ ರಸವಿಶೇಷವನ್ನು ಪಾನಮಾಡಬೇಕು.

ಅಭೋಜ್ಯಮನ್ನಂ ನಾತ್ತವ್ಯಂ ಚಾತ್ಮನಃ ಶುದ್ಧಿಮಿಚ್ಛತಾ ।
ಅಜ್ಞಾನಭುಕ್ತಂ ತೂತ್ತಾರ್ಯಂ ಶೋಧ್ಯಂ ವಾಪ್ಯಾಶು ಶೋಧನೈಃ ॥ ೧೦೮ ॥

ಏಷೋಽನಾದ್ಯಾದನಸ್ಯೋಕ್ತೋ ವ್ರತಾನಾಂ ವಿವಿಧೋ ವಿಧಿಃ ।
ಸ್ತೇಯದೋಷಾಪಹರ್ತ್ಯಣಾಂ ವ್ರತಾನಾಂ ಶ್ರೂಯತಾಂ ವಿಧಿಃ ॥ ೧೦೯ ॥

ಧಾನ್ಯಾನ್ನಧನಚೌರ್ಯಾಣಿ ಕೃತ್ವಾ ಕಾಮಾದ್ದ್ವಿಜೋತ್ತಮಃ ।
ಸ್ವಜಾತೀಯಗೃಹಾದೇವ ಕೃಚ್ಛ್ರಾಬ್ದೇನ ವಿಶುಧ್ಯತಿ　　॥ ೧೧೦ ॥

ಮನುಷ್ಯಾಣಾಂ ತು ಹರಣೇ ಸ್ತ್ರೀಣಾಂ ಕ್ಷೇತ್ರಗೃಹಸ್ಯ ಚ ।
ಕೂಪವಾಪೀ ಜಲಾನಾಂ ಚ ಶುದ್ಧಿಶ್ಚಾಂದ್ರಾಯಣಂ ಸ್ಮೃತಂ　　॥ ೧೧೧ ॥

ದ್ರವ್ಯಾಣಾಮಲ್ಪಸಾರಾಣಾಂ ಸ್ತೇಯಂ ಕೃತ್ವಾ ನ್ಯವೇಶ್ಮತಃ ।
ಚರೇತ್ಸಾಂತಪನಂ ಕೃಚ್ಛ್ರಂ ತನ್ನಿರ್ಯಾತ್ಯಾತ್ಮಶುದ್ಧಯೇ　　॥ ೧೧೨ ॥

---

ಆತ್ಮಶುದ್ಧಿಯನ್ನು ಅಪೇಕ್ಷಿಸುವವನು ಅಭೋಜ್ಯಾನ್ನವನ್ನು ಭಕ್ಷಿಸಬಾರದು. ಅಜ್ಞಾನದಿಂದ ಅದು ಅಲ್ಪಸ್ವಲ್ಪ ಸಂಭವಿಸಿದಲ್ಲಿ ಉಚಿತವಾದ ಪ್ರಾಯಶ್ಚಿತ್ತಗಳಿಂದ ಶುದ್ಧಿ ಹೊಂದಬಹುದು.

೧೦೯-೧೧೩. ಅಭೋಜ್ಯಾನ್ನ ಭೋಜನದಿಂದುಂಟಾದ ಅಶುದ್ಧಿಗೆ ಪ್ರಾಯಶ್ಚಿತ್ತಗಳಾದ ವಿವಧ ವ್ರತಗಳನ್ನು ಈ ರೀತಿ ಹೇಳಿ ಆಯಿತು. ಇನ್ನು ಮುಂದೆ ಚೌರ್ಯದೋಷಕ್ಕೆ ಪರಿಹಾರರೂಪಗಳಾದ ವ್ರತವಿಧಾನವನ್ನು ಹೇಳುತ್ತೇನೆ ಕೇಳಿರಿ. ಬ್ರಾಹ್ಮಣನು ಸ್ವಜಾತಿಯವನ ಮನೆಯಿಂದ ಧಾನ್ಯ, ಅನ್ನ, ಧನ ಇವುಗಳ ಚೌರ್ಯವನ್ನು ಬುದ್ಧಿಪೂರ್ವಕವಾಗಿ ಮಾಡಿದಲ್ಲಿ ಒಂದು ವರ್ಷಕಾಲ ಕೃಚ್ಛ್ರಾನುಷ್ಠಾನದಿಂದ ಶುದ್ಧಿಹೊಂದುತ್ತಾನೆ. ಮನುಷ್ಯರ ಮತ್ತು ಸ್ತ್ರೀಯರ ಅಪಹರಣ ಮತ್ತು ಗೃಹಕ್ಷೇತ್ರಾದಿಗಳ ಭಾವಿ ಕೊಳ ಮುಂತಾದುವುಗಳ ಜಲದ ಅಪಹಾರವುಂಟಾದಲ್ಲಿ ಚಾಂದ್ರಾಯಣದಿಂದಲೇ ಶುದ್ಧಿಯುಂಟಾಗುತ್ತದೆ. ಮತ್ತೊಬ್ಬರ ಮನೆಯಿಂದ ಅಲ್ಪಮೌಲ್ಯವುಳ್ಳ ಪದಾರ್ಥಗಳನ್ನು ಚೌರ್ಯಮಾಡಿದಲ್ಲಿ ಸಾಂತಪನವೆಂಬ ಕೃಚ್ಛ್ರ

ಭಕ್ಷ್ಯಭೋಜ್ಯಾಪಹರಣೇ ಯಾನಶಯ್ಯಾಸನಸ್ಯ ಚ
ಪುಷ್ಪಮೂಲಫಲಾನಾಂ ಚ ಪಂಚಗವ್ಯಂ ವಿಶೋಧನಂ || ೧೧೩ ||

ತೃಣಕಾಷ್ಠದ್ರುಮಾಣಾಂ ಚ ಶುಷ್ಕಾನ್ನಸ್ಯ ಗುಡಸ್ಯ ಚ |
ಚೇಲಚರ್ಮಾಮಿಷಾಣಾಂ ಚ ತ್ರಿರಾತ್ರಂ ಸ್ಯಾದಭೋಜನಂ || ೧೧೪ ||

ಮಣಿಮುಕ್ತಾಪ್ರವಾಲಾನಾಂ ತಾಮ್ರಸ್ಯ ರಜತಸ್ಯ ಚ |
ಅಯಃಕಾಂಸ್ಯೋಪಲಾನಾಂ ಚ ದ್ವಾದಶಾಹಂ ಕಣಾನ್ನತಃ || ೧೧೫ ||

ಕಾರ್ಪಾಸಕೀಟಜೀರ್ಣಾನಾಂ ದ್ವಿಶಫೈಕಶಫಸ್ಯ ಚ |
ಪಕ್ಷಿಗಂಧೌಷಧೀನಾಂ ಚ ರಜ್ಜ್ವಾಶ್ಚೈವ ತ್ರ್ಯಹಂ ಪಯಃ || ೧೧೬ ||

ಏಭಿರ್ವ್ರತೈರಪೋಹ್ಯೇತ ಪಾಪಂ ಸ್ತೇಯಕೃತಂ ದ್ವಿಜಃ |
ಅಗಮ್ಯಾಗಮನೀಯಂತು ವ್ರತೈರೇಭಿರಪಾನುದೇತ್ || ೧೧೭ ||

---

ವನ್ನಾಚರಿಸಿ ಶುದ್ಧಿಹೊಂದಬೇಕು. ಭಕ್ಷ್ಯಭೋಜ್ಯಾದಿಗಳನ್ನೂ, ಯಾನ, ಶಯನ, ಆಸನಾದಿಗಳು ಮತ್ತು ಹಣ್ಣು, ಗೆಡ್ಡೆಗೆಣಸು, ಹೂವು ಇವುಗಳನ್ನೂ ಅಪಹರಣ ಮಾಡಿದಲ್ಲಿ ಪಂಚಗವ್ಯದಿಂದ ಶುದ್ಧಿಹೊಂದಬೇಕು.

೧೧೪-೧೧೬. ಹುಲ್ಲು, ಕಟ್ಟಿಗೆ, ಮರ, ಒಣಗಿದ ಆಹಾರ, ಬೆಲ್ಲ, ವಸ್ತ್ರ, ಚರ್ಮ, ಮಾಂಸ ಇವನ್ನು ಚೌರ್ಯಮಾಡಿದಲ್ಲಿ ಮೂರು ದಿನ ಭೋಜನವಿಲ್ಲದೆ ಇರಬೇಕು. ರತ್ನ, ಮುತ್ತು, ಹವಳ, ತಾಮ್ರ, ಬೆಳ್ಳಿ, ಕಬ್ಬಿಣ, ಕಂಚು, ಕಲ್ಲು ಇವನ್ನು ಅಪಹರಿಸಿದಲ್ಲಿ ಕ್ಷೇತ್ರದಲ್ಲಿ ಆದು ತಂದ ಧಾನ್ಯ ಕಣಗಳಿಂದ ಹನ್ನೆರಡು ದಿನ ಪರ್ಯಂತ ಜೀವಿಸಬೇಕು. ಹತ್ತಿ, ಕ್ರಿಮಿಗಳಿಂದ ಜೀರ್ಣವಾದ ಪದಾರ್ಥ ಒಂದು ಗೊರಸುಳ್ಳ ಮತ್ತು ಎರಡು ಗೊರಸುಳ್ಳ ಪ್ರಾಣಿ, ಪಕ್ಷಿಗಳು, ಸುಗಂಧೌಷಧಿಗಳು, ಹಗ್ಗ ಇವನ್ನು ಅಪಹರಿಸಿದಲ್ಲಿ ಮೂರು ದಿನದ ವರಿಗೂ ಕ್ಷೀರಪಾನದಲ್ಲಿರಬೇಕು. ಈ ವಿಧವಾದ ವ್ರತಗಳಿಂದ ಬ್ರಾಹ್ಮಣನು ಚೌರ್ಯದಿಂದುಂಟಾದ ಪಾಪಗಳನ್ನು ಹೋಗಲಾಡಿಸಿಕೊಳ್ಳಬೇಕು.

೧೧೭-೧೨೦. ಅಗಮ್ಯಾಗಮನದಿಂದುಂಟಾದ ಪಾಪವನ್ನು ಈ ವ್ರತಗಳಿಂದ ಹೋಗಲಾಡಿಸಿಕೊಳ್ಳಬೇಕು. ತನಗೆ ರಕ್ತಸಂಬಂಧವುಳ್ಳ ಸ್ತ್ರೀಗಮನದಲ್ಲಿ ಗುರುತಲ್ಪ

**ಗುರುತಲ್ಪವ್ರತಂ ಕುರ್ಯಾದ್ರೇತಃಸಿಕ್ತ್ವಾ ಸ್ವಯೋನಿಷು ।**
**ಸಖ್ಯುಃ ಪುತ್ರಸ್ಯ ಚ ಸ್ತ್ರೀಷು ಕುಮಾರೀಷ್ವನ್ತ್ಯಜಾಸು ಚ ॥ ೧೧೮ ॥**

**ಪೈತೃಷ್ವಸ್ರೇಯೀಂ ಭಗಿನೀಂ ಸ್ವಸ್ರೇಯೀಂ ಮಾತುರೇವ ಚ ।**
**ಮಾತುಶ್ಚ ಭ್ರಾತುರಾಪ್ತಸ್ಯ ಗತ್ವಾ ಚಾಂದ್ರಾಯಣಂ ಚರೇತ್ ॥ ೧೧೯ ॥**

**ಏತಾಃ ಸ್ತ್ರಿಯಸ್ತು ಭಾರ್ಯಾರ್ಥೇ ನೋಪಯಚ್ಛೇತ್ತು ಬುದ್ಧಿಮಾನ್ ।**
**ಜ್ಞಾತಿತ್ವೇನಾನುಪೇಯಾಸ್ತಾಃ ಪತತಿ ಹ್ಯುಪಯನ್ ಬುಧಃ ॥ ೧೨೦ ॥**

**ಅಮಾನುಷೀಷು ಪುರುಷ ಉದಕ್ಯಾಯಾಮಯೋನಿಷು ।**
**ರೇತಃ ಸಿಕ್ತ್ವಾ ಜಲೇ ಚೈವ ಕೃಚ್ಛ್ರಂ ಸಾಂತಪನಂ ಚರೇತ್ ॥ ೧೨೧ ॥**

**ಮೈಥುನಂ ತು ಸಮಾಸೇವ್ಯ ಪುಂಸಿ ಯೋಷಿತಿ ವಾ ದ್ವಿಜಃ ।**
**ಗೋಯಾನೇಽಪ್ಸು ದಿವಾ ಚೈವ ಸವಾಸಾ ಸ್ನಾನಮಾಚರೇತ್ ॥ ೧೨೨ ॥**

---

ಗಮನಕ್ಕೆ ಹೇಳಿರುವ ವ್ರತವನ್ನೇ ಆಚರಿಸಬೇಕು ಸ್ನೇಹಿತನ ಮತ್ತು ಪುತ್ರನ ಸ್ತ್ರೀಗಳಲ್ಲಿಯೂ, ಅವಿವಾಹಿತೆಯಲ್ಲಿಯೂ, ಅಂತ್ಯವರ್ಣದ ಸ್ತ್ರೀಯಲ್ಲಿಯೂ, ಸೋದರತ್ತೆಯ ಮಗಳು ಮತ್ತು ಅಕ್ಕತಂಗಿಯರು, ತಾಯಿಯ ತಂಗಿಯಮಗಳು ಸೋದರಮಾವನ ಮತ್ತು ಆಪ್ತನ ಮಗಳು ಇವರಲ್ಲಿ ಗಮನಮಾಡಿದವನು ಚಂದ್ರಾಯಣವನ್ನಾಚರಿಸಬೇಕು. ವಿವೇಕಿಯಾದವನು ಈ ಸ್ತ್ರೀಯರನ್ನು ಪತ್ನಿಯರನ್ನಾಗಿಯೂ ಹೊಂದಬಾರದು. ಇವರು ಜ್ಞಾತಿವರ್ಗದಲ್ಲಿ ಸೇರಿದವರಾದ್ದರಿಂದ ಅಗಮ್ಯರು. ಇವರನ್ನು ಸೇವಿಸಿದವನು ಅಗಮ್ಯಾಗಮನದಿಂದ ಪಾತಕಿಯಾಗುತ್ತಾನೆ.

೧೨೧-೧೨೭. ಪುರುಷನಲ್ಲಿಯೂ, ಮನುಷ್ಯರಲ್ಲದ ಸ್ತ್ರೀಜಾತಿಯಲ್ಲಿಯೂ ಋತುಮತಿಯಲ್ಲಿಯೂ, ಯೋನಿಯಲ್ಲದ ಇತರ ಕಡೆಗಳಲ್ಲಿಯೂ, ಜಲದಲ್ಲಿಯೂ ವೀರ್ಯಸೇಕಮಾಡಿದಲ್ಲಿ ಸಾಂತಪನವೆಂಬ ಕೃಚ್ಛ್ರವನ್ನಾಚರಿಸಬೇಕು. ಬ್ರಾಹ್ಮಣನು ಎತ್ತಿನ ಗಾಡಿಯಲ್ಲಿ ಅಥವಾ ನೀರಿನಲ್ಲಿ, ಹಗಲಿನಲ್ಲಿ ಪುರುಷನೊಡನೆ ಅಥವಾ ಸ್ತ್ರೀಯೊಡನೆ ಮೈಥುನಹೊಂದಿದಲ್ಲಿ ಸಚೇಲಸ್ನಾನಮಾಡಬೇಕು. ಚಂಡಾಲ ಮತ್ತು ಅಂತ್ಯ ಜಾತಿಯ ಸ್ತ್ರೀಯನ್ನು ಹೊಂದಿ ಅಥವಾ ಪ್ರತಿಗ್ರಹವನ್ನು ಸ್ವೀಕರಿಸಿದಲ್ಲಿ ಇವು ಅಜ್ಞಾನದಿಂದ ನಡೆದಿದ್ದಲ್ಲಿ ಬ್ರಾಹ್ಮಣನು ಪತಿತನಾಗುತ್ತಾನೆ. ಜ್ಞಾನಪೂರ್ವಕ

ಚಾಂಡಾಲಾಂಶ್ಚ ಸ್ತ್ರಿಯಂ ಗತ್ವಾ ಭುಕ್ತ್ವಾ ಚ ಪ್ರತಿಗೃಹ್ಯ ಚ ।
ಪತತ್ಯಜ್ಞಾನತೋ ವಿಪ್ರೋ ಜ್ಞಾನಾತ್ಸಾಮ್ಯಂ ತು ಗಚ್ಛತಿ ॥ ೧೨೩ ॥

ವಿಪ್ರದುಷ್ಟಾಂ ಸ್ತ್ರಿಯಂ ಭರ್ತಾ ನಿರುನ್ಧ್ಯಾದೇಕವೇಶ್ಮನಿ ।
ಯತ್ಪುಂಸಃ ಪರದಾರೇಷು ತಚ್ಚೈನಾಂ ಚಾರಯೇದ್ವ್ರತಂ ॥ ೧೨೪ ॥

ಸಾ ಚೇತ್ಪುನಃ ಪ್ರದುಷ್ಯೇತ ಸದೃಶೇನೋಪಯಂತ್ರಿತಾ ।
ಕೃಚ್ಛ್ರಂ ಚಾಂದ್ರಾಯಣಂ ಚೈವ ತದಸ್ಯಾಃ ಪಾವನಂ ಸ್ಮೃತಂ ॥ ೧೨೫ ॥

ಯತ್ಕರೋತ್ಯೇಕರಾತ್ರೇಣ ವೃಷಲೀಸೇವನಂ ದ್ವಿಜಃ ।
ತದ್ಭೈಕ್ಷ್ಯಭುಗ್ಜಪನ್ನಿತ್ಯಂ ತ್ರಿಭಿರ್ವರ್ಷೈಃ ವ್ಯಪೋಹತಿ ॥ ೧೨೬ ॥

ಏಷಾ ಪಾಪಕೃತಾಮುಕ್ತಾ ಚತುರ್ಣಾಮಪಿ ನಿಷ್ಕೃತಿಃ ।
ಪತಿತೈಃ ಸಂಪ್ರಯುಕ್ತಾನಾಂ ಚೇಮಾಃ ಶೃಣುತ ನಿಷ್ಕೃತೀಃ ॥ ೧೨೭ ॥

---

ವಾಗಿಯೇ ನಡೆದದ್ದಲ್ಲಿ ಆಯಾಯ ವರ್ಣ ಸಾಮ್ಯವನ್ನೇ ಹೊಂದುತ್ತಾನೆ. ಬ್ರಾಹ್ಮಣ ಸಂಬಂಧದಿಂದ ದುಷ್ಟಳಾದ ಸ್ತ್ರೀಯನ್ನು ಪತಿಯಾದವನು ಒಂದೇ ಮನೆಯಲ್ಲಿ ನಿರ್ಬಂಧದಿಂದಿಡಬೇಕು. ಪುರುಷನಿಗೆ ಪರಸ್ತ್ರೀ ಸಂಬಂಧವುಂಟಾದಾಗ ವಿಹಿತವಾಗಿರುವ ವ್ರತವನ್ನೇ ಇವಳಿಂದ ಮಾಡಿಸಬೇಕು. ಹಾಗೆ ಮಾಡಿದ ಮೇಲೆಯೂ ಇಂತಹ ಸ್ತ್ರೀಯು ಸಮಾನ ವರ್ಣದವನಿಂದ ನಿರ್ಬಂಧಿಸಲ್ಪಟ್ಟು ಪುನಃ ದೂಷಿತಳಾದಲ್ಲಿ ಕೃಚ್ಛ್ರದಿಂದಲೂ, ಚಾಂದ್ರಾಯಣದಿಂದಲೂ ಇವಳು ಶುದ್ಧಿಹೊಂದಬೇಕು. ಬ್ರಾಹ್ಮಣನಾದವನು, ಶೂದ್ರ ಸ್ತ್ರೀಯನ್ನು ಒಂದು ರಾತ್ರಿ ಸೇವಿಸಿ ಎಷ್ಟು ಪಾತಕವನ್ನು ಗಳಿಸುತ್ತಾನೆಯೋ ಅಂತಹ ಪಾಪವನ್ನು ನಿತ್ಯವೂ ಭಿಕ್ಷಾಶನದಿಂದಿದ್ದು ಜಪಮಾಡುತ್ತಾ ಮೂರು ವರ್ಷಕಾಲ ಶ್ರಮಿಸಿದಲ್ಲಿ ಹೋಗಲಾಡಿಸಿಕೊಳ್ಳುತ್ತಾನೆ. ಪಾಪಮಾಡಿದ ನಾಲ್ಕು ಜನರಿಗೂ ಆಯಾಯ ಪಾಪಗಳ ಪ್ರಾಯಶ್ಚಿತ್ತವನ್ನು ಈ ರೀತಿ ಹೇಳಿ ಆಯಿತು. ಪಾಪಮಾಡಿದವರ ಸಂಸರ್ಗದಿಂದ ಉಂಟಾಗುವ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಮುಂದೆ ಹೇಳುತ್ತೇನೆ ಕೇಳಿರಿ.

**ಸಂವತ್ಸರೇಣ ಪತತಿ ಪತಿತೇನ ಸಹಾಚರನ್ ।**
**ಯಾಜನಾಧ್ಯಾಪನಾದ್ಯೌನಾನ್ನತು ಯಾನಾಸನಾಶನಾತ್ ॥ ೧೨೮ ॥**

**ಯೋ ಯೇನ ಪತಿತೇನೈವಂ ಸಂಸರ್ಗಂ ಯಾತಿ ಮಾನವಃ ।**
**ಸ ತಸ್ಯೈವ ವ್ರತಂ ಕುರ್ಯಾತ್ತತ್ಸಂಸರ್ಗಸ್ಯ ಶುದ್ಧಯೇ ॥ ೧೨೯ ॥**

**ಪತಿತಸ್ಯೋದಕಂ ಕಾರ್ಯಂ ಸಪಿಂಡೈರ್ಬಾಂಧವೈರ್ಬಹಿಃ ।**
**ನಿಂದಿತೇऽಹನಿ ಸಾಯಾಹ್ನೇ ಜ್ಞಾತ್ಯೃತ್ವಿಗ್ಗುರುಸನ್ನಿಧೌ ॥ ೧೩೦ ॥**

**ದಾಸೀ ಘಟಮಪಾಂ ಪೂರ್ಣಂ ಪರ್ಯಸ್ಯೇತ್ಪ್ರೇತವತ್ಸದಾ ।**
**ಅಹೋರಾತ್ರಮುಪಾಸೀರನ್ನ ಶೌಚಂ ಬಾಂಧವೈಃ ಸಹ ॥ ೧೩೧ ॥**

**ನಿವರ್ತಯೇರಂಸ್ತಸ್ಮಾತ್ತು ಸಂಭಾಷಣಸಹಾಶನೇ ।**
**ದಾಯಾದಸ್ಯ ಪ್ರದಾನಂ ಚ ಯಾತ್ರಾಮೇವ ಚ ಲೌಕಿಕೇ ॥ ೧೩೨ ॥**

---

೧೨೮-೧೩೨. ಪತಿತನೊಡನೆ ಯಾಜನ, ಅಧ್ಯಾಪನ, ವಿವಾಹ ಇತ್ಯಾದಿ ಸಂಬಂಧಗಳಿಂದ ಸೇರಿರುವವನು ತಾನೂ ಒಂದು ವರ್ಷಕಾಲದಲ್ಲಿ ಪತಿತನೇ ಆಗುತ್ತಾನೆ. ಅವನೊಡನೆ ಯಾನ, ಆಸನ, ಭೋಜನ ಇವುಗಳಿಂದ ಮಾತ್ರವಲ್ಲ, ಯಾವ ಮನುಷ್ಯನು ಪತಿತನೊಡನೆ ಈ ರೀತಿ ಸಂಸರ್ಗ ಹೊಂದಿರುವನೋ ಅವನೂ ತನಗೆ ಉಂಟಾಗಿರುವ ಸಂಸರ್ಗದಿಂದ ಶುದ್ಧಿಹೊಂದಲು ಮುಖ್ಯ ಪತಿತನಿಗೆ ಹೇಳಿರುವ ವ್ರತವನ್ನೇ ಮಾಡಬೇಕು. ಜ್ಞಾತಿವರ್ಗಕ್ಕೆ ಸೇರಿದ ಒಬ್ಬನು ಪತಿತನಾದಲ್ಲಿ, ಸಪಿಂಡರಾದ ಬಂಧುಗಳು ಊರಿನಿಂದ ಹೊರಗೆ ನಿಂದಿತವಾದ ದಿನದಲ್ಲಿ ಸಾಯಂಕಾಲದಲ್ಲಿ ಜ್ಞಾತಿ, ಋತ್ವಿಕ್, ಗುರು ಇವರ ಸಮುಖದಲ್ಲಿ ತರ್ಪಣರೂಪವಾದ ಉದಕದಾನಮಾಡಬೇಕು. ದಾಸಿಯಾದವಳು ಪ್ರೇತಕ್ಕೆ ಹಾಕುವಂತೆ ಜಲಘಟವನ್ನು ಹಾಕಬೇಕು. ಆ ದಿನ ಅಹೋರಾತ್ರ ಬಂಧುಗಳೊಡನೆ ಆಶೌಚವನ್ನು ಅನುಭವಿಸಬೇಕು. ಅನಂತರ ಅವನೊಡನೆ ಸಂಭಾಷಣ, ಸಹಭೋಜನಾದಿಗಳನ್ನು ತ್ಯಜಿಸಬೇಕು. ಅವನಿಗೆ ದಾಯಾದವಾದ ವಿಭಾಗವನ್ನೂ ಕೊಡಬಾರದು. ಅವನೊಡನೆ ಲೌಕಿಕವಾದ ಯಾವ ವ್ಯವಹಾರವನ್ನೂ ಮಾಡಲಾಗದು.

ಜ್ಯೇಷ್ಠತಾ ಚ ನಿವರ್ತೇತ ಜ್ಯೇಷ್ಠಂ ವಾಪಿ ಚ ಯದ್ವಸು ।
ಜ್ಯೇಷ್ಠಾಂಶಂ ಪ್ರಾಪ್ನುಯಾಚ್ಚಾಸ್ಯ ಯವೀಯಾನ್ಗುಣತೋಽಧಿಕಃ ॥೧೩೩॥

ಪ್ರಾಯಶ್ಚಿತ್ತೇ ತು ಚರಿತೇ ಪೂರ್ಣಕುಂಭಮಪಾಂ ನವಂ ।
ತೇನೈವ ಸಾರ್ಧಂ ಪ್ರಾಶ್ಯೇಯುಃ ಸ್ನಾತ್ವಾ ಪುಣ್ಯಜಲಾಶಯೇ ॥ ೧೩೪ ॥

ಸ ತ್ವಪ್ಸು ತಂ ಘಟಂ ಪ್ರಾಸ್ಯ ಪ್ರವಿಶ್ಯ ಭವನಂ ಸ್ವಕಂ ।
ಸರ್ವಾಣಿ ಜ್ಞಾತಿಕಾರ್ಯಾಣಿ ಯಥಾಪೂರ್ವಂ ಸಮಾಚರೇತ್ ॥ ೧೩೫ ॥

ಏತಮೇವ ವಿಧಿಂ ಕುರ್ಯಾದ್ಯೋಷಿತ್ಸು ಪತಿತಾಸ್ವಪಿ ।
ವಸ್ತ್ರಾನ್ನಪಾನಂ ದೇಯಂ ತು ವಸೇಯುಶ್ಚ ಗೃಹಾಂತಿಕೇ ॥ ೧೩೬ ॥

ಏನಸ್ವಿಭಿರನಿರ್ಣಿಕ್ತೈರ್ನಾರ್ಥಂ ಕಂಚಿತ್ಸಮಾಚರೇತ್ ।
ಕೃತನಿರ್ಣೇಜನಾಂಶ್ಚೈತಾನ್ನ ಜುಗುಪ್ಸೇತ ಕರ್ಹಿಚಿತ್ ॥ ೧೩೭ ॥

ಬಾಲಘ್ನಾಂಶ್ಚ ಕೃತಘ್ನಾಂಶ್ಚ ವಿಶುದ್ಧಾನಪಿ ಧರ್ಮತಃ ।
ಶರಣಾಗತಹಂತ್ರಾಂಶ್ಚ ಸ್ತ್ರೀಹಂತ್ರಾಂಶ್ಚ ನ ಸಂವಸೇತ್ ॥ ೧೩೮ ॥

---

೧೩೩-೧೩೭ ಈ ರೀತಿ ಬಹಿಷ್ಕರಿಸಲ್ಪಟ್ಟವನಿಗೆ ಜ್ಯೇಷ್ಠತೆಯೂ ನಿವೃತ್ತಿ ಹೊಂದುತ್ತದೆ. ಜ್ಯೇಷ್ಠನಿಗೆ ಸಲ್ಲಬೇಕಾದ ಧನವನ್ನೂ ಜ್ಯೇಷ್ಠಾಂಶವನ್ನೂ ಗುಣವಂತನಾದ ಕನಿಷ್ಠನೇ ಹೊಂದತಕ್ಕದ್ದು. ಪ್ರಾಯಶ್ಚಿತ್ತಮಾಡಿದ ನಂತರ ಅವನೊಡನೆಯೇ ಪುಣ್ಯತೀರ್ಥದಲ್ಲಿ ಸ್ನಾನಮಾಡಿ, ಹೊಸದಾದ ಪೂರ್ಣ ಕುಂಭವನ್ನು ಪ್ರತಿಷ್ಠಿಸಿ ಅವನೊಡನೆ ಭೋಜನಾದಿಗಳನ್ನು ಮಾಡಬಹುದು. ಅವನೂ ಆ ಕುಂಭವನ್ನು ನೀರಿನಲ್ಲಿ ಹಾಕಿ, ತನ್ನ ಮನೆಗೆ ಬಂದು ಜ್ಞಾತಿಕಾರ್ಯಗಳನ್ನೆಲ್ಲಾ ಹಿಂದಿನಂತೆ ಮಾಡಬಹುದು. ಸ್ತ್ರೀಯಾದವಳು ಪತಿತೆಯಾದರೂ ಇದೇ ವಿಧಿಯನ್ನಾಚರಿಸಬೇಕು. ಆದರೆ ಅನ್ನವಸ್ತ್ರಾದಿಗಳನ್ನು ಕೊಡಬೇಕು. ಮನೆಯ ಸಮೀಪದಲ್ಲಿ ವಾಸಿಸಲು ಅವಕಾಶ ಕೊಡಬೇಕು. ಪ್ರಾಯಶ್ಚಿತ್ತ ಹೊಂದದಿರುವ ಪಾತಕಿಗಳೊಡನೆ ಯಾವ ಕಾರ್ಯವನ್ನೂ ಮಾಡಬಾರದು. ಪ್ರಾಯಶ್ಚಿತ್ತ ಮಾಡಿಕೊಂಡ ನಂತರ ಅವರ ವಿಷಯದಲ್ಲಿ ಜುಗುಪ್ಸಾದಿಗಳನ್ನೂ ಮಾಡಬಾರದು.

೧೩೮-೧೪೪. ತಮ್ಮತಮ್ಮ ಧರ್ಮದಲ್ಲಿ ನಿರತರಾಗಿದ್ದರೂ ಬಾಲಘಾತಿ, ಕೃತಘ್ನ, ಶರಣಾಗತ ಘಾತಿ, ಸ್ತ್ರೀಘಾತಿ, ಇವರೊಡನೆ ಸವ್ಯವಹಾರವನ್ನು ಇಟ್ಟು

ಯೇಷಾಂ ದ್ವಿಜಾನಾಂ ಸಾವಿತ್ರೀ ನಾನೂಚ್ಯೇತೆ ಯಥಾವಿಧಿ ।
ತಾಂಶ್ಚಾರಯಿತ್ವಾ ತ್ರೀನ್ ಕೃಚ್ಛ್ರಾನ್ ಯಥಾವಿಧ್ಯುಪನಾಯಯೇತ್ ।

ಪ್ರಾಯಶ್ಚಿತ್ತಂ ಚಿಕೀರ್ಷಂತಿ ವಿಕರ್ಮಸ್ಥಾಸ್ತು ಯೇ ದ್ವಿಜಾಃ ।
ಬ್ರಹ್ಮಣಾ ಚ ಪರಿತ್ಯಕ್ತಾಸ್ತೇಷಾಮಪ್ಯೇತದಾದಿಶೇತ್ || ೧೪೦ ||

ಯದ್ಗರ್ಹಿತೇನಾರ್ಜಯಂತಿ ಕರ್ಮಣಾ ಬ್ರಾಹ್ಮಣಾ ಧನಂ ।
ತಸ್ಯೋತ್ಸರ್ಗೇಣ ಶುದ್ಧ್ಯಂತಿ ಜಪ್ಯೇನ ತಪಸೈವ ಚ || ೧೪೧ ||

ಜಪಿತ್ವಾ ತ್ರೀಣಿ ಸಾವಿತ್ರ್ಯಾಃ ಸಹಸ್ರಾಣಿ ಸಮಾಹಿತಃ ।
ಮಾಸಂ ಗೋಷ್ಠೇ ಪಯಃ ಪಿತ್ವಾ ಮುಚ್ಯತೇಽಸತ್ಪ್ರತಿಗ್ರಹಾತ್ || ೧೪೨ ||

ಉಪವಾಸಕೃಶಂ ತಂ ತು ಗೋವ್ರಜಾತ್ಪುನರಾಗತಂ ।
ಪ್ರಣತಂ ಪರಿಪೃಚ್ಛೇಯುಃ ಸೌಮ್ಯಂ ಸೌಮ್ಯೇಚ್ಛಸೀತಿ ಕಿಂ || ೧೪೩ ||

ಸತ್ಯಮುಕ್ತ್ವಾ ತು ವಿಪ್ರೇಭ್ಯೋ ವಿಕಿರೇದ್ಯವಸಂ ಗವಾಂ ।
ಗೋಭಿಃ ಪ್ರವರ್ತಿತೇ ತೀರ್ಥೇ ಕುರ್ಯುಸ್ತಸ್ಯ ಪರಿಗ್ರಹಂ || ೧೪೪ |

---

ಕೊಳ್ಳಬಾರದು. ಯಾವ ಬ್ರಾಹ್ಮಣರಿಗೆ ಯಥಾವಿಧಿಯಾಗಿ ಸಾವಿತ್ರಿಯು ಅನುವರ್ತನವಿರುವುದಿಲ್ಲವೋ ಅವರುಗಳಿಗೆ ಮೂರು ಕೃಚ್ಛ್ರಾನುಷ್ಠಾನ ಮಾಡಿಸಿ ಯಥಾವಿಧಿಯಾಗಿ ಉಪನಯನ ಮಾಡಿಸಬೇಕು ವಿರುದ್ಧ ಕರ್ಮವಲ್ಲಿರುವ ಬ್ರಾಹ್ಮಣರೂ ಸಹ ವೇದ ವಿಹಿತರಾಗಿದ್ದು ಪ್ರಾಯಶ್ಚಿತ್ತ ಹೊಂದಲು ಇಚ್ಛೆಪಟ್ಟಲ್ಲಿ ಅವರಿಗೂ ಇದೇ ರೀತಿಯ ಪ್ರಾಯಶ್ಚಿತ್ತವನ್ನು ವಿಧಿಸಬೇಕು. ಬ್ರಾಹ್ಮಣರಾದವರು ನಿಂದ್ಯವಾದ ವೃತ್ತಿಯಿಂದ ಧನವನ್ನು ಸಂಪಾದಿಸಿದಲ್ಲಿ ಆ ಧನವನ್ನೆಲ್ಲಾ ದಾನಮಾಡಿ ತಪಸ್ಸಿನಿಂದಲೂ, ಜಪದಿಂದಲೂ ಶುದ್ಧಿಹೊಂದಬೇಕು. ಮೂರು ಸಹಸ್ರ ಗಾಯತ್ರೀ ಜಪವನ್ನು ಯಥಾವಿಧಿಯಾಗಿ ಮಾಡಿ ಒಂದು ವರ್ಷ ಪರ್ಯಂತ ಹಸುಗಳ ಗೋಷ್ಠದಲ್ಲಿ ವಾಸಿಸುತ್ತಾ ಕೇವಲ ಕ್ಷೀರಪಾನಮಾತ್ರದಿಂದಿದ್ದಲ್ಲಿ ದುಷ್ಪ್ರತಿಗ್ರಹಪಾಪದಿಂದ ಶುದ್ಧಿಹೊಂದುತ್ತಾನೆ ಅವನು ಉಪವಾಸದಿಂದ ಕೃಶನಾಗಿ ಗೋಷ್ಠದಿಂದ ಬಂದು ಬ್ರಾಹ್ಮಣರಿಗೆ ನಮಸ್ಕರಿಸಿದಾಗ ಬ್ರಾಹ್ಮಣರು ಸೌಮ್ಯನೇ ನಿನ್ನ ಅಪೇಕ್ಷೆ ಏನು ಎಂದು ಪ್ರಶ್ನಿಸಬೇಕು. ಆಗ ಅವನು ಬ್ರಾಹ್ಮಣರ ಸಮ್ಮುಖದಲ್ಲಿ ಸತ್ಯವನ್ನು ಹೇಳಿ ಗೋವುಗಳಿಗೆ ಹುಲ್ಲನ್ನು ಹಾಕಬೇಕು. ಗೋವುಗಳು ಆ ಹುಲ್ಲನ್ನು ಪರಿಗ್ರಹಿಸಿದಲ್ಲಿ ಆಗ ಬ್ರಾಹ್ಮಣರು ಇವನ ವಿಷಯದಲ್ಲಿ ಸ್ವೀಕಾರ ಬುದ್ಧಿಯನ್ನು ತೋರ್ಪಡಿಸಬೇಕು

ವ್ರಾತ್ಯಾನಾಂ ಯೋಜನಂ ಕೃತ್ವಾ ಪರೇಷಾಮಂತ್ಯ ಕರ್ಮ ಚ ।
ಅಭಿಚಾರಮಹೀನಂ ಚ ತ್ರಿಭಿಃ ಕೃಚ್ಛ್ರೈರ್ವಿಶುದ್ಧ್ಯತಿ ॥ ೧೪೫ ॥

ಶರಣಾಗತಂ ಪರಿತ್ಯಜ್ಯ ವೇದಂ ವಿಪ್ಲಾವ್ಯ ಚ ದ್ವಿಜಃ ।
ಸಂವತ್ಸರಂ ಯವಾಹಾರಃ ತತ್ಪಾಪಮಪಸೇಧತಿ ॥ ೧೪೬ ॥

ಶ್ವಸೃಗಾಲ ಖರೈರ್ದಷ್ಟೋ ಗ್ರಾಮ್ಯೈಃ ಕ್ರವ್ಯಾದ್ಭಿರೇವ ಚ ।
ಖರಾಶ್ವೋಷ್ಟ್ರೈರ್ವರಾಹೈಶ್ಚ ಪ್ರಾಣಾಯಾಮೇನ ಶುದ್ಧ್ಯತಿ ॥ ೧೪೭ ॥

ಷಷ್ಠಾನ್ನಕಾಲತಾ ಮಾಸಂ ಸಂಹಿತಾ ಜಪ ಏವ ವಾ ।
ಹೋಮಾಶ್ಚ ಸಕಲಾ ನಿತ್ಯಮಪಾಙ್ಕ್ತ್ಯಾನಾಂ ವಿಶೋಧನಂ ॥ ೧೪೮ ॥

ಉಷ್ಟ್ರಯಾನಂ ಸಮಾರುಹ್ಯ ಖರಯಾನಂ ಚ ಕಾಮತಃ ।
ಸ್ನಾತ್ವಾ ಚ ವಿಪ್ರೋ ದಿಗ್ವಾಸಾಃ ಪ್ರಾಣಾಯಾಮೇನ ಶುದ್ಧ್ಯತಿ ॥ ೧೪೯ ॥

ವಿನಾದ್ಭಿರಪ್ಸು ವಾಪ್ಯಾರ್ತಃ ಶರೀರೇ ಸನ್ನಿವೇಶ್ಯ ತು ।
ಸಚೈಲೋ ಬಹಿರಾಪ್ಲುತ್ಯ ಗಾಮಾಲಭ್ಯ ವಿಶುದ್ಧ್ಯತಿ ॥ ೧೫೦ ॥

---

೧೪೫-೧೫೦. ಅಸಂಸ್ಕೃತರಲ್ಲಿ ಯಾಗಮಾಡಿಸಿದಲ್ಲಿಯೂ, ಇತರರ ಅಂತ್ಯ ಕ್ರಿಯೆಯನ್ನು ಮಾಡಿಸಿದಲ್ಲಿಯೂ, ಅದುಷ್ಟವಾದ ಅಭಿಚಾರದಲ್ಲಿ ಭಾಗವಹಿಸಿದ್ದರೂ ಅವನು ಮೂರು ಕೃಚ್ಛ್ರಗಳಿಂದ ಶುದ್ಧಿಹೊಂದುತ್ತಾನೆ. ಶರಣಾಗತನ ಪರಿತ್ಯಾಗ ದಿಂದಲೂ ವೇದನಾಶದಿಂದಲೂ ಅಶುದ್ಧನಾದ ಬ್ರಾಹ್ಮಣನು ಸಂವತ್ಸರ ಪರ್ಯಂತ ಯವಾಹಾರದಲ್ಲಿದ್ದು ಆ ಪಾಪವನ್ನು ಕಳೆಯಬೇಕು. ನಾಯಿ, ನರಿ, ಕತ್ತೆ ಇವು ಗಳಿಂದಲೂ, ಗ್ರಾಮದಲ್ಲಿರುವ ಮಾಂಸಾಹಾರಿ ಪ್ರಾಣಿಗಳಿಂದಲೂ, ಕುದುರೆ, ಒಂಟೆ, ಹಂದಿ ಇವುಗಳಿಂದಲೂ ಕಚ್ಚಲ್ಪಟ್ಟಲ್ಲಿ ಪ್ರಾಣಾಯಾಮದಿಂದ ಶುದ್ಧಿಹೊಂದುತ್ತಾನೆ. ಅಪಾಙ್ಕ್ತೇಯರೊಡನೆ ಸಂಸರ್ಗಹೊಂದಿದ್ದವನು ದಿವಸದ ಆರನೆಯ ಭಾಗದಲ್ಲಿ ಭೋಜನ ಅಥವಾ ಒಂದು ತಿಂಗಳು ಸಂಹಿತಾ ಜಪ, ಎಲ್ಲಾ ಹೋಮಗಳು ಇವು ಗಳಿಂದ ಶುದ್ಧಿಹೊಂದಬೇಕು. ಇಚ್ಛೆಯಿಂದ ಒಂಟೆಯ ಗಾಡಿ, ಕತ್ತೆಯ ಗಾಡಿ ಆರೋಹಣ ಮಾಡಿದಲ್ಲಿ ಅಂತಹ ಬ್ರಾಹ್ಮಣನು ನಿರ್ವಸ್ತ್ರನಾಗಿ ಸ್ನಾನಮಾಡಿ ಪ್ರಾಣಾಯಾಮಮಾಡಿದಲ್ಲಿ ಶುದ್ಧನಾಗುತ್ತಾನೆ. ಅಥವಾ ಜಲವನ್ನು (ಆಚಮನಾ ದಿಗಳಿಗೆ) ಉಪಯೋಗಿಸದೆ ಶರೀರವನ್ನು ಜಲದೊಳಗೆ ಇಟ್ಟು ಪ್ರಾಣಾಯಾಮ ಮಾಡಿ ಹೊರಗೆ ಬಂದು ವಸ್ತ್ರವನ್ನುಟ್ಟು ಗೋವನ್ನು ಸ್ಪರ್ಶಮಾಡಿದಲ್ಲಿಯೂ ಶುದ್ಧನಾಗುತ್ತಾನೆ.

ವೇದೋದಿತಾನಾಂ ನಿತ್ಯಾನಾಂ ಕರ್ಮಣಾಂ ಸಮತಿಕ್ರಮೇ ।
ಸ್ನಾತಕವ್ರತಲೋಪೇ ಚ ಪ್ರಾಯಶ್ಚಿತ್ತಮಭೋಜನಂ || ೧೫೧ ||

ಹುಂಕಾರಂ ಬ್ರಾಹ್ಮಣಸ್ಯೋಕ್ತ್ವಾ ತ್ವಂಕಾರಂ ತು ಗರೀಯಸಃ ।
ಸ್ನಾತ್ವಾನಶ್ನನ್ನಹಶ್ಶೇಷಂ ಚಾಭಿವಾದ್ಯ ಪ್ರಸಾದಯೇತ್ || ೧೫೨ ||

ತಾಡಯಿತ್ವಾ ತೃಣೇನಾಪಿ ಕಂಠೇ ಬದ್ಧ್ವಾ ಚ ವಾಸಸಾ ।
ವಿವಾದೇ ವಾಪಿ ನಿರ್ಜಿತ್ಯ ಪ್ರಣಿಪತ್ಯ ಪ್ರಸಾದಯೇತ್ || ೧೫೩ ||

ಅವಗೂರ್ಯ ತ್ವಬ್ದಶತಂ ಸಹಸ್ರಮಭಿಹನ್ಯ ತು ।
ಜಿಘಾಂಸಯಾ ಬ್ರಾಹ್ಮಣಸ್ಯ ನರಕಂ ಪ್ರತಿಪದ್ಯತೇ || ೧೫೪ ||

ಶೋಣಿತಂ ಯಾವತಃ ಪಾಂಸೂನ್ ಸಂಗೃಹ್ಣಾತಿ ದ್ವಿಜನ್ಮನಃ ।
ತಾವಂತ್ಯಬ್ದಸಹಸ್ರಾಣಿ ತತ್ಕರ್ತಾ ನರಕಂ ವಸೇತ್ || ೧೫೫ ||

ಅವಗೂರ್ಯಾಚರೇತ್ಕೃಚ್ಛ್ರಮತಿಕೃಚ್ಛ್ರಂ ನಿಪಾತನೇ ।
ಕೃಚ್ಛ್ರಾತಿಕೃಚ್ಛ್ರಂ ಕುರ್ವೀತ ವಿಪ್ರಸ್ಯೋತ್ಪಾದ್ಯ ಶೋಣಿತಂ || ೧೫೬ ||

---

೧೫೨-೧೫೬. ವೇದವಿಹಿತಗಳಾದ ನಿತ್ಯಕರ್ಮಗಳಲ್ಲಿ ಅತಿಕ್ರಮವುಂಟಾದಾಗಲೂ, ಸ್ನಾತಕನ ವ್ರತಕ್ಕೆ ಲೋಪವುಂಟಾದಾಗಲೂ ಉಪವಾಸವೇ ಪ್ರಾಯಶ್ಚಿತ್ತ, ಸಾಮಾನ್ಯ ಬ್ರಾಹ್ಮಣನ ವಿಷಯದಲ್ಲಿ ಹುಂಕಾರವನ್ನೂ ಶ್ರೇಷ್ಠನಾದ ಬ್ರಾಹ್ಮಣನ ವಿಷಯದಲ್ಲಿ ತ್ವಂಕಾರವನ್ನೂ ಪ್ರಯೋಗಿಸಿದವನು ಸ್ನಾನಮಾಡಿ ಊಟವಿಲ್ಲದೆ ಉಳಿದಿರುವ ಹಗಲನ್ನೆಲ್ಲಾ ಕಳೆದು ನಂತರ ಆ ಬ್ರಾಹ್ಮಣರನ್ನು ವಂದಿಸಿ ಪ್ರಸನ್ನರನ್ನಾಗಿ ಮಾಡಿಕೊಳ್ಳಬೇಕು. ಒಂದು ಹುಲ್ಲಿನಿಂದ ಬ್ರಾಹ್ಮಣನನ್ನು ಹೊಡೆದರೂ ವಸ್ತ್ರದಿಂದ ಅವನ ಕುತ್ತಿಗೆಯನ್ನು ಬಿಗಿದರೂ ವಿವಾದದಲ್ಲಿ ಜಯಿಸಿದರೂ ಸಹ ಅವನಿಗೆ ನಮಸ್ಕಾರಮಾಡಿ ಕ್ಷಮೆಬೇಡಿ ಪ್ರಸನ್ನನಾಗುವಂತೆ ಮಾಡಿಕೊಳ್ಳಬೇಕು. ಬ್ರಾಹ್ಮಣನನ್ನು ಹಾಸ್ಯಮಾಡಿ ನಿಂದಿಸಿದಲ್ಲಿ ನೂರುವರ್ಷ ಪರ್ಯಂತವೂ, ಹೊಡೆದಲ್ಲಿ ಸಾವಿರವರ್ಷಪರ್ಯಂತವೂ, ಕೊಲ್ಲಲು ಇಚ್ಛೆಯಿಂದ ಈ ಕಾರ್ಯಗಳನ್ನು ನಡೆಸಿದಲ್ಲಿ ಅಂತಹ ಪಾಪಿಯು ನರಕವನ್ನೇ ಹೊಂದುತ್ತಾನೆ. ಬ್ರಾಹ್ಮಣನನ್ನು ಗಾಯಪಡಿಸಿದಲ್ಲಿ ಆ ಗಾಯದ ರಕ್ತವು ಎಷ್ಟು ಧೂಳಿಯನ್ನು ಸಂಗಹಿಸುತ್ತದೆಯೋ ಅಷ್ಟು ಸಹಸ್ರವರ್ಷ ಆ ಕರ್ತೃವು ನರಕವನ್ನು ಹೊಂದುತ್ತಾನೆ. ಹಾಸ್ಯದಿಂದ ಅವಮಾನ

ವೇದಾಭ್ಯಾಸೋಽನ್ವಹಂ ಶಕ್ತ್ಯಾ ಮಹಾಯಜ್ಞಕ್ರಿಯಾಕ್ಷಮಾ ।
ನಾಶಯಂತ್ಯಾಶು ಪಾಪಾನಿ ಮಹಾಪಾತಕಜಾನ್ಯಪಿ ॥ ೧೫೭ ॥

ಯಥೈವ ತೇಜಸಾ ವಹ್ನಿಃ ಪ್ರಾಪ್ತಾನ್ನಿರ್ದಹತಿ ಕ್ಷಣಾತ್ ।
ತಥಾ ಜ್ಞಾನಾಗ್ನಿನಾ ಪಾಪಂ ಕೃತ್ಸ್ನಂ ದಹತಿ ವೇದವಿತ್ ॥ ೧೫೮ ॥

ಪಾಪಾನುಬಂಧಂ ಪುರುಷಸ್ಯ ಶಕ್ತಿಂ
ದೇಶಂ ಚ ಕಾಲಂ ಚ ತಥಾ ವಿದಿತ್ವಾ ।
ಅನುಕ್ತಶುದ್ಧಿಃ ಪ್ರವಿಚಾರ್ಯ ದೇಯಾ
ಉಕ್ತೇ ತಥೈತಚ್ಚ ನಿರೂಪಣೀಯಂ ॥ ೧೫೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ತೃತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಹಂಸಗೀತಾಸು ಪ್ರಾಯಶ್ಚಿತ್ತವರ್ಣನೋ
ನಾಮ ಚತುಸ್ತ್ರಿಂಶದಧಿಕದ್ವಿಶತತಮೋಽಧ್ಯಾಯಃ

---

ಪಡಿಸಿದಲ್ಲಿ ಕೃಚ್ಛ್ರಾಚರಣದಿಂದಲೂ, ಕೆಳಕ್ಕೆ ಕೆಡವಿದಲ್ಲಿ ಅತಿಕೃಚ್ಛ್ರದಿಂದಲೂ, ರಕ್ತವನ್ನುಂಟುಮಾಡಿದಲ್ಲಿ ಕೃಚ್ಛ್ರಾತಿಕೃಚ್ಛ್ರದಿಂದಲೂ ಪಾಪವನ್ನು ಹೋಗಲಾಡಿಸಿಕೊಳ್ಳಬೇಕು. ಪ್ರತಿನಿತ್ಯವೂ ಯಥಾಶಕ್ತಿ ನಡೆಸುವ ವೇದಾಭ್ಯಾಸವೂ, ಸಮರ್ಥಗಳಾದ ಮಹಾ ಯಜ್ಞಾದಿಕ್ರಿಯೆಗಳೂ, ಮಹಾ ಪಾತಕದಿಂದುಂಟಾದ ಪಾಪಗಳನ್ನೂ ನಾಶಮಾಡತ್ತವೆ.

೧೫೮-೧೫೯. ಅಗ್ನಿಯು ತನ್ನ ತೇಜಸ್ಸಿನಿಂದ ತನ್ನಲ್ಲಿ ಬಂದುಸೇರಿದ ಎಲ್ಲಾ ವಸ್ತುಗಳನ್ನೂ ಹೇಗೆ ಕ್ಷಣಮಾತ್ರದಲ್ಲಿ ದಹಿಸಿಬಿಡುವುದೋ ಹಾಗೆಯೇ ವೇದಜ್ಞನೂ ಸಹ ತನ್ನ ಜ್ಞಾನಾಗ್ನಿಯಿಂದ ಎಲ್ಲಾ ಪಾಪಗಳನ್ನೂ ದಹಿಸಿಬಿಡುತ್ತಾನೆ. ಇಲ್ಲಿ ಹೇಳದಿರುವ ಇತರ ಪಾಪಗಳ ವಿಷಯದಲ್ಲಿ ಆ ಪಾಪದ ಸ್ವರೂಪವನ್ನೂ ಪುರುಷನ ಶಕ್ತಿಯನ್ನೂ ದೇಶಕಾಲಗಳನ್ನೂ ತಿಳಿದು ವಿಮರ್ಶೆಮಾಡಿ ತಕ್ಕ ಶುದ್ಧಿಯನ್ನು ಉಚಿತ ಪ್ರಾಯಶ್ಚಿತ್ತವಿಧಾನದಿಂದ ಉಂಟುಮಾಡಬೇಕು. ಉಕ್ತವಾದ ಪಾಪ ವಿಷಯದಲ್ಲೂ ದೇಶಕಾಲಾದಿಗಳನ್ನು ವಿಚಾರಿಸಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ತೃತೀಯಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಹಂಸಗೀತೆಯ ಪ್ರಾಯಶ್ಚಿತ್ತವರ್ಣನವೆಂಬ
ಇನ್ನೂರ ಮೂವತ್ತನಾಲ್ಕನೆಯ ಅಧ್ಯಾಯ ಮುಗಿದಿದೆ.